ಅಂತರ-ಭಾರತೀಯ ಪುಸ್ತಕ ಮಾಲೆ




# ಹೊಸ ನೀರು

ಭಗವತೀಚರಣ ವರ್ಮಾ

ನೇಷನಲ್ ಬುಕ್ ಟ್ರಸ್ಟ್, ಹೊಸ ದೆಹಲಿ

ಅಂತರ-ಭಾರತೀಯ ಪುಸ್ತಕ ಮಾಲೆ

# ಹೊಸ ನೀರು

[ಸುಪ್ರಸಿದ್ಧ ಹಿಂದೀ ಕಾದಂಬರಿ 'ಭೂಲೇ ಬಿಸರೇ ಚಿತ್ರ'ದ ಕನ್ನಡ ಅನುವಾದ]

ಮೂಲ ಲೇಖಕರು :
**ಭಗವತೀಚರಣ ವರ್ಮಾ**

ಕನ್ನಡ ಅನುವಾದ :
**ಶಾ. ಬಾಲುರಾವ್**



ನೇಷನಲ್ ಬುಕ್ ಟ್ರಸ್ಟ್
ಹೊಸ ದೆಹಲಿ

# ಪರಿಚಯ

ಭಾರತ ಒಂದು ವಿಶಾಲ ದೇಶ. ಸಾಂಸ್ಕೃತಿಕ ದೃಷ್ಟಿಯಿಂದ ಇದು ಒಂದಾಗಿದ್ದರೂ ಈ ದೇಶವನ್ನು ಒಂದು ಶಕ್ತಿಶಾಲೀ ಹಾಗೂ ಪ್ರಗತಿಶೀಲ ರಾಷ್ಟ್ರವನ್ನಾಗಿ ಮಾಡಬಲ್ಲಂತಹ ಏಕತೆಯ ಯಾವ ಯಾವ ಸೂತ್ರಗಳಿವೆಯೋ ಅವನ್ನು ನಾವು ಇನ್ನೂ ಬಲಪಡಿಸ ಬೇಕಾಗಿದೆ.

ನಮ್ಮ ಭಾರತ ಬಹುಭಾಷೀ ದೇಶ. ಪ್ರಾಯಶಃ ಪ್ರಪಂಚದ ಯಾವ ದೇಶದಲ್ಲೂ ನಮ್ಮಲ್ಲಿರುವಷ್ಟು ಅಧಿಕ ಸಂಖ್ಯೆಯಲ್ಲಿ ಭಾಷೆಗಳಿಲ್ಲ. ಆದರೆ ದೌರ್ಭಾಗ್ಯವೆಂದರೆ ನಮ್ಮ ನೆರೆಯ ಪ್ರದೇಶದ ಭಾಷೆಗಳ ಬಗ್ಗೆ ನಾವು ತೋರಿಸುವ ಆಸಕ್ತಿ ಬಲು ಕಡಿಮೆ. ಅವುಗಳ ಸಾಂಸ್ಕೃತಿಕ, ಸಾಹಿತ್ಯಿಕ ಸಂಪತ್ತಿನ ಬಗ್ಗೆ ನಮಗಿರುವ ತಿಳಿವಳಿಕೆಯಂತೂ ಇದ್ದಿದ್ದೂ ಕಡಿಮೆಯೇ. ಇಂಗ್ಲಿಷ್, ಫ್ರೆಂಚ್, ಜರ್ಮನ್ ಮುಂತಾದ ಐರೋಪ್ಯ ಭಾಷೆಗಳ ಸಾಹಿತ್ಯ ಹಾಗೂ ಸಮಾಜಗಳ ಬಗ್ಗೆ ನಮಗಿರುವಷ್ಟು ತಿಳಿವಳಿಕೆ ಸ್ವತಃ ನಮ್ಮ ದೇಶದ ಸಾಹಿತ್ಯಗಳ ಬಗ್ಗೆಯೇ ಇಲ್ಲ.

ದೇಶದ ಭಾವನಾತ್ಮಕ ಹಾಗೂ ಸಾಂಸ್ಕೃತಿಕ ಏಕತೆಯನ್ನು ಸಾಧಿಸಬೇಕಾದರೆ ನಮ್ಮ ಜನ ದೇಶದ ವಿಭಿನ್ನ ಭಾಷೆಗಳ ಉತ್ತಮ ಸಾಹಿತ್ಯಿಕ ಕೃತಿಗಳನ್ನು ಚೆನ್ನಾಗಿ ತಿಳಿಯಬೇಕು. ಅವುಗಳ ಮಾಧ್ಯಮದಿಂದ ಆಯಾ ಭಾಷಾಪ್ರದೇಶಗಳ ರೀತಿ-ಪದ್ಧತಿ, ಆಚಾರ-ವಿಚಾರ, ಹಾಗೂ ಸಾಂಸ್ಕೃತಿಕ ಭಾವನೆ ಮುಂತಾದವುಗಳ ಪರಿಚಯ ಪಡೆಯುವುದು ಅತ್ಯಂತ ಅವಶ್ಯಕ.

ಪಶ್ಚಿಮದಲ್ಲಿ ಅನೇಕ ರಾಷ್ಟ್ರಗಳಿವೆ. ಅವು ಸ್ವತಂತ್ರವಾಗಿವೆ, ಒಂದೊಂದು ರಾಷ್ಟ್ರಕ್ಕೂ ತನ್ನದೇ ಭಾಷೆಯಿದೆ. ಅಲ್ಲಿಯ ಒಂದು ಭಾಷೆಯ ಜನಕ್ಕೆ ಇನ್ನೊಂದರ ಸಾಹಿತ್ಯ ಹಾಗೂ ಚಿಂತನೆಗಳ ಬಗ್ಗೆ ಇರುವಷ್ಟು ಸೂಕ್ಷ್ಮ ಜ್ಞಾನ ನಮಗೆ ನಮ್ಮ ಭಾಷೆ ಗಳ ಬಗ್ಗೆಯೇ ಇಲ್ಲ. ಇದೊಂದು ವಿಚಿತ್ರ ವಿರೋಧಾಭಾಸ. ಯುರೋಪಿನ ಯಾವ ಭಾಷೆಯ ಯಾವ ಶ್ರೇಷ್ಠಕೃತಿಯೇ ಆಗಲಿ, ಅಲ್ಲಿನ ಇತರ ಭಾಷೆಗಳಿಗೆ ತತ್‌ಕ್ಷಣ ಅನುವಾದವಾಗುತ್ತದೆ. ಭಾರತ ಒಂದು ರಾಷ್ಟ್ರವಾದರೂ ನಮಗೆ ನಮ್ಮ ನೆರೆಯ ಭಾಷೆಗಳಲ್ಲಿ ಏನಾಗುತ್ತಿದೆಯೆಂದು ತಿಳಿಯುವ ಇಚ್ಛೆ ಆಸಕ್ತಿಗಳಿಲ್ಲವಾಗಿದೆ. ಈಚೆಗೆ ಈ ಸ್ಥಿತಿಯೇನೋ ಬದಲಾಗುತ್ತಿದೆ. ಆದರೆ ಅದರ ಗತಿ ಬಲು ನಿಧಾನ.

ಈ ಸ್ಥಿತಿಯನ್ನು ಗಮನದಲ್ಲಿಟ್ಟು ಭಾರತ ಸರಕಾರ ಪ್ರತಿಯೊಂದು ಭಾರತೀಯ ಭಾಷೆಯ ಸಮಕಾಲೀನ ಸಾಹಿತ್ಯದಿಂದಲೂ ಕೆಲವು ಪುಸ್ತಕಗಳನ್ನು ಆಯ್ದು ಇತರೆಲ್ಲ ಭಾಷೆಗಳಿಗೂ ಅನುವಾದ ಮಾಡಿಸುವ ಒಂದು ಯೋಜನೆ ಹಾಕಿಕೊಂಡಿದೆ. ಈ ಯೋಜನೆಯಲ್ಲಿ ಸಾಧಾರಣ ಓದುಗರಿಗೆ ರುಚಿಸುವಂತಹ ಪುಸ್ತಕಗಳನ್ನೇ, ಅಂದರೆ ಕಥೆ,

ಕಾದಂಬರಿ, ಮನೋರಂಜಕ ಪ್ರವಾಸಸಾಹಿತ್ಯ ಮತ್ತು ಆತ್ಮಚರಿತ್ರೆಗಳನ್ನು, ಆರಿಸ ಲಾಗುವುದು. ಈ ಮಾಲೆಗೆ ಪುಸ್ತಕಗಳನ್ನು ಆರಿಸುವಾಗ ಅವು ಉತ್ತಮವೂ ಜನ ಪ್ರಿಯವೂ ಆಗಿರುವುದರ ಜೊತೆಗೆ ಆಯಾ ಸಮಾಜದ ರೀತಿ-ಪದ್ಧತಿ, ಭಾವನೆ, ಆಕಾಂಕ್ಷೆ ಗಳನ್ನು ಪ್ರತಿಬಿಂಬಿಸುವಂತಹ ಕೃತಿಗಳಾಗಿರಬೇಕೆಂಬ ಅಂಶವನ್ನು ಗಮನದಲ್ಲಿಡ ಲಾಗುವುದು.

ವಿಭಿನ್ನ ಭಾಷೆಗಳ ನಡುವೆ, ಒಂದು ಇನ್ನೊಂದನ್ನು ಹೆಚ್ಚು ಅರಿಯಲು, ಅರ್ಥ ಮಾಡಿಕೊಳ್ಳಲು, ಆ ಮೂಲಕ ಭಾವನಾತ್ಮಕ ಏಕತೆಯನ್ನು ಸಾಧಿಸಲು ಈ ಯೋಜನೆ ಯಿಂದ ಸಹಾಯವಾಗುವುದೆಂದು ಆಶಿಸಲಾಗಿದೆ.

ವಿಭಿನ್ನ ಭಾರತೀಯ ಭಾಷೆಗಳ ಪ್ರಮುಖ ಕೃತಿಗಳ ಆಯ್ಕೆ, ಅನುವಾದ ಸುಲಭದ ಕೆಲಸವಲ್ಲ. ನಮ್ಮ ಸಲಹಾಸಮಿತಿ ಹಾಗೂ ಅನುವಾದಕರ ಮಾರ್ಗದರ್ಶನ, ಸಹಕಾರ ಗಳಿಲ್ಲದಿದ್ದರೆ ಈ ಬಗೆಯ ಯೋಜನೆಯನ್ನು ನಾವು ಸಫಲವಾಗಿ ಕಾರ್ಯಗತಗೊಳಿಸ ಲಾಗುತ್ತಿರಲಿಲ್ಲ. ಅವರಿಗೆ ನಾವು ಕೃತಜ್ಞರು.

**ಬಾಲಕೃಷ್ಣ ಕೇಸಕರ್**

# ಈ ಕಾದಂಬರಿಯನ್ನು ಕುರಿತು . . .

ಒಂದು ದಪ್ಪ ದೊಣ್ಣೆಯಿತ್ತಂತೆ; ಅದರ ಮೇಲೆ 'ಈ ದೊಣ್ಣೆ ಒಡೆಯದ ವಸ್ತುವೇ ಇಲ್ಲ' ಎಂದು ಕೆತ್ತಲಾಗಿತ್ತಂತೆ. ಆ ದೊಣ್ಣೆ ಹತ್ತೊಂಬತ್ತನೆಯ ಶತಮಾನದ ಸುಪ್ರಸಿದ್ಧ ಕಾದಂಬರಿಗಾರ ಹೆನ್ರಿ ಬಾಲ್ಜಾಕನದು. ಇಪ್ಪತ್ತನೆಯ ಶತಮಾನದ ಜರ್ಮನ್ ಕಾದಂಬರಿಗಾರ ಫ್ರಾನ್ಸ್ ಕಾಫ್ಕಾ ಈ ದೊಣ್ಣೆಯ ಕಥೆ ಕೇಳಿದಾಗ ಒಂದು ಸಣ್ಣ ಬೆತ್ತ ತಂದು ಅದರ ಮೇಲೆ 'ಈ ಬೆತ್ತವನ್ನು ಒಡೆಯದ ವಸ್ತುವೇ ಇಲ್ಲ' ಎಂದು ಕೆತ್ತಿಸಿಟ್ಟನಂತೆ. ವಿಮರ್ಶಕರ ಪ್ರಕಾರ ಇವೆರಡೂ ಐರೋಪ್ಯ ಕಾದಂಬರಿಯ ವಿಕಾಸ ಯಾತ್ರೆಯ ಎರಡು ಪ್ರತೀಕಗಳು.

ಬಾಲ್ಜಾಕನ ಕಾದಂಬರಿ ದೊಣ್ಣೆ. ಅದರಿಂದ ಅವನು ತನ್ನ ಕಾಲದ ಎಲ್ಲ ಹೊಲಸುಗಳನ್ನೂ ಸಂಪ್ರದಾಯ ಹಾಗೂ ವಿಕೃತಿಗಳನ್ನೂ ಒಡೆದು ಹಾಕುತ್ತಿದ್ದ. ವಸ್ತುತಃ ಕಾದಂಬರಿ ಎಂದು ಕರೆಸಿಕೊಂಡ ಕಥಾರೂಪವೇನಿದೆ, ಅದು ಜಾಗೃತ ಮಧ್ಯಮವರ್ಗದ ಸಾಹಿತ್ಯಿಕ ಅಭಿವ್ಯಂಜನೆಯಾಗಿರುವ ಕಾರಣ ಮೊದಲಿನಿಂದಲೂ ವ್ಯಕ್ತಿ ಮತ್ತು ಸಮಾಜಗಳ ಪರಸ್ಪರ ಸ್ಥಿತಿಗತಿಗಳು, ಅವುಗಳ ನಡುವಿನ ದ್ವಂದ್ವಗಳು, ಸಮಸ್ಯೆಗಳು ಮುಂತಾದವುಗಳ ಕಡೆ ಗಮನ ಹರಿಸಿದೆ. ಇದನ್ನು ಜಗತ್ತಿನ ಮೊತ್ತಮೊದಲ ಕಾದಂಬರಿಗಾರನಾದ ಸರ್ವಾಂಟೀಸ್‌ನಲ್ಲಿಯೇ ನಾವು ನೋಡಬಹುದು; ಸೌಭಾಗ್ಯವಶಾತ್ ಹಿಂದಿಯ ಮೊದಲ ಕಾದಂಬರಿಯಾದ ಲಾಲಾ ಶ್ರೀನಿವಾಸದಾಸರ 'ಪರೀಕ್ಷಾಗೃಹ' ದಲ್ಲಿಯೂ ಇದೇ ಪ್ರಜ್ಞೆ ಕಾಣಸಿಗುತ್ತದೆ.

ಕಥೆಯ ಗುರಿ ಬರಿಯ ಮನೋರಂಜನೆಯಷ್ಟೇ ಅಲ್ಲ; ಮೊದಲಿನಿಂದಲೂ ಅದನ್ನು ಉಪದೇಶಕ್ಕೂ ಬಳಸಲಾಗುತ್ತಿದೆ. ಆದರೆ ಆಧುನಿಕ ಜೀವನದ ಶಕ್ತಿಸಾಮರ್ಥ್ಯಗಳನ್ನು ಒಪ್ಪಿ, ವಾಸ್ತವತೆಯ ನೆಲಗಟ್ಟಿನ ಮೇಲೆ ವಿವಿಧ ಸಾಮಾಜಿಕ ಸಂಬಂಧಗಳ ಹಿನ್ನೆಲೆಯಲ್ಲಿ ಅದರ ಸಮಸ್ಯೆಗಳನ್ನು ಅರಿತು ಬೆಲೆ ಕಟ್ಟುವ ಪ್ರಯತ್ನ ಸಾಧ್ಯವಾಗಿರುವುದು ಈ ಆಧುನಿಕ ಕಥಾರೂಪವಾದ ಕಾದಂಬರಿಯಲ್ಲಿ ಮಾತ್ರವೇ. ಕಾದಂಬರಿಯಿಂದ ಮನೋರಂಜನೆಯೇನೋ ದೊರೆಯುತ್ತಲೇ ಇದ್ದರೂ ಈಗ ಈ ಸಮಸ್ಯಾತ್ಮಕತೆ ಹಿಂದಿನ ಎರಕ ಹೊಯು ಅಚ್ಚೊಟ್ಟ ಉಪದೇಶಗಳ ಸ್ಥಾನವನ್ನು ಆಕ್ರಮಿಸಿ ಕಾದಂಬರಿಯ ಒಂದು ಮಹಾಶಕ್ತಿಯಾಗಿ ಪರಿಣಮಿಸಿದೆ. ಅದು ಲೇಖಕನ ಜಾಗರೂಕತೆ, ಪ್ರಬುದ್ಧತೆ ಹಾಗೂ ಅವಲೋಕನ ಶಕ್ತಿಗಳ ಪರಿಚಯ ಮಾಡಿಕೊಡುತ್ತದೆ. ಜೀವಂತ ಪಾತ್ರಯೋಜನೆ, ನಂಬಬಹುದಾದಂತಹ ಘಟನಾವಳಿ ಮತ್ತು ಸನ್ನಿವೇಶಗಳು, ಅರ್ಥಾತ್ ಕಥಾವಸ್ತುವಿನ ವರ್ಣನೆ, ಚಿತ್ರಣಗಳಿಗೆ ಒದಗುವ ಬಗೆಬಗೆಯ ವಿಧಿಗಳು ಇಂದಿನ ಕಾದಂಬರಿಯನ್ನು ಹಿಂದಿನ ಕಥಾರೂಪದಿಂದ ಒಮ್ಮೆಲೇ ಬೇರ್ಪಡಿಸುತ್ತವೆ. "ಆಮೇಲೆ ಏನಾಯಿತು?" ಎಂದು

ಕೇಳುವ ಸ್ಥಿತಿಯಿಂದ ಮುನ್ನಡೆದು "ಯಾಕಾಯಿತು?", "ಏನಾಗುತ್ತಿದೆ?", "ಏನಾಗಲಿದೆ?" ಎಂಬಂತಹ ಪ್ರಶ್ನೆಗಳು ಮುಖ್ಯವಾಗುತ್ತವೆ. ಇಲ್ಲಿ ಸಹ ಆಧಾರಭೂತವಾದ ಪ್ರಶ್ನೆ ಕೇಂದ್ರಬಿಂದುವಾಗಿಯೇ ಉಳಿದಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಹಿಂದೀ ಕಾದಂಬರಿ ಪ್ರಾರಂಭದಿಂದಲೂ ಆಧುನಿಕತೆಯನ್ನು ಒಪ್ಪಿಕೊಂಡಿದೆ. ಭಾರತೇಂದು ಹರಿಶ್ಚಂದ್ರ ಹಾಗೂ ಪ್ರತಾಪನಾರಾಯಣರು ತಮ್ಮ ನಾಟಕ ಇಲ್ಲವೇ ಪ್ರಬಂಧಗಳಲ್ಲಿ ಯಾವ ಯಾವ ಹೊಲಸುಗಳಿಗೆ, ಸಂಪ್ರದಾಯ, ವಿಕೃತಿಗಳಿಗೆ ಲತ್ತೆ ಕೊಡುತ್ತಿದ್ದರೋ ಅವುಗಳ ಮೇಲೆಯೇ ಲಾಲಾ ಶ್ರೀನಿವಾಸದಾಸ ಹಾಗೂ ಬಾಲಕೃಷ್ಣಭಟ್ಟರು ತಮ್ಮತಮ್ಮ ಕಾದಂಬರಿಗಳನ್ನು ಮಸೆಯುತ್ತಿದ್ದರು. ಎರಡೂ ಕಡೆ ಸಮಸ್ಯೆಗಳನ್ನು ಅರಿಯುವ, ಅವುಗಳೊಡನೆ ಹೋರಾಡುವ ಅದೇ ಆಕಾಂಕ್ಷೆ ಕಾಣಬರುತ್ತದೆ. ದೇವಕೀನಂದನ ಖತ್ರಿಯವರ 'ಚಂದ್ರಕಾಂತಾ ಸಂತತಿ'ಯ ಎಲ್ಲ ಚಮತ್ಕಾರ, ಅತಿರಂಜನೆಗಳ ಮೂಲದಲ್ಲಿಯೂ ಕುಸಿದುಬೀಳುತ್ತಿರುವ ಜಹಗೀರದಾರಿಕೆ ಹಾಗೂ ಹೊಸದಾಗಿ ಹುಟ್ಟಿದ ಬಂಡವಾಳಗಾರಿಕೆಗಳನ್ನು ಪ್ರತೀಕ ಅಥವಾ 'ಫ್ಯಾಂಟಸಿ'ಯ ಭಾಷೆಯಲ್ಲಿ ನಿರೂಪಿಸುವ ಅದೇ ಮಾನವೀಯ, ಲೌಕಿಕ, ವಾಸ್ತವವಾದೀ ದೃಷ್ಟಿಯಿದೆ. ಈ ಮಾತು ಪ್ರಾಯಶಃ ಸ್ವಲ್ಪ ವಿಚಿತ್ರವೆನಿಸಿದರೂ ನಿಜವೇ.

ಭಾರತೇಂದು ಯುಗದ ಆ ಪ್ರಾರಂಭಕಾಲದ ಕಾದಂಬರಿಯನ್ನು ಪ್ರಶಂಸೆ ಮಾಡುವಾಗಲೂ ಒಂದು ಮಾತನ್ನು ಗಮನದಲ್ಲಿಡುವುದು ಅವಶ್ಯಕ: ಅಲ್ಲಿನ ವಾಸ್ತವವಾದೀ ದೃಷ್ಟಿ ಬಹಳಮಟ್ಟಿಗೆ ಸ್ಥೂಲವಾದುದು. ಪಾತ್ರ ಹಾಗೂ ಘಟನೆಗಳಿಗೆ ಒಂದು ವ್ಯವಸ್ಥಿತ ರೂಪಾಕಾರವಿಲ್ಲ; ಸಮಸ್ಯೆಗಳಂತೆಯೇ ಪಾತ್ರ ಹಾಗೂ ಘಟನೆಗಳನ್ನು ಎರಕ ಹೊಯ್ದು ಪಡಿಯಚ್ಚು ಮಾಡಲಾಗಿದೆ. ವಾಸ್ತವತೆಯ ಸೂಕ್ಷ್ಮ ಅವಲೋಕನದೃಷ್ಟಿಯ ಅಭಾವ ಕಾಣಬರುತ್ತದೆ. ಈ ಅಭಾವವನ್ನು ತುಂಬಿಕೊಟ್ಟವರೆಂದರೆ ಪ್ರೇಮಚಂದರು. ಅವರ ಕೃತಿಗಳಲ್ಲಿ ಸಮಸ್ಯೆಗಳು ನೇರವಾಗಿ ಕಾದಂಬರಿಯಿಂದಲೇ ಹುಟ್ಟುತ್ತವೆ. ಪ್ರೇಮಚಂದರ ನಿಜವಾದ ಅನ್ವೇಷಣೆ ಸಮಸ್ಯೆಗಳಿಗೆ ಪರಿಹಾರ ಪಡೆಯುವುದರಲ್ಲಿಲ್ಲ (ಅಂತಹ ಅನ್ವೇಷಣೆಯೇನಿದ್ದರೂ ಮೇಲ್ಮೈನದು, ಬಲವಂತವಾಗಿ ಹೊರಿಸಿದುದು, ಎಂತಲೇ ಅ-ಕಲಾತ್ಮಕವೂ ಹೌದು); ಅವರದು ಕಾದಂಬರಿಗೆ ಬೇಕಾದ ಪಾತ್ರ, ಸನ್ನಿವೇಶ, ಕಟ್ಟಡ ಹಾಗೂ ಇವೆಲ್ಲಕ್ಕಿಂತ ಹೆಚ್ಚಾಗಿ ಒಂದು ಉಪಯುಕ್ತ ಭಾಷೆಯ ಅನ್ವೇಷಣೆ. ಆಳವಾದ ಯಥಾರ್ಥದೃಷ್ಟಿ, ವ್ಯಾಪಕವಾದ ಮಾನವೀಯ ಸಂವೇದನೆ, ಕಥೆಗಾರನಿಗೆ ಅವಶ್ಯಕವಾದ ಆತ್ಮೀಯತೆ, ಮತ್ತು ಭಾಷೆಯ ಅತ್ಯಂತ ಸೃಜನಾತ್ಮಕ ಪ್ರಯೋಗ—ಇವು ಪ್ರೇಮಚಂದರ ವಿಶಿಷ್ಟ ಸಾಮರ್ಥ್ಯಗಳು. ಅವರ ಕಾದಂಬರಿಗಳಲ್ಲಿ ವೈಯಕ್ತಿಕ ಸಂವೇದನೆ ಹಾಗೂ ಸಾಮಾಜಿಕ ಇತಿಹಾಸ ಒಂದುಗೂಡುವುದಷ್ಟೇ ಅಲ್ಲ, ಹಾಗೆ ಒಂದುಗೂಡಿ ದಿಕ್ಕುದಿಕ್ಕಿಗೆ ಕವಲೊಡೆಯುತ್ತವೆ. ಅವರ ಕಾದಂಬರಿಗಳಲ್ಲಿ ವ್ಯಕ್ತಿಗೆ ಪ್ರಾಮುಖ್ಯವೇ ಇಲ್ಲವೇ ಸಮಾಜಕ್ಕೆ ಪ್ರಾಮುಖ್ಯವೇ ಎಂಬ ಪ್ರಶ್ನೆಗೆ ಸ್ಪಷ್ಟವಾಗಿ 'ಹೌದು' ಅಥವಾ 'ಇಲ್ಲ' ಎಂದು ಹೇಳ

ಬರುವುದಿಲ್ಲ. ಅವರ ಕಾದಂಬರಿಗಳ ಕಟ್ಟಡ ನಿಂತಿರುವುದು ಒಂದು ಪಾತ್ರ ಇನ್ನೊಂದನ್ನು ಎದುರಿಸುವ, ಎದುರಿಸಿ ಮುಂದೆ ಹೋಗುವ ಬಿಂದುವಿನ ಮೇಲೆ. ಪ್ರೇಮಚಂದರ ಮನೋವಿಜ್ಞಾನ ಸಹ ಸಹಜವಾದುದು, ದೈನಿಕ ವ್ಯವಹಾರಕ್ಕೆ ಸೇರಿದುದು. ಅವರ ಮೊದಲಿನ ಕಾದಂಬರಿಗಳಲ್ಲಿ ಒಂದು ಬಗೆಯ ದುರ್ದಮ ವಿಶ್ವಾಸ ಹಾಗೂ ಅಜೇಯ ಸಂಕಲ್ಪಗಳನ್ನು—ಇವು ರಾಷ್ಟ್ರೀಯ ಆಂದೋಳನದ ಮೊದಲ ಹಂತದಲ್ಲಿದ್ದ ಆಶಾವಾದ, ವಿಶ್ವಾಸಗಳ ಪ್ರತೀಕಗಳು ಸಹ—ನಾವು ಕಾಣಬಹುದು. ಆದರೆ ೧೯೩೦ ನೆಯ ಇಸವಿಯನ್ನು ಮುಟ್ಟುವ ಹೊತ್ತಿಗೆ ಆಂದೋಳನದ ಅಸಫಲತೆಗಳು ಪ್ರಬುದ್ಧರನ್ನು ಕಾಡತೊಡಗಿದ್ದವು. ಪ್ರೇಮಚಂದರು ಒಬ್ಬ ಪ್ರಾಮಾಣಿಕ ಕಲೆಗಾರನಿಗೆ ಒಪ್ಪುವ ಸಂಪೂರ್ಣ ಸತ್ಯದೊಂದಿಗೆ ಈ ಕಟು ವಾಸ್ತವತೆಯನ್ನೂ ನಮ್ಮ ಮುಂದಿಡುತ್ತಾರೆ.

ಸೋಲು ಮತ್ತು ನಿರಾಶೆಗಳಿಂದ ತುಂಬಿದ ರಾಷ್ಟ್ರೀಯ ವಾತಾವರಣದಲ್ಲಿಯೇ ೧೯೩೦ ರ ಆಚೀಚೆಯ ಲೇಖಕರ ಒಂದು ಹೊಸ ಪೀಳಿಗೆ ನಮಗೆ ಎದುರಾಗುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಯಾವೊಂದು ಮಧ್ಯಮವರ್ಗದ ಉದಯವಾಗಿತ್ತೋ ಅದು ಸಹ ಈಗ ತನ್ನ ಸ್ವರೂಪವನ್ನಷ್ಟೇ ಅಲ್ಲ, ತನ್ನ ಭಾಗ್ಯವನ್ನು ಕೂಡ ಗುರುತಿಸಕೊಳ್ಳತೊಡಗಿತ್ತು. ಇತ್ತ ದೇಶದಲ್ಲಿ ಶಿಕ್ಷಣ, ಉದ್ಯೋಗ, ವಿಜ್ಞಾನ ಮುಂತಾದವುಗಳು ಹರಡುತ್ತಿದ್ದುದರ ಜೊತೆಗೇ ಪ್ರಬುದ್ಧತೆ ಹಾಗೂ ವಿಶೇಷೀಕರಣ ಬೆಳೆಯತೊಡಗಿತ್ತು. ಮಾರ್ಕ್ಸ್, ಫ್ರಾಯ್ಡ್ ಮತ್ತು ಡಾರ್ವಿನ್—ಎಲ್ಲರೂ ವಾತಾವರಣವನ್ನು ದಟ್ಟಗೊಳಿಸುತ್ತಿದ್ದರು. ಈ ವಿಚಾರವಾದಿಗಳು ಭದ್ರವೂ ಕಾಲಸಿದ್ಧವೂ ಎನಿಸಿದ್ದ ಮನುಷ್ಯನ ಈವರೆಗಿನ ಮೌಲ್ಯಗಳನ್ನು ಬೇರು ಸಹಿತ ಅಲ್ಲಾಡಿಸಿದ್ದರು. ಈ ಬಗೆಯ ಮಿಂಚಿನ ಆವೇಶದ ವಾತಾವರಣದಲ್ಲಿ ಮೂರನೆಯ ದಶಕದ ಪೀಳಿಗೆ ಮೇಲೇಳುತ್ತಿತ್ತು. ಇವರೊಳಗೆ ಒಂದು ಕಡೆ ಮಧ್ಯಮ ವರ್ಗದಲ್ಲಿನ ವ್ಯಕ್ತಿವಾದ-ಸ್ವಚ್ಛಂದವಾದಗಳು ಕಂಡುಬಂದರೆ ಇನ್ನೊಂದು ಕಡೆ ನಿಜಜೀವನದಲ್ಲಿನ (ಅದು ಪ್ರೇಮದ ಕ್ಷೇತ್ರವೇ ಇರಲಿ, ರಾಜಕೀಯ ಕ್ಷೇತ್ರವೇ ಇರಲಿ) ನಿರಂತರ ಸೋಲಿನ ಅನುಭವವಾಗತೊಡಗಿತ್ತು. ಕ್ಷುಬ್ಧಗೊಂಡ ಇವರ ಅಹಂ ಸುತ್ತಿ ಬಳಸಿ ಮತ್ತೆ ಮತ್ತೆ ಅಂದಿನ ಪರಿಸ್ಥಿತಿಯ ಮೇಲೆ ದೋಷ ಹೊರಿಸುತ್ತಿತ್ತು. ಈ ಲೇಖಕರು ಹೊಸ ವಿಚಾರಗಳ ಬೆಳಕಿನಲ್ಲಿ ನೀತಿ-ಅನೀತಿ, ಪಾಪ-ಪುಣ್ಯ, ಪ್ರೇಮ-ಕಾಮಗಳನ್ನು ಮತ್ತೊಮ್ಮೆ ವಿವೇಚನೆ ಮಾಡಬಯಸುತ್ತಿದ್ದರು. ಈ ಲೇಖಕರಲ್ಲಿ ಕೆಲವರು ವ್ಯಾಪಕಸಮಾಜದಿಂದ ದೂರ ಸರಿದ ವ್ಯಕ್ತಿಯ ಮನಸ್ಸಿನ ನೆಲೆ ಕಾಣದ ಆಳವನ್ನು ಅಳೆಯಬಯಸಿದರೆ ಇನ್ನು ಕೆಲವರು ಬೇಗಬೇಗನೆ ಬದಲಾಗುತ್ತ ಅಂತಿಮವಾಗಿ ಸೋಲಿನ ಕಡೆ ಮುನ್ನಡೆಯುತ್ತಿದ್ದ ಜೀವನದ ಒಂದೊಂದು ಕ್ಷಣವನ್ನೂ ಅನುಭವಿಸಬಯಸಿದರು. ಜೀವನವನ್ನು ಅನುಭವಿಸುವ ಆ ಗಡಿಬಿಡಿಯಲ್ಲಿಯೇ ಬಹುವಾಗಿ ನೀತಿ-ಅನೀತಿ, ಪಾಪ-ಪುಣ್ಯಗಳ ಪ್ರಶ್ನೆಗಳು ಅವರ ಮುಂದೆ ಎದ್ದುನಿಂತವು.

ಅವರಲ್ಲಿ ಕೆಲವರು ಗಾಬರಿಗೊಂಡು ಸರ್ವನಾಶಕವಾದ ಹಿಂಸಕ, ಅರಾಜಕತಾವಾದೀ ದರ್ಶನಕ್ಕೆ ಮೊರೆಹೋಗುವಷ್ಟು ವಿವಶರಾದರು.

ಮೂರನೆಯ ದಶಕದ ಈ ಪೀಳಿಗೆಯ ಶ್ರೇಷ್ಠ ಪ್ರತಿನಿಧಿಯೆಂದರೆ ಶ್ರೀ ಭಗವತೀ ಚರಣ ವರ್ಮಾ. ಒಂದು ಕಡೆ ಜೀವನದ ಬರತದ ಅಲೆಗಳೊಡನೆ ಆಡಹೋಗುವ. ಇನ್ನೊಂದು ಕಡೆ ಅದರ ವೈಶಾಲ್ಯಕ್ಕೆ ಸೋತು ತಮ್ಮ ನಾಶ ಖಂಡಿತವೆಂಬುದನ್ನು ಒಪ್ಪುವ ಆ ಕಾಲದ ತರುಣ ಪೀಳಿಗೆಯ ಪ್ರತಿನಿಧಿ ಅವರು. ಆ ಲೇಖಕರ ಏಕಾಕಿಯಾದ ಅಹಂ ಕ್ಷುಬ್ಧಗೊಂಡು ದೇಶಕಾಲಗಳಲ್ಲಿ ಚೆಲ್ಲಾಡಿದ ಈ ಜೀವನದ ಬರತ ತಮಗಿಂತ ದೊಡ್ಡ ದೆಂಬುದನ್ನು ಮನಗಾಣುತ್ತದೆ. ಸಾಮಾಜಿಕ ಜೀವನದಲ್ಲಿ ಸೋತ ವ್ಯಕ್ತಿಯ ವೇದನೆಯ ಹಿರಿಮೆಯೊಂದನ್ನೇ ಆ ಕಾಲದ ಎಲ್ಲ ಸಾಹಿತ್ಯರೂಪಗಳಲ್ಲಿಯೂ ಹಾಡಲಾಗಿದೆ. ಬಂಗಾಳದ ಶರಚ್ಚಂದ್ರರಾಗಲೀ, ಹಿಂದಿಯ ಜೈನೇಂದ್ರಕುಮಾರ, ಇಲಾಚಂದ್ರ ಜೋಶಿ, ಅಥವಾ ಭಗವತೀಚರಣ ವರ್ಮರಾಗಲೀ ಇದಕ್ಕೆ ಅಪವಾದವಾಗುವುದಿಲ್ಲ. 'ಬಚ್ಚನ್', 'ಅಂಚಲ್' ಅಥವಾ ನರೇಂದ್ರಶರ್ಮರ ಗೀತೆಗಳಿಗೂ ಇದೇ ಹಿನ್ನೆಲೆಯೇ. ಈ ವಿಫಲತೆಯ ಪೀಡೆಯಲ್ಲಿಯೂ ವಿದ್ರೋಹದ ಕ್ಷುಬ್ಧ ಸ್ವರ—ಆ ವಿದ್ರೋಹ ಅಂತಿಮ ವಾಗಿ ನಿಷ್ಫಲವೆನಿಸಿದರೆ ತಾನೆ ಏನಂತೆ—ಎಡೆಬಿಡದೆ ಕೇಳಿಬರುತ್ತದೆಯೆಂಬುದನ್ನು ನಾವು ಗಮನದಲ್ಲಿಡಬೇಕು.

ಈ ಹಿನ್ನೆಲೆಯನ್ನು ಗಮನದಲ್ಲಿಟ್ಟು ಓದಿದಾಗ ಭಗವತೀಚರಣ ವರ್ಮರ ಕಾದಂಬರಿ ಗಳ ಅರ್ಥ ಮತ್ತು ಪ್ರತೀಕತೆ ಹೆಚ್ಚು ಸ್ಪಷ್ಟವಾಗುತ್ತದೆ. 'ಚಿತ್ರಲೇಖಾ,' 'ತೀನ್ ವರ್ಷ್' ಹಾಗೂ 'ಟೇಢೇ-ಮೇಢೇ ರಾಸ್ತೆ'—ಅವರ ಮೊದಲಿನ ಈ ಮೂರು ಕಾದಂಬರಿಗಳ ಮುಖ್ಯಪಾತ್ರಗಳೂ ವಿಶಿಷ್ಟ, ವೈಯಕ್ತಿಕ ತನ್ನತನದಿಂದ ನಿರೂಪಿತವಾಗಿವೆ. ಅವು ಒಂದೊಂದೂ ಒಂದಲ್ಲ ಒಂದು ನೆಲೆಯಲ್ಲಿ ಅಸಫಲವಾಗುವುದು ಕಂಡುಬರುತ್ತದೆ. 'ಚಿತ್ರಲೇಖಾ' ದಲ್ಲಿ ಗತಕಾಲದ ಫಲಕ; ಪಾಪಪುಣ್ಯಗಳ ಸಮಸ್ಯೆ; 'ತೀನ್ ವರ್ಷ್' ದಲ್ಲಿ ವರ್ತಮಾನದ ನೆಲ, ವಿವಾಹ-ಪ್ರೇಮ-ಕಾಮಗಳ ಪ್ರಶ್ನೆ; 'ಟೇಢೇ-ಮೇಢೇ ರಾಸ್ತೆ'ಯಲ್ಲಿ ಸಮಕಾಲೀನ ರಾಜನೈತಿಕ ನಂಬಿಕೆಗಳ ಮುಂದೆ ಪ್ರಶ್ನಾರ್ಥಕ ಚಿಹ್ನೆ. ಮೂರರ ಮೂಲ ದಲ್ಲಿಯೂ 'ಮನುಷ್ಯ ಪರಿಸ್ಥಿತಿಯ ದಾಸ' ನೆಂಬ ಒಂದೇ ವಿಚಾರಧಾರೆ ಹರಿಯುತ್ತದೆ. ಎಲ್ಲದರಲ್ಲೂ ಪೂರ್ವಸ್ವೀಕೃತ ಮೌಲ್ಯಗಳು ಪೆಟ್ಟು ತಿನ್ನುತ್ತವೆ: ಯಾವನೂ ಪಾಪಿ ಯಲ್ಲ, ಯಾವನೂ ಪುಣ್ಯಾತ್ಮನಲ್ಲ; ವೇಶ್ಯೆ ಪತಿವ್ರತೆಗಿಂತಲೂ ಶ್ರೇಷ್ಠಳಾಗಿರಬಹುದು; ರಾಜನೈತಿಕ ನಂಬಿಕೆಗಳೆಲ್ಲವೂ ಸುಳ್ಳು. ಇದನ್ನು ಒಂದು ಬಗೆಯ ಕ್ಷಯಿಸಿದ ಜೀವನ-ದರ್ಶನವೆಂದೂ ಅನ್ನಬಹುದು; ಯಾಕೆಂದರೆ ಆ ಕಾಲದ ವ್ಯಕ್ತಿಗೆ ಬಲಕೊಡುವುದು ಈ ಜೀವನದರ್ಶನವೇ. ೧೯೫೯ ರಲ್ಲಿ ಪ್ರಕಟವಾದ ಪ್ರಸ್ತುತ ಕಾದಂಬರಿ 'ಭೂಲೇ ಬಿಸರೇ ಚಿತ್ರ' ದಲ್ಲಿ ಜ್ವಾಲಾಪ್ರಸಾದನೂ ಇದನ್ನೇ ಹೇಳಿ ತನ್ನ ಮನಸ್ಸನ್ನು ಹಗುರಮಾಡಿಕೊಳ್ಳು ತ್ತಾನೆ: "ಮನುಷ್ಯನ ಕೈಯಲ್ಲಿ ಏನೂ ಇಲ್ಲ, ಖಂಡಿತವಾಗಿ ಏನೂ ಇಲ್ಲ. ಅಂದಮೇಲೆ

ಯಾತರ ಬಗ್ಗೆ ಚಿಂತೆಮಾಡಬೇಕು? ಆಗುವುದು ಆಗಿಹೋಗಿದೆ. ಅದನ್ನು ತಡೆಯುವಂತಿಲ್ಲ."

ತಮ್ಮ ಪೀಳಿಗೆಯ ಸಮಸಾಮಯಿಕ ಕಾದಂಬರಿಗಾರರಲ್ಲಿ ಭಗವತೀಚರಣ ವರ್ಮಾ ಒಂದು ಅರ್ಥದಲ್ಲಿ ಅತ್ಯಂತ ವಿಶಿಷ್ಟರು. ಯಾಕೆಂದರೆ ಜೈನೇಂದ್ರ ಕುಮಾರ್ ಅಥವಾ ಇಲಾಚಂದ್ರ ಜೋಶಿ ಹೆಚ್ಚುಹೆಚ್ಚಾಗಿ ವ್ಯಕ್ತಿಯ ಮಾನಸಿಕ ವಿಶ್ಲೇಷಣೆಯಲ್ಲಿ ತೊಡಗಿದ್ದಾಗಲೂ ವರ್ಮರು ಸಾಮಾಜಿಕ ಯಥಾರ್ಥಕ್ಕೆ ಅಂಟಿಕೊಂಡಿದ್ದರು. ಅವರ ಚಿತ್ರಪಟಲ ಪ್ರೇಮಚಂದರದ್ದಿದ್ದಷ್ಟು ವಿಸ್ತಾರವಾದುದಲ್ಲ. ಆದರೆ ಮಧ್ಯಮವರ್ಗದ ವಿವಿಧ ಸಂಬಂಧಗಳ ನಡುವಿನ ಬಿಗಿತ ಹಾಗೂ ಕ್ರಿಯೆ-ಪ್ರತಿಕ್ರಿಯೆಗಳ ಮಧ್ಯದಲ್ಲಿಯೇ ಅವರು ತಮ್ಮ ಪಾತ್ರಗಳನ್ನೂ ಸಮಸ್ಯೆಗಳನ್ನೂ ಕಡೆಯುತ್ತಾರೆ. ಅವರ ಕಾದಂಬರಿಗಳ ಚೌಕಟ್ಟಿಗೆ ಸಂಸಾರವೇ ಕೇಂದ್ರ. ಈ ವಿಷಯದಲ್ಲಿ ಅವರು ಪ್ರೇಮಚಂದರ ಪರಂಪರೆಗೆ ಇತರರಿಗಿಂತ ಹೆಚ್ಚು ಹತ್ತಿರದಲ್ಲಿದ್ದಾರೆ. ರೋಚಕವಾಗಿ ಕಥೆ ಹೇಳುವುದರಲ್ಲಿ ಸಹ ಅವರು ತಮ್ಮ ಸಮಕಾಲೀನ ಕಾದಂಬರಿಗಾರರಲ್ಲೆಲ್ಲಾ ಪ್ರೇಮಚಂದರಂತೆಯೇ. ನಾವು ಗಮನಿಸಬಹುದಾದ ಇನ್ನೂ ಒಂದು ತಥ್ಯವೆಂದರೆ ವಿಚಾರ ಹಾಗೂ ದರ್ಶನಗಳ ಕಡೆಗಿನ ಒಲವು ಇತರ ಕಾದಂಬರಿಗಾರರಲ್ಲಿ ವ್ಯಾಧಿಯಂತೆ ಬೆಳೆಯುತ್ತ ಹೋದರೆ ಅವರಲ್ಲಿ ಕಡಿಮೆಯಾಗುತ್ತ ಹೋಗಿದೆ. ವರ್ಮರು ಯಾವೊಂದು ದರ್ಶನವನ್ನು ತಮ್ಮದಾಗಿಸಿಕೊಂಡಿದ್ದಾರೋ ಅದು ಪರಿಣತಿ ಪಡೆಯುವುದು ಪ್ರಾಯಂಶಃ ಘಟನೆಗಳ ಬಹುಳತೆಯಲ್ಲಿ.

ಮೇಲೆ ವಿವೇಚಿಸಿದ ಮೂರು ಕಾದಂಬರಿಗಳ ನಂತರ ವರ್ಮರ ಕಲೆ ಕೊಂಚ ಇಳಿಮುಖವಾಗಿತ್ತು. ತೂಗಿನೋಡುವಾಗ ಅವರ 'ಆಖಿರೀ ದಾವ್' ಇತರ ಕಾದಂಬರಿಗಳಿಗಿಂತ ಹೆಚ್ಚು ದುರ್ಬಲವಾದುದು. ಆದರೆ ಮತ್ತೆ ಮುಂದಿನ 'ಭೂಲೇ ಬಿಸರೇ ಚಿತ್ರ' ಮತ್ತು 'ಸಾಮರ್ಥ್ಯ ಔರ್ ಸೀಮಾ'ಗಳಲ್ಲಿ ಅವರ ಶಕ್ತಿ ಹಾಗೂ ಕೌಶಲಗಳಿಗೆ ಯಥೇಷ್ಟವಾಗಿ ಪ್ರಮಾಣ ಸಿಗುತ್ತದೆ. 'ಭೂಲೇ ಬಿಸರೇ ಚಿತ್ರ'ಕ್ಕೆ ಅವರಿಗೆ ಸಾಹಿತ್ಯ ಅಕಾದೆಮಿ ಮತ್ತು ಹಿಂದೂಸ್ತಾನೀ ಅಕಾದೆಮಿಗಳ ಸರ್ವಶ್ರೇಷ್ಠ ಪುರಸ್ಕಾರಗಳೂ ದೊರೆತಿವೆ.

## ಭೂಲೇ ಬಿಸರೇ ಚಿತ್ರ (ಹೊಸ ನೀರು)

'ಭೂಲೇ ಬಿಸರೇ ಚಿತ್ರ' ಮೂಲತಃ ಒಂದು ದೊಡ್ಡಗಾತ್ರದ ಕಾದಂಬರಿ. ಈಗ ನಿಮ್ಮ ಕೈಯಲ್ಲಿರುವುದು ೭೦೦-೭೫೦ ಪುಟಗಳ ಆ ಕಾದಂಬರಿಯ ಸಂಕ್ಷಿಪ್ತ ಸಂಸ್ಕರಣ. ಮೂಲ ಸಂಸ್ಕರಣದಲ್ಲಿನ ಕಥೆಯ ವಿಕಾಸವನ್ನು ಗಮನದಲ್ಲಿಟ್ಟು ಈ ಸಂಕ್ಷಿಪ್ತ ಸಂಸ್ಕರಣವನ್ನು ಸಿದ್ಧಗೊಳಿಸಲಾಗಿದೆ. ಹೀಗೆ ಸಂಕ್ಷಿಪ್ತಗೊಳಿಸುವಾಗ ಕಾದಂಬರಿಯ ಕೆಲವೊಂದು ರೋಚಕ ಅಂಶಗಳೂ ಜೀವನದ ಅನೇಕ ಚಿತ್ರವಿಚಿತ್ರ ಸಂಗತಿಗಳೂ ಕಳಚಿಹೋಗಿವೆಯೆನ್ನಬಹುದಾದರೂ ಜೊತೆಗೇ ಕಾದಂಬರಿ ಹೆಚ್ಚು ಸುಘಟಿತವೂ ಸ್ಪಷ್ಟವೂ ಕಲಾತ್ಮಕವೂ ಆಗಿದೆಯೆಂಬುದೂ ನಿಜ.

ಈ ಕಾದಂಬರಿ ಒಂದು ಮನೆತನದ ನಾಲ್ಕು ಪೀಳಿಗೆಗಳ ಕಥೆ. ಈ ಪೀಳಿಗೆಗಳು ತಮ್ಮ ತಮ್ಮ ಸಮಸಾಮಯಿಕ ಸಂಘರ್ಷಗಳ, ಪರಿಸ್ಥಿತಿಗಳ ಎಳೆತದಲ್ಲಿಯೇ ಏಳುತ್ತವೆ, ಬೀಳುತ್ತವೆ. ಈ ಮನೆತನ ಹಾಗೂ ಸಮಾಜ ಈಗ ಪ್ರಾಯಶಃ ಕಣ್ಮರೆಯಾಗಿ ಇತಿಹಾಸದ ವಸ್ತುವಾಗಿದೆ. ಹೀಗೆ ವ್ಯಕ್ತಿ, ಮನೆತನ ಮತ್ತು ಸಮಾಜಗಳು ಇತಿಹಾಸದ ಭೂಮಿಯ ಮೇಲೆ ಒಂದಾಗಿಬಿಟ್ಟಿವೆ. ಇದನ್ನು ಒಂದು ತರಹದ 'ಪೀರಿಯೆಡ್ ನಾವೆಲ್' ಎಂದೂ ಅನ್ನಬಹುದು. ಇದರ ಕಥಾಕಾಲ ೧೮೮೦ ರಿಂದ ೧೯೩೦ ರ ವರೆಗೆ ಚಾಚಿದೆ. ಇಲ್ಲಿ ಅರ್ಧಶತಮಾನದ ಕಾಲಫಲಕದ ಮೇಲೆ ಹರಡಿ ಹಂಚಿಹೋಗಿರುವ ಭಾರತೀಯ ಸಮಾಜದ ಚಿತ್ರವನ್ನು ರಾಜಕೀಯ ಹಿನ್ನೆಲೆಯಲ್ಲಿ ಕೊಡುವ ಪ್ರಯತ್ನ ಮಾಡಲಾಗಿದೆ. ಪ್ರಾಯಶಃ ಇತಿಹಾಸದ ವಸ್ತುನಿಷ್ಠ ದೃಷ್ಟಿಯನ್ನು ಕಾಪಾಡಿಕೊಳ್ಳಲೋ ಏನೋ ವರ್ಮರು ಕಥೆಯನ್ನು ೧೯೩೦ ರವರೆಗೆ ಮಾತ್ರ ತಂದಿದ್ದಾರೆ. ಯಾಕೆಂದರೆ ಅಲ್ಲಿಂದೀಚೆಯ ಕಾಲಕ್ಕೆ ಅವರು ಸ್ವಯಂ ಭಾಗಿಗಳಾಗುತ್ತಾರೆ. ಅದರಿಂದಾಗಿ ಕಥೆಯನ್ನು ಮುಂದೆ ಬೆಳಸಿದ್ದರೆ ಪೂರ್ವಗ್ರಹ ದೃಷ್ಟಿ ಮೂಡುವ ಸಂಭವವಿರುತ್ತಿತ್ತು. ವರ್ಮರು ತಮ್ಮ ಬರೆವಣಿಗೆಯನ್ನು ೧೯೩೦ ರ ಸುಮಾರಿಗೆ ಪ್ರಾರಂಭಮಾಡಿದರೆಂಬುದನ್ನು ನಾವು ಇಲ್ಲಿ ನೆನಪಿನಲ್ಲಿಡಬೇಕು. ಕಾದಂಬರಿಯ ನಾಲ್ಕನೆಯ ಪೀಳಿಗೆಯಲ್ಲಿನ ನವಲ್ ವರ್ಮರ ಪೀಳಿಗೆಯ ಪ್ರತೀಕವೆಂದೂ ಅನ್ನಬಹುದು. ಅವನನ್ನು ಸಂಘರ್ಷಣೆಯ ಭೂಮಿಯ ಮೇಲೆ ತಂದು ನಿಲ್ಲಿಸಿ ಕಾದಂಬರಿಗಾರರು ವಿರಮಿಸುತ್ತಾರೆ. ಅಲ್ಲದೆ ಅವರು ತಮ್ಮ ನಿರ್ಣಯವನ್ನೂ ಕೊಡಲಿಚ್ಛಿಸುವುದಿಲ್ಲ.

ಅವಿಭಕ್ತ ಕುಟುಂಬ ಪದ್ಧತಿಯ ನಾಶ, ಮಧ್ಯಮವರ್ಗದ ಉದಯ, ಬಂಡವಾಳಗಾರಿಕೆಯ ಕೈಯಿಂದ ಜಹಗೀರದಾರಿಕೆಯ ಪರಾಜಯ, ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಳನದ ವಿಕಾಸ—ಇಡೀ ಕಾದಂಬರಿಯ ಕಥೆ ಈ ನಾಲ್ಕು ಆಧಾರಬಿಂಧುಗಳ ಮೇಲೆ ನಿಲ್ಲುತ್ತದೆ. ಈ ನಾಲ್ಕರ ಪರಸ್ಪರ ಕ್ರಿಯೆ-ಪ್ರತಿಕ್ರಿಯೆಗಳ ಮಾಧ್ಯಮದಿಂದ ಕಾದಂಬರಿಯ ಸಂಪೂರ್ಣ ಒಳಕಟ್ಟಿನ ನಿರ್ಮಾಣವಾಗಿದೆ. ಮೊದಲನೆಯ ಪೀಳಿಗೆ ಮುನಿಷಿ ಶಿವಲಾಲನದು. ಅವನು ಕಚೇರಿಯ ಹೊರಗೆ ಕುಳಿತು ಅರ್ಜಿ ಗುಮಾಸ್ತೆಯ ಕೆಲಸ ಮಾಡುತ್ತಾನೆ. ಆದರೆ ಇಂಗ್ಲಿಷ್ ಓದಿದ ಅವನ ಮಗ ಜ್ವಾಲಾಪ್ರಸಾದ ಬ್ರಿಟಿಷ್ ಕಲೆಕ್ಟರ್ ಸಾಹೇಬನ ಕೃಪೆಯಿಂದ ನಾಯಬ್-ತಹಸೀಲದಾರನ ನೌಕರಿ ಪಡೆಯುತ್ತಾನೆ. ಇದು ಮಧ್ಯಮವರ್ಗದ ಅಭ್ಯುದಯದ ಮೊದಲ ಪ್ರಕ್ರಿಯೆ. ಇದರ ತತ್‌ಕ್ಷಣದ ಪ್ರಭಾವ ಮುನಿಷಿ ಶಿವಲಾಲನ ಅವಿಭಕ್ತ ಕುಟುಂಬದ ಮೇಲೆ ಉಂಟಾಗುತ್ತದೆ. ಮಗನ ಜೊತೆ ಸೊಸೆಯೂ ಮನೆ ಬಿಡುವುದು ಈ ಅವಿಭಕ್ತ ಕುಟುಂಬ ಪದ್ಧತಿಯಲ್ಲಿ ಕಾಣಿಸಿಕೊಳ್ಳುವ ಮೊದಲ ಒಡಕು. ಮುನಿಷಿ ಶಿವಲಾಲನ ತಮ್ಮ ಮುನಿಷಿ ರಾಧೇಲಾಲ ಏನೇ ಯುಕ್ತಿ ಮಾಡಲಿ ಈ ಅವಿಭಕ್ತ ಕುಟುಂಬ ಮುರಿದು ಬೀಳದೇ ಇರುವುದಿಲ್ಲ. ಈ ಅವಿಭಕ್ತ ಕುಟುಂಬದ ಸಮಸ್ಯೆಯನ್ನು ಇನ್ನೂ ಮುಂದುವರಿಸಬಹುದಾಗಿತ್ತು.

ಪ್ರಾಯಶಃ ಅದರಿಂದ ತಪ್ಪಿಸಿಕೊಳ್ಳಲೋ ಏನೋ ಕಾದಂಬರಿಗಾರರು ಜ್ವಾಲಾಪ್ರಸಾದ, ಗಂಗಾಪ್ರಸಾದ ಮತ್ತು ನವಲ್ ಈ ಮೂವರನ್ನೂ ತಮ್ಮ ತಮ್ಮ ತಂದೆತಾಯಿಯರ ಒಬ್ಬರೇ ಮಕ್ಕಳನ್ನಾಗಿ ಮಾಡಿದ್ದಾರೆ.

೧೯೩೦ ನೆಯ ಇಸವಿಯನ್ನು ತಲಪುವ ಹೊತ್ತಿಗೆ ಮಧ್ಯಮವರ್ಗದಲ್ಲಿ ಬಿಕ್ಕಟ್ಟು ತಲೆದೋರಿತ್ತೆಂದು ಮೇಲೆ ಭೂಮಿಕೆಯ ಭಾಗದಲ್ಲಿ ಹೇಳಿದೆವು. ಮಧ್ಯಮವರ್ಗದ ವಿಕಾಸವಾಗಿದ್ದುದು ಬಂಡವಾಳಗಾರಿಕೆ, ಜಹಗೀರದಾರಿಕೆಗಳ ನೆರಳಿನಲ್ಲಿ. ಆದರೆ ಬರು ಬರುತ್ತ ಬೆಳೆಯುತ್ತಿದ್ದ ಆರ್ಥಿಕ ದುಸ್ಥಿತಿ ಮಧ್ಯಮವರ್ಗದಲ್ಲಿ ಸ್ವಾತಂತ್ರ್ಯದ ಬಯಕೆ ಯನ್ನುಂಟುಮಾಡಿತು. 'ಭೂಲೇ ಬಿಸರೇ ಚಿತ್ರ' ದಲ್ಲಿಯೂ ಇದೇ ಚಿತ್ರಿತವಾಗಿದೆ. ಜ್ವಾಲಾಪ್ರಸಾದ, ಗಂಗಾಪ್ರಸಾದರು ನೌಕರಶಾಹಿಯ ಮತ್ತು ಮಧ್ಯಮವರ್ಗದ ಅದೇ ಬಗೆಯ ಪ್ರತೀಕಗಳಾಗಿದ್ದಾರೆ. ಗಂಗಾಪ್ರಸಾದ ಕಲೆಕ್ಟರ್ ಆಗುತ್ತಾನೆ. ಇದು ಮಧ್ಯಮ ವರ್ಗದ ಉತ್ಕರ್ಷೆಯ ತುತ್ತತುದಿ. ಆದರೆ ಆಕಸ್ಮಿಕವಾಗಿ ಅವನು ಸಾವಿಗೆ ತುತ್ತಾದಾಗ ಅವನ ಮಗ ನವಲ್ ತನ್ನ ತಾತ ಜ್ವಾಲಾಪ್ರಸಾದ ಆರಂಭದೆಸೆಯಲ್ಲಿ ಮಾಡಿದ್ದಂತೆ ಮಾಡು ವುದಿಲ್ಲ; ಕೆರಳಿದ ಅವನ ತನ್ನತನ ಯಾರ ದಯೆಯನ್ನೂ ಸ್ವೀಕರಿಸಲು ಒಪ್ಪುವುದಿಲ್ಲ. ಜೀವನದ ಬರತದೊಡನೆ ಹರಿದುಕೊಂಡುಹೋಗುವ ಉದ್ದೇಶದಿಂದ ಅವನು ಪೂರ್ಣ ಆವೇಶದೊಂದಿಗೆ ಸತ್ಯಾಗ್ರಹ ಸಂಗ್ರಾಮದಲ್ಲಿ ಧುಮುಕುತ್ತಾನೆ. ವಸ್ತುತಃ ನಾಲ್ಕನೆಯ ಪೀಳಿಗೆಯ ನವಲನಲ್ಲಿ ಈ ಮಧ್ಯಮ ವರ್ಗದ ಸ್ವಭಾವ ಹಾಗೂ ಭಾಗ್ಯಾಕಾಂಕ್ಷೆಗಳು ಸ್ಪಷ್ಟರೂಪದಲ್ಲಿ ಒಡಮೂಡಿವೆ. ಒಟ್ಟಿನಲ್ಲಿ ನಾಲ್ಕು ಪೀಳಿಗೆಗಳ ಈ ಮನೆತನದ ಪದರಿನ ಮೇಲೆಯೇ ಕಾದಂಬರಿ ಹೆಚ್ಚಿನ ಸಫಲತೆ ಪಡೆಯುತ್ತದೆ.

ಕಥೆಯ ಈ ಮೊದಲ ಭಾಗದಲ್ಲಿ ಕಾದಂಬರಿಯ ಇನ್ನೂ ಒಂದು ಪದರು ಎದ್ದು ಕಾಣುತ್ತದೆ. ಅದೆಂದರೆ ಜಹಗೀರದಾರಿಕೆ ಬಂಡವಾಳಗಾರಿಕೆಗಳ ನಡುವಿನ ದ್ವಂದ್ವದ್ದು. ಜ್ವಾಲಾಪ್ರಸಾದ ನಾಯಬ್ ತಹಸೀಲದಾರನಾಗಿ ಘಾಟಮಪುರವನ್ನು ತಲಪಿದೊಡನೆಯೇ ಠಾಕೂರ್ ಗಜರಾಜಸಿಂಹ, ಠಾಕೂರ್ ಬರಜೋರಸಿಂಹ ಮತ್ತು ಲಾಲಾ ಪ್ರಭುದಯಾಳರ ನಡುವಿನ ಸಂಘರ್ಷಣೆ ಅವನಿಗೆ ಎದುರಾಗುತ್ತದೆ. ಒಬ್ಬ ಸಾಧಾರಣ ವ್ಯಾಪಾರಿಯ ಮಗನಾದ ಪ್ರಭುದಯಾಳ ತಮ್ಮ ಕುಲಾಭಿಮಾನ, ಜಹಗೀರದಾರಿಯ ಗತ್ತನ್ನು ಕಾಪಾಡಿಕೊಳ್ಳುವುದರಲ್ಲಿ ಮಗ್ನರಾಗಿರುವ ಇಬ್ಬರು ಠಾಕೂರರನ್ನೂ ಅಪಮಾನಕ್ಕೆ ಗುರಿ ಮಾಡುತ್ತಾನೆ. ಸಮಯಸಾಧಿಸುವುದರಲ್ಲಿ ಅವನು ಗುರಿ ತಪ್ಪುವುದಿಲ್ಲ. ನೌಕರ ಶಾಹಿಯನ್ನು ಕೈಯಲ್ಲಿಟ್ಟುಕೊಳ್ಳಬೇಕೆಂಬುದನ್ನು ಅವನು ಬಲ್ಲ. ನೌಕರಶಾಹಿಯ ಪ್ರತೀಕನಾದ ಜ್ವಾಲಾಪ್ರಸಾದ ನ್ಯಾಯಕಾಯಿದೆಗಳ ಹೆಸರಿನಲ್ಲಿ ಅವನಿಗೆ ಜೊತೆಕೊಡಲು ಅಸಹಾಯನಾಗುತ್ತಾನೆ. ಹೀಗೆ ವರ್ಮಾರು ನೌಕರಶಾಹಿ, ಬಂಡವಾಳಶಾಹಿಗಳ ಒಗ್ಗೂಡಿ ಕೆಯ ಮೂಲಕ ಜಹಗೀರದಾರಿಯ ಸೋಲಿನ ಐತಿಹಾಸಿಕ ತಥ್ಯವನ್ನು ಚಿತ್ರಿಸಿದ್ದಾರೆ. ಇದಲ್ಲದೆ ಬಂಡವಾಳಶಾಹಿಯ ಮುಖದ ಮೇಲಿನ ಪರದೆಯನ್ನು ಮತ್ತೆ ಮತ್ತೆ ಸರಿಸಿ

ಆ ಮುಖ ಎಷ್ಟು ಅಸಹ್ಯಕರವಾದುದೆಂಬುದನ್ನು ತೋರಿಸುತ್ತಾರೆ. ಈ ಬಂಡವಾಳ ಶಾಹಿ ಅಸಹಕಾರ ಆಂದೋಳನಕ್ಕೆ ಸಹಾಯ ನೀಡುತ್ತದೆ; ಯಾಕೆಂದರೆ ಅದರಿಂದ ವಿದೇಶೀ ಬಂಡವಾಳಶಾಹಿಯ ವಿರುದ್ಧ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಲು ಅನುಕೂಲವಾಗುತ್ತದೆ. ಆದರೆ ತನ್ನ ಕೆಲಸ ಸಾಧಿಸಿಕೊಂಡಾದ ಮೇಲೆ ಒಮ್ಮೆಲೇ ಅದರಿಂದ ಮುಖ ತಿರುಗಿಸುತ್ತದೆ. ಈ ಬಂಡವಾಳಶಾಹಿ ವಿದೇಶೀ ಸಾಮ್ರಾಜ್ಯವಾದಕ್ಕೂ ಸಹಾಯನೀಡುತ್ತದೆ; ಪ್ರತಿಯಾಗಿ 'ಸರ್' ಬಿರುದನ್ನು ಗಿಟ್ಟಿಸಿ ಆ ಮೂಲಕ ಸಮಾಜ ದಲ್ಲಿ ತನ್ನ ಅಂತಸ್ತನ್ನು ಹೆಚ್ಚಿಸಿಕೊಳ್ಳುತ್ತದೆ. ಇನ್ನೊಬ್ಬರ ಹಣವನ್ನು ನುಂಗಿಹಾಕುವ ಅಪ್ರಾಮಾಣಿಕತೆಗೆ ಅದು ಹಿಂಜರಿಯುವುದಿಲ್ಲ. ಹಣಕ್ಕಾಗಿ ಮೃತ್ಯುಶಯ್ಯೆಯ ಮೇಲೆ ಮಲ ಗಿದ ಸ್ವಂತ ತಾಯಿಯನ್ನೇ ಬೈಯಲೂ ಅದು ಹೇಸುವುದಿಲ್ಲ. ಜ್ಞಾನಪ್ರಕಾಶ ಮಾಡುವ ಈ ಟಿಪ್ಪಣಿ ಬಂಡವಾಳಶಾಹಿಯ ವಾಸ್ತವಿಕ ವ್ಯಾಖ್ಯೆಯಾಗಿದೆ: "ಇದರಲ್ಲಿ ಆಶ್ಚರ್ಯ ಪಡೋಕ್ಕೆ ಏನಿದೆ? ಈ ಬಂಡವಾಳಗಾರರು ಚೆನ್ನಾಗಿ ಲಾಭ ಹೊಡೀತಾರೆ. ಸರಕಾರ ದಿಂದ ಎಲ್ಲ ತರಹದ ಅನುಕೂಲಗಳೂ ಸಿಗಲಿ ಅಂತ ಆ ಲಾಭದಲ್ಲಿ ಒಂದು ಸಣ್ಣ ಪಾಲನ್ನ ಸರಕಾರಕ್ಕೆ ಕೊಡ್ತಾರೆ. ಸ್ವದೇಶೀ ಆಂದೋಳನಕ್ಕೆ ಬಲ ಬರಲಿ, ತಮ್ಮ ಮಾಲು ಚೆನ್ನಾಗಿ ಖರ್ಚಾಗಲಿ ಅಂತ ಇನ್ನೊಂದು ಸಣ್ಣ ಪಾಲನ್ನ ಕಾಂಗ್ರೆಸ್ಸಿಗೆ ಕೊಡ್ತಾರೆ. ತಾವು ಮಾಡೋ ಲೂಟಿ-ಸುಲಿಗೆ, ತಗಲೂಫೀಸ ನೋಡಿ ಸರಕಾರಿ ಅಧಿಕಾರಿಗಳು ಕಣ್ಣುಮುಚ್ಚಿ ಕೊಂಡಿರಲಿ ಅಂತ ಮತ್ತೊಂದು ಸಣ್ಣ ಪಾಲನ್ನ ಜಾಯಿಂಟ್ ಮ್ಯಾಜಿಸ್ಟ್ರೇಟ್ ಗಂಗಾ ಪ್ರಸಾದನಿಗೆ ಕೊಡ್ತಾರೆ. ಈ ಯುಗದ ತೀರಾ ದೊಡ್ಡ ದೌರ್ಬಲ್ಯವೆಂದರೆ ರೂಪಾಯಿ."

ಅರ್ಥವ್ಯವಸ್ಥೆಯ ಕಡೆ ಮುನ್ನಡೆಯುವಾಗ ಹಿಂದೆಯೇ ರಾಜನೀತಿಯೂ ಬರುವುದು ಸ್ವಾಭಾವಿಕವೇ ಸರಿ. ಕಾದಂಬರಿಯ ಎರಡನೆಯ ಭಾಗದಲ್ಲಿ ರಾಜನೈತಿಕ ವಾತಾವರಣದ ಚಿತ್ರಣ ಪ್ರಧಾನವಾಗುತ್ತದೆ. ಈ ಭಾಗದ ಮೊದಲನೆಯ ಅಧ್ಯಾಯದಲ್ಲಿಯೇ ವಿದೇಶೀ ಆಡಳಿತ, ಅದರ ಪ್ರಭಾವ, ಹಾಗೂ ಸಾಂಪ್ರದಾಯಿಕತೆ ಜಾತೀಯತೆಗಳ ಚರ್ಚೆ ಬರುತ್ತದೆ. ಮತ್ತೆ ರೋಲಂಡ್ ಆಕ್ಟ್, ಅಸಹಕಾರ ಆಂದೋಳನ, ಚೌರೀಚೌರಾ ಪ್ರಕರಣ, ಜಾತಿ ಕಲಹ, ಹರತಾಳ, ದಾಂಡೀಯಾತ್ರೆ, ಉಪ್ಪಿನ ಸತ್ಯಾಗ್ರಹ ಮುಂತಾಗಿ ಎಲ್ಲ ಬರುತ್ತವೆ. ಕಾದಂಬರಿ ಕೊನೆಗೊಳ್ಳುವುದಂತೂ ರಾಜನೈತಿಕ ಬಿಂದುವಿನ ಮೇಲೆಯೇ.

ಮೇಲೆ ಚರ್ಚಿಸಿದ ಕಾದಂಬರಿಯ ವಿವಿಧ ಪದರುಗಳು ಒಂದು ಇನ್ನೊಂದರಿಂದ ಬೇರೆಯಾದುವುಗಳಲ್ಲ; ಒಂದು ಇನ್ನೊಂದನ್ನು ಆಧರಿಸಿವೆ, ಒಂದರಿಂದ ಇನ್ನೊಂದು ಹುಟ್ಟುತ್ತದೆ. ಈ ಎಲ್ಲ ಪದರುಗಳ ಮೂಲದಲ್ಲಿರುವ ಭಾವಬಿಂದು ಯಾವದೆಂದು ಹುಡುಕುವಾಗ ಹಳೆಯ ಪ್ರಪಂಚವನ್ನು, ಅದರ ಎಲ್ಲ ಬೆಲೆ, ನಂಬಿಕೆಗಳ ಸಮೇತ ಒಡೆದು ಅದರ ಸ್ಥಳದಲ್ಲಿ ಹುಟ್ಟಿಕೊಳ್ಳುವ ಹೊಸದೊಂದು ಪ್ರಪಂಚದ ರೂಪವಿಕಾಸಗಳನ್ನು ತೋರಿಸುವುದೇ ಕಾದಂಬರಿಯ ವಸ್ತು ಅಥವಾ 'ಥೀಮ್' ಎಂದು ನಮಗನ್ನಿಸು

ತ್ತದೆ*. ಜಹಗೀರದಾರಿಯ ಕುಲೀನತೆ, ಉತ್ತಮಿಕೆಗಳ ಮೌಲ್ಯದ ವಿರುದ್ಧ ಎದ್ದುನಿಂತ ಬಂಡವಾಳಶಾಹಿಯನ್ನು ಸಮರ್ಥನೆ ಮಾಡುತ್ತ ಜ್ವಾಲಾಪ್ರಸಾದ ಹೇಳುತ್ತಾನೆ; " ಈಗ ಕಾಲ ಬದಲಾಗಿದೆ, ಅಪ್ಪಾ. ಅವನೇನು ತಾನೇ ಮರಗೆಲಸ ಮಾಡಬೇಕೆ ! ಅವನು ಮರ ಗೆಲಸದ ಕಾರಖಾನೆ ತೆಗೀತಾನೆ. ಅಲ್ಲಿ ಸಾವಿರಾರು ಬಡಗಿಗಳು ಕೆಲಸ ಮಾಡ್ತಾರೆ, ಮೆಷಿನ್ನಿನ ಸಹಾಯದಿಂದ ಕೆಲಸ ನಡೆಯುತ್ತೆ. ಒಳ್ಳೇ ಫ್ಯಾಷನ್ನಿನ ಸಾಮಾನುಗಳು ತಯಾರಾಗುತ್ತವೆ. ಲಕ್ಷಾಂತರ ಜನರ ಕೆಲಸ ಮಾಡಿಕೊಡ್ತಾರೆ. ಹೊಸ ಪ್ರಪಂಚದ ಹೊಸ ರೂಪ ಅಲ್ಲಿ ಕಾಣಿಸುತ್ತದೆ." ಈ ಮಾತು ಮುನಿಷಿ ಶಿವಲಾಲನ ತಲೆಗೆ ಹೋಗು ವುದಿಲ್ಲ. ಆದರೆ ಅವನ ಮಗ, 'ಹೊಸ ಯುಗದ ಹೊಸ ಮನುಷ್ಯ' ಹೇಳಿದನೆಂಬ ಕಾರಣ ಅವನು ಒಪ್ಪಿಕೊಳ್ಳುತ್ತಾನೆ. ಹೀಗೆ ಲಕ್ಷ್ಮೀಚಂದ (ಬಂಡವಾಳಗಾರ) ಮತ್ತು ಜ್ವಾಲಾಪ್ರಸಾದರು (ನೌಕರಶಾಹಿ ಮತ್ತು ಮಧ್ಯಮವರ್ಗ) ಹೊಸಯುಗದ ಹೊಸ ಮನುಷ್ಯರು. ಈ ಹೊಸತನ ಸಂಸಾರದಲ್ಲಿಯೂ ನುಸುಳುತ್ತಿತ್ತು; " ಶಿವಲಾಲ ಯೋಚಿಸಲಾರಂಭಿಸಿದ. ಅಧಿಕಾರ ಹಾಗೂ ಶಕ್ತಿ ಸ್ಥಳಾಂತರವಾಗುತ್ತಿದ್ದವು, ಒಂದು ಜಾಗ ಬಿಟ್ಟು ಇನ್ನೊಂದು ಜಾಗಕ್ಕೆ ಹೋಗುತ್ತಿದ್ದವು. ಮನೆತನದ ಪರಂಪರೆ ಮುರಿದು ಬೀಳುತ್ತಿತ್ತು."

ಕಾಲ ಮುನ್ನಡೆದಂತೆ ಜ್ವಾಲಾಪ್ರಸಾದನ ಪ್ರಪಂಚವೂ ಬದಲಾಗುತ್ತದೆ. ಅವನೂ ಹಿಂದೆ ಬೀಳುತ್ತಾನೆ. ಜ್ವಾಲಾಪ್ರಸಾದನ ಮಗ ಗಂಗಾಪ್ರಸಾದನ ಬಗ್ಗೆ ಆಡುತ್ತ ಡಿಪ್ಟಿ ಕಲೆಕ್ಟರ್ ಸೋಮೇಶ್ವರದತ್ತರು ಹೇಳುತ್ತಾರೆ: " ಇಷ್ಟನ್ನಂತೂ ನೀವು ಒಪ್ಪಲೇಬೇಕು, ಅವನು ಧೀರ, ಸಾಹಸಿ. ಹೊಸ ಕಾಲದ ಹುಡುಗ, ಹೊಸ ಜಗತ್ತಿನಲ್ಲಿ ತುಂಬ ಮುಂದೆ ಹೋಗ್ತಾನೆ." ಈ ಹೊಸ ಯುಗದ ಹೊಸ ಮನುಷ್ಯನ ಗುಣವೆಂದರೆ ಅವನು ಸಾಹಸಿ, ಇನ್ನೊಬ್ಬರ ಮುಖಸ್ತುತಿ ಮಾಡಲಾರ, ಇಂಗ್ಲೀಷರೊಡನೆ ಸರಿಸಮನಾಗಿ ವ್ಯವಹರಿಸು ತ್ತಾನೆ, ಅವನು ಒಳಗೂ ಹೊರಗೂ ಒಂದೇ. ಅಂದರೆ ಈಗ ಮಧ್ಯಮವರ್ಗ ಆತ್ಮ ವಿಶ್ವಾಸದಿಂದ ಮುನ್ನಡೆಯುವಷ್ಟು ಶಕ್ತಿಶಾಲಿಯಾಗಿತ್ತು. ಆದರೆ ಸುಖ, ಸಂರಕ್ಷಣೆ, ನೌಕರಿಗಳ ಪ್ರಶ್ನೆ ಬಂದಾಗ ಅವುಗಳ ಜೊತೆಬಿಡುವಷ್ಟು ಸಾಮರ್ಥ್ಯ ಈ ಆತ್ಮವಿಶ್ವಾಸ ಕ್ಕಿಲ್ಲ. ಅದರೊಳಗಿನ ಹೇಡಿತನವೇ ಅದನ್ನು ಮುರಿದು ಚೂರುಚೂರುಮಾಡುತ್ತದೆ. ಅಸಹಕಾರ ಆಂದೋಳನದ ಬಗ್ಗೆ ಸಹಾನುಭೂತಿಯಿದ್ದರೂ ಅಧಿಕಾರದಲ್ಲಿ ಅಪಮಾನಿತ ನಾದಾಗ ಗಂಗಾಪ್ರಸಾದನಿಗೆ ನೌಕರಿ ಬಿಡಲಾಗುವುದಿಲ್ಲ. ಈ ಸಾಮರ್ಥ್ಯ ಬರುವುದು ಅವನ ಮುಂದಿನ ಪೀಳಿಗೆಯಲ್ಲಿ. ಕಾಹಿಲೆ ಬಿದ್ದಿರುವ ತಂದೆಯ ಶುಶ್ರೂಷೆಗಾಗಿ

---

* ಕಾದಂಬರಿಯ ಕನ್ನಡ ಅನುವಾದಕ್ಕೆ ಕೊಟ್ಟಿರುವ 'ಹೊಸ ನೀರು' ಶೀರ್ಷಿಕೆಯ ಸಾರ್ಥ ಕತೆಗೆ ಈ ಮಾತು ಪ್ರಮಾಣವಾಗಬಲ್ಲದು. ಹೊಸ ನೀರು ಬಂದು ಹಳೆಯ ನೀರು ಕೊಚ್ಚಿ ಹೋಯಿತು ಎಂಬ ಕನ್ನಡದ ಗಾದೆ ಈ ಶೀರ್ಷಿಕೆಗೆ ಆಧಾರ.—ಅನುವಾದಕ.

ಭುವಾಲಿಗೆ ಹೊರಡಲು ಸಿದ್ಧನಾಗಿರುವ ಮಗನನ್ನು ಗಂಗಾಪ್ರಸಾದ ನೋಡುತ್ತಾನೆ— ಆತ್ಮವಿಶ್ವಾಸದಿಂದ ತುಂಬಿದ ತನ್ನ ಸಮರ್ಥ ಮಗ, ಭವಿಷ್ಯದ ಪ್ರತೀಕ. ಹೊಸಯುಗದ ಪ್ರತೀಕನಾದ ಅವನು ಸ್ತ್ರೀಯ ಸ್ವತಂತ್ರ ಅಸ್ತಿತ್ವವನ್ನು ಒಪ್ಪಿಕೊಳ್ಳುತ್ತಾನೆ. ಅದಕ್ಕೆ ತಕ್ಕಂತೆ ಸ್ತ್ರೀಯ ನೌಕರಿಯ ಪ್ರಶ್ನೆ ಎದ್ದಾಗ ಅದಕ್ಕೆ ಬೆಂಬಲ ಕೊಡುತ್ತಾನೆ. ಅವನು ವಕೀಲಿ ಮಾಡಲು ನಿರಾಕರಿಸುತ್ತಾನೆ. ಯಾಕೆಂದರೆ ಸುಳ್ಳು, ಮುಖಸ್ತುತಿ, ಮೋಸ ಅವನಿಗೆ ಸಾಧ್ಯವಾಗುವುದಲ್ಲ. ಅವನನ್ನುತ್ತಾನೆ, "ನಾನು ನಿರಾಶೆಯಿಂದ ಜೈಲಿಗೆ ಹೋಗ್ತಾ ಇಲ್ಲ. ನಾನು ಯಾವ ದಾರೀನ ನನ್ನದು ಅಂತ ಅಂದುಕೊಂಡು ಹಿಡಿದಿ ದೀನೋ ಇದು ಅದರ ಪ್ರತಿಫಲ. ಹೋರಾಟ. ಹೋರಾಟ, ಹೋರಾಟ! ಜೀವನ ವಿಡೀ ಹೋರಾಟ! ಈ ಹೋರಾಟ ನನ್ನೊಳಗಿನ ಕೂಗು . . ." ಆದರೂ ಸಹ ತಾನು ನಿರ್ಮಿಸ ಹೊರಟಿರುವ ಹೊಸದೇನಿದೆ ಅದಕ್ಕೆ ದುಬಾರಿ ಬೆಲೆ ತೆರಬೇಕಾಗಿದೆಯೆಂದು ಅವನಿಗೆ ಅನ್ನಿಸದೆ ಇರದು. "ಹಳೆಯದೆಲ್ಲವನ್ನೂ ನಿರ್ದಯವಾಗಿ ಒಡೆಯಬೇಕಾಗಿದೆ."

ವೇಗವಾಗಿ ಬದಲಾಗುವ ಈ ಹೊಸ ಪ್ರಪಂಚದ ಎಲ್ಲಕ್ಕಿಂತ ಹೆಚ್ಚು ವ್ಯಂಜಕ ಚಿತ್ರ ವೆಂದರೆ ಕಾದಂಬರಿಯ ಪ್ರಾರಂಭದಲ್ಲಿ ಹೊಸ ಯುಗದ ವ್ಯಕ್ತಿ ಎಂದು ಕರೆಸಿಕೊಂಡಿದ್ದ ಜ್ವಾಲಾಪ್ರಸಾದನೇ ಅರ್ಧ ಶತಮಾನದ ನಂತರ ಕಾದಂಬರಿಯ ಕೊನೆಯಲ್ಲಿ ಇನ್ನೂ ಹೆಚ್ಚು ಹೊಸದಾದ ಪ್ರಪಂಚದ ಮುಂದೆ ದಿಕ್ಕುತೋಚದಂತಾಗಿ ಹೇಳುತ್ತಾನೆ, "ಒಂದೂ ತಿಳಿಯೋಲ್ಲ, ಭೀಖು, ಇದೆಲ್ಲಾ ಏನು ನಡೀತಿದೆ, ಯಾಕೆ ನಡೀತಿದೆ ಅಂತ. ತರಹಾವಾರಿ ಚಿತ್ರಗಳು ತಮಗೆ ತಾವೇ ಸೃಷ್ಟಿಯಾಗುತ್ತವೆ, ತಮಗೆ ತಾವೇ ಅಳಿಸಿಹೋಗುತ್ತವೆ. ಯಾಕೆ ಹೀಗೆ?" ಮತ್ತೆ ಲೇಖಕರ ಈ ಟಿಪ್ಪಣಿಯೊಂದಿಗೆ ಕಾದಂಬರಿ ಮುಗಿಯುತ್ತದೆ: "ಇಬ್ಬರು ಮುದುಕರು—ಯುಗವನ್ನು ನೋಡಿದ್ದವರು. ಏರಿಳಿತಗಳನ್ನು ಕಂಡಿದ್ದವರು. ಅನುಭವದ ಭಂಡಾರವನ್ನು ಹೊತ್ತಿದ್ದವರು—ಆ ಇಬ್ಬರು ಮುದುಕರು ಉತ್ತರ ಕಾಣದೆ ಅಸಹಾಯರಾಗಿ ನಿಂತಿದ್ದರು. ದೂರದಲ್ಲಿ ಸಹಸ್ರ, ಲಕ್ಷ, ಕೋಟಿ ಜನ ಜೀವನ ಹಾಗೂ ಕಾಲಗತಿಗಳಿಂದ ಪ್ರೇರಿತರಾಗಿ ಹೊಸ ಉಲ್ಲಾಸ ಉತ್ಸಾಹಗಳನ್ನು ವೈದಾಳಿ ಒಂದು ಹೊಸ ಪ್ರಪಂಚದ ನಿರ್ಮಾಣಕ್ಕೆ ಹೊರಟಿದ್ದರು."

ವಿಸ್ತೃತ ದೇಶಕಾಲಗಳಲ್ಲಿ ಹರಡಿರುವ ಈ ಕಾದಂಬರಿಯ ಬಂಧದ ಬಗ್ಗೆಯೂ ಕೊಂಚ ವಿವೇಚನೆ ಮಾಡುವುದು ಅವಶ್ಯಕ. ಎಲ್ಲಕ್ಕಿಂತ ಮೊದಲು ನಮ್ಮ ಗಮನ ಹರಿಯು ವುದು ಕಥಾನಿರೂಪಣೆಯ ಹಿಂದಿರುವ ದೃಷ್ಟಿಯ ಕಡೆ. ಲೇಖಕರು ತಾವು ಚಿತ್ರಿಸುವ ಜೀವನ ಪ್ರಕ್ರಿಯೆಯ ಬಗ್ಗೆ ವಸ್ತುಗತವಾಗಿ ತಟಸ್ಥರಾಗಬೇಕಾದುದು ಅವಶ್ಯಕ. ಎಂತಲೇ ಅವರು ಕಥೆಯನ್ನು ಒಬ್ಬ ತಟಸ್ಥ ದರ್ಶಕನ ಬಿಂದುವಿನಿಂದ ಹೇಳಿದ್ದಾರೆ. ದೀರ್ಘ ದೇಶಕಾಲಗಳ ನಿರ್ವಹಣೆ ಈ ಬಿಂದುವಿನಿಂದ ಸಾಧ್ಯವೂ ಹೌದು. ಆದರೆ ನಾಟಕೀಯ ತಂತ್ರ ಗಳ ಮೂಲಕ ಈ ತಟಸ್ಥತೆ ಏಕರಸವಾಗದಂತೆ ನೋಡಿಕೊಂಡಿದ್ದಾರೆ. ಹರಿತವಾದ ಸಂಭಾಷಣೆ ನಾಟಕೀಯತೆಯನ್ನು ಕಾಪಾಡುತ್ತದೆ. ತಟಸ್ಥ ದರ್ಶಕನ ಬಿಂದುವಿನಿಂದ

ಐತಿಹಾಸಿಕಶೈಲಿಯಲ್ಲಿ ಕಥೆಯ ನಿರೂಪಣೆಯಾಗಿರುವುದರಿಂದ ಲೇಖಕರಿಗೆ ಎಲ್ಲೆಂದರೆ ಅಲ್ಲಿ ತಲೆಹಾಕಿ ಕಥಾಸೂತ್ರವನ್ನು ಹಿಡಿದು ಮುಂದಕ್ಕೆ ಕೊಂಡೊಯ್ಯುವ ಸೌಕರ್ಯವುಂಟಾಗಿದೆ. ತಮ್ಮ ಟಿಪ್ಪಣಿಯ ಮೂಲಕ ಪಾತ್ರಗಳ ರೂಪರೇಷೆಗಳನ್ನೂ ಘಟನೆಗಳ ಅಂತರಾರ್ಥವನ್ನೂ ಸ್ಪಷ್ಟಗೊಳಿಸುವುದು ಸಾಧ್ಯವಾಗಿದೆ. ಆದರೆ ಈ ಸೌಕರ್ಯವಿದ್ದೂ ಕಥೆಯ ಬಂಧದಲ್ಲಿ ಕೆಲವು ಬಿರುಕುಗಳು ಉಳಿದಿವೆ. ಆಕಸ್ಮಿಕ ಘಟನೆಗಳ ಆಸರೆ ಪಡೆದು ಕಥೆಯನ್ನು ಮುಂದುವರಿಸುವುದು ಈ ಬಿರುಕುಗಳಲ್ಲೊಂದು. ಬಿಶನಲಾಲನ ಇಡೀ ಪ್ರಾಸಂಗಿಕ ಕಥೆ ಮೂಲಕಥೆಗೆ ಯಾವ ರೀತಿಯಲ್ಲೂ ನೆರವಾಗುವುದಿಲ್ಲ, ಅದನ್ನು ಅರ್ಥವತ್ತಾಗಿ ಮಾಡುವುದಿಲ್ಲ. ಈ ಕಾರಣದಿಂದಾಗಿ ಬುದ್ದೂ, ಜಗ್ಗೂ ಪೈಲ್ವಾನರುಗಳ ಆಕಸ್ಮಿಕ ಘಟನೆ ಉಪಕಥೆಯಲ್ಲಿ ಬರಬಲ್ಲದು. ಆದರೆ ಗಂಗಾಪ್ರಸಾದನ ಆಕಸ್ಮಿಕ ಕಾಹಿಲೆ ಹಾಗೂ ಸಾವುಗಳನ್ನು ತಂದು ಲೇಖಕರು ಆ ಪಾತ್ರದಿಂದ ಬಿಡುಗಡೆ ಪಡೆಯ ಬಯಸಿದಂತೆ ತೋರುತ್ತದೆ. ಗಂಗಾಪ್ರಸಾದನ ಪಾತ್ರದ ಸಾಧ್ಯತೆಯೆಲ್ಲವನ್ನೂ ಅವರು ಬಳಸಿಕೊಂಡಂತೆ ಕಾಣುವುದಿಲ್ಲ. ಈ ಮಾತನ್ನೇ ಬರಜೋರಸಿಂಹನ ಆತ್ಮಹತ್ಯೆಯ ಬಗ್ಗೆಯೂ ಹೇಳಬಹುದು. ಇಂತಹ ಕೊರತೆಗಳಿದ್ದರೂ ಕೂಡ ಸುಬದ್ಧವಾಗಿ ಕಥೆ ಕಟ್ಟುವುದರಲ್ಲಿ ತಾವು ಶಕ್ತರೆಂದು ಕಾದಂಬರಿಗಾರರು ತೋರಿಸಿಕೊಂಡಿದ್ದಾರೆ. ನಾಲ್ಕು ಪೀಳಿಗೆಗಳ ಕಥೆಯಾದರೂ ಏಕಸೂತ್ರತೆಯ ದೃಷ್ಟಿಯಿಂದ ಅದರಲ್ಲಿ ಯಾರಾದರೊಬ್ಬರನ್ನು ಕೇಂದ್ರವನ್ನಾಗಿ ಮಾಡುವುದು ಅವಶ್ಯಕವಾಗಿತ್ತು. ಕಾದಂಬರಿಗಾರರು ಇದಕ್ಕೆ ಜ್ವಾಲಾಪ್ರಸಾದನನ್ನು ಆರಿಸಿದ್ದಾರೆ. ತಂದೆ ಶಿವಲಾಲನ ಪೀಳಿಗೆ ಅವನಿಗೆ ಪಾರಂಪರ್ಯವಾಗಿ ಬಂದಿದ್ದು, ಜೊತೆಗೇ ಅವಿಭಕ್ತ ಕುಟುಂಬದ ಸಮಸ್ಯೆಯನ್ನು ಅವನ ಮಡಿಲಿಗೆ ಹಾಕಿತು. ಅವನ ಮಗ ಗಂಗಾಪ್ರಸಾದನ ಮೂರನೆಯ ಪೀಳಿಗೆ ಅದರದ್ದೇ ವಿಕಸಿತರೂಪ. ಜ್ವಾಲಾಪ್ರಸಾದ ತನ್ನ ಹಾಗೂ ತನ್ನ ಮಗನ ಪೀಳಿಗೆಗಳನ್ನಷ್ಟೇ ಅರ್ಥಮಾಡಿಕೊಳ್ಳಬಲ್ಲ. ಮೊಮ್ಮಗ ನವಲನ ನಾಲ್ಕನೆಯ ಪೀಳಿಗೆ ಅವನ ಪಾಲಿಗೆ ಕೇವಲ ನೋಟವಾಗಿ ಉಳಿಯುತ್ತದೆ, ಅದನ್ನು ಅವನು ಅರ್ಥಮಾಡಿಕೊಳ್ಳಲಾರ. ಹೀಗೆ ಜ್ವಾಲಾಪ್ರಸಾದನೊಬ್ಬನೇ ಮೊದಲಿನಿಂದ ಕೊನೆಯವರೆಗೂ ಕಾದಂಬರಿಯ ಬೆನ್ನೆಲುಬಾಗುತ್ತಾನೆ. ಕಥೆಯ ಸಕ್ರಿಯ ಪಾತ್ರವಾಗಿಲ್ಲದಿರುವಾಗಲೂ ಅವನು ದರ್ಶಕನಾಗಿ ಉಳಿಯುತ್ತಾನೆ. ಹೀಗೆ ಕಾದಂಬರಿಗಾರರು ಅವನ ಸಮಸ್ತ ಶಕ್ತಿಸಾಧ್ಯತೆಗಳ ಉಪಯೋಗವನ್ನೂ ಪಡೆದಿದ್ದಾರೆ.

ಪಾತ್ರಗಳ ಶಕ್ತಿಸಾಮರ್ಥ್ಯಗಳನ್ನು ಚರ್ಚಿಸುವಾಗ ಒಂದು ಅಂಶ ಯಾವಾಗಲೂ ನಮ್ಮ ಗಮನವನ್ನು ಸೆಳೆಯುತ್ತದೆ. ಪಾತ್ರಗಳಲ್ಲಿ ಸಾಕಷ್ಟು ಆಳ, ವರ್ತುಲತೆಗಳು ಬಂದಿಲ್ಲ. ವಿಸ್ತೃತ ದೇಶಕಾಲಗಳ ಮೇಲೆ ಹರಡಿರುವ ಸಾಮಾಜಿಕ ಜೀವನವನ್ನು ಚಿತ್ರಿಸುವುದು ಕಾದಂಬರಿಗಾರರ ಉದ್ದೇಶವಾದುದರಿಂದ ಅದೇ ಈ ಕೊರತೆಗೆ ಕಾರಣವೇನೋ. ಅದೇ 'ಚಿತ್ರಲೇಖಾ', 'ತೀನ್ ವರ್ಷ' ಹಾಗೂ 'ಟೇಢೇ-ಮೇಢೇ ರಾಸ್ತೆ'ಗಳಲ್ಲಿ ತಮ್ಮ ಪಾತ್ರಸ್ಥಾಪನಾಶಕ್ತಿಗೆ ಸಾಕಷ್ಟು ಪ್ರಮಾಣವಿತ್ತಿದ್ದಾರೆ. 'ಟೇಢೆ-ಮೇಢೆ ರಾಸ್ತೆ'ಯ

ಪಂಡಿತ ರಾಮನಾಥನ ಪಾತ್ರವಂತೂ ಅವಿಸ್ಮರಣೀಯ ಕಥಾನಾಯಕರ ಪರಂಪರೆಯಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಆದರೆ ಪ್ರಸ್ತುತ ಕಾದಂಬರಿಯ ಪಾತ್ರಗಳು ಹೆಚ್ಚಾಗಿ ಚಪ್ಪಟೆಯಾಗಿವೆ, ಒಂದು ಜಾತಿ ಅಥವಾ ವರ್ಗಕ್ಕೆ ('ಟೈಪ್') ಸೇರಿದಂತಿವೆ. ಅವುಗಳ ಗಾಢ ಸಂಬಂಧಗಳಲ್ಲಿ ಸಹ ಸಾಕಷ್ಟು ಆಂತರಿಕತೆ ಬರಲು ಸಾಧ್ಯವಾಗದಷ್ಟು ಅವುಗಳ ವೈಯಕ್ತಿಕತೆ ನಷ್ಟವಾಗಿದೆ. ಒಂದು ವಿಧಿಪೂರ್ವಕ ಇಲ್ಲವೇ ವಿರುದ್ಧವಾದ ಪ್ರಣಯ ಪ್ರಸಂಗವಾಗಲೀ, ಅಥವಾ ಒಂದು ವಾತ್ಸಲ್ಯದ ಸಂಬಂಧವಾಗಲೀ, ಎಲ್ಲೂ ಎಲ್ಲ ತರ್ಕ, ಕಾರ್ಯಕಾರಣ ಪರಂಪರೆಗಳಿಂದ ವ್ಯಕ್ತಿಯನ್ನು ಬೇರ್ಪಡಿಸಿ ಅವನನ್ನು ತನ್ನ ಸಂಬಂಧ ಗಳಲ್ಲಿ ವಿಶಿಷ್ಟನನ್ನಾಗಿ ಮಾಡುವ ಆಳವಾದ ಭಾವನಾಶೀಲತೆ ಕಾಣಬರುವುದಿಲ್ಲ. ಸಂಸಾರ ದೊಳಗಿನ ಸಂಬಂಧಗಳದ್ದಷ್ಟೇ ಅಲ್ಲ, ಅಧಿಕಾರಿಗಳು, ಬಂಡವಾಳಗಾರರು, ರಾಜಕೀಯ ಕಾರ್ಯಕರ್ತರು ಮುಂತಾದವರ ಚಿತ್ರಗಳೂ ಮೇಲ್ಮೈನವು. ಅವುಗಳಲ್ಲಿ ಹೆಚ್ಚಾಗಿ ನಮಗೆ ಸಿಗುವುದು ಬರಿಯ ಸೂಚನೆಗಳಷ್ಟೇ, ಅವರ ಜೀವನದ ಸಮಗ್ರ ಚಿತ್ರವಲ್ಲ. ಧನಿಕೀ ಅಥವಾ ಭೀಖುವಿನಂತಹ ಪಾತ್ರಗಳು ಎಲ್ಲಕ್ಕಿಂತ ಹೆಚ್ಚು ವಿಶಿಷ್ಟವೂ ಪುಷ್ಟವೂ ಮಾನ ವೀಯವೂ ಆಗಿವೆ. ಆದರೆ ಅವುಗಳ ಕಥೆಯಲ್ಲಿ ಹೆಚ್ಚು ವಿಕಾಸ ಸಾಧ್ಯವಾಗಿಲ್ಲ, ಲೇಖ ಕರ ಯೋಜನೆಯಲ್ಲಿ ಇದಕ್ಕೆ ಅವಕಾಶವಿರಲಿಲ್ಲವೇನೋ.

ಪಾತ್ರಗಳ ವರ್ಗಗತ ಪ್ರಾತಿನಿಧ್ಯದ ಬಗ್ಗೆ ಹೇಳುವುದಾದರೆ ಪ್ರೇಮಚಂದರು ಸಿದ್ಧಿ ಪಡೆದಲ್ಲಿಯೇ ಬಹುಮಟ್ಟಿಗೆ ವರ್ಮರೂ ಸಿದ್ಧಿ ಪಡೆಯುತ್ತಾರೆ. ಮುನಿಷಿ ಶಿವಲಾಲ ನಾನಾ ಅಪ್ರಾಮಾಣಿಕ ತಂತ್ರಕುತಂತ್ರಗಳಿಂದ ಸ್ವಾರ್ಥ ಸಾಧಿಸಿಕೊಳ್ಳುವ ವ್ಯಾಪಾರೀ ಬುದ್ಧಿಯ ಪಟವಾರಿ, ಅರ್ಜಿಗುಮಾಸ್ತರ ಪ್ರತಿನಿಧಿಯಾಗಿದ್ದಾನೆ. ಅವನ ವರ್ತನೆ ಯನ್ನು ಸ್ವತಃ ಮಗನೇ ಒಪ್ಪದಿದ್ದಾಗ ಆವೇಶದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಮುನಿಷಿ ರಾಧೇಲಾಲ ಅಣ್ಣ ಶಿವಲಾಲನಿಗೆ ಪೂರಕ. ಜ್ವಾಲಾಪ್ರಸಾದ ತನ್ನ ಯೋಗ್ಯತೆ, ಪ್ರಾಮಾಣಿಕತೆ ಹಾಗೂ ಕಾನೂನಿನ ದೃಷ್ಟಿಗಳಿಂದ ಸರಕಾರಿ ನೌಕರಿಯಲ್ಲಿ ಮೇಲೇಳುವ ಮಧ್ಯಮವರ್ಗದ ಪ್ರತಿನಿಧಿಯಾಗಿದ್ದಾನೆ. ಅವನ ಮಗ ಗಂಗಾಪ್ರಸಾದನದು ತಂದೆಯ ವಿಕಸಿತ ರೂಪ. ಆದರೆ ಇಬ್ಬರಲ್ಲೂ ಅಂತರವಿಷ್ಟೇ: ಗಂಗಾಪ್ರಸಾದನಿಗೆ ತನ್ನ ಪರಿ ಸರದೊಡನೆ ಹೋರಾಡುವ ಆಗತ್ಯ ಬೀಳುವುದಿಲ್ಲ. ಅವನ ಪರಿಸರ ಅವನನ್ನು ಉನ್ನತಿಗೆ ಒಯ್ಯಲು ಸಹಾಯ ಮಾಡುತ್ತದೆ. ಅವನು ಇತರರಿಗಿಂತ ಹೆಚ್ಚಾಗಿ ಸಮತಳದ ದಾರಿ ಯಲ್ಲಿ ಮುನ್ನಡೆಯುತ್ತಾನೆ, ಈ ಕಾರಣದಿಂದಾಗಿ ಅವನು ಅನಾಯಾಸವಾಗಿ ದುಶ್ಚಟಗಳ ಕಡೆಗೂ ತಿರುಗುತ್ತಾನೆ, ಕೊಟ್ಟಕೊನೆಗೆ ಮುರಿದುಬೀಳುತ್ತಾನೆ. ನವಲ್ ಯುವ ಪೀಳಿಗೆಯ ಪ್ರತಿನಿಧಿ—ಆ ಯುವಪೀಳಿಗೆಯ ಪ್ರಾಣದ ಕೂಗೆಂದರೆ ಸಂಘರ್ಷಣೆ, ನಿಶ್ಚಿತ ಗುರಿ ಕಾಣದ ಸಂಘರ್ಷಣೆ. ಉಳಿದ ಪಾತ್ರಗಳಲ್ಲಿ ಠಾಕೂರ್ ಗಜರಾಜ ಸಿಂಹ, ಬರಜೋರಸಿಂಹ, ಸರೋಹನ್‌ನ ರಾಜರು ಕುಸಿದು ಬೀಳುತ್ತಿರುವ ಜಹಗೀರ ದಾರಿಯ ಪ್ರತಿನಿಧಿಗಳಾದರೆ ಪ್ರಭುದಯಾಳ ಮತ್ತು ಲಕ್ಷ್ಮೀಚಂದರು ಏಳಿಗೆಗೆ ಬರು

ತ್ತಿರುವ ಬಂಡವಾಳಶಾಹಿಯ ಪ್ರತಿನಿಧಿಗಳಾಗಿದ್ದಾರೆ. ಜ್ಞಾನಪ್ರಕಾಶ ರಾಜಕೀಯ ಚೇತನದ ಪ್ರತೀಕವಾಗಿದ್ದಾನೆ. ಮಿರ್ ಸಾಹೇಬರು ಕಾದಂಬರಿಗಾರರ ವಿವೇಕದ ಒಂದು ಅಂಶದ ಪ್ರತಿನಿಧಿಯಾದರೆ ಇನ್ನೊಂದು ಕಡೆ ನಮ್ಮ ಪ್ರಾಚೀನ ಧರ್ಮನೀತಿಗಳ ಪ್ರತಿನಿಧಿಯೂ ಹೌದು. ಆದರೆ ಅವರಿಂದ ಹೊಸ ಜೀವನಕ್ಕೆ ಹೆಚ್ಚು ಉಪಯೋಗವಿಲ್ಲ; ಎಂತಲೇ ಕಾದಂಬರಿಗಾರರು ಅವರನ್ನು ಕಥಾರಂಗದಿಂದ ಬೇಗನೆ ಹೊರಹಾಕುತ್ತಾರೆ. ಪಾತ್ರ ವಿಧಾನದ ಬಗ್ಗೆ ಇನ್ನೂ ಒಂದು ಮಾತನ್ನು ಗಮನದಲ್ಲಿಡಬೇಕು, ಕಾದಂಬರಿಗಾರರು ಯಾವೊಂದು ಘಟನಾಬಾಹುಳ್ಯದಿಂದ ಕೂಡಿದ ಕಥೆಯನ್ನು ಎತ್ತಿಕೊಂಡಿದ್ದಾರೋ ಅದರಲ್ಲಿ ವರ್ಗಗತ ಪಾತ್ರಗಳ ಸಾಧ್ಯತೆಯೇ ಹೆಚ್ಚು.

ಘಟನೆ ಹಾಗೂ ಪಾತ್ರಗಳಿಗೆ ತಕ್ಕ ಪರಿಸರದ ಹಿನ್ನೆಲೆಯನ್ನು ಹೊಂದಿಸುವಾಗ ಕಾದಂಬರಿಕಾರರು ತಮ್ಮದು ನೇರವಾದ ತಿಳಿವಳಿಕೆಯೆಂಬುದನ್ನು ಅರಿವುಮಾಡಿಕೊಡುತ್ತಾರೆ. ಜ್ವಾಲಾಪ್ರಸಾದ ನಾಯಬ್-ತಹಸೀಲದಾರನಾಗಿ ನೇಮಕಗೊಳ್ಳುವ ಸನ್ನಿವೇಶದಲ್ಲಾಗಲೀ, ಅಲ್ಲಾಮಾ ಮಹರ್ಷಿ ಹಾಗೂ ಸ್ವಾಮಿ ಜಟಿಲಾನಂದರ ಶಾಸ್ತ್ರಾರ್ಥದಲ್ಲಾಗಲೀ, ನವಲನ ಜೈಲುಯಾತ್ರೆಯ ಹಿನ್ನೆಲೆಯಲ್ಲಿನ ಘೋಷಣೆ ಮೆರವಣಿಗೆಗಳಲ್ಲಾಗಲೀ, ಲೇಖಕರು ಎಲ್ಲೆಲ್ಲೂ ಪ್ರಸಂಗದ ಔಚಿತ್ಯವನ್ನು ಗಮನದಲ್ಲಿಟ್ಟು ಕಥೆ ಹಾಗೂ ಪಾತ್ರಗಳನ್ನು ಸಮೃದ್ಧವನ್ನಾಗಿ ಮಾಡಿದ್ದಾರೆ. ಈ ಸಂಬಂಧದಲ್ಲಿ ಗಮನಿಸಬೇಕಾದ ಒಂದು ಸಂಗತಿಯೆಂದರೆ ಲೇಖಕರು ತಾವು ಚಿತ್ರಿಸುತ್ತಿರುವ ವಾತಾವರಣದ ಬಗ್ಗೆ ಯಾವ ತರಹದ ವಿಶೇಷ ಮೋಹವನ್ನೂ ತೋರಿಸುವುದಿಲ್ಲ. ಕಥೆಯ ಹೊರಗೆ ಇನ್ನೆಲ್ಲೋ ನಮ್ಮನ್ನು ಸಿಕ್ಕಿಸಿದ್ದಾರೆಂಬುದೂ ನಮಗೆ ಸುಳುವು ಹತ್ತುವುದಿಲ್ಲ. ವಾತಾವರಣ-ಸೃಷ್ಟಿಯ ದೃಷ್ಟಿಯಿಂದ ಇದು ಕಾದಂಬರಿಯ ಒಂದು ಮಹಾ ಸಫಲತೆ.

ಪ್ರೇಮಚಂದರಲ್ಲಿ ನಮಗೆ ದೊರೆಯುವ ಆಡುಮಾತಿನ ಅದೇ ಸಹಜ ಸರಳ ಸ್ವರ ಈ ಕಾದಂಬರಿಯ ಭಾಷೆಯಲ್ಲಿಯೂ ಕೇಳಿಬರುತ್ತದೆ. ಕಾದಂಬರಿಗಾರರು ಅಲಂಕಾರಿಕತೆ ಅಥವಾ ವಿಶೇಷ ಭಾವುಕತೆಗಳಿಂದ ಕೂಡಿದ ಭಾಷೆಯನ್ನು ಬಳಸದೆ ಮಾತಿನಲ್ಲಿ ಯಾವೊಂದು ಬನಿ, ನಾದಗಳನ್ನು ತಂದಿದ್ದಾರೆಯೋ ಅದು ಕಾದಂಬರಿಯನ್ನು ಹೆಚ್ಚು ರೋಚಕವನ್ನಾಗಿಯೂ ಸಾರ್ಥಕವನ್ನಾಗಿಯೂ ಮಾಡುತ್ತದೆ. ವಸ್ತುತಃ ಈ ಕಾದಂಬರಿಯಲ್ಲಿ ಲೇಖಕರ ನೆನಪಿನ ಆಸರೆಯಿಂದ ಮೂಡಿಬಂದಿರುವ ಕಳೆದುಹೋದ ಅರ್ಧ ಶತಮಾನದ ಮರೆತು ಮಾಸಿದ್ದ ಚಿತ್ರಗಳು ತಮ್ಮ ರೋಚಕತೆಯಿಂದಾಗಿ ನಮ್ಮನ್ನು ಆಕರ್ಷಿಸುತ್ತವೆ. ಈ ಕಾದಂಬರಿ ಸ್ವಾತಂತ್ರ್ಯೋತ್ತರ ಹಿಂದೀ ಸಾಹಿತ್ಯದ ಒಂದು ಸಫಲ ಕೃತಿ; ತನ್ನದೇ ರೀತಿಯಲ್ಲಿ ಅದು ಪ್ರೇರಕವೂ ಹೌದು, ಜ್ಞಾನವರ್ಧಕವೂ ಹೌದು.

**—ದೇವೀಶಂಕರ ಅವಸ್ಥೀ**

## ಪ್ರಥಮ ಭಾಗ

# ಒಂದು

ಮುನಿಷಿ ಶಿವಲಾಲ ಫಿರ್ಯಾದನ್ನು ಕೈಗೆತ್ತಿಕೊಂಡು ಹೇಳಿದ, "ಈ ಫಿರ್ಯಾದನ್ನ ಹೇಗೆ ಬರೆದಿದೀನಿ ಅಂತಿ, ಠಾಕೂರ್. ಆ ಮಗ ಮೈಕೂಲಾಲ ಐದು ವರ್ಷ ಜೈಲು ಕಾಣಬೇಕು!"

ಫಿರ್ಯಾದನ್ನು ಓದಿಸಿ ಕೇಳಿ ಠಾಕೂರ್ ಭೂಪಸಿಂಹನ ಎದೆಯುಬ್ಬಿತು. "ವಹವಾ ಮುನಿಷಿ! ಎಂಥ ಕತೆ ಕಟ್ಟಿದಿ, ನಿನ್ನನ್ನ ಮೆಚ್ಚಿಕೋಬೇಕಾದ್ದೆ!" ಎನ್ನುತ್ತ ಜೇಬಿನಿಂದ ಎಂಟಾಣೆಯ ಬಿಲ್ಲೆ ತೆಗೆದು ಶಿವಲಾಲನಿಗೆ ಮಸಿಕಾಣಿಕೆ ಕೊಟ್ಟ.

ಮುನಿಷಿ ಶಿವಲಾಲ ಮುಖ ಸಿಂಡರಿಸುತ್ತ ಹೇಳಿದ, "ನೋಡು, ಠಾಕೂರ್. ನಾನು ರೂಪಾಯಿಗೆ ಒಂದು ಕಾಸೂ ಕಡಿಮೆ ತೊಗೊಳ್ಳೋನಲ್ಲ. ನೀನು ಯಾವನಾದರೂ ವಕೀಲನ ಕೈಗೆ ಸಿಕ್ಕಿಬಿದ್ದಿದ್ದರೆ ಎರಡು ರೂಪಾಯಿ ಬೋಳಸ್ತಿದ್ದ; ಮೇಲೆ ಕೆಲಸಾನೂ ಕೆಡಸ್ತಿದ್ದ!"

ಸಾಕಷ್ಟು ವಾದವಿವಾದದ ನಂತರ ಠಾಕೂರ್ ಭೂಪಸಿಂಹ ಇನ್ನೊಂದು ಪಾವಲಿ ತೆಗೆದು ಮುನಿಷಿಯ ಕೈಲಿಟ್ಟ. ಪಾವಲಿಯನ್ನು ತೆಗೆದುಕೊಂಡು ಮುನಿಷಿ ಶಿವಲಾಲ ಫಿರ್ಯಾದನ್ನು ಭೂಪಸಿಂಹನಿಗೆ ಕೊಡುತ್ತ ಹೇಳಿದ, "ಪಾಟೀಸವಾಲ್ ಆಗೋದಿದೆ, ಠಾಕೂರ್. ಸೀದಾ ಕಲೆಕ್ಟರ್ ಸಾಹೇಬರ ಕೋರ್ಟಿಗೆ ಹೋಗು. ಅಂದಹಾಗೆ ಪೇಶಕಾರರಿಗೆ ಫಿರ್ಯಾದಿನ ಸಂಗಡ ಒಂದು ಪಾವಲಿ ಒಪ್ಪಿಸೋದು ಮರೀಬೇಡ ತಿಳೀತೆ?"

ಮುನಿಷಿ ಶಿವಲಾಲ ನಡು ಎತ್ತರದ, ಸಪೂರ ಮೈಕಟ್ಟಿನ ವ್ಯಕ್ತಿ. ವಯಸ್ಸು ಐವತ್ತರ ಸುಮಾರಿರಬಹುದು. ಅವನದು ಹಲವು ಬಣ್ಣಕ್ಕೆ ತಿರುಗಿದ, ಹುರಿಮಾಡಿದ ಸಣ್ಣ ಮೀಸೆ. ಸಿಡುಬಿನ ಮಚ್ಚೆಯಿಲ್ಲದೆ ಹೋಗಿದ್ದರೆ ಸುಂದರವೆನ್ನಬಹುದಾದಂತಹ ಮುಖ. ಆ ಸಿಡುಬಿನ ಮಚ್ಚೆಗಳಿಂದಾಗಿ ಕಪ್ಪಾಗಿ ಕಾಣಿಸುತ್ತಿದ್ದ ಗೋದಿಗೆಂಪಿನ ಬಣ್ಣ.

ಠಾಕೂರ್ ಭೂಪಸಿಂಹನನ್ನು ಬೀಳ್ಕೊಟ್ಟು ಮುನಿಷಿ ಶಿವಲಾಲ ಎಲೆಯಡಿಕೆಯ ಚೀಲವನ್ನು ಹೊರತೆಗೆದು ವೀಳ್ಯ ಮಡಿಸುತ್ತ "ಲೋ ಘಸೀಟೆ" ಎಂದು ಕೂಗುಹಾಕಿದ.

ಫತಹಪುರ ಜಿಲ್ಲೆಯ ಕಲೆಕ್ಟರರ ಕಚೇರಿಯ ಸುತ್ತುಗೋಡೆಯೊಳಗೊಂದು ಹಳೆಯ ಕಾಲದ ದೊಡ್ಡ ಅರಳಿಯ ಮರವಿತ್ತು. ಅದರ ನೆರಳಿನಲ್ಲಿ ಮಣ್ಣಿನ ಗಡಿಗೆಗಳ ನ್ನಿಟ್ಟುಕೊಂಡು ಘಸೀಟೆ ಕಚೇರಿಗೆ ಹೋಗಿ ಬರುವವರಿಗೆ ಕುಡಿಯಲು ನೀರು ಕೊಡು ತ್ತಿದ್ದ. ಮುನಿಷಿ ಶಿವಲಾಲ ಕೂಗಿದಾಗ ಘಸೀಟೆ ತೂಕಡಿಸುತ್ತ ಕುಳಿತಿದ್ದ. ಶಿವಲಾಲನ ಧ್ವನಿ ಕೇಳಿ ಅವನು ಬೆಚ್ಚಿಬಿದ್ದ. ಕಣ್ಣುಜ್ಜಿಕೊಳ್ಳುತ್ತ ಕುಳಿತಲ್ಲಿಂದಲೇ ಕೇಳಿದ, "ಏನು ಮುನಸೀ, ನೀನಾ ಕೂಗಿದ್ದು?"

"ಹೌದೋ, ಸ್ವಲ್ಪ ಇಲ್ಲಿ ಬಾ," ಮುನಿಷಿ ಶಿವಲಾಲ ಉತ್ತರಿಸಿದ.

ಘಸೀಟೆ ಕಹಾರ ಜಾತಿಯವನು. ಮುನಿಷಿ ಶಿವಲಾಲನ ಮನೆಯ ಹತ್ತಿರದಲ್ಲೇ ಅವನ ಬಿಡಾರ. ಘಸೀಟೆಯ ಹೆಂಡತಿ ಛಿನಕಿ ಮುನಿಷಿ ಶಿವಲಾಲನ ಮನೆಯಲ್ಲಿ ಕೆಲಸ ಮಾಡುತ್ತಿದ್ದಳು, ಘಸೀಟೆ ಕಚೇರಿಯಲ್ಲಿ ನೀರು ಕೊಡುತ್ತಿದ್ದ.

ಮುನಿಷಿ ಶಿವಲಾಲ ಘಸೀಟೆಯ ಮುಂದೆ ಒಂದು ಪಾವಲಿ ಎಸೆಯುತ್ತ ಹೇಳಿದ, "ಸಂಜೆ ಕಚೇರಿಯಿಂದ ವಾಪಸು ಬರುವಾಗ ನಾಲ್ಕಾಣೆಯ ಸಾರಾಯಿ ತೊಗೊಂಡು ಬಾ."

ಘಸೀಟೆ ಆಶ್ಚರ್ಯದಿಂದ ಮುನಿಷಿಯ ಕಡೆ ನೋಡುತ್ತ ಹೇಳಿದ, "ರಾಮ ರಾಮ! ನಿನಗೆ ನಾಚಿಕೆಯಾಗೋಲ್ವೆ, ಮುನಸೀ? ಇನ್ನೂ ನಿನ್ನೆ ತಾನೆ ವ್ರತಮಾಡಿ ತುಳಸೀಮಾಲೆ ಹಾಕ್ಕೊಂಡು ಇವತ್ತಿನಿಂದಲೇ ಕುಡಿಯೋಕ್ಕೆ ಸುರುಮಾಡೋದೆ?"

ಮುನಿಷಿ ಶಿವಲಾಲ ಕೊಂಚ ಹೊತ್ತು ಮೌನವಾಗಿ ಯೋಚಿಸುತ್ತಿದ್ದು ಆಮೇಲೆ ಹೇಳಿದ, "ಸರಿಯಾಗಿ ಹೇಳಿದೆ! ಜಯಭೇರಿ ಹೊಡೆದುಬಿಟ್ಟೆ! ಎಂಥ ಒಳ್ಳೇ ಯೋಚನೆ! ನೋಡು, ಮನೇಲಿ ಗಂಗಾಜಲದ ಬಾಟಲಿದೆಯಲ್ಲ, ಅದರಿಂದ ನಾಲ್ಕು ತೊಟ್ಟು ಗಂಗಾಜಲಾನ ಸಾರಾಯಿಯಲ್ಲಿ ಹಾಕಿಬಿಡು. ಗಂಗಾಜಲದಿಂದ ಎಲ್ಲಾ ಶುದ್ಧ ವಾಗುತ್ತೆ!"

ಘಸೀಟೆ ನಗಲಾರಂಭಿಸಿದ, "ವಹವಾ ಮುನಸೀ! ನಿನ್ನ ಬುದ್ಧೀಗೆ ಮೆಚ್ಚಿದೆ!" ಎನ್ನುತ್ತ ಪಾವಲಿಯನ್ನು ಎತ್ತಿಕೊಂಡು ಅರಳಿಯ ಮರದ ಕೆಳಗೆ ಸೇರಿದ್ದ ನಾಲ್ಕಾರು ಜನಕ್ಕೆ ನೀರು ಕೊಡಲು ಹೋದ.

ಮುನಿಷಿ ಶಿವಲಾಲ ಎಲೆಯಡಿಕೆ ಜಗಿದು, ಕಕ್ಷಿಗಾರರ ಬೇಟೆಯಾಡಲು ಹೊರಟ. ಆ ಹೊತ್ತಿಗೆ ಕಲೆಕ್ಟರ್ ಸಾಹೇಬರ ಜವಾನ ಚಂದನಸಿಂಹ ಓಡೋಡುತ್ತ ಬಂದು ಶಿವ ಲಾಲನಿಗೆ ಹೇಳಿದ, "ಎಷ್ಟು ಹೊತ್ತಿನಿಂದ ನಿಮ್ಮನ್ನ ಹುಡುಕ್ತಿದೀನಿ ಅಂತೀರಿ, ಮುನ ಸೀಜಿ. ಸಾಹೇಬರು ನಿಮಗೆ ಈಗಲೇ ಬರಹೇಳಿದಾರೆ."

ಸಾಹೇಬರ ಹೆಸರು ಕೇಳುತ್ತಲೇ ಮುನಿಷಿ ಶಿವಲಾಲನ ಮುಖ ಬಿಳುಪಾಯಿತು. ಠಾಕೂರ್ ಭೂಪಸಿಂಹನ ಫಿರ್ಯಾದಿನಲ್ಲಿ ತಾನು ತೋರಿಸಿದ್ದ ಚಮತ್ಕಾರದಿಂದಾಗಿ ಅವರಿಗೇನಾದರೂ ಕೋಪ ಬಂತೋ ಹೇಗೆ? ಚಂದನಸಿಂಹನಿಗೆ ಮುನಿಷಿಯ ಗಾಬರಿ ಅರ್ಥವಾಯಿತು. ಅವನು ಮುನಿಷಿಗೆ ಧೈರ್ಯಕೊಡುತ್ತ ಹೇಳಿದ, "ಹೆದರಿಕೊಳ್ಳೋ ಅಂಥಾದ್ದು ಏನೂ ಆಗಿಲ್ಲ, ಮುನಸೀಜಿ. ಸಾಹೇಬರು ಪೇಶಕಾರರ ಜತೆ ನಗನಗ್ತಾನೇ ಮಾತಾಡ್ತಿದಾರೆ. ನಿಮ್ಮ ಮೇಲೇನೂ ಕೋಪಿಸಿಕೊಂಡಿಲ್ಲ."

ಮುನಿಷಿ ಶಿವಲಾಲ ಮುಖ ಬಿಗಿದುಕೊಂಡು ಹೇಳಿದ, "ಕೋಪಿಸಿಕೊಂಡರೆ ತಾನೇ ನನಗೇನು ನಷ್ಟ! ಧರ್ಮದಿಂದ, ಬೆವರು ಸುರಿಸಿ ಸಂಪಾದಿಸಿದ ರೊಟ್ಟಿ ತಿಂತೀನಿ, ರಾಮನಾಮ ಜಪಿಸ್ತೀನಿ".

ಕಲೆಕ್ಟರರು ತಮ್ಮ ಚೇಂಬರಿನಲ್ಲಿ ಕುಳಿತು ಪೇಶಕಾರರಿಂದ ಅವತ್ತಿನ ಅರ್ಜಿ-ದಾವ ಓದಿಸಿ ಕೇಳಿ, ಅವುಗಳ ಮೇಲೆ ತೀರ್ಪು ಬರೆಯುತ್ತಿದ್ದರು. ಮುನಿಷಿ ಶಿವಲಾಲನ ಮುಖ ಕಂಡೊಡನೆಯೇ ಅವರಂದರು, "ವೆಲ್ ಮುನಿಷಿ! ನೀನು ಮಹಾ ಚಾಲಾಕಿನ ಮನುಷ್ಯ ಕಣಯ್ಯಾ!"

"ಎಲ್ಲಾ ಹುಜೂರರ ದಯೆ. ಈ ಅಯೋಗ್ಯನಿಂದ ಏನು ಅಪರಾಧವಾಯಿತು ಅಂತ ಅಪ್ಪಣೆಯಾಗಬೇಕು," ಶಿವಲಾಲ ಹೇಳಿದ.

ಕಲೆಕ್ಟರರು ಪೇಶಕಾರರಿಂದ ಠಾಕೂರ್ ಭೂಪಸಿಂಹನ ಫಿರ್ಯಾದನ್ನು ತೆಗೆಸಿ ಹೇಳಿದರು, "ಠಾಕೂರನಿಗೆ ಬನಿಯ ಹೊಡೆದ; ಗೂಳಿ ಬಂದು ಬನಿಯನನ್ನ ನೆಲಕ್ಕೆ ಕೆಡವಿತು—ತುಂಬ ತಮಾಷೆಯಾಗಿದೆ ಕಥೆ. ನಾವು ಇದನ್ನ ನಂಬ್ತೀವಿ ಅಂತ ಅಂದುಕೊಂಡಿದೀಯಾ? ವಿಷಯ ಏನು ಅಂತ ನಿಜವಾಗಿ ಹೇಳು. ಈ ಬಗ್ಗೆ ಪೋಲೀಸ್ ತನಿಖೆಯಾಗಬೇಕು ಅಂತ ಅಪ್ಪಣೆ ಮಾಡಿದೀವಿ."

ಮುನಿಷಿ ಗಂಟಲು ಸರಿಪಡಿಸಿಕೊಳ್ಳುತ್ತ ಹೇಳಿದ, "ಹುಜೂರರು ಕ್ಷಮಿಸ್ತೀನಿ ಅಂದರೆ ಅರಿಕೆ ಮಾಡಿಕೋತೀನಿ."

ಅವತ್ತು ಕಲೆಕ್ಟರರು ಪ್ರಸನ್ನಚಿತ್ತರಾಗಿದ್ದರು. "ಒಳ್ಳೇದು, ನಿನ್ನನ್ನ ಕ್ಷಮಿಸಿದೀವಿ. ಆದರೆ ಇದ್ದದ್ದು ಇದ್ದಹಾಗೆ ಹೇಳಬೇಕು. ಒಂದು ಅಕ್ಷರವೂ ಸುಳ್ಳು ಹೇಳಬಾರದು."

"ಈ ಮೈಕೂಲಾಲ ಮಹಾಪುಂಡ, ಹುಜೂರ್. ಸಾವಿರಾರು ಮಂದಿ ರೈತರು ಇವನಿಂದ ಹಾಳಾಗಿದಾರೆ. ಇವನಿಂದ ಸಾಲ ತೊಗೊಂಡೋರು ಯಾರೂ ಊರ್ಜಿತವಾಗಿಲ್ಲ."

"ಓ! ಅಂದರೆ ಈ ಮೈಕೂಲಾಲ ಲೇವಾದೇವಿ ಮಾಡೋ ಸಾಹುಕಾರನೋ! ಈಗ ಅರ್ಥವಾಯಿತು! ಅಂದರೆ ವಾಸ್ತವವಾಗಿ ಇವನು ಪುಂಡ, ದಗಾಕೋರ ಇರಬೇಕು. ಸರಿ, ಮುಂದೇನಾಯಿತು?"

"ಅದನ್ನೇ ಹೇಳ್ತಿದೀನಿ, ಹುಜೂರ್. ಈ ಭೂಪಸಿಂಹ ಅನ್ನೋ ರೈತ ಬಲು ಸಾಚಾ ಮನುಷ್ಯ, ಅನುಭವ ಸಾಲದವನು. ಮೈಕೂಲಾಲನ ಪಂಜದಲ್ಲಿ ಸಿಕ್ಕಿಬಿದ್ದಿದಾನೆ. ಇದುವರೆಗೆ ಮೈಕೂಲಾಲ ಅವನಿಂದ ಅಸಲಿನ ಮೂರುಪಟ್ಟು ವಸೂಲುಮಾಡಿದಾನೆ, ಆದರೂ ಬಿಡ್ತಿಲ್ಲ. ಈಗ ಮೈಕೂಲಾಲ ಅವನ ಮನೆ ಜಮೀನುಗಳ ಮೇಲೆ ಕಣ್ಣುಹಾಕಿದಾನೆ. ಅದರಿಂದ ಭೂಪಸಿಂಹನಿಗೆ ಕೋಪ ಬಂದರೆ ಆಶ್ಚರ್ಯ ಏನಿದೆ?"

"ಹಾಗಾದರೆ ಈ ಫಿರ್ಯಾದಿನಲ್ಲಿ ಬರೆದಿರೋದು ಸುಳ್ಳುತಾನೆ?" ಕಲೆಕ್ಟರರು ಕೇಳಿದರು.

"ಹುಜೂರ್, ಸುಳ್ಳು-ನಿಜ ಅನ್ನೋದು ರುಜುವಾತಿನ ಮೇಲೆ ಅವಲಂಬಿಸುತ್ತೆ. ಹುಜೂರರು ನನ್ನ ದಣಿ ಅಂತ ಕೇಳಿದರು, ಸರಕಾರೀ ಅಧಿಕಾರಿ ಅಂತಲ್ಲ ಅಂದುಕೊಂಡು ಇದುವರೆಗೆ ಈ ಅಯೋಗ್ಯ ಅರಿಕೆ ಮಾಡಿಕೊಂಡ. ಬದಮಾಶೀ ಮನುಷ್ಯನ ಸಂಗಡ

ಬದಮಾಶಿತನದಲ್ಲೇ ವ್ಯವಹಾರ ಮಾಡಬೇಕು. ಇಲ್ಲದೆ ಹೋದರೆ ಅವನ ಬುದ್ಧಿ ನೆಟ್ಟಗಾಗೋಲ್ಲ.

ಈ ಉತ್ತರ ಕೇಳಿ ಕಲೆಕ್ಟರರು ನಕ್ಕರು. "ನೀನೂ ಮಹಾಪುಂಡ ಕಣಯ್ಯಾ, ಮುನಿಷಿ. ಆದರೆ ನಿನ್ನನ್ನ ನೋಡಿ ನಮಗೆ ತುಂಬ ಸಂತೋಷವಾಗಿದೆ. ಹ್ಞಾ, ನೀನು ನಿನ್ನ ಮಗ ಜ್ವಾಲಾಪ್ರಸಾದನ ವಿಷಯ ಹೇಳಿದ್ದೆಯಲ್ಲ ?"

"ಹುಜೂರ್, ತಮ್ಮಿಂದ ಬಡವರ ಉದ್ಧಾರವಾಗ್ತಿದೆ. ಕಾನುಂಗೊ, ಅಹಲಮಂದ್ ಅಥವಾ ನಾಜಿರ್—ಹೀಗೆ ಹುಜೂರರು ಆ ಹುಡುಗನಿಗೆ ಏನಾದರೊಂದು ನೌಕರಿ ಮಾಡಿಸಿಕೊಟ್ಟರೆ ನಮ್ಮ ಕಲ್ಯಾಣವಾಗುತ್ತೆ !"

ಕಲೆಕ್ಟರರು ಈ ಸಲ ಇದ್ದಿದ್ದೂ ಜೋರಾಗಿ ನಕ್ಕರು, "ಏನು ಮಾತಾಡ್ತಿ, ಮುನಿಷಿ. ನಾವು ನಿನ್ನ ಮಗನನ್ನ ನಾಯಬ್-ತಹಸೀಲದಾರನನ್ನಾಗಿ ನೇಮಿಸಿದೀವಿ."

ಮುನಿಷಿ ಶಿವಲಾಲನಿಗೆ ತನ್ನ ಕಿವಿಯನ್ನು ತಾನೇ ನಂಬಲಾಗಲಿಲ್ಲ. ಕಣ್ಣರಳಿಸಿ ಕಲೆಕ್ಟರರ ಕಡೆ ನೋಡಿದ, "ಏನು ಅಪ್ಪಣೆ ಮಾಡಿದಿರಿ, ಹುಜೂರ್ ? ಜ್ವಾಲಾಪ್ರಸಾದ ನನ್ನು ನಾಯಬ್-ತಹಸೀಲದಾರನನ್ನಾಗಿ ಹುಜೂರರು ನೇಮಕಮಾಡಿದಾರೆಯೆ ? ನಾನು ಎಚ್ಚರದಿಂದಿದ್ದು ಸರಿಯಾಗಿ ಕೇಳ್ತಿದೀನೆಯೆ ?"

ಸರಕಾರದ ಆರ್ಡರನ್ನು ಶಿವಲಾಲನ ಕೈಗೆ ಕೊಡುತ್ತ ಕಲೆಕ್ಟರರು ಹೇಳಿದರು, "ಇದೋ ಸರಕಾರದ ಆರ್ಡರು. ಹದಿನೈದು ದಿನದೊಳಗೆ ಜ್ವಾಲಾಪ್ರಸಾದ ಕಾನಪುರ ಜಿಲ್ಲೆಯ ಘಾಟಮಂಪುರ ತಹಸೀಲನ್ನು ತಲಪಿ ಕೆಲಸಕ್ಕೆ ಜಾಯಿನ್ ಆಗಬೇಕು. ಆದಷ್ಟು ಬೇಗ ನನ್ನನ್ನು ಬಂದು ಕಾಣು ಅಂತ ಅವನಿಗೆ ಹೇಳು. ಅವನಿಗೆ ಎಲ್ಲಾನ್ನೂ ತಿಳಿಸಿ ಕೊಡ್ತೀನಿ."

ಮುನಿಷಿ ಶಿವಲಾಲ ಥಟ್ಟನೆ ನೆಗೆದು ಕಲೆಕ್ಟರರ ಕಾಲುಮುಟ್ಟಿ ನಮಸ್ಕಾರ ಮಾಡಿದ, "ಹುಜೂರರೇ ನಮ್ಮ ತಾಯಿ ತಂದೆ. ತಲತಲಾಂತರದವರೆಗೆ ನಾವು ಹುಜೂರರ ಉಪಕಾರಾನ್ನ ನೆನಸ್ತೀವಿ." ಶಿವಲಾಲ ಎದ್ದು ಪೇಶಕಾರ ಸಾಹೇಬರಿಗೂ ಒಂದು ದೊಡ್ಡ ಸಲಾಮು ಮಾಡಿದ.

ಅರ್ಜೀಗುಮಾಸ್ತ ಮುನಿಷಿ ಶಿವಲಾಲನ ಮಗ ಜ್ವಾಲಾಪ್ರಸಾದ ನಾಯಬ್-ತಹಸೀಲದಾರನಾಗಿ ನೇಮಕವಾದ ಸುದ್ದಿ ಫತಹಪುರದಲ್ಲಿ ಮಿಂಚಿನಂತೆ ಹರಡಿತು. ಮನೆಯವರಿಗೆ ಸುದ್ದಿ ತಿಳಿಸೋಣವೆಂದು ಮುನಿಷಿ ಶಿವಲಾಲ ಮನೆಮುಟ್ಟುವ ಹೊತ್ತಿಗಾಗಲೇ ಅದು ಅವರಿಗೆ ತಿಳಿದಿತ್ತು. ಶಿವಲಾಲನ ತಮ್ಮ ಮುನಿಷಿ ರಾಧೇಲಾಲ ನೆರೆಹೊರೆಯವರನ್ನು ತನ್ನ ಸುತ್ತ ಗುಂಪುಗೂಡಿಸಿಕೊಂಡು ಕುಳಿತು ಬಡಾಯಿ ಕೊಚ್ಚುತ್ತಿದ್ದ, "ನಮ್ಮ ಮನೆತನ ಅಂದರೆ ಏನು ಅಂತ ತಿಳಿದಿದೀರಿ ! ದಂಗೆಗೆ ಮುಂಚಿನ ದಿನಗಳಲ್ಲಿ ನಮ್ಮ ಜರ್ಬನ್ನು ನೋಡಬೇಕಾಗಿತ್ತು. ನವಾಬಗಿರಿ ನಡೀತಿದ್ದದ್ದೇ ನಮ್ಮ ಮನೆತನದ ಬಲದ ಮೇಲೆ ಅಂತ ಇತಿಹಾಸದಲ್ಲಿ ಬರೆದಿದೆ. ಈ ಕಲೆಕ್ಟರ್ ಸಾಹೇಬನಿಗೆ

ಎಲ್ಲಾ ಗೊತ್ತಿದೆ. ಹೇಗೆ ಹೇಳದೆ ಕೇಳದೆ ಜ್ವಾಲನಿಗೆ ನಾಯಬ್-ತಹಸೀಲದಾರನ ಪಟ್ಟಕಟ್ಟಿದ, ನೋಡಿದಿರಾ!"

ನೆರೆಹೊರೆಯವರು ರಾಧೇಲಾಲನ ಮನೆತನವನ್ನು ಮೂರು ತಲೆಮಾರುಗಳಿಂದಂತೂ ಅರಿತೇ ಇದ್ದರು. ರಾಧೇಲಾಲನ ತಾತ ಮುನಿಷಿ ಕುಂದನಲಾಲ ಫತಹಪುರಕ್ಕೆ ಮೊಟ್ಟ ಮೊದಲು ಪಟವಾರಿಯಾಗಿ ಬಂದ. ಕಪಟ, ಮೋಸ, ತಗಲೂಫಿಗಳಿಂದ ತುಂಬ ಕೆಟ್ಟ ಹೆಸರು ಸಂಪಾದಿಸಿದ. ಒಂದು ಗಾರೆಮನೆ ಕಟ್ಟಿಕೊಂಡ; ಸಾವಿರಾರು ರೂಪಾಯಿ ನಗದು ಶೇಖರಿಸಿದ. ಭೂಮಿಕಾಣಿ ಕೊಂಡು ಜಮೀನುದಾರನಾಗಬೇಕೆಂದು ಬಯಸಿದ್ದ ಅವನು ಅನಾಯಾಸವಾಗಿ ಠಾಕೂರ್ ಝೂಮರ್‌ಸಿಂಹನ ಬಲೆಯಲ್ಲಿ ಸಿಕ್ಕಿಬಿದ್ದ. ಝೂಮರ್‌ಸಿಂಹ ಬರಿಯ ಜಮೀನುದಾರನಷ್ಟೇ ಅಲ್ಲ, ಜೊತೆಗೆ ದರೋಡೆಕಾರನೂ ಆಗಿದ್ದ. ಒಂದು ರಾತ್ರಿ ಕುಂದನಲಾಲನ ಮನೆ ಕೊಳ್ಳೆಯಾಯಿತು. ಝೂಮರ್ ಸಿಂಹ ನಗನಗದುಗಳನ್ನು ದೋಚಿದ್ದಲ್ಲದೆ ಕುಂದನಲಾಲನ ಕೈಕಾಲುಮುರಿದು ಹೋಗಿದ್ದ. ಹೋಗುವ ಮುನ್ನ, ಹೆಚ್ಚು ರಂಪ ಎಬ್ಬಿಸಿದಾದರೆ ಮನೆತನಕ್ಕೆ ಮನೆತನವನ್ನೇ ಕೊಲೆ ಮಾಡುವುದಾಗಿ ಹೆದರಿಸಿದ್ದ.

ಕುಂದನಲಾಲನ ಸಂಪಾದನೆಯಲ್ಲಿ ಅವನ ಮಗ ಬನವಾರಿಯ ಕೈಗೆ ಹತ್ತಿದ್ದೆಂದರೆ ಆ ಗಾರೆಮನೆಯೊಂದೇ. ಕುಂದನಲಾಲನ ಒಬ್ಬನೇ ಮಗ ಬನವಾರಿ ಓದುಬರೆಹ ಕಾಣದೆ ಪೋಲಿಯಾದ. ಬನವಾರೀಲಾಲ ಇರುವವರೆಗೂ ತುಂಬ ವೈಭವದಿಂದ ಬಾಳಿದ. ಅದು ಹೇಗೆ ಸಾಧ್ಯವಾಯಿತೆಂದು ಯಾರೂ ಅರಿಯರು. ಬನವಾರೀಲಾಲನಿಗೆ ಇಬ್ಬರು ಗಂಡುಮಕ್ಕಳು — ಮುನಿಷಿ ಶಿವಲಾಲ ಮತ್ತು ಮುನಿಷಿ ರಾಧೇಲಾಲ. ಶಿವಲಾಲ ಅರ್ಜೀಗುಮಾಸ್ತನಾದ; ರಾಧೇಲಾಲ ಊರಲ್ಲಿ ಒಬ್ಬರ ಮೇಲೆ ಇನ್ನೊಬ್ಬರನ್ನು ಎತ್ತಿಕಟ್ಟಿ, ವ್ಯಾಜ್ಯ ಹೂಡಿಸಿ, ತಾನು ವಕೀಲರ ದಲ್ಲಾಳಿಯಾಗಿ ಹೊಟ್ಟೆಹೊರೆಯುತ್ತಿದ್ದ.

ರಾಧೇಲಾಲನ ಬಡಾಯಿಯನ್ನು ಕುರಿತು ಟೀಕೆಮಾಡುವ ಇಲ್ಲವೇ ಅವನ ಸುಳ್ಳನ್ನು ಬಯಲಿಗೆಳೆಯುವ ಧೈರ್ಯ ನೆರೆಹೊರೆಯವರಲ್ಲಿ ಯಾರಿಗೂ ಇರಲಿಲ್ಲ. ಅವರೆಲ್ಲರೂ ರಾಧೇಲಾಲನಿಗೆ ವಿಪರೀತ ಹೆದರುತ್ತಿದ್ದರು. ಅವನು ಯಾವಾಗ ಯಾರ ಮೇಲೆ ತಂಟೆ ತೆಗೆಯುವನೆಂದು ಯಾರೂ ಹೇಳುವಂತಿರಲಿಲ್ಲ.

ಮುನಿಷಿ ಶಿವಲಾಲ ಬಂದೊಡನೆಯೇ ಅಲ್ಲಿ ಸೇರಿದ್ದ ನೆರೆಹೊರೆಯವರೆಲ್ಲರೂ ಒಕ್ಕೊರಲಿನಿಂದ ಕೂಗಿದರು, "ಮುಬಾರಕ್, ಮುನಿಷಿ ಶಿವಲಾಲ್! ಔತಣ ಯಾವಾಗ, ಅಪ್ಪಣೆಯಾಗಲಿ?"

ಶಿವಲಾಲ ನಗುತ್ತ ಹೇಳಿದ, "ನಮ್ಮ ಮೊರೆ ದೇವರ ಕಿವಿಗೆ ಬಿದ್ದದ್ದು ನಿಮ್ಮಗಳ ದಯೆ ಕಣ್ರಪ್ಪಾ. ಮೂರುನಾಲ್ಕು ದಿನದಲ್ಲಿ ಸತ್ಯನಾರಾಯಣನ ಕಥೆ ನಡಸೋ ಏರ್ಪಾಡು ಮಾಡ್ತೀನಿ. ಜ್ವಾಲಾನೂ ಬರಲಿ. ಅವತ್ತೇ ಔತಣಾನೂ ಇಟ್ಟುಕೊಳ್ಳೋಣ ವಂತೆ."

ನೆರೆಹೊರೆಯುವರನ್ನು ಬೀಳ್ಕೊಟ್ಟು ಮುನಿಷಿ ಶಿವಲಾಲ ತನ್ನ ಕೋಣೆಗೆ ಬಂದು ಬಟ್ಟೆ ಬದಲಾಯಿಸತೊಡಗಿದ. ಅದೇ ಹೊತ್ತಿಗೆ ಛಿನಕಿ ಅಲ್ಲಿ ಬಂದಳು. ಕಹಾರಿಣಿ ಛಿನಕಿಗೆ ಸುಮಾರು ಮೂವತ್ತರ ಪ್ರಾಯ. ಅವಳದು ಮಾಟವಾದ ಶರೀರ, ಶ್ಯಾಮಲವರ್ಣ, ಮುಖದಮೇಲೆ ಎಡೆಬಿಡದೆ ಕುಣಿಯುವ ಮುಗ್ಧ ನಗೆ. ಛಿನಕಿ ಘಸೀಟೆಯ ಎರಡನೆಯ ಹೆಂಡತಿ. ಮೊದಲ ಹೆಂಡತಿ ರಾಧಿಯಾ ಸುಮಾರು ಹನ್ನೆರಡು ವರ್ಷಗಳ ಕೆಳಗೆ ಘಸೀಟೆಯ ಕೈಯಲ್ಲಿ ಎಂಟು ವರ್ಷದ ಮಗ ಭೀಖುವನ್ನಿಟ್ಟು ಕಣ್ಣುಮುಚ್ಚಿದ್ದಳು. ಛಿನಕಿಗೆ ಮಕ್ಕಳು ಮರಿ ಆಗಿರಲಿಲ್ಲ; ಆಗುವ ಆಸೆಯೂ ಉಳಿದಿರಲಿಲ್ಲ. ಘಸೀಟೆಯ ವಯಸ್ಸು ಈಗಾಗಲೇ ಅರವತ್ತನ್ನು ಮುಟ್ಟಿತ್ತು.

ಮುಖದಲ್ಲಿ ಮಂದಹಾಸ ಚೆಲ್ಲುತ್ತ ಛಿನಕಿ ಕೇಳಿದಳು, "ಮಗ ನಾಯಬ್ ತಹಸೀಲ ದಾರನಾದನಲ್ಲ, ಈಗಲಾದರೂ ಬೆಳ್ಳಿಯ ಅಡ್ಡಿಕೆ ಮಾಡಿಸಿಕೊಡಿ!"

"ಒಳ್ಳೇದು," ಮುನಿಷಿ ಶಿವಲಾಲ ಹೇಳಿದ, "ನಾಳೆಯೇ ಅಕ್ಕಸಾಲಿಗೆ ಅಡ್ಡಿಕೆ ಮಾಡಿ ಕೊಡೋಕ್ಕೆ ಹೇಳ್ತೀನಿ. ಹ್ಞಾ, ಸೊಸೆಮಗಳು ಏನು ಮಾಡ್ತಿದಾಳೆ?"

ಮುನಿಷಿ ಶಿವಲಾಲನ ಹೆಂಡತಿ ತೀರಿಕೊಂಡು ಸುಮಾರು ಎಂಟು ವರ್ಷಗಳಾಗಿದ್ದವು. ಆಗ ಮಗ ಜ್ವಾಲಾಪ್ರಸಾದನಿಗೆ ಹದಿನಾಲ್ಕು ವರ್ಷ ವಯಸ್ಸು. ಅದಕ್ಕೆ ಎರಡು ವರ್ಷ ಮೊದಲೇ ಜ್ವಾಲಾಪ್ರಸಾದನಿಗೆ ಮದುವೆಯಾಗಿತ್ತು. ನಂಟರಿಷ್ಟರು ಎಷ್ಟೇ ಒತ್ತಾಯ ಮಾಡಲಿ, ಮುನಿಷಿ ಶಿವಲಾಲ ಹೆಂಡತಿ ಸತ್ತಮೇಲೆ ಎರಡನೆಯ ಮದುವೆಗೆ ಒಪ್ಪಲಿಲ್ಲ. ಅವನು ಅಂದಿದ್ದ, "ಮಗ ಇದಾನೆ, ಸೊಸೆ ಇದಾಳೆ, ತಮ್ಮ ಇದಾನೆ, ಅವನ ಕುಟುಂಬ ಇದೆ. ಇಷ್ಟೆಲ್ಲ ಇದ್ದೂ ಇನ್ನೊಂದು ಮದುವೆಯ ಅವಶ್ಯಕತೆ ಏನಿದೆ? ಈಗಂತೂ ಮುಪ್ಪು ಬಂದಿದೆ, ಮುಪ್ಪಿನ ಜೊತೆಗೆ ರಾಮನಾಮ ಇದ್ದೇ ಇದೆ!"

ಜ್ವಾಲಾಪ್ರಸಾದನಿಗೆ ಶೋಭನಪ್ರಸ್ತವಾಗಿ ಆರು ತಿಂಗಳಾಗಿತ್ತು; ಹೆಂಡತಿ ಮನೆಗೆ ಬಂದಿದ್ದಳು. ಆದರೆ ಮನೆಯಲ್ಲಿ ಕಾರಬಾರೆಲ್ಲವೂ ರಾಧೇಲಾಲನ ಹೆಂಡತಿಯದೇ. ಯಮುನಾ ಕೇವಲ ಸೊಸೆಯೆಷ್ಟೋ ಅಷ್ಟೆ. ಅವಳಿಗೆ ಆಗಿನ್ನೂ ಹದಿನಾರು ವರ್ಷ ವಯಸ್ಸು.

"ಅಡಿಗೆ ಮಾಡ್ತಿದಾಳೆ," ಛಿನಕಿ ಕೋಪಗಾಂಭೀರ್ಯಗಳನ್ನು ಬೆರಸಿ ಹೇಳಿದಳು, "ನೋಡಿ, ಚಿಕ್ಕ ಯಜಮಾನಿತಿ ಸೊಸೇಗೆ ತುಂಬಾ ಕಾಟ ಕೊಡ್ತಾಳೆ. ಪಾಪ, ಬಡಪಾಯಿ ಜ್ವಾಲನ ಹೆಂಡತಿಗೆ ಇನ್ನೂ ಎಳೇ ವಯಸ್ಸು. ಹಗಲೂ ರಾತ್ರಿ ಅವಳ ಕೈಯಲ್ಲಿ ದುಡಿಸ್ತಾಳೆ. ನೀವು ಚಿಕ್ಕ ಯಜಮಾನೀಗೆ ಬೇಡ ಅಂತ ಯಾಕೆ ಹೇಳೋಲ್ಲ ಅಂತೀನಿ."

ಮುನಿಷಿ ಶಿವಲಾಲ ಛಿನಕಿಯ ಮಾತನ್ನು ತಟಾಯಿಸುತ್ತ ಹೇಳಿದ, "ಅಯ್ಯೋ ಬಿಡೇ, ರಾಧೆಯ ಹೆಂಡತಿ ಏನು ಹೊರಗಿನವಳೇ. ಅವಳು ಮನೆ ಯಜಮಾನಿತಿ. ಹೇಗೆ ಸರಿ ಅನ್ನಿಸುತ್ತೋ ಹಾಗೆ ಮಾಡ್ತಾಳೆ."

ಛಿನಕಿ ಪೆಚ್ಚಾದಳು. "ಹ್ಞಾ...ಹ್ಞಾ, ಕೇಳಿಸಿತು. ಒಳ್ಳೇದು, ನಾನು ಹೋಗಿ

ಸೊಸೇಗೆ ಒಂದಿಷ್ಟು ರೊಟ್ಟಿ ಒತ್ತಿಕೊಡ್ತೀನಿ. ಬಡಪಾಯಿಗೆ ಅಷ್ಟಾದರೂ ಸಹಾಯ ವಾಗಲಿ."

ಫತಹಪುರದಲ್ಲಿ ಜ್ವಾಲಾಪ್ರಸಾದ ಬಹಳ ಸಂತೋಷದಿಂದ ಕಾಲ ಕಳೆದ. ಮುನಿಷಿ ಶಿವಲಾಲ ಮಗನನ್ನು ಪ್ರತಿಯೊಬ್ಬ ದೊಡ್ಡ ಆಫೀಸರರ ಬಳಿಗೂ ತಾನೇ ಖುದ್ದಾಗಿ ಕರೆದುಕೊಂಡು ಹೋಗಿ ಸಲಾಮು ಮಾಡಿಸಿದ. ಫತಹಪುರದಲ್ಲಿ ಬಡಾವಣೆಯವರೂ ಊರಿನ ಕಾಯಸ್ಥ ಜನಾಂಗದವರೂ ಜ್ವಾಲಾಪ್ರಸಾದನಿಗೆ ಔತಣ ಮಾಡಿದರು. ಮುನಿಷಿ ಶಿವಲಾಲನೂ ತನ್ನ ಕಡೆಯಿಂದ ಧಾರಾಳವಾಗಿ ಆತಿಥ್ಯ ಮಾಡಿದ.

ಜ್ವಾಲಾಪ್ರಸಾದ ಘಾಟಮಪುರಕ್ಕೆ ಹೊರಡುವ ಎರಡು ದಿನ ಮುಂಚೆ ಛಿನಕಿ ಯಮುನಳನ್ನು ಕೇಳಿದಳು, "ಗಂಡನ ಜತೆ ನಿನ್ನನ್ನೂ ಘಾಟಮಪುರಕ್ಕೆ ಕಳಿಸಿಕೊಡಿ ಅಂತ ನಿಮ್ಮ ಸೋದರತ್ತೆ ಬರೆದಿದಾಳೆ ಅಂತ ಕೇಳಿದೆ. ಆದರೆ ನೀನು ಹೊರಡೋ ತಯಾರಿಯೇ ಕಂಡುಬರ್‍ತಿಲ್ವಲ್ಲ? ನೀನು ಜ್ವಾಲನಿಗೆ ಹೇಳಲಿಲ್ಲವೇ?"

ಯಮುನಾ ಖಿನ್ನಮನಸ್ಕಳಾಗಿ ಹೇಳಿದಳು, "ಏನು ಹೇಳಲಿ, ಛಿನಕೀಚಾಚಿ. ನಾನು ಅವರಿಗೆ ಬಹಳ ಹೇಳಿದೆ. ಆದರೆ ಅವರು ಒಂದಿಷ್ಟೂ ಕೇಳೋದಿಲ್ಲ. ಅಪ್ಪನಿಗೆ ಹೇಗೆ ಸರಿ ಅನ್ನಿಸುತ್ತೋ ಹಾಗೆ ಮಾಡ್ತಾರೆ ಬಿಡು ಅಂತಾರೆ."

"ಅಂದರೆ ಜ್ವಾಲಾ ಒಬ್ಬನೇ ಹೋಗ್ತಾನೆಯೆ? ಚಿಕ್ಕ ಯಜಮಾನಿತಿಯ ತಯಾರಿಯೂ ಏನೂ ಕಾಣೋಲ್ಲ," ಛಿನಕಿ ಹೇಳಿದಳು.

"ಒಬ್ಬರೇ ಹೋಗ್ತಾರೋ ಏನೋ, ನನಗೊಂದೂ ಹೇಳೋದಿಲ್ಲ. ಅಲ್ಲದೆ ನಾವು ಮಾತ ನಾಡೋಕ್ಕೆ ಸಹ ಪುರಸೊತ್ತೆಲ್ಲಿದೆ? ಹಗಲೂರಾತ್ರಿ ಔತಣಸತ್ಕಾರಗಳಲ್ಲಿ ಮುಳುಗಿರ್‍ತಾರೆ."

ಛಿನಕಿ ಕೊಂಚ ಯೋಚಿಸಿ ಹೇಳಿದಳು, "ಒಳ್ಳೇದು, ಸ್ವಲ್ಪ ತಾಳು! ನಾನು ಹೋಗಿ ದೊಡ್ಡ ಮುನಿಷಿಯೋರ ಸಂಗಡ ಮಾತನಾಡಿ ಬರ್‍ತೀನಿ. ಜ್ವಾಲನ ಜತೆ ನೀನು ಖಂಡಿತ ಹೋಗಲೇಬೇಕು. ಇಲ್ಲದಿದ್ದರೆ ಅವನನ್ನ ನೋಡಿಕೊಳ್ಳೋರು ಯಾರು?"

ಛಿನಕಿಯ ಮಾತನ್ನು ಕೇಳಿ ಯಮುನಾ ಅಂಜಿದಳು, ಅವಳ ಕೈ ಹಿಡಿದುಕೊಂಡು ಹೇಳಿದಳು, "ನಿನಗೆ ಕೈಮುಗೀತೀನಿ, ಛಿನಕೀಚಾಚಿ. ಈ ಮಾತನ್ನೆಲ್ಲಾ ಈಗ ಎತ್ತಬೇಡ. ಇದೆಲ್ಲಾ ನನ್ನ ಕೆಲಸ ಅಂತ ಚಿಕ್ಕಮ್ಮ ಅಂದುಕೊಂಡರೆ ಅವರು ನನ್ನನ್ನ ಸುಮ್ಮನೆ ಬಿಡೋಲ್ಲ ಅಂತ ನಿನಗೆ ಗೊತ್ತಿದೆ."

ಛಿನಕಿ ಕೈ ಬಿಡಿಸಿಕೊಳ್ಳುತ್ತ ಹೇಳಿದಳು, "ಇಷ್ಟು ಹೆದರಿಕೊಂಡರೆ ಕೆಲಸ ನಡೆಯೋಲ್ಲ, ಯಮುನಾ. ನೀನು ನನ್ನಿಂದ ಹೇಳಿಸಿದಿ ಅಂತ ನಾನು ದೊಡ್ಡ ಮುನಿಷಿಯೋರಿಗೆ ಹೇಳ್ತೇನೆಯೆ! ನಾನು ಹೇಗಾದರೂ ಮಾಡಿ ನಿನ್ನನ್ನೂ ಜೊತೇಲಿ ಕಳಿಸೋಕ್ಕೆ ಒಪ್ಪಿಸ್ತೀನಿ. ನೀನು ಮನಸ್ಸು ಬಿಗಿಹಿಡಿದುಕೊಂಡು ಕೂತುಕೋ." ಛಿನಕಿ ಯಮುನಳ ಉತ್ತರಕ್ಕೆ ಕಾಯದೆ ಅಲ್ಲಿಂದ ಎದ್ದುಹೋದಳು.

ಛಿನಕಿ ಮುನಿಷಿ ಶಿವಲಾಲನ ಕೋಣೆಗೆ ಬಂದಾಗ ಅವನು ಸ್ನಾನ ಮುಗಿಸಿ ಪೂಜೆಗೆ ಕೂರಲು ಅಣಿಯಾಗುತಿದ್ದ. ಅವನು ಪ್ರಶ್ನಾರ್ಥಕ ದೃಷ್ಟಿಯಿಂದ ಛಿನಕಿಯ ಕಡೆ ನೋಡಿದ. "ತುಂಬಾ ಜರೂರಾದ ಒಂದು ವಿಷಯ ಮಾತನಾಡೋದಿತ್ತು," ಛಿನಕಿ ಹೇಳಿದಳು.

"ಆ ವಿಷಯವೇನು ನನ್ನ ಪೂಜೆ ಮುಗಿಯೋತನಕ ತಡೆಯೋಲ್ಲ ಅನ್ನುತ್ತೆ?" ಶಿವಲಾಲ ಸಿಟ್ಟಿನಿಂದ ಕೇಳಿದ.

"ತಡೆಯೋದಾಗಿದ್ದರೆ ನಾನು ನಿಮ್ಮ ಪೂಜೆಗೆ ವಿಘ್ನ ಮಾಡ್ತಿದ್ದನೆ! ಯಾವಾಗ ಅಂಥ ತಿಳಿಗೇಡಿತನ ಮಾಡಿದೀನಿ ಹೇಳಿ."

ಮುನಿಷಿ ಶಿವಲಾಲ ಶಾಂತವಾಗಿ ಹೇಳಿದ, "ಸರಿ, ಅದೇನು ಬೇಗ ಹೇಳಿ ಮುಗಿಸು. ಇವತ್ತು ನನಗೆ ತುಂಬಾ ಕೆಲಸ ಇದೆ. ಜ್ವಾಲನ ತಯಾರಿಯನ್ನೆಲ್ಲಾ ಮಾಡಿ ಮುಗಿಸ ಬೇಕು."

ಛಿನಕಿ ನಿಂದಿಸುವವಳಂತೆ ಮುಖ ಮಾಡಿಕೊಂಡು ಹೇಳಿದಳು, "ನಿಮ್ಮ ಗೃಹಕೃತ್ಯ ದಲ್ಲಿ ನನಗೇನೂ ಅಧಿಕಾರವಿಲ್ಲ ಅಂತ ಚೆನ್ನಾಗಿ ಗೊತ್ತಿದೆ. ಅದರ ಬಗ್ಗೆ ನನ್ನದೇನೂ ದೂರಿಲ್ಲ. ಆದರೆ ಒಂದು ಮಾತು ನಾನು ಕೇಳಬೇಕಾಗಿರೋದು ಅಂದರೆ, ಜ್ವಾಲಾ ಒಬ್ಬನೇ ಹೋಗ್ತಿದಾನೆಯೇ?"

"ಹೌದು, ರಾಮೂ ಹೆಂಡತಿಗೆ ಹೆರಿಗೆ ಸಮಯ ಅಂತ ಭೋಟಿ ಹೋಗೋದು ಬೇಡ ಅಂದೆ. ಅವಳೇನೋ ಹೊರಡೋಕ್ಕೆ ಸಿದ್ಧವಾಗಿದ್ದಾಳೆ."

"ಹಾಗಾದರೆ ಜ್ವಾಲನ ಊಟ–ತಿಂಡಿಗೆ ಏನು ಏರ್ಪಾಡು?" ಛಿನಕಿ ಕೇಳಿದಳು.

"ಅದಕ್ಕೇನು, ಅಲ್ಲಿ ಯಾರಾದರೂ ಅಡಿಗೆಯವನನ್ನ ಇಟ್ಟುಕೋತಾನೆ. ದೊಡ್ಡ ಆಫೀಸರ್ ಆಗಿ ಹೋಗ್ತಿದಾನೆ. ಆಳುಕಾಳಿಗೆ ಏನು ಕೊರತೆ? ನಾನು ಜ್ವಾಲನಿಗೆ ಎಲ್ಲಾನ್ನೂ ತಿಳಿಸಿದೀನಿ. ನೀನು ಅದರ ಯೋಚನೆ ಮಾಡಬೇಡ."

"ನಿಮ್ಮ ಬುದ್ಧಿಗೆ ಏನು ಹೇಳೋಣ," ಛಿನಕಿ ಮುಖಮಾಡುತ್ತ ಹೇಳಿದಳು. "ಆಳುಕಾಳುಗಳ ಮೇಲೆ ಯಾವಾಗ ಯಾರ ಗೃಹಕೃತ್ಯ ನಡೆದಿದೆಯಂತೆ, ಜ್ವಾಲನದು ನಡೆಯುತ್ತೆ ಅನ್ನೋಕ್ಕೆ. ಪರಸ್ಥಳ, ಅಧಿಕಾರದ ಜೋರು, ಮೇಲೆ ಯೌವನದ ಮದ."

"ಬಾಯಿಗೆ ಬಂದ ಹಾಗೆ ಹರಟಬೇಡ!" ಮುನಿಷಿ ಶಿವಲಾಲ ಛಿನಕಿಯನ್ನು ಜೋರಾಗಿ ಅಟ್ಟಿಕೊಂಡ. ಆಮೇಲೆ ಕಣ್ಣುಮುಚ್ಚಿ ಸ್ವಲ್ಪ ಯೋಚಿಸತೊಡಗಿದ.

ಶಿವಲಾಲನೇನೋ ಛಿನಕಿಯನ್ನು ಅಟ್ಟಿಕೊಂಡಿದ್ದ. ಆದರೆ ಅವಳು ಆಡಿದ್ದ ಮಾತಿ ನಿಂದ ಅವನಲ್ಲಿ ಶಂಕೆಯೇಳದೇ ಇರಲಿಲ್ಲ. ಅವನು ವಿಷಯವನ್ನು ಈ ದೃಷ್ಟಿಯಿಂದ ಎಂದೂ ಯೋಚಿಸಿರಲಿಲ್ಲ. ತೀರಾ ಸಾಧಾರಣವೂ ಸ್ವಾಭಾವಿಕವೂ ಆದಂತಹ ದೃಷ್ಟಿ ಅದು.

ಛಿನಕಿ ಶಿವಲಾಲನ ಭಾವನೆಯನ್ನು ಊಹಿಸಿದಳು. ಬಾಣ ಸರಿಯಾದ ಜಾಗದಲ್ಲಿ ನಾಟಿದ್ದುದು ಅವಳಿಗೆ ಗೊತ್ತಾಯಿತು. ಮಾತನ್ನು ಮುಂದುವರಿಸುತ್ತ ಅವಳಂದಳು, "ಅಲ್ಲ, ನನ್ನ ಅರ್ಥ ಅದಲ್ಲ. ಜ್ವಾಲನಂಥ ಒಳ್ಳೇ ಹುಡುಗರು ಎಲ್ಲಿ ಸಿಗಬೇಕು—ಎಂಥಾ

ಸರಳತೆ, ಎಂಥಾ ಸಭ್ಯತೆ! ನಾನು ಹೇಳೋದು ಏನು ಅಂದರೆ, ಜ್ವಾಲನ್ನ ಸರಿಯಾಗಿ ನೋಡಿಕೊಳ್ಳೋ ಅಷ್ಟು ಮೋಹ, ಮಮತೆ ಆಳುಗಳಲ್ಲಿ ಎಲ್ಲಿರುತ್ತೆ? ಒಬ್ಬನೇ ಹೋದರೆ ಅವನ ಆರೋಗ್ಯ ಹೇಗೆ ತಾನೆ ಸರಿಯಾಗಿರುತ್ತೆ!"

ಶಿವಲಾಲ ಕಣ್ಣು ತೆರೆದ. ಅವನು ಈ ಸಮಸ್ಯೆಯನ್ನು ಬಗೆಹರಿಸಲೇಬೇಕಾಗಿತ್ತು. ಕೊಂಚ ಹೊತ್ತು ಛಿನಕಿಯ ಕಡೆ ನೆಟ್ಟನೋಟದಿಂದ ನೋಡುತ್ತಿದ್ದು ಆಮೇಲೆ ಕೇಳಿದ, "ಸರಿ, ಹಾಗಾದರೆ ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು?"

ಛಿನಕಿ ತುಸು ಸಿಟ್ಟಿನಿಂದ ಹೇಳಿದಳು, "ನಿಮ್ಮ ಹತ್ತಿರ ಮಾತಾಡೋಕ್ಕೇ ಭಯ ವಾಗುತ್ತೆ. ತಪ್ಪು ತಿಳಿಯೋಲ್ಲ ಅಂದರೆ ಹೇಳ್ತೀನಿ. ಆದರೆ ನಾನು ಹೇಳಿದ್ದಕ್ಕೆ ನೀವು ಒಪ್ಪಲೇ ಬೇಕು."

"ಅರೆ ಹೇಳೇ. ಒಪ್ಪೋಕ್ಕೆ ಲಾಯಕ್ಕಾದ ಮಾತಾದರೆ ಒಪ್ಪೋಣವಂತೆ."

"ನನ್ನ ಮನಸ್ಸಿನಲ್ಲಿರೋದು ಇದು — ಜ್ವಾಲನ ಜತೆ ಅವನ ಹೆಂಡತೀನೂ ಕಳಿಸಿ."

"ಜ್ವಾಲನ ಸೋದರಮಾವ ರಾಮಸಹಾಯನೂ ಅದನ್ನೇ ಬರೆದಿದ್ದ. ಆದರೆ ಆ ಹುಡುಗೀನ ಹೇಗೆ ಜ್ವಾಲನ ಜತೆ ಕಳಿಸೋದು. ಅವಳು ಒಂಟಿಯಾಗಿ ಅಲ್ಲಿ ಹೇಗಿರ್ತಾಳೆ?"

"ಒಂಟಿ ಯಾಕಂತೆ? ಜ್ವಾಲನೂ ಜತೆಗೆ ಹೋಗ್ತಿದಾನಲ್ಲ," ಛಿನಕಿ ಹೇಳಿದಳು.

"ಅದೇನೋ ಸರಿ. ಆದರೆ ಅವಳಿಗೆ ನೆರವಾಗೋರು, ಕೆಲಸದಲ್ಲಿ ಜತೆಯಾಗೋರು ಯಾರಾದರೂ ಬೇಕಲ್ಲವೆ?"

"ಅದಕ್ಕೆ ನಾನು ಹೇಳಲೆ! ಜ್ವಾಲಾ ದೊಡ್ಡ ಆಫೀಸರ್ ಆಗಿ ಹೋಗ್ತಾ ಇದಾನೆ ತಾನೆ? ಸ್ವಂತದ ಆಳು ಒಬ್ಬ ಅವನ ಜತೆಗಿರಬೇಕು. ನೀವು ಹ್ಞೂ ಅಂದರೆ ನಾನು ಭೀಖೂನ ಜತೆ ಮಾಡಿಕೊಡ್ತೀನಿ!"

ಭೀಖುವನ್ನು ಜತೆ ಮಾಡಿ ಕಳಿಸುವ ಪ್ರಸ್ತಾಪವನ್ನು ಕೇಳಿ ಶಿವಲಾಲನಿಗೆ ಕುಳಿತ ನೆಲ ಕದಲಿದಂತಾಯಿತು. ಆದರೆ ಜ್ವಾಲಾ ನಾಯಬ್ ತಹಸೀಲದಾರನಾಗಿ ಹೋಗು ತ್ತಿದ್ದಾನೆ. ಬೇರೆ ಯಾತಕ್ಕಲ್ಲದಿದ್ದರೂ ಕನಿಷ್ಠ ಪ್ರತಿಷ್ಠೆ ತೋರಿಸಿಕೊಳ್ಳಲಾದರೂ ಸ್ವಂತದ ಸೇವಕನೊಬ್ಬ ಅವನ ಜತೆಗಿರುವುದು ಒಳ್ಳೆಯದೇ ಸರಿ. ಭೀಖೂ ಮನೆಯ ಹುಡುಗನೇ ಆಗಿದ್ದ. ಮುನಿಷಿ ಶಿವಲಾಲನ ನೆರೆಯಲ್ಲೇ ಹುಟ್ಟಿದವನು, ಅವನ ಮನೆ ಯಲ್ಲೇ ಬೆಳೆದವನು. ಭೀಖೂ ಜತೆಗಿದ್ದರೆ ಜ್ವಾಲನ ಹೆಂಡತಿಗೆ ಪರಸ್ಥಳದಲ್ಲಿ ಏನೂ ಕಷ್ಟವಾಗದು; ಇದರಲ್ಲಿ ಅನುಮಾನವೇ ಇರಲಿಲ್ಲ.

"ಒಳ್ಳೇದು ಹಾಗಾದರೆ. ಹೊರಡೋ ತಯಾರಿ ಮಾಡಿಕೋ ಅಂತ ಜ್ವಾಲನ ಹೆಂಡತಿಗೆ ಹೇಳು. ನಾಡಿದ್ದು ಮಧ್ಯಾಹ್ನ ಇಲ್ಲಿಂದ ಹೊರಡಬೇಕು. ನಾನು ಭೋಟಿಗೂ ಹೇಳು ಅಂತ ಹೇಳ್ತೀನಿ. ನೋಡು, ಭೀಖೂನೂ ಹೊರಡೋಕ್ಕೆ ಸಿದ್ಧತೆ ಮಾಡಿ ಕೊಳ್ಳಲಿ."

# ಎರಡು

ಜ್ವಾಲಾಪ್ರಸಾದನ ಜೊತೆ ಭೀಖುವನ್ನು ಕಳಿಸಲು ಘಸೀಟೆಯನ್ನು ಒಪ್ಪಿಸುವುದು ಛಿನಕಿಗೆ ಕಿರುಬೆರಳಿನ ಕೆಲಸವಾಗಿತ್ತು.

ತಹಸೀಲದಾರ್ ಅಥವಾ ನಾಯಬ್–ತಹಸೀಲದಾರರ ಹುದ್ದೆಯೆಂದರೆ ಯಾವ ರಾಜ ಮಹಾರಾಜರ ಪದವಿಗೂ ಕಡಿಮೆಯಿಲ್ಲವೆಂದು ಘಸೀಟೆಗೆ ಗೊತ್ತಿತ್ತು. ಅಲ್ಲದೆ ಮುನಿಷಿ ಶಿವಲಾಲನ ಮನೆಯಲ್ಲಿ ಭೀಖುವನ್ನು ಮನೆಯ ಮಕ್ಕಳಲ್ಲೊಬ್ಬನೆಂದೇ ಗಣಿಸಿದ್ದರು. ಘಸೀಟೆ ಛಿನಕಿಯ ಪ್ರಸ್ತಾಪವನ್ನು ಸಂತೋಷದಿಂದ ಸ್ವಾಗತಿಸಿದ. ಘಸೀಟೆ ಜ್ವಾಲಾಪ್ರಸಾದನ ಜತೆ ಘಾಟಮಪುರಕ್ಕೆ ಹೋಗುವಂತೆ ಭೀಖುವಿಗೆ ಹೇಳಿದಾಗ ಅವನು ಉಬ್ಬಿಹೋದ. ಹೊಸ ಪ್ರಪಂಚಕ್ಕೆ ಹೋಗುವ, ಸ್ವಂತವಾಗಿ ದುಡಿದು ತನ್ನ ಜೀವನೋಪಾಯವನ್ನು ತಾನೇ ಹುಟ್ಟಿಸಿಕೊಳ್ಳುವ ಆನಂದದಲ್ಲಿ ಅವನಿಗೆ ತಂದೆತಾಯಿಯರಿಂದ ದೂರವಾಗಬೇಕಾಯಿತೆಂದು ಅನಿಸಲಿಲ್ಲ.

ಜ್ವಾಲಾಪ್ರಸಾದ ಮತ್ತು ಯಮುನಳ ಸಂಗಡ ಭೀಖೂ ಘಾಟಮಪುರವನ್ನು ತಲಪಿದಾಗ ಅವನಿಗೆ ಜೊತೆಗೇ ಒಂದು ಹೊಸ ಪದವಿಯನ್ನೇರಿದ ಅನುಭವವಾಯಿತು. ಒಂದು ರೀತಿಯಲ್ಲಿ ಜ್ವಾಲಾಪ್ರಸಾದನ ಮನೆಯ ಪಾರುಪತ್ಯವೆಲ್ಲವೂ ಭೀಖುವಿನ ಕೈಯಲ್ಲೇ ಇತ್ತು, ಸರಕಾರಿ ಕೆಲಸದಿಂದಾಗಿ ಜ್ವಾಲಾಪ್ರಸಾದನಿಗೆ ಉಳಿದ ಯಾವುದಕ್ಕೂ ಬಿಡುವು ಸಿಗುತ್ತಿರಲಿಲ್ಲ. ಯಮುನಾ ಒಬ್ಬ ದೊಡ್ಡ ಅಧಿಕಾರಿಯ ಪತ್ನಿಯ ಕರ್ತವ್ಯವನ್ನು ನೆರವೇರಿಸುವ ಸಲುವಾಗಿ ಮನೆಯೊಳಗೆ ಪರದೆಯಲ್ಲಿರಬೇಕಾಗುತ್ತಿತ್ತು; ಮಂಚದ ಮೇಲೆ ಕುಳಿತು ಅಲ್ಲಿಂದಲೇ ಅವಳು ಆಡಳಿತ ನಡಸುತ್ತಿದ್ದಳು. ಮನೆಯ ಖರ್ಚುವೆಚ್ಚದ ಲೆಕ್ಕಾಚಾರವೆಲ್ಲವೂ ಭೀಖುವಿನ ಕೈಯಲ್ಲಿರುತ್ತಿತ್ತು; ಮನೆಯ ಉಗ್ರಾಣವೂ ಅವನ ಕೈಯಲ್ಲಿಯೇ. ಒಂದು ರೀತಿಯಲ್ಲಿ ಜ್ವಾಲಾಪ್ರಸಾದ–ಯಮುನರ ಗೃಹಕೃತ್ಯದ ಮಾಧ್ಯಮವಾಗಿದ್ದ ಭೀಖೂ.

ಒಂದು ಚಳಿಗಾಲದ ದಿನ. ಭೀಖೂ ಹೊರಗೆ ವರಾಂಡದಲ್ಲಿ ಚಿಲುಮೆ ಎಳೆಯುತ್ತ ಕುಳಿತಿದ್ದ. ಅವತ್ತು ಜ್ವಾಲಾಪ್ರಸಾದ ಪ್ರವಾಸದ ಮೇಲೆ ಹೋಗಿದ್ದ; ಯಮುನಾ ಊರ ಜಮೀನುದಾರಿಣಿಯ ಮನೆಗೆ ಹೋಗಿದ್ದಳು. ಆ ಹೊತ್ತು ಭೀಖುವೇ ಇಡೀ ಮನೆಯ ಮಾಲಿಕನಾಗಿದ್ದ. ಅವನು ಆತ್ಮಮಗ್ನನಾಗಿ ಕುಳಿತಿದ್ದ; ಮನಸ್ಸು ಪ್ರಸನ್ನವೂ ಸಂತುಷ್ಟವೂ ಆಗಿತ್ತು. ಇದ್ದಕ್ಕಿದ್ದಂತೆ ಅವನ ಸುಖದ ಧಾರೆ ಕಡಿದುಬಿತ್ತು. ಭೀಖೂ ಕಣ್ಣು ತೆರೆದು ನೋಡಿದಾಗ ಎದುರಿಗೆ ಸಮೀಪದ ಶಿವಪುರದ ನಂಬರ್‌ದಾರ ನಿಂತು ಕೇಳುತ್ತಿದ್ದಾನೆ, "ಏನೋ ! ನಾಯಬ್–ತಹಸೀಲದಾರ ಸಾಹೇಬರು ಮನೇಲಿದಾರೆಯೆ ?"

"ಇಲ್ಲ ಸ್ವಾಮಿ, ಸರ್ಕೀಟಿನ ಮೇಲೆ ಹೋಗಿದಾರೆ. ನಾಳೆ ಬರಬಹುದು," ಭೀಖೂ ಎದ್ದುನಿಂತು ಉತ್ತರಿಸಿದ.

ನಂಬರ್‌ದಾರ ಒಬ್ಬನೇ ಬಂದಿರಲಿಲ್ಲ. ಅವನ ಜತೆ ಇನ್ನೊಬ್ಬನಿದ್ದ. ಅವನ ತಲೆಯಮೇಲೆ ಒಂದು ಬುಟ್ಟಿಯಿತ್ತು. "ನಾಯಬ್–ತಹಸೀಲದಾರ ಸಾಹೇಬರಿಗೆ ತಿಳಿಸು, ಶಿವಪುರದ ಲಂಬರ್‌ದಾರ್ ಲಾಲಾ ಪರಭೂದಯಾಲ್ ಬಂದಿದ್ದರು ಅಂತ," ಬಂದಾತ ಭೀಖೂವಿಗೆ ಹೇಳಿದ. "ಇನ್ನೊಂದೆರಡು ದಿನದಲ್ಲಿ ನಾವು ಮತ್ತೆ ಸೇವೆಗೆ ಹಾಜರಾಗ್ತೀವಿ. ಈ ಸಾಮಾನನ್ನ ಅಮ್ಮಾವರಿಗೆ ತಲಪಿಸು." ಹೀಗೆಂದು ಲಾಲಾ ಪ್ರಭುದಯಾಳ್ ತನ್ನೊಡನೆ ಬಂದಿದ್ದವನ ತಲೆಯಮೇಲಿಂದ ಬುಟ್ಟಿಯನ್ನು ಇಳಿಸಿ ಭೀಖು ವಿನ ಮುಂದಿರಿಸಿದ.

ಭೀಖೂ ಒಮ್ಮೆ ಆ ಬುಟ್ಟಿಯ ಕಡೆ ಆಸೆಯಿಂದ ನೋಡಿದ. ಮತ್ತೆ ಕೊಂಚ ಅನುಮಾನಿಸುತ್ತ, "ಅಮ್ಮಾವ್ರೂ ಮನೇಲಿಲ್ಲ. ಅಲ್ಲದೇ ಯಾರಾದರೂ ಏನಾದ್ರೂ ಕೊಡೋಕ್ಕೆ ಬಂದರೆ ತಮಗೆ ಹೇಳದೆ, ತೋರಿಸದೆ ತೊಗೋಬಾರದು ಅಂತ ಯಜ ಮಾನರು ಕಟ್ಟಪ್ಪಣೆ ಮಾಡಿದ್ದಾರೆ."

"ನಾವು ಈ ಬುಟ್ಟೀನ ಯಜಮಾನರಿಗೆ ಅಂತ ತಂದಿದ್ದೀವೇನೋ! ಇದು ಬರೋ ಹೋಳೀ ಹಬ್ಬಕ್ಕೆ ಅಂತ ಲಂಬರ್‌ದಾರಿಣಿ ನಾಯಬ್–ತಹಸೀಲದಾರಿಣಿಗೆ ಕಳಿಸಿರೋ ಉಡುಗೊರೆ. ಇದರೊಟ್ಟಿಗೆ ಹೋಳೀಗೆ ಶಿವಪುರಕ್ಕೆ ಬರಬೇಕು ಅಂತ ಹೇಳಿಕೆಯೂ ಇದೆ, ತಿಳೀತೆ?" ಹೀಗನ್ನುತ್ತ ಲಾಲಾ ಪ್ರಭುದಯಾಳ ಜೇಬಿನಿಂದ ಒಂದು ರೂಪಾಯಿಯ ಬಿಲ್ಲೆ ತೆಗೆದು ಭೀಖುವಿನ ಕಡೆ ಚಾಚಿದ, "ಇದೋ, ನಿನ್ನ ಬಕ್ಷೀಸು!"

ಆ ರೂಪಾಯಿ ಭೀಖುವನ್ನು ಧರ್ಮಸಂಕಟಕ್ಕೆ ಕೆಡವಿತು. ಉಡುಗೊರೆಯನ್ನು ತೆಗೆದುಕೊಳ್ಳಬಹುದೋ, ಬಾರದೋ ಎಂದು ತಿಳಿಯದಿದ್ದಾಗ ಆ ರೂಪಾಯಿ ಅನಾ ಯಾಸವಾಗಿ ಅವನ ತರ್ಕಧಾರೆಯನ್ನು ಬದಲಿಸಿತು. ಮನೆಗೆ ಬಂದ ಲಕ್ಷ್ಮಿಯನ್ನು ತಿರಸ್ಕರಿಸಬಾರದು ಎಂಬ ಶಾಸ್ತ್ರೋಕ್ತಿ ಅವನಿಗೆ ನೆನಪಾಯಿತು. "ಒಳ್ಳೇದು ಲಂಬರ್‌ದಾರ್ ಸಾಹೇಬ್, ಆದರೆ ನನ್ನ ಬಕ್ಷೀಸಿನ ವಿಚಾರ ಹುಜೂರರಿಗೆ ತಿಳಿಯೋದು ಬೇಡ. ಗೊತ್ತಾದರೆ ನನ್ನ ಮೇಲೆ ರೇಗ್ತಾರೆ."

ನಂಬರ್‌ದಾರ ಪ್ರಭುದಯಾಳ ಹೋದ ಮೇಲೆ ಭೀಖೂ ಬುಟ್ಟಿಯನ್ನು ತೆಗೆದು ನೋಡಿ ಬೆಚ್ಚಿಬಿದ್ದ. ಪಿಸ್ತಾ, ಬಾದಾಮಿ, ಕಾಜು, ಅಖರೋಟ್ — ಹೀಗೆ ಆ ಬುಟ್ಟಿಯಲ್ಲಿ ಬಗೆಬಗೆಯ, ಬೆಲೆಯುಳ್ಳ ತಿನಿಸುಗಳಿದ್ದವು. ಜತೆಗೆ ಒಂದು ಥಾನು ಮಕಮಲ್ ಬಟ್ಟೆ, ಒಂದು ಥಾನು ಕಿಂಕಾಪು, ಮೇಲೆ ಒಂದು ಭಾರವಾದ ಬೆಳ್ಳಿಯ ತಟ್ಟೆಯಲ್ಲಿ ರೇಷ್ಮೆಯ ಕೈಚೌಕದಲ್ಲಿ ಕಟ್ಟಿಟ್ಟ ನೂರು ರೂಪಾಯಿ. ಭೀಖೂ ಬುಟ್ಟಿಯಲ್ಲಿನ ಸಾಮಾನುಗಳನ್ನು ಅವಿದ್ದಂತೆಯೇ ಇಟ್ಟು, ಬುಟ್ಟಿಯನ್ನು ಉಗ್ರಾಣದಲ್ಲಿರಿಸಿ ಬಂದ. ಮತ್ತೆ ಹೊರಗಡೆ

ವರಾಂಡದಲ್ಲಿ ಚಿಲುಮೆಯೆಳೆಯುತ್ತ ಕೂತುಕೊಂಡ. ಆದರೆ ಈಗ ಅವನ ಮನಸ್ಸು ಭಾರವಾಗಿತ್ತು. ಆ ಬುಟ್ಟಿ ತೆಗೆದುಕೊಳ್ಳಲು ಒಪ್ಪಿ ಏನೋ ತಪ್ಪುಮಾಡಿದೆನೆಂದು ಅವನಿಗೆ ಅನಿಸುತ್ತಿತ್ತು.

ಸಂಜೆಯ ಹೊತ್ತಿಗೆ ಯಮುನಾ ಮನೆಗೆ ಹಿಂದಿರುಗಿದಳು. ಭೀಖೂ ಬುಟ್ಟಿಯನ್ನು ಅವಳ ಮುಂದೆ ತಂದಿಟ್ಟು ಹೇಳಿದ. "ಅತ್ತಿಗೆ, ಶಿವಪುರದ ಲಂಬರ್‌ದಾರಿಣಿ ನಿಮಗೆ ಅಂತ ಈ ಉಡುಗೊರೆ ಕಳಿಸಿದಾಳೆ. ಲಂಬರ್‌ದಾರ್ ಪ್ರಭುದಯಾಳರೇ ಖುದ್ದಾಗಿ ತಂದುಕೊಟ್ಟು ಹೋದರು. ಲಂಬರ್‌ದಾರಿಣಿ ಹೋಳೀ ಹಬ್ಬಕ್ಕೆ ಬರಬೇಕು ಅಂತ ಕರೆ ಕಳಿಸಿದಾಳೆ. ಅಣ್ಣನಿಗೆ ತಿಳಿಸದೆ ಇದನ್ನ ಇಸಕೊಳ್ಳಬಾರದು ಅಂತ ಮೊದಲು ಅಂದುಕೊಂಡೆ. ಆದರೆ ಉಡುಗೊರೆ ಕಳಿಸಿರೋದು ಲಂಬರ್‌ದಾರಿಣಿ, ಅತ್ತಿಗೇಗೆ, ಅಂತ ಲಂಬರ್‌ದಾರರು ಹಟ ಹಿಡಿದರು. ಅದಕ್ಕೆ ಏನು ಹೇಳಬೇಕು ಅಂತ ಗೊತ್ತಾಗದೆ ತೊಗೊಂಡುಬಿಟ್ಟೆ!"

ಯಮುನಾ ಬುಟ್ಟಿಯನ್ನು ತೆಗೆಸಿ ನೋಡಿದಳು. ಮಕಮಲ್ಲು ಕಿಂಕಾಪುಗಳು ಅವಳ ಕಣ್ಣು ಕುಕ್ಕಿದವು. ಥಾನುಗಳನ್ನು ಬಿಚ್ಚಿಸಿ, ಆಚೆ ಈಚೆ ತಿರುಗಿಸಿ ಚೆನ್ನಾಗಿ ನೋಡಿದಳು. ಮುಖ ಹರ್ಷದಿಂದ ಅರಳಿತು. ಆಮೇಲೆ ಅವಳ ಕಣ್ಣು ರೇಷ್ಮೆಯ ಚೌಕದಲ್ಲಿ ಕಟ್ಟಿ ಬೆಳ್ಳಿಯ ತಟ್ಟೆಯಲ್ಲಿಟ್ಟಿದ್ದ ರೂಪಾಯಿಯ ಗಂಟಿನಮೇಲೆ ಬಿತ್ತು. ಆ ಹಣವನ್ನು ನೋಡಿ ಅವಳ ಮುಖ ಕಪ್ಪಿಟ್ಟಿತು. "ಭೀಖೂ, ಉಡುಗೊರೇಗೆ ತಿನಿಸು, ಬಟ್ಟೆಗಳೇನೋ ಸರಿ, ಆದರೆ ಈ ಹಣಾನ ಏಕೆ ಕಳಿಸಿದಾರೆ?" ಎಂದು ಕೇಳಿದಳು.

"ನನಗೇನು ಗೊತ್ತು? ಏನು ಒಡವೆ ಮಾಡಿಸಿಕೋ ಬೇಕು ಅನ್ನೋದು ಅವರವರ ಇಷ್ಟಕ್ಕೆ ಬಿಟ್ಟಿದ್ದು, ನಿಮ್ಮ ಮನಸ್ಸಿಗೆ ಬೇಕಾದ ಒಡವೆ ಮಾಡಿಸಿಕೊಳ್ಳಲಿ ಅಂತ ಲಂಬರ್ ದಾರಿಣಿ ಯೋಚಿಸಿ ಅದರ ಕಡೆಗೆ ಹಣ ಕಳಿಸಿರಬೇಕು ಅಂತ ನನಗನ್ನಿಸುತ್ತೆ!"

ಭೀಖುವಿನ ಈ ತರ್ಕದಿಂದ ಯಮುನಳಿಗೆ ಪೂರ್ತಿ ಸಂತೋಷವಾಗದಿದ್ದರೂ ಅವಳು ಈಗ ಏನೂ ಮಾಡುವಂತಿರಲಿಲ್ಲ. ಯಾವುದು ಸರಿ, ಯಾವುದು ತಪ್ಪು ಎಂದು ಜ್ವಾಲಾಪ್ರಸಾದನೊಬ್ಬನೇ ನಿರ್ಣಯಿಸಬಲ್ಲವನಾಗಿದ್ದ. "ಒಳ್ಳೇದು, ಈ ಸಾಮಾನ ನ್ನೆಲ್ಲಾ ಹೀಗೆಯೇ ಮುಚ್ಚಿ ಉಗ್ರಾಣದಲ್ಲಿಟ್ಟಿರು. ಅವರು ಬರಲಿ. ಹೇಗೆ ಸರಿಯೋ ಹಾಗೆ ಮಾಡಲಿ" ಎಂದು ಹೇಳಿದಳು.

ಮಾರನೆಯ ದಿನ ಜ್ವಾಲಾಪ್ರಸಾದ ಪ್ರವಾಸದಿಂದ ಹಿಂದಿರುಗಿ ಬಂದ ಮೇಲೆ ಯಮುನಾ ಆ ಸಾಮಾನೆಲ್ಲವನ್ನೂ ತರಿಸಿ ಅವನ ಮುಂದಿರಿಸಿದಳು. ಭೀಖು ಸಾಮಾನು ತರುವಾಗ ಬೆಳ್ಳಿಯ ತಟ್ಟೆಯನ್ನೂ ಅದರಲ್ಲಿರಿಸಿದ್ದ ನೂರು ರೂಪಾಯಿಯ ಗಂಟನ್ನೂ ಉಗ್ರಾಣದಲ್ಲಿ ಬೇರೆ ತೆಗೆದಿಟ್ಟು ಬಂದ. ಜ್ವಾಲಾಪ್ರಸಾದ ಸಾಮಾನುಗಳನ್ನು ನೋಡಿ ನಗುತ್ತ ಹೇಳಿದ, "ಮಕಮಲ್ಲು ಕಿಂಕಾಪು! ಅವತ್ತು ರಾಜಪುರದಿಂದ ಹಿಂದಿರುಗಿ ಬಂದ ದಿನ ಒಂದು ಮಕಮಲ್ಲಿನ ಲಂಗ ಹೊಲಿಸಿಕೊಡು ಅಂತ ನೀನು ಹೇಳಿದ್ದೆ

ಯಲ್ಲ, ತೊಗೋ, ನಿನ್ನ ಬಯಕೆ ಪೂರೈಸಿತು — ಮಕಮಲ್ಲಿನದು ಒಂದು ಲಂಗ, ಕಿಂಕಾಪಿನದು ಒಂದು ಲಂಗ."

ಜ್ವಾಲಾಪ್ರಸಾದ ಉಡುಗೊರೆ ಸ್ವೀಕರಿಸಿದುದನ್ನು ಕಂಡು ಭೀಖು ಉಗ್ರಾಣದಿಂದ ಬೆಳ್ಳಿಯ ತಟ್ಟೆ ಹಾಗೂ ರೂಪಾಯಿಯ ಗಂಟನ್ನು ತಂದು ಜ್ವಾಲಾಪ್ರಸಾದನ ಮುಂದಿಟ್ಟ. ಜ್ವಾಲಾಪ್ರಸಾದ ಅವನ್ನು ನೋಡಿ ಬೆಚ್ಚಿ, "ಈ ಹಣ, ಈ ತಟ್ಟೆ ಎಲ್ಲೀದು?" ಎಂದು ಕೇಳಿದ.

"ಇದೂ ಬುಟ್ಟಿಯಲ್ಲಿತ್ತು. ಬೇರೆ ತೆಗೆದಿಟ್ಟಿದ್ದೆ."

"ಹಾಗಾದರೆ ಇದು ಉಡುಗೊರೆಯಲ್ಲ, ಲಂಚ. ಈಗ ಅರ್ಥವಾಯಿತು. ಲಾಲಾ ಪ್ರಭುದಯಾಳನಿಂದ ನೀನು ಈ ಬುಟ್ಟೀನ ಯಾಕೆ ಇಸಕೊಂಡೆ?" ಜ್ವಾಲಾಪ್ರಸಾದ ಬಿರುಸಿನ ಧ್ವನಿಯಲ್ಲಿ ಕೇಳಿದ.

ಈಗ ತನ್ನ ಪಕ್ಷಕ್ಕೆ ಬಲ ಬಂದಿದೆಯೆಂದು ಭೀಖುವಿಗೆ ಗೊತ್ತಿತ್ತು. ಅವನಂದ, "ಈ ಮಕಮಲ್ಲು ಕಿಂಕಾಪು, ಈ ಪಿಸ್ತಾ ಬಾದಾಮಿ ಮುಂತಾದ ತಿನಿಸು ಉಡುಗೊರೆಯಾಗಬಹುದಾದರೆ ಈ ಬೆಳ್ಳಿಯ ತಟ್ಟೇಲಿರೋ ಒಡವೆಯೂ ಉಡುಗೊರೆಯಾಗುತ್ತೆ. ವ್ಯತ್ಯಾಸ ಇಷ್ಟೇ: ಲಂಬರ್‌ದಾರಿಣಿ ಒಡವೆಯ ಬದಲು ಹಣ ಕಳಿಸಿದಾಳೆ, ಅತ್ತಿಗೆ ತನಗೆ ಇಷ್ಟವಾದ ಒಡವೇನ ಮಾಡಿಸಿಕೊಳ್ಳಲಿ ಅಂತ."

ಭೀಖುವಿನ ತರ್ಕ ಅಭೇದ್ಯವಾಗಿತ್ತು. ಹೇಗೇ ನೋಡಲಿ, ಜ್ವಾಲಾಪ್ರಸಾದನ ಮನಸ್ಸಿಗೆ ಅದರಲ್ಲೆಲ್ಲೂ ತಪ್ಪು ಕಾಣಲಿಲ್ಲ. "ಹೌದು, ನೀನು ಹೇಳೋದು ಸರಿ. ಆದರೆ... ಆದರೆ... ಸರಿ, ಹೋಗಲಿ ಬಿಡು! ಅಂದಹಾಗೆ ಲಾಲಾ ಪ್ರಭುದಯಾಳ ಏನಾದರೂ ಕೆಲಸ ಆಗಬೇಕಾಗಿದೆ ಅಂತ ಏನೂ ಹೇಳಲಿಲ್ಲವಲ್ಲ?"

ಭೀಖು ಜಂಬದಿಂದ ನಗುತ್ತ ಉತ್ತರಕೊಟ್ಟ, "ಏನೂ ಇಲ್ಲ. ನೀನು ಕೋಪಿಸಿಕೊಳ್ತಿ ಅಂತ ನಾನು ಅವನಿಗೆ ಹೇಳಿದೆ. ಅತ್ತಿಗೆ ಮನೇಲಿಲ್ಲದಿರೋವಾಗ ಈ ಉಡುಗೊರೆ ತೊಗೋಳೋಕ್ಕಾಗೋಲ್ಲ ಅಂದೆ. ಉಡುಗೊರೇನ ಲಂಬರ್‌ದಾರಿಣಿ ಅತ್ತಿಗೇಗೆ ಅಂತ ಕಳಿಸಿರೋದು ಅಂತ ವಾದಿಸಿದ. ನಾನು ಇನ್ನೇನು ಹೇಳೋಕ್ಕಾಗುತ್ತೆ? ಇಸಕೊಂಡೆ!"

"ದರ್ಜಿಗೆ ಬರಹೇಳಿ ಲಂಗ ಹೊಲೆಯೋಕ್ಕೆ ಹಾಕು," ಜ್ವಾಲಪ್ರಸಾದ ಯಮುನಳಿಗೆ ಹೇಳಿದ, "ಜರತಾರೀನ ನಾನು ಕಾನಪುರದಿಂದ ತರಿಸಿಕೊಡ್ತೀನಿ. ಹಾಗೇ ಅಕ್ಕಸಾಲೀನ ಕರಸಿ ಏನು ಒಡವೆ ಬೇಕೋ ಮಾಡಿಸಿಕೊ."

ಲಾಲಾ ಪ್ರಭುದಯಾಳ ಅಂತಹ ಭಾರೀ ಜಮೀನುದಾರನೇನೂ ಆಗಿರಲಿಲ್ಲ. ಆದರೆ ಜನ ಅವನನ್ನು ತುಂಬ ಮರ್ಯಾದೆಯಿಂದ ನೋಡುತ್ತಿದ್ದರು. ಅವನು ಒಂದರ ಹಿಂದೆ ಒಂದರಂತೆ ಎಡಬಿಡದೆ ಜಮೀನು ಕೊಳ್ಳುತ್ತ ನಡೆದಿದ್ದ. ಜಾತಿಯಿಂದ ಅವನು

ಬನಿಯಾ. ಅವನ ತಂದೆ ಚಿಲ್ಲರೆ ಅಂಗಡಿ ನಡಸುತ್ತಿದ್ದವನು. ಪ್ರಭುಂದಯಾಳ ಲೇವಾ ದೇವಿಗೆ ಷುರುಮಾಡಿದ. ಅವನಿಂದ ಸಾಲ ಕೊಂಡವರು ಬರಿಯ ಜೀವಮಾನಕ್ಕಲ್ಲ, ತಲತಲಾಂತರದವರೆಗೂ ಅವನಿಗೆ ಸಾಲಗಾರರಾಗಿರುತ್ತಾರೆಂದು ಜನ ಆಡಿಕೊಳ್ಳುತ್ತಿದ್ದರು. ಇಷ್ಟಾದರೂ ಲಾಲಾ ಪ್ರಭುದಯಾಳನನ್ನು ಕಂಡರೆ ಯಾರಿಗೂ ತಿರಸ್ಕಾರವಾಗಲೀ ಕೋಪವಾಗಲೀ ಇರಲಿಲ್ಲ. ಅವನ ಬಂಗಲೆಯ ಮುಂಬಾಗಿಲಲ್ಲೇ ಒಂದು ದೊಡ್ಡ ರಾಧಾಕೃಷ್ಣನ ಗುಡಿಯಿತ್ತು. ಏಳೆಂಟು ವರ್ಷಗಳ ಹಿಂದೆ ಅವನು ಅದನ್ನು ಕಟ್ಟಿಸಿದ್ದ, ಅಲ್ಲಿ ದಿನವೂ ಬೆಳಗ್ಗೆ ಸಂಜೆ ಆರತಿ ನಡೆಯುತ್ತಿತ್ತು; ಪ್ರಸಾದದ ಹಂಚಿಕೆಯಾಗುತ್ತಿತ್ತು. ಆಗಾಗ್ಗೆ ರಾಮಾಯಣ ಭಾರತಗಳ ಹರಿಕಥೆಯಾಗುತ್ತಿತ್ತು. ಅದನ್ನು ಕೇಳಲು ಜನ ದೂರದೂರದಿಂದ ಬರುತ್ತಿದ್ದರು. ಆಗಾಗ್ಗೆ ಮನೆಯಲ್ಲಿ ದೊಡ್ಡ ದೊಡ್ಡ ಆಫೀಸರು ಗಳಿಗೆ ಔತಣಸತ್ಕಾರಗಳಾಗುತ್ತಿದ್ದವು.

ಜ್ವಾಲಾಪ್ರಸಾದ ಘಾಟಮಪುರಕ್ಕೆ ಬಂದ ಮೇಲೆ ಪ್ರಭುದಯಾಳನ ವಿಷಯವಾಗಿ ಸಾಕಷ್ಟು ಕೇಳಿದ್ದ. ಆಗಾಗ್ಗೆ ಭೇಟಿಯೂ ಆಗುತ್ತಿತ್ತು. ಆದರೆ ಅವರಿಬ್ಬರ ನಡುವೆ ಇದು ವರೆಗೂ ನಿಕಟವಾದ ಸಂಪರ್ಕಕ್ಕೆ ಅವಕಾಶವಾಗಿರಲಿಲ್ಲ. ಘಾಟಮಪುರಕ್ಕೆ ಬಂದ ಮೇಲೆ ಜನ್ಮಾಷ್ಟಮಿಯ ಸಂದರ್ಭದಲ್ಲೊಮ್ಮೆ ಪ್ರಭುದಯಾಳನ ಹೆಂಡತಿ ಜೈದೇಯಿ ತಾನಾ ಗಿಯೇ ಯಮುನಳ ಮನೆಗೆ ಬಂದು ಶಿವಪುರದ ತಮ್ಮ ಗುಡಿಯನ್ನು ತೋರಿಸಲು ಅವಳನ್ನು ಬಲವಂತವಾಗಿ ಕರೆದುಕೊಂಡು ಹೋಗಿ, ಎರಡು ದಿನ ತಮ್ಮ ಮನೆಯಲ್ಲಿಯೇ ಉಳಿಸಿಕೊಂಡಿದ್ದಳು. ಆ ಎರಡು ದಿನಗಳಲ್ಲಿ ನಂಬರ್‌ದಾರಿಣಿ, ನಾಯಬ್-ತಹಸೀಲ ದಾರಿಣಿಯರ ನಡುವೆ ಒಳ್ಳೆಯ ಸ್ನೇಹ ಬೆಸೆಯಿತು. ಹೋಗುವಾಗ ಲಾಲಾ ಪ್ರಭು ದಯಾಳ ಜ್ವಾಲಾಪ್ರಸಾದನಿಗೆ ಏನಾದರೊಂದು ಉಡುಗೊರೆ ಕೊಡಬಯಸಿದ್ದ. ಆದರೆ ಜ್ವಾಲಾಪ್ರಸಾದ ಉಡುಗೊರೆ ತೆಗೆದುಕೊಳ್ಳಲು ನಿರಾಕರಿಸಿದ್ದ.

ಯಮುನಾ ಅವತ್ತೇ ದರ್ಜಿಯನ್ನು ಬರಹೇಳಿ ಕಿಂಕಾಪು ಮಕಮಲ್ಲುಗಳನ್ನು ಕೊಟ್ಟು ಲಂಗ ಹೊಲಿಯಹಾಕಿದಳು. ಅಕ್ಕಸಾಲೆಯನ್ನು ಕರಸಿ ಐದು ತೊಲದ ಬಳೆ ಮಾಡಿ ಕೊಡುವಂತೆ ಹೇಳಿದಳು. ಇವನ್ನು ಅವಸರದಲ್ಲಿ ಮಾಡಿಸುತ್ತಿದ್ದುದಕ್ಕೆ ಕಾರಣವಿಷ್ಟೆ: ಇನ್ನು ಎರಡು ಮೂರು ತಿಂಗಳಲ್ಲಿ ಘಾಟಮಪುರದ ಜಮೀನುದಾರ ಠಾಕೂರ್ ಗಜರಾಜ ಸಿಂಹನ ಮಗಳ ಮದುವೆ ನಡೆಯುವುದಿತ್ತು. ಠಾಕೂರ್ ಗಜರಾಜಸಿಂಹ ಒಬ್ಬ ಭಾರೀ ಜಮೀನುದಾರನೆಂದು ಗಣಿಸಲ್ಪಟ್ಟಿದ್ದ. ಅವನ ಮಗಳ ಮದುವೆ ಅವಧ ರಾಜ್ಯದ ಒಬ್ಬ ತಾಲ್ಲೂಕ್‌ದಾರನ ಮಗನೊಂದಿಗೆ ನಿಶ್ಚಯವಾಗಿತ್ತು. ದಿಬ್ಬಣದಲ್ಲಿ ಸುಮಾರು ಸಾವಿರ ಜನ ಇರುವರೆಂದು ಸುದ್ದಿಯಿತ್ತು. ಇಷ್ಟು ದೊಡ್ಡ ದಿಬ್ಬಣ ಬರಲಿದ್ದವರ ಮನೆಗೆ ಸ್ವಾಭಾವಿಕವಾಗಿಯೇ ಸಂಚರಿಷ್ಟರು ಒಂದೆರಡು ತಿಂಗಳ ಮುಂಚೆ ಬಂದು ಒಟ್ಟುಗೂಡುತ್ತಿದ್ದರು.

ಠಾಕೂರ್ ಗಜರಾಜಸಿಂಹ ವಯಸ್ಸಿನಲ್ಲಿ ಜ್ವಾಲಾಪ್ರಸಾದನಿಗಿಂತ ತುಂಬ ಹಿರಿಯ ನಾದರೂ ಅವನೊಡನೆ ಒಬ್ಬ ಸ್ನೇಹಿತನಂತೆಯೇ ವ್ಯವಹರಿಸುತ್ತಿದ್ದ. ಇದಕ್ಕೆ ಕಾರಣ ವೆಂದರೆ ಜ್ವಾಲಾಪ್ರಸಾದನ ಸೋದರಮಾವ ಮುನಿಷಿ ರಾಮಸಹಾಯ ಹಾಗೂ ಗಜರಾಜ ಸಿಂಹನ ಮನೆತನಗಳ ನಡುವೆ ಬಹಳ ಹಿಂದಿನ ನಂಟಿತ್ತು. ಹೀಗಾಗಿ ಠಾಕೂರ್ ಗಜರಾಜ ಸಿಂಹ ಜ್ವಾಲಾಪ್ರಸಾದನನ್ನು ಒಬ್ಬ ಸರಕಾರೀ ಅಧಿಕಾರಿಗಿಂತ ಹೆಚ್ಚಾಗಿ ಸಾಮಾಜಿಕವಾಗಿ ತನ್ನ ಸರೀಕನೆಂಬಂತೆ ಕಂಡು ಗೌರವಿಸುತ್ತಿದ್ದ. ಗಜರಾಜಸಿಂಹನ ಮನೆಯಲ್ಲಿ ಯಮುನ ಳನ್ನು ಮನೆಯ ಸೊಸೆಯಂತೆಯೇ ಆದರಿಸುತ್ತಿದ್ದರು.

ಗಜರಾಜಸಿಂಹನ ಹೆಂಡತಿ ರಾಣಿ ದೇವಕುವರಳು ವಯಸ್ಸಿನಲ್ಲಿ ಯಮುನಳಿಗಿಂತ ತುಂಬ ಹಿರಿಯಳು. ಯಮುನಳ ಜತೆ ಅವಳು ನಡೆದುಕೊಳ್ಳುತ್ತಿದ್ದುದು ಸಹ ಮನೆಯ ಹಿರಿಯಳಂತೆಯೇ. ಮಂಗಳ ಮದುವೆಯ ಏರ್ಪಾಡಿನಲ್ಲಿ ರಾಣಿ ದೇವಕುವರಳು ಅತಿಥಿ ಗಳ ಸ್ವಾಗತಸತ್ಕಾರದ ಜವಾಬ್ದಾರಿಯನ್ನು ಯಮುನಳ ಪಾಲಿಗೆ ಬಿಟ್ಟಿದ್ದಳು. ದೊಡ್ಡ ಮನುಷ್ಯರ ಸ್ವಾಗತಸತ್ಕಾರಕ್ಕೆ ನಿಲ್ಲುವಾಗ ಸ್ವತಃ ನಾವೂ ದೊಡ್ಡವರಾಗಬೇಕಾಗುತ್ತದೆ. ಹಾಗೆ ದೊಡ್ಡವಳಾಗಲು ಯಮುನಳ ಹತ್ತಿರ ಥಳಥಳಿಸುವ ಬಟ್ಟೆಗಳಿರಲಿಲ್ಲ, ಬೆಲೆಬಾಳುವ ಒಡವೆಗಳಿರಲಿಲ್ಲ. ತನ್ನ ಸೋದರತ್ತೆ ಮಹಾರಾಣಿಯಿಂದ ಪದ್ಧತಿಯಂತೆ ಒಂದಿಷ್ಟು ಒಡವೆಯನ್ನೇನೋ ಎರವಲು ತಂದಿದ್ದಳು. ಆದರೆ ಬಟ್ಟೆಯ ಸಮಸ್ಯೆಗೆ ಯಾವ ಪರಿಹಾರವೂ ಹೊಳೆದಿರಲಿಲ್ಲ. ನಾಲ್ಕಾರು ಹೊಸ ಬಟ್ಟೆಗಳನ್ನು ಹೊಲಿಸದೆ ವಿಧಿ ಯಿರಲಿಲ್ಲ, ಅದರಲ್ಲೂ ಬೆಲೆಬಾಳುವವನ್ನೇ. ಅದಕ್ಕಾಗಿ ಕಳೆದ ಕೆಲವಾರು ದಿನಗಳಿಂದ ಯಮುನಾ ಜ್ವಾಲಾಪ್ರಸಾದನಿಗೆ ತಗಾದೆಮಾಡಿ ಗೋಳಾಡಿಸುತ್ತಿದ್ದಳು. ಬೆಲೆಬಾಳುವ ಬಟ್ಟೆ ಕೊಳ್ಳಲು ಹಣಬೇಕು. ಜ್ವಾಲಾಪ್ರಸಾದನ ಹತ್ತಿರ ಉಳಿದದ್ದು ಏನೇ ಇರಲಿ, ಹಣ ಮಾತ್ರ ಇರಲಿಲ್ಲ. ಸಂಬಳದ ಕಾಲುಪಾಲನ್ನು ಅಪ್ಪನಿಗೆ ಕಳಿಸಿಬಿಡುತ್ತಿದ್ದ. ಉಳಿದದ್ದು ತನ್ನ ಅಂತಸ್ತನ್ನು ಕಾಪಾಡಿಕೊಳ್ಳುವುದರಲ್ಲಿ ವೆಚ್ಚವಾಗುತ್ತಿತ್ತು. ಮೇಲುಸಂಪಾದನೆ ಮಾಡುವುದೇನೂ ಅವನಿಗೆ ಕಷ್ಟವಾಗಿರಲಿಲ್ಲ; ಆದರೆ ಅದರಲ್ಲಿ ಅವನಿಗೆ ನಂಬಿಕೆಯಿರಲಿಲ್ಲ.

ಲಾಲಾ ಪ್ರಭುದಯಾಳನಿಂದ ಬಂದ ಉಡುಗೊರೆ ಜ್ವಾಲಾಪ್ರಸಾದನ ಸಮಸ್ಯೆಯನ್ನು ಅನಾಯಾಸವಾಗಿ ಬಗೆಹರಿಸಿತ್ತು. ಸಮಸ್ಯೆ ಹೀಗೆ ಸುಲಭವಾಗಿ ಬಗೆಹರಿದ ಹಿಗ್ಗಿನಲ್ಲಿ ಜ್ವಾಲಾಪ್ರಸಾದನಿಗೆ ವಾಸ್ತವತೆ ಎಷ್ಟು ಕುರೂಪವೆಂಬುದು ಸರಿಯಾಗಿ ಕಾಣಿಸಲಿಲ್ಲ. ಮೊಟ್ಟ ಮೊದಲು ಆ ಕುರೂಪತೆಯ ಒಂದು ಕ್ಷೀಣ ಅನುಭವ ಆತನಿಗಾದದ್ದು ಸುಮಾರು ಮೂರು ತಿಂಗಳಮೇಲೆ, ಗಜರಾಜಸಿಂಹನ ಮನೆಯ ಮದುವೆಗೆಂದು ಹೊರಟ ಜೈದೇಯಿಯ ಪಲ್ಲಕ್ಕಿ ತನ್ನ ಮನೆಯ ಮುಂದೆ ಬಂದು ನಿಂತಾಗ.

ಗಜರಾಜಸಿಂಹನ ಮನೆಯ ಮದುವೆಗೆ ಪ್ರಭುದಯಾಳನೂ ಆಮಂತ್ರಿತನಾಗಿದ್ದ. ಪ್ರಭುದಯಾಳನ ಹೆಂಡತಿ ಜೈದೇಯಿ ಪಲ್ಲಕ್ಕಿಯಿಂದ ಇಳಿದಾಗ ಯಮುನಳೂ ಮದುವೆಯ ಮನೆಗೆ ಹೊರಡುವ ತಯಾರಿ ನಡಸಿದ್ದಳು. ಜೈದೇಯಿ ತನ್ನ ಜೊತೆಗಾತಿ

ಯಮುನಳ ಮನೆಯಲ್ಲಿಯೇ ಇಳಿಯಬಯಸಿದ್ದಾಳೆಂದು ಪ್ರಭುದಯಾಳ ತುಂಬ ಸಲಿಗೆಯಿಂದ ಜ್ವಾಲಾಪ್ರಸಾದನಿಗೆ ತನ್ನ ಇಚ್ಛೆ ತಿಳಿಸಿದಾಗ ಯಮುನಳಿಗೇನೋ ಒಂದು ಬಗೆಯ ಸಂತೋಷವೇ ಆಯಿತು. ಆದರೆ ಜ್ವಾಲಾಪ್ರಸಾದನಿಗೆ ಮಾತ್ರ ಅದು ಸರಿ ಕಾಣಲಿಲ್ಲ. ಪ್ರಭುದಯಾಳನ ಸಲಿಗೆಯನ್ನು ತಿರಸ್ಕರಿಸುವಷ್ಟರಮಟ್ಟಿನ ದಾಷ್ಟಿಕ ಜ್ವಾಲಾಪ್ರಸಾದನ ಸ್ವಭಾವದಲ್ಲಿರಲಿಲ್ಲ. ತೋರಿಕೆಗಾಗಿಯಾದರೂ ಅವನು ಪ್ರಭುದಯಾಳ–ಜೈದೇಯಿಯರಿಗೆ ಸ್ವಾಗತ ನೀಡಲೇಬೇಕಾಗಿ ಬಂತು.

ಅವತ್ತು ಬೆಳಿಗ್ಗೆ ತಾನೇ ಗಜರಾಜಸಿಂಹನ ಮನೆಯಲ್ಲಿ ದಿಬ್ಬಣ ಬಂದಿಳಿದಿತ್ತು. ಊರವರ ಪ್ರಕಾರ ಅಂಥ ವಿಜೃಂಭಣೆಯ ದಿಬ್ಬಣವಾವುದೂ ಹಿಂದೆಂದೂ ಘಾಟಮಪುರಕ್ಕೆ ಬಂದಿರಲಿಲ್ಲ. ಅದರಲ್ಲಿ ಸುಮಾರು ಸಾವಿರದ ಇನ್ನೂರು ಮಂದಿ ದಿಬ್ಬಣಿಗರಿದ್ದರು. ಅತಿಥಿಗಳಲ್ಲದೆ ದಿಬ್ಬಣದಲ್ಲಿ ಹನ್ನೊಂದು ಆನೆ, ಐವತ್ತೊಂದು ಒಂಟೆ, ನೂರೊಂದು ಕುದುರೆ, ಪರದೆ–ಗಾಡಿಗೆ ಹೂಡಿದ ಮುನ್ನೂರು ಜತೆ ಎತ್ತುಗಳಿದ್ದವು. ಈ ಎಲ್ಲಾ ಅತಿಥಿ ಹಾಗೂ ಪ್ರಾಣಿಗಳ ಮೇಲ್ವಿಚಾರಣೆಗಾಗಿ ಸುಮಾರು ಎಂಟು ನೂರು ಆಳುಗಳಿದ್ದರು. ಗಜರಾಜಸಿಂಹ ತನ್ನ ಐವತ್ತು ಬೀಘಾ ಮಾವಿನತೋಪಿನಲ್ಲಿ ದೂರ ದೂರಕ್ಕೆ ಡೇರೆಗಳನ್ನು ಕಟ್ಟಿ ಇಷ್ಟೆಲ್ಲ ದೊಡ್ಡ ದಿಬ್ಬಣವನ್ನು ಇಳಿಸುವ ವ್ಯವಸ್ಥೆ ಮಾಡಿದ್ದ.

ಯಜ್ಞಪುರದ ತಾಲ್ಲೂಕ್‌ದಾರ ರಾಜಾ ಚಂದ್ರಭೂಷಣಸಿಂಹನ ಹಿರಿಯ ಮಗ ಲಾಲಾ ಇಂದ್ರಭೂಷಣಸಿಂಹನಿಗೆ ಕೊಟ್ಟು ಮಗಳ ಮದುವೆ ಮಾಡುವುದೆಂದರೆ ಗಜರಾಜಸಿಂಹನಿಗೆ ಸಾಕಷ್ಟು ಖರ್ಚಿನ ವ್ಯವಹಾರವಾಗಿತ್ತು. ವರದಕ್ಷಿಣೆಯೇನೂ ನಿಶ್ಚಯವಾಗಿರಲಿಲ್ಲ, ನಿಜ. ಆದರೆ ತಾನು ಪ್ರದರ್ಶಿಸಿದ್ದ ರಾಜೋಚಿತವಾದ ಘನತೆಗೆ ಸರಿದೂಗಲು ಗಜರಾಜಸಿಂಹ ಸಾಲಕ್ಕೆ ಮೊರೆಹೋಗಬೇಕಾಯಿತು. ಅವನು ಈ ಸಾಲವನ್ನು ಲಾಲಾ ಪ್ರಭುದಯಾಳನಿಗೆ ತನ್ನ ಐದು ಹಳ್ಳಿಗಳನ್ನು ಭೋಗ್ಯಮಾಡಿ ತಂದಿದ್ದ.

ಜೈದೇಯಿ ಯಮುನಳ ಜತೆಗೂಡಿ ಬೆಳಗ್ಗೆ ಹತ್ತು ಗಂಟೆಗೇ ಮದುವೆಯ ಮನೆಗೆ ಬಂದಳು. ಪ್ರಭುದಯಾಳ ಮಧ್ಯಾಹ್ನದ ಹೊತ್ತಿಗೆ ಜ್ವಾಲಾಪ್ರಸಾದನ ಸಂಗಡ ಬಂದ. ಆಗ ಗಜರಾಜಸಿಂಹ ದಿವಾನಖಾನೆಯಲ್ಲಿ ನಂಟರಿಷ್ಟರು, ನೆರೆಹೊರೆಯ ಜಮೀನುದಾರರು, ಗುಮಾಸ್ತರುಗಳನ್ನು ಸುತ್ತ ಕೂರಿಸಿಕೊಂಡು ದಿಬ್ಬಣದ ವ್ಯವಸ್ಥೆಯ ಬಗ್ಗೆ ಆಲೋಚನೆ ನಡಸಿದ್ದ. ದಿಬ್ಬಣ ಸಾಕಷ್ಟು ದೊಡ್ಡದಿರುತ್ತದೆಂದು ಅವನಿಗೆ ಗೊತ್ತಿತ್ತು; ಅದಕ್ಕೆ ತಕ್ಕ ವ್ಯವಸ್ಥೆಯನ್ನೂ ಮಾಡಿದ್ದ. ಆದರೆ ಇಷ್ಟೊಂದು ದೊಡ್ಡದಿರುತ್ತದೆಂದು ಅವನು ಕಲ್ಪನೆ ಸಹ ಮಾಡಿರಲಿಲ್ಲ. ಅತಿಥಿಸತ್ಕಾರಕ್ಕೆ ಅವನು ಮಾಡಿದ್ದ ಏರ್ಪಾಡು ಇಷ್ಟು ದೊಡ್ಡ ದಿಬ್ಬಣಕ್ಕೆ ಸಾಕಾಗುವಂತಿರಲಿಲ್ಲ. ಹೀಗಾಗಿ ಅವನು ವಿಚಿತ್ರ ಸಂಕಟದಲ್ಲಿ ಸಿಕ್ಕಿಬಿದ್ದಿದ್ದ. ಹೆಚ್ಚಿನ ವ್ಯವಸ್ಥೆಗಾಗಿ ತನ್ನ ಜನರನ್ನು ಹತ್ತೂ ಕಡೆ ಅಟ್ಟಿದ್ದು, ಅವರ ದಾರಿ ಕಾಯುತ್ತಿದ್ದ.

ಜ್ವಾಲಾಪ್ರಸಾದನನ್ನು ಕಂಡೊಡನೆಯೇ ಅವನಂದ, "ನೋಡಿದಿರಾ, ನಾಯಬ್ ಸಾಹೇಬ್, ಈ ನನ್ನ ಮಕ್ಕಳು ದಿಬ್ಬಣ ತಗೊಂಡು ಬಂದಿಲ್ಲ, ಕೊಳ್ಳೆ ಹೊಡೆಯೋಕ್ಕೆ ಬಂದಿದ್ದಾರೆ! ನಿಮಗೆ ಹೇಳಿಬಿಡ್ತೀನಿ ಕೇಳಿ, ನಿಮ್ಮ ಇಬ್ಬರು ಕಾನುಂಗೊಗಳನ್ನೂ ವ್ಯವಸ್ಥೆಯ ಉಸ್ತುವಾರಿಗೆ ಕಳಿಸಿದೀನಿ, ನಿಮ್ಮ ಹೆಸರು ಹೇಳಿ ನಾಲ್ಕುಜನ ಪಟವಾರಿಗಳಿಗೆ ಹೇಳಿಕಳಿಸಿದೀನಿ."

"ಅವರು ನಿಮ್ಮವರು ಅಂತಾನೇ ತಿಳಕೊಳ್ಳಿ, ಠಾಕೂರ್ ಸಾಹೇಬ್. ಮೇಲೆ ಸೇವೇಗೆ ನಾನೂ ಹಾಜರಾಗಿದೀನಿ," ಜ್ವಾಲಾಪ್ರಸಾದ ನಗುತ್ತ ಹೇಳಿದ. "ದೊಡ್ಡವರ ವ್ಯವಹಾರವೂ ದೊಡ್ಡದಾಗೇ ಇರೋದು ಸ್ವಾಭಾವಿಕ."

"ಯಾಕೆ ನಾಚಿಸ್ತೀರಿ, ನಾಯಬ್ ಸಾಹೇಬರೇ?" ಠಾಕೂರ್ ಗಜರಾಜಸಿಂಹ ನಕ್ಕ. ಆಮೇಲೆ ಪ್ರಭುದಯಾಳನ ಕಡೆ ತಿರುಗಿ ಹೇಳಿದ, "ಕೂತುಕೊಳ್ಳಿ, ಲಾಲಾ ಪರಭೂದಯಾಳ್. ಯಾವಾಗ ಬಂದಿರಿ?"

"ನಾವುಗಳು ಬೆಳಗ್ಗೆಯೇ ಬಂದೆವು," ಪ್ರಭುದಯಾಳ ಹೇಳಿದ. "ಜೊತೇಲಿ ನಂಬರ್ದಾರಿಣಿಯೂ ಇದ್ದಳು. ಅವಳನ್ನು ತಹಸೀಲದಾರಿಣಿ ಬಲವಂತವಾಗಿ ತಮ್ಮಲ್ಲೇ ಇಳಿಸಿಕೊಂಡರು. ಅವರಿಬ್ಬರೂ ಈಗಾಗಲೇ ಇಲ್ಲಿ ಬಂದು ಸೇರಿದಾರೆ. ಠಾಕೂರ್ ಸಾಹೇಬರೇ, ಅವರಿಬ್ಬರಲ್ಲಿ ಅದೆಷ್ಟು ಸಲಿಗೆ, ಎಂಥ ಅನ್ಯೋನ್ಯ ಬೆಳೆದಿದೆ ಅಂತೀರಿ! ತಹಸೀಲದಾರಿಣೀನಂತೂ ನಾನು ಮೆಚ್ಚಿಕೊಂಡೆ! ಎಷ್ಟು ಮಮತೆ, ಎಷ್ಟು ಭಾವನೆ ಅವರದ್ದು! ನಮ್ಮ ಬಾಬೂ ಜ್ವಾಲಾಪ್ರಸಾದ ಸಾಹೇಬರು ಅದೆಷ್ಟು ಸರಳರೋ, ಸಭ್ಯರೋ, ಸೌಜನ್ಯಶೀಲರೋ ಅವರ ಮನೆಯವರೂ ಹಾಗೇನೆ. ಭಗವಂತ ಇವರಿಬ್ಬರನ್ನೂ ಕೂಡಿಸಿ ಅದೆಂಥ ಚಂದದ ಜೋಡಿ ಮಾಡಿದಾನೆ!"

"ಅದರಲ್ಲಿ ಅನುಮಾನವೇನಿದೆ, ಲಾಲಾ ಪರಭೂದಯಾಳ್ ಸಾಹೇಬ್!" ಗಜರಾಜಸಿಂಹ ನಗುತ್ತ ಹೇಳಿದ. "ನಮ್ಮ ಮನೆ ಬೇರೆ ಅಲ್ಲ, ನಾಯಬ್ ತಹಸೀಲದಾರರ ಮನೆ ಬೇರೆ ಅಲ್ಲ. ಅಲ್ಲಿ ಇಳಿದುಕೊಂಡು ಒಳ್ಳೇದು ಮಾಡಿದಿರಿ. ಇದಂತೂ ಕೆಲಸಕಾರ್ಯದ ಭರಾಟೇಲಿ ಸಂತೆಯಾಗಿದೆ. ಈ ಹೆಣ್ಣುಮಕ್ಕಳ ಮದುವೆ ಮಾಡೋದು ಎಂಥ ಪ್ರಯಾಸದ ಕೆಲಸ ಅಂತೀರ. ಯಜ್ಞಪುರದ ರಾಜಾಸಾಹೇಬರಿಗೆ ನಾನು ಮೊದಲೇ ಸ್ಪಷ್ಟವಾಗಿ ಹೇಳಿಬಿಟ್ಟಿದ್ದೆ, ಇಷ್ಟು ದೊಡ್ಡ ದಿಬ್ಬಣ ತರಬೇಡಿ ಅಂತ. ಆದರೆ ಜನ ಹೇಳೋಹಾಗೆ — ರಾಜಹಟ! ಮಹಾ ಜಿದ್ದಿನ ಮನುಷ್ಯ ಆತ! ಸಾವಿರದ ಇನ್ನೂರ ಜನರ ದಿಬ್ಬಣ ಕರಕೊಂಡು ಬಂದಿದಾರೆ, ಮೇಲೆ ಇಡೀ ದಿಬ್ಬಣದ ಊಟವಸತಿಗೆ ಬೇಕಾದ ಎಲ್ಲಾ ಸಾಮಾನನ್ನೂ ತಂದಿದಾರೆ—ದಂಡಯಾತ್ರೆಗೆ ಹೊರಟಿರೋರ ಹಾಗೆ. ನಮಗಂತೂ ತುಂಬಾ ಕೋಪ ಬಂತು ನೋಡಿ, ಲಾಲಾ ಪರಭೂದಯಾಳ್. ಅವರ ಈ ನಡವಳಿಕೆಯಿಂದ ನಮಗೆ ತುಂಬಾ ಅಪಮಾನವಾಗಿದೆ ಅಂತ ಖಡಾಖಂಡಿತವಾಗಿ ಹೇಳಿಬಿಟ್ಟೆವು. ಆದರೆ, ಜ್ವಾಲಾಬಾಬು, ಅಷ್ಟು ದೊಡ್ಡ ಮನುಷ್ಯರಾದರೂ ಅದೆಷ್ಟು ಸರಳಸ್ವಭಾವ,

ಎಂಥ ಒಳ್ಳೇ ನಡತೆ ಅಂತೀರಿ. ನನ್ನ ಮಾತುಕೇಳಿ ಅವರ ಕಣ್ಣಲ್ಲಿ ನೀರು ತುಂಬಿಬಂತು! ನನ್ನನ್ನು ಅಪ್ಪಿಕೊಂಡು ಹೇಳಿದರು, 'ಕ್ಷಮಿಸು, ಗಜರಾಜ! ನಿನ್ನ ಮರ್ಯಾದೆ ಬೇರೆ ಅಲ್ಲ, ನನ್ನ ಮರ್ಯಾದೆ-ಬೇರೆ ಅಲ್ಲ. ನೀನು ಹೀಗೆ ತಪ್ಪು ತಿಳಕೊಳ್ತಿ ಅಂತ ನನಗೇನು ಗೊತ್ತಿತ್ತು.' "

ಗಜರಾಜಸಿಂಹನ ಭಾವೈದ ಠಾಕೂರ್ ಬರಜೋರಸಿಂಹನೂ ಅಲ್ಲಿ ಸೇರಿದ್ದ. ಭಾವಾವೇಶನಾಗಿ ಅವನು ಹೇಳಿದ, "ಏನು ಹೇಳ್ತಿದಿ, ಭಾವ! ರಾಜಾಸಾಹೇಬರು ಮನುಷ್ಯರಲ್ಲ, ದೇವತೆ, ದೇವತೆ! ಭಾವ, ನಾನು ಹೇಳಲಿಲ್ಲವೆ, ರಾಜಾಸಾಹೇಬರ ಬೀಗತನಮಾಡಿ ನೀನು ಧನ್ಯನಾದೆ ಅಂತ."

ಗಜರಾಜಸಿಂಹನ ಎದೆ ಹೆಮ್ಮೆಯಿಂದ ಉಬ್ಬಿತು. ಅಲ್ಲಿ ಸೇರಿದ್ದ ಜನರ ಮೇಲೆ ಯಾವ ಪ್ರಭಾವವಾಗಿದೆಯೆಂಬುದನ್ನು ನೋಡಲು ಅವನು ನಾಲ್ಕೂಕಡೆ ಕಣ್ಣೋಡಿಸಿದ. ಲಾಲಾ ಪ್ರಭುದಯಾಳ ನಗುತ್ತಿದ್ದುದು ಅವನ ಕಣ್ಣಿಗೆ ಬಿತ್ತು. ಆ ನಗೆ ಅಷ್ಟು ಪ್ರಿಯ ವಾಗಿಲ್ಲವೆಂದು ಗಜರಾಜಸಿಂಹನಿಗೆ ಅನ್ನಿಸಿತು. ಆ ನಗೆಯಲ್ಲಿ ಅವನು ಸ್ಪಷ್ಟವಾಗಿ ವ್ಯಂಗ್ಯದ ಛಾಯೆಯನ್ನು ಕಂಡ. ಆಗ್ಗೆ ಕೇವಲ ಕೆಲವು ದಿವಸಗಳ ಹಿಂದೆ ತಾನೆ ಅವನು ಐದು ಹಳ್ಳಿಗಳನ್ನು ಭೋಗ್ಯಮಾಡಿ ಪ್ರಭುದಯಾಳನಿಂದ ಇಪ್ಪತ್ತು ಸಾವಿರ ರೂಪಾಯಿ ಸಾಲ ತಂದಿದ್ದ.

ಠಾಕೂರ್ ಗಜರಾಜಸಿಂಹ ದೊಡ್ಡ ಜಮೀನುದಾರ. ಅವನಿಗೆ ಜಮೀನುದಾರಿಯಿಂದ ವರ್ಷಕ್ಕೆ ಇಪ್ಪತ್ತು ಸಾವಿರ ರೂಪಾಯಿಗಳ ಆದಾಯವಿತ್ತು. ಆದರೆ ಅವನ ಖರ್ಚು ಸಹ ಅಷ್ಟೇ ದೊಡ್ಡದಾಗಿತ್ತು. ಅವನ ದುರ್ವ್ಯಾಪಾರಗಳಿಗೆ ಲೆಕ್ಕವಿರಲಿಲ್ಲ. ಹೀಗಾಗಿ ಅವನಿಗೆ ಹಣ ಉಳಿಸುವುದಾಗಿರಲಿಲ್ಲ. ಅವನ ದೃಷ್ಟಿಯಲ್ಲಿ ಮಿತವ್ಯಯ ಒಂದು ದೋಷವಾಗಿತ್ತು. ದೇವರು ಆದಾಯ ಕೊಟ್ಟಿರುವುದು ಖರ್ಚುಮಾಡಲೆಂದೇ ಅಲ್ಲವೇ! ಅವನು ಲಾಲಾ ಪ್ರಭುದಯಾಳನನ್ನು ಕೀಳಾಗಿ ಕಾಣುತ್ತಿದ್ದುದು ಪ್ರಾಯಶಃ ಈ ಕಾರಣ ದಿಂದಲೇ. ಇಪ್ಪತ್ತು ವರ್ಷಗಳ ಹಿಂದೆ ಪ್ರಭುದಯಾಳನ ಅಪ್ಪ ಒಂದು ಸಣ್ಣ ಚಿಲ್ಲರೆ ಅಂಗಡಿ ಇಟ್ಟಿದ್ದುದು ಅವನಿಗೆ ನೆನಪಿತ್ತು. ಈ ಇಪ್ಪತ್ತು ವರ್ಷಗಳಲ್ಲಿ ಪ್ರಭುದಯಾಳ ಆರು ಹಳ್ಳಿಗಳನ್ನು ಕೊಂಡಿದ್ದ. ಲೇವಾದೇವಿಯಂತೂ ಲಕ್ಷಗಟ್ಟಲೆ ಏರಿತ್ತು. ಇಡೀ ಘಾಟಮಪುರದ ತಹಸೀಲಿನಲ್ಲಿಯೇ ಲಾಲಾ ಪ್ರಭುದಯಾಳನಲ್ಲಿದ್ದಷ್ಟು ಅಧಿಕ ಮೊತ್ತದ ನಗದು ಹಣ ಬೇರೆ ಯಾರಲ್ಲಿಯೂ ಇರಲಿಲ್ಲ.

ಗಜರಾಜ ತನ್ನ ಸಂದೇಹವನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ಪ್ರಭುದಯಾಳ ನನ್ನು ಕೇಳಿದ, "ಏನು ಲಾಲಾ ಪರಭೂದಯಾಳ್, ಈ ದಿಬ್ಬಣದ ಬಗ್ಗೆ ನಿಮ್ಮ ಅಭಿ ಪ್ರಾಯವೇನು?"

ಪ್ರಭುದಯಾಳ ಮೊದಲಿನಂತೆಯೇ ನಗುತ್ತ ಹೇಳಿದ, "ಏನು ಹೇಳೋಣ ಈ ದಿಬ್ಬಣಕ್ಕೆ! ರಾಜರು, ಜಮೀನುದಾರರುಗಳ ವ್ಯವಹಾರ! ಏನು ಜಬರ್ದಸ್ತಿ, ಏನು

ಎದೆಗಾರಿಕೆ!" ಸ್ವಲ್ಪಹೊತ್ತು ಬಿಟ್ಟು ಅವನು ಅಂದ, "ಯಜ್ಞಪುರದ ರಾಜಾಸಾಹೇಬರ ವಾರ್ಷಿಕ ಉತ್ಪನ್ನ ಮೂರು ಲಕ್ಷ ರೂಪಾಯಿ ಅಂತ ಕೇಳಿದೀನಿ."

ಪ್ರಭುದಯಾಳ ಎತ್ತಿದ್ದ ಯಜ್ಞಪುರದ ರಾಜಾಸಾಹೇಬರ ಆದಾಯದ ಮಾತಿನ ಅಂತರಾರ್ಥ ಅಲ್ಲಿ ಕುಳಿತಿದ್ದವರಲ್ಲಿ ಜ್ವಾಲಾಪ್ರಸಾದನ ಹೊರತು ಬೇರೆ ಯಾರಿಗೂ ತಿಳಿಯ ಲಿಲ್ಲ. ಗಜರಾಜಸಿಂಹನೇನೋ ಪ್ರಭುದಯಾಳ ಕೊಟ್ಟ ಉತ್ತರದಿಂದ ಸಂತುಷ್ಟನಾಗಿ ಹೋದ. ಅವನಂದ, "ಅವರ ಖರ್ಚೂ ಅಷ್ಟೇ ದೊಡ್ಡದಿದೆ. ಅವರ ಮನೇಲಿ ರೂಪಾಯಿ ನೀರಿನ ಹಾಗೆ ವೆಚ್ಚವಾಗುತ್ತೆ. ಅವರಿಗೆ ಮಸೂರಿಯಲ್ಲಿ ಒಂದು ಬಂಗಲೆ; ಅಲಹಾಬಾದಿನಲ್ಲಿ ಒಂದು ಮನೆ ಇದೆ. ವರ್ಷದಲ್ಲಿ ಆರು ತಿಂಗಳು ಅವರು ಸ್ವತಃ ಕಲಕತ್ತೆ ಯಲ್ಲಿ ಬಿಡಾರ ಹೂಡ್ತಾರೆ!"

ಅದೇ ಹೊತ್ತಿಗೆ ಠಾಕೂರ್ ಬರಜೋರಸಿಂಹ ಭಾವನಾಡಿದ ಮಾತಿಗೆ ಟಿಪ್ಪಣಿ ಸೇರಿಸಿದ, "ಅರೆ, ಅವರು ರಾಜಮನೆತನದವರು, ಚಿಲ್ಲರೆ ವ್ಯಾಪಾರದ ಬನಿಯರಲ್ಲ."

ಪ್ರಭುದಯಾಳನ ಮುಖದ ನಗೆ ಇದ್ದಂತೆಯೇ ಇತ್ತು. ಅವನ ಮುಖಮುದ್ರೆ ಯಲ್ಲಿ ಎಳ್ಳಷ್ಟೂ ಪರಿವರ್ತನೆಯಾಗಲಿಲ್ಲ. "ನೀವು ಹೇಳೋದು ಸರಿ, ಠಾಕೂರ್ ಬರಜೋರ್‌ಸಿಂಹ. ನಾವು ಬನಿಯಾ ಜನ ರಾಜಕುಲದವರಾದ ನಿಮ್ಮ ಪ್ರಜೆಗಳು. ನಾವು ನಿಮಗೆ ಸರಿಸಮಾನರಾಗೋದು ಹೇಗೆ ತಾನೆ ಸಾಧ್ಯ!"

ಠಾಕೂರ್ ಬರಜೋರಸಿಂಹನ ತಂದೆ ಒಂದು ಕಾಲದಲ್ಲಿ ಒಳ್ಳೆಯ ಜಮೀನುದಾರ ನಾಗಿದ್ದ. ಆದರೆ ಕಾಲ ತಲೆಕೆಳಗಾಗಿತ್ತು. ಬರುಬರುತ್ತ ಬರಜೋರಸಿಂಹನ ಬಳಿ ಒಂದು ಸಣ್ಣ ಹಳ್ಳಿ ಮಾತ್ರ ಉಳಿಯಿತು; ಅದರ ಅಧಿಕಾಂಶ ಜಮೀನು ಬಂಜರಾಗಿತ್ತು. ಆ ಹಳ್ಳಿಯಿಂದ ಅವನಿಗೆ ಬರುತ್ತಿದ್ದ ವರಮಾನವೆಂದರೆ ವರ್ಷಕ್ಕೆ ಸುಮಾರು ಇನ್ನೂರೈ ವತ್ತು ರೂಪಾಯಿಗಳು. ಆದರೂ ಸಹ ಬರಜೋರಸಿಂಹ ಜಮೀನುದಾರನೇ! ಘಾಟಮಪುರದಿಂದ ಐದು ಮೈಲಿ ದೂರದಲ್ಲಿದ್ದ ಅವನ ಹಳ್ಳಿ ಚುನೌಠಾದಲ್ಲಿ ಪಿತ್ರಾರ್ಜಿತ ವಾದ ಒಂದು ದೊಡ್ಡ ಬಂಗಲೆಯಿತ್ತು; ಬಂಗಲೆಯ ಮುಂದೆ ಇಂದಿಗೂ ಅವನ ತಂದೆಯ ಕಾಲದ ಆನೆ ಸೊಂಡಿಲಾಡಿಸುತ್ತ ನಿಂತಿರುತ್ತಿತ್ತು. ರಿಪೇರಿ ಕಾಣದೆ ಬಂಗಲೆ ಇದ್ದಿದ್ದಲ್ಲೇ ಮುರಿದುಬೀಳುತ್ತಿತ್ತು. ಬರಜೋರಸಿಂಹನ ಹತ್ತಿರ ಸುಮಾರು ನೂರು ಬೀಘಾ ಹಿಡುವಳಿ ಜಮೀನಿತ್ತು. ಅವನ ಜೀವನಕ್ಕೆ ಆ ಹಿಡುವಳಿ ಜಮೀನೊಂದೇ ಅವಲಂಬನೆ. ಯಮುನಾನದಿಯ ಜೌಗು ಪ್ರದೇಶದಲ್ಲಿದ್ದುದರಿಂದ ಜಮೀನು ಫಲವತ್ತಾಗಿತ್ತು. ಆದರೆ ಐದು ವರ್ಷಗಳ ಹಿಂದೆ ಮಗನ ಚೌಲದಲ್ಲಿ ಏಕಾಏಕಿ ಮಿತಿಮೀರಿ ಖರ್ಚುಮಾಡಿ ಸ್ವತಃ ಚೌಲ ಮಾಡಿಸಿಕೊಂಡಂತಾದಾಗ ಅವನು ಆ ಹಿಡುವಳಿಯನ್ನು ಲಾಲಾ ಪ್ರಭು ದಯಾಳನಿಗೆ ಭೋಗ್ಯಮಾಡಿದ್ದ. ಭೋಗ್ಯ ಮಾಡಿದ್ದುದೇನೋ ಸಾವಿರ ರೂಪಾಯಿಗೆ; ಆದರೆ ಬಡ್ಡಿಗೆ ಬಡ್ಡಿ ಸೇರಿ ಬೆಳೆದು ಈಗ ಆ ಮೊತ್ತ ಎರಡು ಸಾವಿರವನ್ನು ಮಿಕ್ಕಿತ್ತು. ಕಳೆದೊಂದು ವರ್ಷದಿಂದ ಪ್ರಭುದಯಾಳ ಬರಜೋರಸಿಂಹನಿಗೆ ಸ್ವಲ್ಪ ಜೋರಾಗಿಯೇ

ತಗಾದೆ ಹಾಕಲು ಷುರುಮಾಡಿದ್ದ. ಒಂದೆರಡು ಸಲವಂತೂ ಒಂದಿಷ್ಟು ಮಾತಿಗೆ ಮಾತು ಬೆಳೆಯುವ ಸಂದರ್ಭವೂ ಬಂದಿತ್ತು. ಮೂರು ತಿಂಗಳ ಹಿಂದೊಮ್ಮೆ ಈ ವಾಗ್ವಾದ ಪ್ರಭುದಯಾಳ ಮೊಕದ್ದಮೆ ಹೂಡುವೆನೆಂದು ಬೆದರಿಕೆ ಹಾಕುವಷ್ಟರಮಟ್ಟಿಗೆ ಬಿಸಿಯೇರಿತ್ತು.

ಪ್ರಭುದಯಾಳ ಬರಜೋರಸಿಂಹನ ಕೊಂಕುನುಡಿಯನ್ನು ಒಂದಿಷ್ಟೂ ತಪ್ಪು ತಿಳಿಯದೆ ಅದನ್ನು ಸಾಧಾರಣ ಹಾಸ್ಯವೆಂಬಂತೆ ಸ್ವೀಕರಿಸಿ ಅತ್ಯಂತ ನಯದಿಂದ ಉತ್ತರಿಸಿದ್ದರೂ ಅವನಲ್ಲಿ ಆ ಕ್ಷಣ ಬರಜೋರಸಿಂಹನ ಬಗ್ಗೆ ಭಯಂಕರ ಹಿಂಸಾಭಾವನೆ ಜಾಗ್ರುತವಾಗಿತ್ತು. ಜ್ವಾಲಾಪ್ರಸಾದನೊಡಗೂಡಿ ಅವನು ಗಜರಾಜಸಿಂಹನ ಮನೆ ಬಿಟ್ಟು ಹೊರಟಾಗ ಅವನ ಮುಖ ನೆರಳು ಕವಿದಂತಿತ್ತು. ಪ್ರಭುದಯಾಳನ ಈ ಗಂಭೀರ ಮುಖಮುದ್ರೆಯನ್ನು ನೋಡಿ ಜ್ವಾಲಾಪ್ರಸಾದ ಸಹಜವಾಗಿ ಕೇಳಿದ, "ಯಾಕೆ, ಲಾಲಾ ಪ್ರಭುದಯಾಳ್‌ಜೀ, ಇದ್ದಕ್ಕಿದ್ದಹಾಗೆ ಇಷ್ಟೊಂದು ಗಂಭೀರವಾಗಿ ಬಿಟ್ಟಿರಿ?"

"ಹಾಗೇ ಯೋಚಿಸ್ತಿದ್ದೆ, ತಹಸೀಲದಾರ ಸಾಹೇಬರೇ, ಇಲ್ಲದ ದೊಡ್ಡಸ್ತಿಕೆಯ ಮದದಲ್ಲಿ ಮನುಷ್ಯ ತನ್ನ ಹಿತಾಹಿತಗಳನ್ನು ಸಹ ನೋಡಲಾರದಷ್ಟು ಕುರುಡನಾಗೋದು ಯಾಕೆ?" ಪ್ರಭುದಯಾಳ ಉತ್ತರಕೊಟ್ಟ.

"ಹೌದು, ಠಾಕೂರ್ ಗಜರಾಜಸಿಂಹ ತನ್ನ ಅಂತಸ್ತಿನ ಎಲ್ಲೆ ಮೀರಿ ಮಗಳ ಮದುವೆ ಮಾಡ್ತಿದಾನೆ ಅಂತ ನನಗೂ ಅನ್ನಿಸುತ್ತೆ," ಜ್ವಾಲಾಪ್ರಸಾದ ಮಾಮೂಲಾಗಿ ಹೇಳಿದ.

"ನಾನು ಯೋಚಿಸ್ತಾ ಇದ್ದದ್ದು ಗಜರಾಜಸಿಂಹನ ವಿಷಯವಲ್ಲ, ಜ್ವಾಲಾಬಾಬು. ಬರಜೋರಸಿಂಹನ ವಿಷಯ. ಅವನು ಕಂಡಹಾಗೆ ಕಾಣದಹಾಗೆಲ್ಲಾ ನನಗೆ ಅಪಮಾನ ವಾಗೋ ಹಾಗೆ ಮಾತನಾಡಿದ್ದನ್ನ ನೀವೂ ಗಮನಿಸಿರಬಹುದು. ಹೀಗೆ ಯಾಕೆ ಅಂತೀನಿ? ನಾನು ಅವನನ್ನ ಒಂದು ಕ್ಷಣದಲ್ಲಿ ಹಾಳುಮಾಡಬಲ್ಲೆ. ಅವನ ನೂರು ಬೀಘಾ ಹಿಡುವಳಿ ಜಮೀನು ನನಗೆ ಭೋಗ್ಯವಾಗಿದೆ. ಅದರ ಮೇಲೆ ಒಟ್ಟು ಬಾಕಿ ಎರಡು ಸಾವಿರದಷ್ಟಾಗಿದೆ. ಇವತ್ತಿಗೆ ಐದು ವರ್ಷವಾಯಿತು, ಸಾಲ-ಬಡ್ಡಿ ಒಂದೇ ಸಮನೆ ಬೆಳೀತಿದೆ. ನಾನು ಎಲ್ಲೀತನಕ ಸುಮ್ಮನಿರಲಿ? ನಾನು ದಾವಾ ಹಾಕಲೇಬೇಕಾಗುತ್ತೆ. ನನಗೆ ಹೀಗೆ, ಅಕಾರಣವಾಗಿ ಅವಮಾನಮಾಡಿದ್ದಕ್ಕೆ ಸೇಡು ತೀರಿಸಿಕೊಳ್ಳಲೇಬೇಕು. ಜ್ವಾಲಾಬಾಬು, ನೀವೇ ಸಾಕ್ಷಿ. ಇದರಲ್ಲಿ ನನ್ನದೇನೂ ತಪ್ಪಿಲ್ಲ!"

ಜ್ವಾಲಾಪ್ರಸಾದನಿಗೆ ಬರಜೋರಸಿಂಹನ ಪರಿಚಯ ಚೆನ್ನಾಗಿಯೇ ಇತ್ತು. ಬರಜೋರ ಸಿಂಹ ಯೋಗ್ಯ, ಎಲ್ಲರೊಡನೆಯೂ ಹೊಂದಿಕೊಂಡು ಹೋಗುವವನು, ಇನ್ನೊಬ್ಬರ ಕಷ್ಟದಲ್ಲಿ ನೆರವಾಗುವವನು. ಆದರೆ ಸ್ವಭಾವತಃ ಒರಟ, ಹಟಮಾರಿ. ಅವನ ಬಗ್ಗೆ ಜ್ವಾಲಾಪ್ರಸಾದನಿಗೆ ಒಂದಿಷ್ಟು ಸಹಾನುಭೂತಿಯಿತ್ತು. ಎಂತಲೇ ಚಿಂತಿತನಾಗಿ ಹೇಳಿದ, "ಏನು, ಎರಡು ಸಾವಿರ ಸಾಲವಿದೆಯೇ? ಕೆಟ್ಟ ಸುದ್ದಿ ಕೇಳಿದ ಹಾಗಾಯಿತು.

ಅವನಿಗಿರೋದು ಅಂದರೆ ಆ ನೂರು ಬೀಘಾ ಹಿಡುವಳಿ ಜಮೀನೆಷ್ಟೋ ಅಷ್ಟೆ. ಅವನ ಹಳ್ಳಿಯಿಂದ ಬರೋ ವರಮಾನದಲ್ಲಿ ಅವನಿಗೇನು ತಾನೆ ಸಿಗುತ್ತೆ? "

ಪ್ರಭುದಯಾಳ ನಕ್ಕ, "ಅವನ ಮೇಲೆ ದಾವಾ ಹಾಕಬಾರದು ಅಂತ ನಾನೂ ತುಂಬ ಅಂದುಕೊಂಡಿದ್ದೆ. ಆದರೆ ಏನು ಮಾಡಲಿ ಹೇಳಿ. ಅವನೇ ನನ್ನನ್ನ ನಿರ್ವಾಹವಿಲ್ಲದ ಹಾಗೆ ಮಾಡಿದಾನೆ. ಮೊಬಲಗು ಸಣ್ಣದೇನಲ್ಲ, ಎರಡು ಸಾವಿರ ರೂಪಾಯಿನ ಮಾತು. ಅಲ್ಲದೆ ಅವರವರು ಮಾಡಿದ್ದನ್ನ ಅವರವರು ಅನುಭವಿಸ್ತಾರೆ. ಇದರಲ್ಲಿ ಯಾರು ಏನು ತಾನೆ ಮಾಡೋಕ್ಕಾಗುತ್ತೆ ! "

ಜ್ವಾಲಾಪ್ರಸಾದನಿಗೆ ಇದಕ್ಕೆ ಏನು ಹೇಳಬೇಕೆಂದು ತೋರಲಿಲ್ಲ. ಅವನು ಸುಮ್ಮನಾದ. ನಡವಳಿಕೆ, ವ್ಯವಹಾರ, ಅಥವಾ ಬೇರೆ ಯಾವದೇ ವಿಷಯದಲ್ಲೇ ಆಗಲಿ, ಪ್ರಭುದಯಾಳನ ಬಗ್ಗೆ ಅಪ್ರಿಯತೆ ಬೆಳಸಿಕೊಳ್ಳಬಹುದಾದಂತಹ ಯಾವ ಕಾರಣವೂ ಜ್ವಾಲಾಪ್ರಸಾದನಿಗೆ ಸಿಕ್ಕಿರಲಿಲ್ಲ. ಆದರೂ ಅವನೊಳಗೆ ಪ್ರಭುದಯಾಳನ ಬಗ್ಗೆ ಯಾಕೋ ಒಂದು ಬಗೆಯ ಜುಗುಪ್ಸೆ ಬೆಳೆಯಲಾರಂಭಿಸಿತು.

ಪ್ರಭುದಯಾಳ–ಜೈದೇಯಿಯರು ಜ್ವಾಲಾಪ್ರಸಾದನ ಮನೆಯಲ್ಲಿ ಮೂರು ದಿನ ತಂಗಿದ್ದರು. ಈ ಮೂರು ದಿನಗಳಲ್ಲಿ ಯಮುನಾ ಜೈದೇಯಿಯರ ನಡುವೆ ತುಂಬ ಸ್ನೇಹ ಬೆಳೆಯಿತು. ಅಷ್ಟೇ ಅಲ್ಲ, ಜೈದೇಯಿ ಜ್ವಾಲಾಪ್ರಸಾದನ ಜತೆ ಮೈದುನ ಸಂಬಂಧ ಬೆಳಸಿಕೊಂಡಳು. ಆದರೆ ಪ್ರಭುದಯಾಳನ ಬಗ್ಗೆ ಮಾತ್ರ ಜ್ವಾಲಾಪ್ರಸಾದನ ಮನಸ್ಸಿನಲ್ಲಿ ಒಂದು ಬಗೆಯ ಬೇಸರ ಹುಟ್ಟಿತ್ತು.

## ಮೂರು

ಮೀರ್ ಸಖಾವತ್ ಹುಸೇನ್ — ಅಥವಾ ಅವರ ಆತ್ಮೀಯರು ಕರೆಯುತ್ತಿದ್ದಂತೆ 'ಮೀರ್ ಸಾಹೇಬರು'— ಫಕೀರ ಮನೋವೃತ್ತಿಯ ಮನುಷ್ಯರು. ಅವರು ತೆಳ್ಳಗೆ, ಎತ್ತರಕ್ಕೆ, ನೋಡಲು ಸುಂದರವಾಗಿದ್ದರು. ತೀಡಿ ನಿಲ್ಲಿಸಿದ ಸಣ್ಣನೆಯ ಗಡ, ಆ ಗಡ್ಡದ ಪ್ರಮಾಣಕ್ಕೆ ತಕ್ಕಂತಹದೇ ಸಣ್ಣ ಮೀಸೆ, ಸದಾ ಗಂಭೀರವಾಗಿರುತ್ತಿದ್ದ ಮುಖ. ಮೀರ್ ಸಾಹೇಬರ ವ್ಯಕ್ತಿತ್ವ ಹೇಗಿತ್ತೆಂದರೆ ಜನ ಅವರನ್ನು ಸಹಜವಾಗಿಯೇ ಗೌರವಿಸುತ್ತಿದ್ದರು.

ಮೀರ್ ಸಖಾವತ್ ಹುಸೇನರು ಘಾಟಮಪುರದ ತಹಸೀಲದಾರರೇನೋ ಆಗಿದ್ದರು, ನಿಜ. ಆದರೆ ಅವರು ತಮ್ಮ ಕೆಲಸಕಾರ್ಯಗಳನ್ನೆಲ್ಲಾ ಜ್ವಾಲಾಪ್ರಸಾದನ ಮೇಲೆ ಬಿಟ್ಟಿದ್ದರು. ಮೀರ್ ಸಾಹೇಬರ ವಯಸ್ಸು ಐವತ್ತಕ್ಕೆ ಮೇಲ್ಪಟ್ಟಿತ್ತು. ಅವರ ಒಲವೇನಿದ್ದರೂ ಧರ್ಮ ದೈವೋಪಾಸನೆಗಳ ಕಡೆಗೆ; ಅವರು ಹೆಚ್ಚಿನ ಸಮಯವನ್ನು ದೇವರ ಸ್ಮರಣೆಯಲ್ಲಿ ಕಳೆಯುತ್ತಿದ್ದರು. ಉಳಿದ ಹೊತ್ತು ಮನೋರಂಜನೆಗಾಗಿ ಚದುರಂಗ

ವಾಡುತ್ತಿದ್ದರು. ಹದಿನೈದು ವರ್ಷಗಳ ಕೆಳಗೆ ಅವರ ಒಬ್ಬನೇ ಮಗ ತೀರಿಕೊಂಡಾಗಲೇ ಅವರ ಮನಸ್ಸು ಪ್ರಪಂಚದಿಂದ ದೂರವಾಗಿತ್ತು; ಈಗ ಐದು ವರ್ಷಗಳ ಹಿಂದೆ ಹೆಂಡತಿ ಕಣ್ಮರೆಯಾದಾಗಿನಿಂದಂತೂ ಅವರು ಒಂದು ರೀತಿಯಲ್ಲಿ ಫಕೀರವೃತ್ತಿಯನ್ನು ಅನುಸರಿಸಿದ್ದರು. ಅವರು ಮನೆಬಿಟ್ಟು ಹೊರಡುತ್ತಿದ್ದುದು ಬಹಳ ಅಪರೂಪ; ಒಂದು ರೀತಿಯಲ್ಲಿ ಅವರು ಜನರೊಡನೆ ಬೆರೆಯುವುದನ್ನೇ ಬಿಟ್ಟುಬಿಟ್ಟಿದ್ದರು. ಜ್ವಾಲಾಪ್ರಸಾದ ಅವರ ಮನೆಗೇ ಹೋಗಿ ಸರಕಾರೀ ವಿಷಯಗಳಲ್ಲಿ ಸಲಹೆ ಪಡೆಯುತ್ತಿದ್ದ; ಕಾಗದ ಪತ್ರಗಳಿಗೆ ರುಜುಮಾಡಿಸಿಕೊಳ್ಳುತ್ತಿದ್ದ.

ಮೀರ್ ಸಾಹೇಬರು ಪ್ರತಿವರ್ಷ ಬೇಸಿಗೆಯಲ್ಲಿ ತಮ್ಮ ಸ್ವಂತ ಊರಾದ ಲಖನೌಗೆ ಹೋಗುವ ಪದ್ಧತಿಯಿಟ್ಟುಕೊಂಡಿದ್ದರು. ಆ ವರ್ಷವೂ ಅವರು ಲಖನೌನಲ್ಲಿ ಎರಡು ತಿಂಗಳಿದ್ದು ಬಂದ ಮೇಲೆ ಜ್ವಾಲಾಪ್ರಸಾದ ಸರಕಾರೀ ಕಾಗದಪತ್ರಗಳ ಸಮೇತ ಅವರ ಮುಂದೆ ಹಾಜರಾದ.

ಜ್ವಾಲಾಪ್ರಸಾದನಿಗೆ ಕುಳಿತುಕೊಳ್ಳಲು ಹೇಳಿ ಮೀರ್ ಸಾಹೇಬರು ಕೇಳಿದರು, "ಏನು ಜ್ವಾಲಾಬಾಬು, ಚೆನ್ನಾಗಿದೀಯಾ? ಕೆಲಸಕಾರ್ಯಗಳೆಲ್ಲಾ ಸಲೀಸಾಗಿ ನಡೀತಿರೋದು ಕಾಣುತ್ತೆ; ಎಲ್ಲಿಂದಲೂ ಯಾವ ತರಹದ ದೂರೂ ಇಲ್ಲ. ಹ್ಞಾ, ಗಜರಾಜಸಿಂಹ ಮಗಳ ಮದುವೇನ ಬಹಳ ಅದ್ದೂರಿಯಾಗಿ ಮಾಡಿದ ಅಂತ ಕೇಳಿದೆ. ಏನು, ಬಹಳ ದೊಡ್ಡ ದಿಬ್ಬಣ ಬಂದಿತ್ತೆ?"

"ನಾನಂತೂ ನನ್ನ ಜನ್ಮದಲ್ಲೇ ಅಷ್ಟು ದೊಡ್ಡ ದಿಬ್ಬಣ ನೋಡಿರಲಿಲ್ಲ, ಹುಜೂರ್. ತಾವು ಮದುವೇಲಿ ಭಾಗವಹಿಸಲಿಲ್ಲ ಅಂತ ಗಜರಾಜಸಿಂಹನಿಗೆ ತುಂಬ ವ್ಯಸನವಾಗಿದೆ."

"ಏನು ಹೇಳಲಿ, ವಾಸ್ತವವಾಗಿ ನನಗೂ ತುಂಬ ದುಃಖವಾಗಿದೆ. ವರ್ಷದಲ್ಲಿ ಎರಡು ತಿಂಗಳು ಬೇಸಿಗೇಲಿ ಲಖನೌಗೆ ಹೋಗ್ತೀನಿ, ಅದಕ್ಕೆ ಯಾವ ಅಡ್ಡಿಯೂ ಬರಕೂಡದು ಅಂತ ಎಲ್ಲರಿಗೂ ಗೊತ್ತಿದೆ." ಮೀರ್ ಸಾಹೇಬರು ಗಂಭೀರತಾಪೂರ್ವಕವಾಗಿ ಮುಂದುವರಿಸಿದರು, "ಆದರೆ ಸಾಲದ ಹೊರೆ ಹೊತ್ತುಕೊಂಡು ಮಾಡೋ ಮದುವೆ ಅದೆಂಥ ಮದುವೆ, ಮಗು? ಬರಿಯ ಒಂದು ಮದುವೆಗೆ ಇಪ್ಪತ್ತು ಸಾವಿರ ರೂಪಾಯಿ ಸಾಲ ಅಂದರೇನು? ನಿನಗೂ ಗಜರಾಜಸಿಂಹನಿಗೂ ಬಲು ಒಳ್ಳೇ ಸ್ನೇಹಸಂಬಂಧವಿದೆ. ಅವನು ಈ ಸಾಲ ಮಾಡದ ಹಾಗೆ ನೀನೇಕೆ ತಡೆಯಲಿಲ್ಲ?"

"ಹುಜೂರ್, ನನಗೆ ಈ ಸಾಲದ ವಿಷಯ ಗೊತ್ತಾದದ್ದು ಸಾಲಪತ್ರ ರಿಜಿಸ್ಟ್ರಿಯಾದ ದಿನವೇ. ಮೊದಲೇ ಗೊತ್ತಿದ್ದಿದ್ದರೆ ನಾನು ಖಂಡಿತವಾಗಿಯೂ ಅವನನ್ನು ತಡೆಯೋ ಪ್ರಯತ್ನಮಾಡ್ತಿದ್ದೆ. ಆದರೆ ಹಾಗೆ ತಡೆಯೋಕ್ಕೆ ಸಾಧ್ಯವಾಗ್ತಿತ್ತೇ ಅನ್ನೋದು ಅನುಮಾನ. ಅವನು ಎಂಥ ಹಟದ ಮನುಷ್ಯ ಅನ್ನೋದು ಹುಜೂರರಿಗೆ ಗೊತ್ತಿದೆ."

"ಎಂಥ ಹಟವೇನು, ಮಹಾಹಟ! ಅವನು ಎಷ್ಟು ಯೋಗ್ಯನೋ, ಸಭ್ಯನೋ, ಅಷ್ಟೇ ಹಟಮಾರಿ ಸಹ. ಅಂದಹಾಗೆ, ಮಗೂ, ಇನ್ನೂ ಒಂದು ಸುದ್ದಿ ಕೇಳಿದೆ. ಸಾಲವನ್ನ ನಂಬರ್‌ದಾರ ಲಾಲಾ ಪ್ರಭುದಯಾಳನಿಂದ ತೊಗೊಂಡಿದಾನಂತೆ?" ಮಿರ್ ಸಾಹೇಬರು ಕೇಳಿದರು.

"ಹುಜೂರ್ ಕೇಳಿರೋದು ಸರಿ. ಅದಕ್ಕೆ ಗಜರಾಜಸಿಂಹ ತನ್ನ ಐದು ಹಳ್ಳೀನ ಭೋಗ್ಯಮಾಡಿದಾನೆ."

"ಅಂದರೆ ಈ ಐದು ಹಳ್ಳಿಗಳೂ ಪ್ರಭುದಯಾಳನ ಪಾಲಾದವು," ಮಿರ್ ಸಾಹೇಬರು ನಕ್ಕರು. "ಆ ಮನುಷ್ಯನನ್ನ ಮೆಚ್ಚಿಕೊಂಡೆ. ಅವನು ನನ್ನ ಕಣ್ಣ ಮುಂದೆಯೇ ಎಷ್ಟು ದೊಡ್ಡ ಮನುಷ್ಯನಾಗಿಬಿಟ್ಟ. ಹೌದು, ಮಗು ನಾನು ಇನ್ನೂ ಒಂದು ಸುದ್ದಿ ಕೇಳಿದೆ, ಈ ಸಲ ಪ್ರಭುದಯಾಳ ನಿಮ್ಮ ಮನೇಲಿ ಇಳಿದಿದ್ದನಂತಲ್ಲ," ಮಿರ್ ಸಾಹೇಬರು ಜ್ವಾಲಾಪ್ರಸಾದನ ಕಡೆ ಒಂದು ಅರ್ಥಪೂರ್ಣ ದೃಷ್ಟಿ ಬೀರಿದರು.

ಆ ದೃಷ್ಟಿಯ ಹಿಂದಿದ್ದ ಅರ್ಥವನ್ನು ಗ್ರಹಿಸಲು ಜ್ವಾಲಾಪ್ರಸಾದನಿಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ಅವನು ಹೇಳಿದ, "ಹೌದು, ಹುಜೂರ್, ಅವರು ಗಂಡಹೆಂಡತಿ ಉಳಿದದ್ದುದೇನೋ ನಮ್ಮಲ್ಲಿಯೇ. ಆದರೆ ನಾನು ನಿಮಗೆ ಇಷ್ಟು ಭರವಸೆ ಕೊಡ್ತೀನಿ, ನಮ್ಮಲ್ಲಿ ಇಳಿಯಪ್ಪ ಅಂತ ನಾನೇನೂ ಅವನಿಗೆ ಆಮಂತ್ರಣ ಕೊಟ್ಟಿರಲಿಲ್ಲ. ಬಲವಂತವಾಗಿ ಅವನೇ ಬಂದು ನಮ್ಮ ಕೊರಳಿಗೆ ಗಂಟುಬಿದ್ದ. ಬೇಡ ಅಂದಿದ್ದರೆ ಸೌಜನ್ಯಕ್ಕೆ ಕಡಿಮೆಯಾಗಿರೋದು."

ಮಿರ್ ಸಾಹೇಬರು ಕೊಂಚ ಗಂಭೀರವಾಗಿ ಹೇಳಿದರು, "ಹಿರಿಯರು ಹೇಳೋದು ಸುಳ್ಳಲ್ಲ. ಪಾಪ ಯಾವಾಗಲೂ ತಾನಾಗಿಯೇ ಬಂದು ಕೊರಳಿಗೆ ಗಂಟುಬೀಳುತ್ತೆ, ಮಗು. ಪಾಪವನ್ನ ದೂರ ಇಡಬೇಕು ಅಂತ ನಮಗೆಲ್ಲರಿಗೂ ಗೊತ್ತಿದೆ. ಧನದೌಲತ್ತು ಅಂದರೆ ಯಾರಿಗೆ ತಾನೇ ಆಸೆ ಇಲ್ಲ. ಆದರೆ ಆಗೋದು ಹೇಗೆ ಅಂದರೆ ಧನದೌಲತ್ತಿನ ದೇವತೆ ನಮ್ಮೊಳಗಿನ ನಿಜವಾದ ದೇವರನ್ನ ನುಂಗಿಬಿಡುತ್ತೆ. ಉದಾಹರಣೆಗೆ ದೂರ ಹೋಗಬೇಕಾದ್ದಿಲ್ಲ. ಈ ಪ್ರಭುದಯಾಳನನ್ನೇ ನೋಡು. ಇವನು ಗುಡಿ ಕಟ್ಟಿಸಿದಾನೆ, ಮಾಂಸಮದ್ಯ ಮುಟ್ಟೋದಿಲ್ಲ. ಇಷ್ಟಾದರೂ ಇವನಿಗಿರೋ ಒಂದೇ ಒಂದು ಧರ್ಮ ಅಂದರೆ ದುಡ್ಡು. ನೀನೇನಂತಿ?"

"ಹುಜೂರರು ಹೇಳೋದು ಸರಿ," ಜ್ವಾಲಾಪ್ರಸಾದ ಉತ್ತರಿಸಿದ. "ಮನುಷ್ಯ ಬಹಳ ಕೆಳಗಿಳಿದಿದಾನೆ."

"ನೀಚಮನುಷ್ಯ ಸ್ವತಃ ತಾನು ಕೆಳಗಿಳಿದರೆ ಅಷ್ಟೇನೂ ನಷ್ಟವಿಲ್ಲ; ಆದರೆ ಅವನ ಸಹವಾಸ ಮಾಡಿದವರೂ ಕೆಳಗಿಳೀತಾರೆ. ನಿನಗೆ ಹೇಳಬೇಕಾಗಿ ಬಂದದ್ದು ಅದಕ್ಕೋಸ್ಕರವೇ, ಮಗು. ಈ ದುಡ್ಡಿನ ದೇವತೆಯಿದೆಯಲ್ಲ, ಅದರ ಪೂಜಾರಿಗಳದ್ದೇ ಒಂದು ಧರ್ಮಪಂಥ ಇದೆ. ಧರ್ಮದ ಗುಣಸ್ವಭಾವ ಅಂದರೆ ಹರಡೋದು, ಇತರ

ರನ್ನೂ ತನ್ನ ಜೊತೆಗೆ ಸೇರಿಸಿಕೊಳ್ಳೋದು. ಈ ದುಡ್ಡಿನ ಧರ್ಮಕ್ಕೆ ಸೇರಿದ ಜನ ತುಂಬ ಅಪಾಯಕಾರಿಗಳು. ಯಾಕೆಂದರೆ ಅವರು ನಿನ್ನ ಧರ್ಮವನ್ನು ಬದಲಾಯಿಸೋಕ್ಕೆ ಪ್ರಯತ್ನಮಾಡ್ತಾರೆ," ಹೀಗೆ ಹೇಳುತ್ತ ಹೇಳುತ್ತ ಮಿರ್ ಸಾಹೇಬರು ಜೋರಾಗಿ ನಕ್ಕರು.

ಜ್ವಾಲಾಪ್ರಸಾದ ಮಿರ್ ಸಾಹೇಬರಿಂದ ಬೀಳ್ಕೊಂಡು ಮನೆಗೆ ಹಿಂದಿರುಗಿದಾಗ ಠಾಕೂರ್ ಗಜರಾಜಸಿಂಹ ತನ್ನ ದಾರಿಕಾಯುತ್ತ ದಿವಾನಖಾನೆಯಲ್ಲಿ ಕುಳಿತಿದ್ದುದು ಕಾಣಿಸಿತು. ಆ ಹೊತ್ತು ಗಜರಾಜಸಿಂಹ ಗಂಭೀರನಾಗಿದ್ದ; ಆ ಗಂಭೀರತೆಯಲ್ಲಿ ಯಾವುದೋ ಅಸ್ವಾಭಾವಿಕತೆಯಿತ್ತು.

ಜ್ವಾಲಾಪ್ರಸಾದ ಬಟ್ಟೆ ಬದಲಾಯಿಸಿ ಠಾಕೂರ್ ಗಜರಾಜಸಿಂಹನ ಹತ್ತಿರ ಬಂದು ಕುಳಿತ. ಅವನ ಗಂಭೀರತೆಯನ್ನು ದೂರಮಾಡುವ ಸಲುವಾಗಿ ಜ್ವಾಲಾಪ್ರಸಾದ ಹೇಳಿದ, "ಠಾಕೂರ್ ಸಾಹೇಬ್, ಈ ವರ್ಷ ಹೊತ್ತಿಗೆ ಸರಿಯಾಗಿ ಮಳೆ ಬರೋ ಹಾಗೆ ಕಾಣುತ್ತೆ. ಎಷ್ಟು ಚೆನ್ನಾಗಿ ಮೋಡ ಕವಿದಿದೆ, ನೋಡಿ."

ಆದರೆ ಗಜರಾಜಸಿಂಹನ ಗಂಭೀರತೆ ದೂರವಾಗಲಿಲ್ಲ. "ಮೋಡವೇನೋ ಕವೀತಿದೆ. ಆದರೆ ಅದು ಒಳ್ಳೇದಕ್ಕೋ ಅನ್ನೋದು ಅನುಮಾನ," ಹೀಗೆ ಹೇಳಹೇಳುತ್ತಿದ್ದಂತೆ ಅವನ ಮುಖದ ಮೇಲೆ ವ್ಯಂಗ್ಯವಾದ ಒಂದು ನಗೆ ಸುಳಿಯಿತು.

ಜ್ವಾಲಾಪ್ರಸಾದ ಮೌನವಾಗಿದ್ದ. ಗಜರಾಜಸಿಂಹ ಕೆರಳಿದ್ದುದು ಸ್ಪಷ್ಟವಾಗಿತ್ತು. ಆದರೆ ಅದಕ್ಕೆ ಕಾರಣವೇನೆಂಬುದು ಮಾತ್ರ ಜ್ವಾಲಾಪ್ರಸಾದನಿಗೆ ಹೊಳೆಯಲಿಲ್ಲ. ಗಜರಾಜಸಿಂಹ ಮಾತನಾಡುವುದನ್ನೇ ಕಾಯುತ್ತ ಅವನು ಸುಮ್ಮನೆ ಕುಳಿತುಕೊಂಡ.

ಗಜರಾಜಸಿಂಹ ಮಾತನಾಡಲೆಂದೇ ಬಂದಿದ್ದವನು. "ಮೋಡ ಕವಿದಿರೋದರಿಂದಾಗಿ ಖಂಡಿತವಾಗಿಯೂ ಮಳೆಯಾಗುತ್ತೆ. ಆದರೆ ಆ ಮಳೆಯ ಸ್ವರೂಪ ಹೇಗಿರುತ್ತೆ ಅಂತ ಹೇಳೋದು ಕಷ್ಟ, ನೋಡಿ, ಜ್ವಾಲಾಬಾಬು!"

ಈಗ ನಗುವುದು ಜ್ವಾಲಾಪ್ರಸಾದನ ಸರದಿ. "ನೀವು ಒಗಟಾಗಿ ಮಾತನಾಡ್ತಿದೀರಿ, ಠಾಕೂರ್ ಸಾಹೇಬ್. ಯಾಕೆ, ಈಚೆಗೆ ಏನಾದರೂ ವಿಶೇಷ ನಡೀತೆ?"

"ವಿಶೇಷ ಇಲ್ಲದೆ ಹೋಗಿದ್ದರೆ ಇಷ್ಟು ಹೊತ್ತಿನಲ್ಲಿ ಮನೆಬಿಟ್ಟು ಹೊರಡೋ ಆಸಾಮಿಯೇ ನಾನು. ಠಾಕೂರ್ ಗಜರಾಜಸಿಂಹ ಮಧ್ಯಾಹ್ನಕ್ಕೆ ಮುಂಚೆ, ಸ್ನಾನ ಪೂಜೆ ಮಾಡದೆ ಮನೆಬಿಟ್ಟು ಹೊರಟಿರಬೇಕಾದರೆ ಖಂಡಿತವಾಗಿಯೂ ಏನೋ ವಿಶೇಷ ನಡೆದಿದೆ; ಅಷ್ಟೇ ಅಲ್ಲ, ಆ ವಿಶೇಷ ತಕ್ಕಮಟ್ಟಿಗೆ ಗಂಭೀರವಾದದ್ದು ಸಹ ಅಂತ ತಿಳಕೊಳ್ಳಿ." ಗಜರಾಜಸಿಂಹ ಒಂದು ಒಣನಗೆ ನಕ್ಕ.

ಮಿರ್ ಸಾಹೇಬರನ್ನು ಕಂಡು ಬಂದಮೇಲೆ ಜ್ವಾಲಾಪ್ರಸಾದನ ಮನಸ್ಸಿಗೆ ಒಂದು ಬಗೆಯ ದಣಿವಾಗಿತ್ತು. ಆ ಮಾನಸಿಕ ಅವಸ್ಥೆಯಲ್ಲಿ ಅವನಿಗೆ ಗಜರಾಜ

ಸಿಂಹನ ಮಾತಿನ ವೈಖರಿ ರುಚಿಸಲಿಲ್ಲ. ಅಷ್ಟುಹೊತ್ತಿಗೆ ಮಳೆ ಬೀಳತೊಡಗಿತ್ತು. ಮೂಡಣಗಾಳಿಯು ತಣ್ಣನೆಯು ಒಂದು ಅಲೆ ಕೋಣೆಯೊಳಗೆ ಬೀಸಿತು. ಜೋರಾಗಿ ಬೀಳುತ್ತಿದ್ದ ಮಳೆಯು ದಪ್ಪ ದಪ್ಪ ಹನಿಗಳ ಶಬ್ದ ಒಂದು ಬಗೆಯು ಸಂಗೀತರೂಪವನ್ನು ಧಾರಣೆಮಾಡಿತ್ತು. ಜ್ವಾಲಾಪ್ರಸಾದ ಕೊಂಚಹೊತ್ತು ಮಳೆಮೋಡಗಳನ್ನು ನೋಡು ತ್ತಿದ್ದು ಹೇಳಿದ, "ನೀವು ತುಂಬ ಕೋಪದಲ್ಲಿದ್ದೀರಿ, ಠಾಕೂರ್ ಸಾಹೇಬ್. ಹೇಳಿ, ಏನಾಯಿತು ?"

ಗಜರಾಜಸಿಂಹ ಗಂಟಲು ಸರಿಪಡಿಸಿಕೊಳ್ಳುತ್ತ ಉತ್ತರಿಸಿದ, "ಬನಿಯಾ ರಾಜ ನಾಗೋಕ್ಕೆ ಹೊರಟಿದಾನೆ, ನಾಯಬ್ ಸಾಹೇಬ್."

"ಅದರಲ್ಲಿ ಆಶ್ಚರ್ಯವೇನಿದೆ ?" ಜ್ವಾಲಾಪ್ರಸಾದ ಗಜರಾಜಸಿಂಹನ ಮಾತಿಗೆ ಟಿಪ್ಪಣಿ ಸೇರಿಸಿದ. "ಈ ಯುಗದಲ್ಲಿ ಅಧಿಕಾರ ಭುಜಬಲದಲ್ಲಿಲ್ಲ, ರೂಪಾಯಿಯಲ್ಲಿದೆ. ಹಾಗೆ ನೋಡಿದರೆ ಇಂಗ್ಲಿಷಿನೋರು ಸಹ ಬನಿಯರೇ ಅಲ್ಲವೆ ? ಸಪ್ತಸಮುದ್ರ ದಾಟಿ ವಿಲಾಯಿತಿಯಿಂದ ಇಲ್ಲಿಗೆ ವ್ಯಾಪಾರ ಮಾಡೋಕ್ಕೆ ಅಂತ ಬಂದವರು ಇವತ್ತು ಇಡೀ ಹಿಂದುಸ್ಥಾನದ ಮೇಲೆ ರಾಜ್ಯಭಾರ ನಡಸ್ತಿದಾರೆ."

"ಇಂಗ್ಲಿಷಿನೋರು ಬನಿಯರು ಅಂತ ಯಾರು ಹೇಳಿದರು ನಿಮಗೆ ?" ಗಜರಾಜ ಸಿಂಹ ಸಿಟ್ಟಿನಿಂದ ಹೇಳಿದ. "ಇಂಗ್ಲಿಷಿನೋರು ದೊಡ್ಡ ವಿದ್ವಾಂಸರು; ನಮ್ಮಲ್ಲಿನ ಬ್ರಾಹ್ಮಣರು ವಿದ್ವತ್ತಿನಲ್ಲಿ ಅವರನ್ನು ಎದುರಿಸಬಲ್ಲರೇನು ? ಆ ಜನ ಸಾಯೋದನ್ನೂ ಬಲ್ಲರು; ಹೊಡೆದು ಸಾಯಿಸೋದನ್ನೂ ಬಲ್ಲರು. ಆದ್ದರಿಂದಲೇ ರಾಜ್ಯಭಾರ ಮಾಡ್ತಿ ದಾರೆ. ಅವರ ರಾಜ್ಯದಲ್ಲಿ ಹುಲಿ–ಕುರಿಗಳೆರಡೂ ಒಂದೇ ಕೊಳದಲ್ಲಿ ನೀರು ಕುಡಿಯು ತ್ತವೆ. ನಾವು ಕ್ಷತ್ರಿಯರು ಸಹ ಅವರನ್ನು ಎದುರಿಸೋಕ್ಕೆ ಆಗುತ್ತೆಯೆ ? ಇಲ್ಲ, ನಾಯಬ್ ಸಾಹೇಬ್, ನಾನು ಹೇಳ್ತಿದ್ದ ವಿಷಯವೇ ಬೇರೆ. ನೀವು ಕೇಳಿರಬಹುದು, ಪರಭೂದಯಾಳ ಬರಜೋರಸಿಂಹನ ಮೇಲೆ ದಾವಾ ಹಾಕಿದಾನೆ. ಬರಜೋರನ ಹಿಡುವಳಿ ಜಮೀನು ಅವನಿಗೆ ಭೋಗ್ಯವಾಗಿತ್ತು."

ಜ್ವಾಲಾಪ್ರಸಾದನಿಗೆ ಎರಡು ತಿಂಗಳ ಹಿಂದೆ ತನ್ನ ಹಾಗೂ ಪ್ರಭುದಯಾಳನ ನಡುವೆ ನಡೆದಿದ್ದ ಮಾತುಕತೆ ನೆನಪಾಯಿತು. ಆ ಹೊತ್ತು ಪ್ರಭುದಯಾಳ ಕೇವಲ ಕ್ಷಣಿಕ ಆವೇಶದಲ್ಲಿ ಮಾತನಾಡುತ್ತಿದ್ದಾನೆಂದು ಜ್ವಾಲಾಪ್ರಸಾದ ಬಗೆದಿದ್ದ. ಆದರೆ ಆ ಮಾತಿನಲ್ಲಿ ಎಷ್ಟು ಆಳವಿತ್ತೆಂಬುದು ಜ್ವಾಲಾಪ್ರಸಾದನಿಗೆ ಈಗ ಅರಿವಾಯಿತು. ಅಂತೂ ಕೊನೆಗೆ ಪ್ರಭುದಯಾಳ ಸೇಡು ತೀರಿಸಿಕೊಳ್ಳಲು ಹೊರಟಿದ್ದ. "ಪ್ರಭುದಯಾಳನಿಗೆ ಬರಜೋರಸಿಂಹನಿಂದ ಎರಡು ಸಾವಿರ ರೂಪಾಯಿ ಬರೋದಿದೆ ಅಂತ ಕಾಣುತ್ತೆ," ಜ್ವಾಲಾಪ್ರಸಾದ ಮೆತ್ತಗೆ ಹೇಳಿದ.

"ಹಾಗಾದರೆ ನಾನು ಅಂದುಕೊಂಡದ್ದು ಸುಳ್ಳಲ್ಲ," ಗಜರಾಜಸಿಂಹ ಹೇಳಿದ. "ನಿಮಗೂ ಈ ವಿಷಯ ತಿಳಿದಿದೆ. ಪ್ರಭುದಯಾಳನೇ ನಿಮಗೆ ಹೇಳಿರಬೇಕು. ಆದರೆ ಬರಜೋರಸಿಂಹ

ತೊಗೊಂಡಿದ್ದದ್ದು ಕೇವಲ ಸಾವಿರ ರೂಪಾಯಿ, ನಾಯಬ್ ಸಾಹೇಬರೇ. ಇದುವರೆಗೆ ಸಾವಿರದ ಇನ್ನೂರು ರೂಪಾಯಿ ಹಿಂದಿರುಗಿಸಿರೋದಾಗಿ ಬರಜೋರ ಹೇಳ್ತಾನೆ."

"ಸಾಲಕ್ಕಿಂತ ದೊಡ್ಡ ಕೇಡು ಇನ್ನೊಂದಿಲ್ಲ. ಅದರಲ್ಲೂ ಒಂದಕ್ಕೆರಡು ಬಡ್ಡಿ ತೊಗೊಳ್ಳೋದಕ್ಕೆ ಹೆಸರುವಾಸಿಯಾಗಿರೋ ಕಸುಬುದಾರನ ಹತ್ತಿರ ಸಾಲ ಅಂದರೆ ಕೇಳ ಬೇಕೆ! ಈ ಸಾಲದಿಂದ ಅದೆಷ್ಟು ಮನೆ ಹಾಳಾಗಿದೆಯೊ! ಹಾಗಾದರೆ ಈಗ ಏನು ಮಾಡೋದು?" ಜ್ವಾಲಾಪ್ರಸಾದ ಹೇಳಿದ.

"ನನ್ನ ಮುಂದಿರೋ ಪ್ರಶ್ನೆಯೂ ಅದೇ. ಆ ಪ್ರಶ್ನೆಗೆ ಉತ್ತರ ಪಡೆಯೋಕ್ಕೆ ಅಂತಾನೇ ನಿಮ್ಮಲ್ಲಿಗೆ ಬಂದಿದೀನಿ. ಈಗ ಏನು ಮಾಡೋದು?" ಗಜರಾಜಸಿಂಹ ಚಿಂತಿತನಾಗಿ ಹೇಳಿದ. "ಬರಜೋರನ ಹತ್ತಿರ ಒಂದು ಕಿಗ್ಗಾಸೂ ಇಲ್ಲ. ಮಗಳ ಮದುವೆಯ ಭಾರದಿಂದ ನನಗೆ ಇದುವರೆಗೂ ಬಿಡುಗಡೆಯಾಗಿಲ್ಲ. ಆದಾಗ್ಯೂ ಹೇಗಾದರೂ ಮಾಡಿ ಹೆಚ್ಚೆಂದರೆ ನಾನೂರು ಐನೂರು ರೂಪಾಯಿ ವ್ಯವಸ್ಥೆ ಮಾಡಬಲ್ಲೆ. ಲಾಲಾ ಪರಭೂದಯಾಳ ನಿಮ್ಮ ಮಾತಿಗೆ ತುಂಬ ಬೆಲೆ ಕೊಡ್ತಾನೆ. ನೀವು ಮಧ್ಯಸ್ಥಿಕೆ ವಹಿಸಿ ಹೇಗಾದರೂ ಒಪ್ಪಂದ ಮಾಡಿಸಿಬಿಡಿ. ಇಲ್ಲದೆ ಹೋದರೆ... !" ಗಜರಾಜ ಸಿಂಹ ಮಾತಾಡುತ್ತ ಆಡುತ್ತ ತಕ್ಷಣ ನಿಲ್ಲಿಸಿದ.

"ಇಲ್ಲದೆ ಹೋದರೆ... !" ಗಜರಾಜಸಿಂಹ ಹೇಳಿದ್ದನ್ನೇ ಜ್ವಾಲಾಪ್ರಸಾದ ಅಸ್ಪಷ್ಟವಾಗಿ ಪುನರುಚ್ಚರಿಸಿದ. ಮತ್ತೆ ಮಾತು ಮುಂದುವರಿಸಿ ಹೇಳಿದ, "ಹೌದು, ಏನಾದರೂ ಮಾಡಲೇಬೇಕು. ಆದರೆ ನನಗೆ ಅನ್ನಿಸೋದು, ಬರಜೋರ ತನಗೆ ಅಪಮಾನ ಮಾಡಿದ ಅಂತ ಪ್ರಭುದಯಾಳ ಈ ಕ್ರಮ ತೊಗೊಂಡಿದಾನೆ. ನಿಮ್ಮ ಮಗಳ ಮದುವೆಯ ಹೊತ್ತಿನಲ್ಲಿ ಬರಜೋರಸಿಂಹ ಆಡಿದ ಮಾತು ಪ್ರಾಯಶಃ ನಿಮಗೆ ನೆನಪಿರಲಾರದು. ಅವತ್ತು ಬರಜೋರಸಿಂಹ ನಮ್ಮೆಲ್ಲರ ಮುಂದೆ ಕಾರಣವಿಲ್ಲದೆ ಪ್ರಭುದಯಾಳನಿಗೆ ಅವಮಾನ ಮಾಡಿದ್ದ. ಹಾಗೆ ಯಾಕೆ ಮಾಡಬೇಕಾಗಿತ್ತು ಹೇಳಿ?"

ಗಜರಾಜಸಿಂಹ ಯೋಚಿಸುತ್ತ ಹೇಳಿದ, "ನನಗೆ ಒಂದೂ ನೆನಪಿಗೆ ಬರೋಲ್ಲ. ಪರಭೂದಯಾಳ ನಿಮ್ಮಲ್ಲಿ ಇಳಿದಿದ್ದ. ನನಗೆ ನೆನಪಿರೋಮಟ್ಟಿಗೆ ಪರಭೂದಯಾಳ ಬರಜೋರಸಿಂಹನ ನಡುವೆ ಯಾವ ಮಾತುಕತೆಯೂ ಆಗಲಿಲ್ಲ."

ಜ್ವಾಲಾಪ್ರಸಾದ ಒಂದು ಸಪ್ಪೆಯ ನಗೆ ನಕ್ಕು ಹೇಳಿದ. "ಹೌದು, ಜನರ ಗಮನ ಸೆಳೆಯೋ ಅಂಥ ವಿಶೇಷವಾದ ಯಾವ ಬಿರುಸಿನ ಮಾತುಕತೆಯೂ ನಡೀಲಿಲ್ಲ ನಿಜ. ಯಾಕೆ ಅಂದರೆ ಪ್ರಭುದಯಾಳ ತನಗಾದ ಅಪಮಾನಾನ ನುಂಗಿಕೊಂಡು ಸುಮ್ಮನಾದ. ನಿಮ್ಮ ಬೀಗರು ರಾಜಕುಲದವರು, ಚಿಲ್ಲರೆ ವ್ಯಾಪಾರದ ಬನಿಯರಲ್ಲ ಅಂತ ಬರಜೋರ ಅಂದಿದ್ದ. ಪ್ರಭುದಯಾಳನನ್ನು ಗಮನದಲ್ಲಿಟ್ಟೇ ಆಡಿದ್ದ ಮಾತು ಅದು."

ಗಜರಾಜಸಿಂಹನ ಮುಖದ ಮೇಲೂ ನಗೆ ಮೂಡಿತು. "ಹೌದು, ನನಗೂ

ಕೊಂಚ ಕೊಂಚ ನೆನಪಾಗ್ತಿದೆ. ಆದರೆ, ನಾಯಬ್ ಸಾಹೇಬರೇ, ಬರಜೋರ ಆಡಿದ್ದು ತಪ್ಪು ಮಾತೇನೂ ಅಲ್ಲವಲ್ಲ. ಪರಭೂದಯಾಳ ಎಷ್ಟು ಕೆಳಗಿಳಿದಿದಾನೆ ಅಂತ ನಿಮಗೆಲ್ಲರಿಗೂ ಗೊತ್ತಿದೆ. ಬರಜೋರ ಆಡಿದ್ದು ಸತ್ಯವಾದ ಮಾತನ್ನೇ. ಸತ್ಯವನ್ನ ತಪ್ಪುತಿಳಿದುಕೊಳ್ಳೋದು ಸರಿಯೇ!"

"ಠಾಕೂರ್ ಸಾಹೇಬ್, ಅಪ್ರಿಯವಾದ ಸತ್ಯವನ್ನ ಆಡಬಾರದು ಅಂತ ಶಾಸ್ತ್ರದಲ್ಲಿ ಬರೆದಿದೆ," ಜ್ವಾಲಾಪ್ರಸಾದ ಹೇಳಿದ.

"ಹೌದು, ಬರೆದಿದೆ. ಶಾಸ್ತ್ರದಲ್ಲಿ ಬರೆದಿರೋದು ಸರಿಯೂ ಹೌದು," ಗಜರಾಜ ಸಿಂಹ ಹೇಳಿದ. "ಆದದ್ದು ಆಗಿಹೋಯಿತು. ಬಿಲ್ಲಿನಿಂದ ಹೊರಟ ಬಾಣ, ಬಾಯಿಂದ ಹೊರಟ ಮಾತು ಎಲ್ಲಾದರೂ ವಾಪಸು ಬರೋದುಂಟೆ!" ಗಜರಾಜಸಿಂಹನ ಮುಖದ ನಗೆ ಈಗ ಮಾಯವಾಗಿತ್ತು. "ಇವತ್ತು ಸ್ಥಿತಿ ಹೇಗಿದೆ ಅಂದರೆ ಈ ದಾವದ ಸಮನ್ ಕೈಸೇರಿದಾಗಿನಿಂದ ಬರಜೋರ ಮೈಮೇಲೆ ಭೂತ ಬಂದ ಹಾಗೆ ಆಡ್ತಿದಾನೆ. ಹೊಲ ಗದ್ದೆಯ ಉಳುಮೆ–ಬಿತ್ತನೆ ಬಿಟ್ಟು ಕೋರ್ಟು ಕಚೇರಿ ಅಂತ ಅಲೆಯೋದು ಯಾರಿಗೂ ತರವಲ್ಲ. ಇವತ್ತು ಬೆಳ್ಳಂಬೆಳಗೇ ಅವನು ಪರಭೂದಯಾಳನಲ್ಲಿಗೆ ಹೋದ. ನಾನು ತಡೆಯೋದಕ್ಕೆ ಪ್ರಯತ್ನಿಸಿದೆ, ಆದರೆ ಕೇಳಬೇಕಲ್ಲ. ಬೆಳಗ್ಗೆ ಏಳು ಗಂಟೆಗೇನೇ ಶಿವಪುರಕ್ಕೆ ಹೋದವನು ಇಷ್ಟು ಹೊತ್ತಾದರೂ ವಾಪಸು ಬಂದಿಲ್ಲ. ಪರಭೂದಯಾಳನ ಮನೆ ಇರೋದು ಇವತ್ತೆಲ್ಲಾ ಮೂರು ಕೋಸ್ ದೂರದಲ್ಲಿ. ನನಗೊಂದೂ ಅರ್ಥವಾಗೋಲ್ಲ."

"ಅದರಲ್ಲಿ ಗಾಬರಿಪಡೋಕ್ಕೆ ಏನಿದೆ. ಇನ್ನೇನು ಬರ್‍ತಾನೆ ಅಂತ ಅನ್ನಿಸುತ್ತೆ. ಮಳೇನೂ ಜೋರಾಗಿ ಬೀಳ್ತಿದೆ," ಜ್ವಾಲಾಪ್ರಸಾದ ಹೇಳಿದ. "ಅಲ್ಲದೆ ಈಗ ಏನು ಮಹಾ ಹೊತ್ತಾಗಿದೆ!"

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಹೊರಗೆ ಬೀಳುತ್ತಿದ್ದ ಮಳೆಯನ್ನು ನೋಡುತ್ತ ಇಬ್ಬರೂ ಅಸ್ಪಷ್ಟವಾಗಿ ಏನನ್ನೋ ಯೋಚಿಸುತ್ತಿದ್ದರು. ಅಷ್ಟರಲ್ಲಿ ಗಜರಾಜಸಿಂಹ ಧ್ವನಿ ತೆಗೆದ, "ಬರಜೋರ್ ಬರ್‍ತಿದಾನೆ ಅಂತ ಕಾಣುತ್ತೆ, ಅಲ್ಲಿ ಆನೆಯ ಮೇಲೆ!"

ಶಿವಪುರದ ದಿಕ್ಕಿನಿಂದ ಒಂದು ಆನೆ ಬರುತ್ತಿದ್ದುದು ಜ್ವಾಲಾಪ್ರಸಾದನಿಗೆ ಕಾಣಿಸಿತು. ಆನೆಯ ಬೆನ್ನಿನ ಮೇಲೆ ಬರಜೋರಸಿಂಹ ಮಳೆಯಲ್ಲಿ ನೆನೆದು ಒದ್ದೆಮುದ್ದೆಯಾಗಿ ಕುಳಿತಿದ್ದ. ಅವನ ತಲೆಯ ಮೇಲೆ ರುಮಾಲಿತ್ತು. ಆದರೆ ಮೈಮೇಲೆ ಅಂಗಿಯಿರಲಿಲ್ಲ. ಪಂಚೆ ಯನ್ನೆತ್ತಿ ಕಚ್ಚೆ ಬಿಗಿದಿದ್ದ. ಪಂಚೆಯ ಸೊಂಟದ ಪಟ್ಟಿಯಲ್ಲಿ ವಂಶಪಾರಂಪರ್ಯವಾಗಿ ಬಂದಿದ್ದ ಕತ್ತಿಯಿತ್ತು. ಆನೆ ಗಜರಾಜಸಿಂಹನ ಮನೆಯ ದಾರಿ ಹಿಡಿದು ನಡೆದಿತ್ತು. "ಬರಜೋರ್, ಅರೆ ಓ ಬರಜೋರ್. ನಾವಿಲ್ಲಿದೀವಿ," ಗಜರಾಜಸಿಂಹ ಕೂಗು ಹಾಕಿದ.

ಬರಜೋರಸಿಂಹ ಆನೆಯನ್ನು ಜ್ವಾಲಾಪ್ರಸಾದನ ಮನೆಯ ಕಡೆ ತಿರುಗಿಸಿದ. ಆನೆಯಿಂದಿಳಿದು ಬರಜೋರಸಿಂಹ ಮೈಯಿಂದ ನೀರು ಸುರಿಸುತ್ತ ಜ್ವಾಲಾಪ್ರಸಾದನ

ದಿವಾನಖಾನೆಯ ಹೊರಗಡೆಯೇ ನಿಂತುಕೊಂಡ. "ಅವನು ಆನೇನ ತೊಗೊಳ್ಳಲಿಲ್ಲ, ಭಾವ. ಅವನಿಗೆ ಬರೀ ಜಮೀನು ಬೇಕಾಗಿದೆ, ನನ್ನ ನೂರು ಬೀಘಾ ಜಮೀನು!" ಹೀಗಂದು ಬರಜೋರಸಿಂಹ ಉನ್ಮಾದದಿಂದ ಕೂಡಿದ ಒಂದು ನಗೆ ನಕ್ಕ.

ಬರಜೋರಸಿಂಹನ ಆ ಮರುಕದ ಧ್ವನಿಯಲ್ಲಿ, ಆಮೇಲಿನ ಹುಚ್ಚುನಗೆಯಲ್ಲಿ ಅದೆಷ್ಟು ವಿವಶತೆಯಿತ್ತು, ಅದೆಷ್ಟು ನೋವಿತ್ತು ಎಂಬುದು ಜ್ವಾಲಾಪ್ರಸಾದನಿಗೆ ಅರಿವಾಯಿತು. "ಏನು, ನೀನು ಪ್ರಭುದಯಾಳನಿಗೆ ಸಾಲದ ಬದಲಿಗೆ ಈ ಆನೆ ಕೊಡಲು ಹೋಗಿದ್ದೆಯಾ?" ಅವನು ಕೇಳಿದ.

"ಹೌದು, ನಾಯಬ್ ಸಾಹೇಬ್. ಜಮೀನು ಉಳಿಸಿಕೊಳ್ಳೋ ಆಸೇಲಿ ಇವತ್ತು ಈ ಆನೆಯಿಂದಲೂ ಬೇರೆಯಾಗೋಕ್ಕೆ ತಯಾರಾಗಿದ್ದೆ. ಆದರೆ ಆನೆ ಇಡೋದು ಸುಲಭ, ಅದಕ್ಕೆ ಮೇವು ಹಾಕೋದು ಕಷ್ಟ ಅಂತ ಅಂದುಬಿಟ್ಟ. ಆ ಬನಿಯಾ ಏನು ತಾನೆ ಆನೆ ಸಾಕಬಲ್ಲ! ವಾಪಸು ಬಂದೆ!" ಹೀಗನ್ನುತ್ತ ಅನ್ನುತ್ತ ಬರಜೋರಸಿಂಹ ಜೋರಾಗಿ ನಕ್ಕ. "ಆದರೆ, ಭಾವ, ನನ್ನ ಕೈಲಿ ಸುಮ್ಮನಿರೋಕ್ಕಾಗಲಿಲ್ಲ. ಅವನ ಮನೆಬಾಗಿಲಿಗೆ ಉಗುಳಿ ಹೇಳಿದೆ, 'ಬನಿಯಾಜನ ಏನುತಾನೆ ಆನೆ ಸಾಕಿಯಾರು, ಆನೆ ಸಾಕೋದು ನಮ್ಮ ರಾಜಕುಲದವರ ಮನೆಗಳಲ್ಲಿ!' ಅಂತ."

ಜ್ವಾಲಾಪ್ರಸಾದ ಅರ್ಥಪೂರ್ಣ ದೃಷ್ಟಿಯಿಂದ ಗಜರಾಜಸಿಂಹನ ಕಡೆ ನೋಡಿದ. ಗಜರಾಜಸಿಂಹನಿಗೆ ತಕ್ಷಣವೇ ಆ ದೃಷ್ಟಿಯ ಹಿಂದಿದ್ದ ಅರ್ಥ ಗೊತ್ತಾಯಿತು. ಅವನಂದ, "ಬರಜೋರ್, ಹೀಗೆ ಬೈದಾಡೋ ಅವಶ್ಯಕತೆ ಏನಿತ್ತು? ನಿನ್ನ ಈ ಬೈಗಳದಿಂದಾಗಿಯೇ ಅವನು ನಿನ್ನ ಮೇಲೆ ದಾವಾ ಹೂಡಿರೋದು. ನನಗೂ ನಾಯಬ್ ಸಾಹೇಬರಿಗೂ ಏನು ಅನ್ನಿಸುತ್ತೆ ಅಂದರೆ, ನೀನು ಬೈದದಕ್ಕೆ ಪರಭೂದಯಾಳನ ಕ್ಷಮಾಪಣೆ ಕೇಳಿಕೊಂಡರೆ ವಿಷಯ ಸಲೀಸಾಗಿ ಬಗೆಹರಿಯುತ್ತೆ ನೋಡು."

"ನಾನು ಕ್ಷಮಾಪಣೆ ಕೇಳಬೇಕೆ? ಆ ಬನಿಯನ ಹತ್ತಿರ? ಏನು ನಾಯಬ್ ಸಾಹೇಬ್, ನೀವು ಹೀಗಂತ ಸಲಹೆ ಕೊಟ್ಟಿರಾ?" ಬರಜೋರಸಿಂಹ ಒಮ್ಮೆ ದೀರ್ಘವಾಗಿ ನಿಟ್ಟುಸಿರೆಳೆದ, "ಕಾಲ ಬದಲಾಗಿದೆ, ನಾಯಬ್ ಸಾಹೇಬ್. ಇಲ್ಲದೇ ಹೋದರೆ ಈ ಪ್ರಭುದಯಾಳನನ್ನ ರಾತ್ರಿಂರಾತ್ರಿ ಲೂಟಿ ಮಾಡಿಸ್ತಿದ್ದೆ." ಮಾತು ಬದಲಾಯಿಸುತ್ತ ಬರಜೋರಸಿಂಹ ಹೇಳಿದ, "ಇರಲಿ ಬಿಡಿ, ನಾಯಬ್ ಸಾಹೇಬ್. ನೀವೂ ಭಾವನೂ ವ್ಯರ್ಥವಾಗಿ ಈ ವಿಷಯ ತಲೆಗೆ ಹಚ್ಚಿಕೊಂಡಿದೀರಿ. ಇದು ಎಷ್ಟೇ ಆದರೂ ನಮ್ಮ ನಮ್ಮ ವಿಷಯ. ನಾನು ಪ್ರಭುದಯಾಳನ ಹತ್ತಿರ ಇದನ್ನ ಬಗೆಹರಿಸಿಕೊಳ್ತೀನಿ. ಮೂರನೆಯವರು ಯಾರೂ ಇದರಲ್ಲಿ ತಲೆಹಾಕೋ ಅವಶ್ಯಕತೆಯಿಲ್ಲ." ಹೀಗೆ ಹೇಳುತ್ತಿರುವಂತೆಯೇ ಬರಜೋರನ ಕೈ ಅನಾಯಾಸವಾಗಿ ಸೊಂಟದಲ್ಲಿದ್ದ ಕತ್ತಿಯ ಹಿಡಿಯನ್ನು ಬಿಗಿಯಿತು.

ಬರಜೋರಸಿಂಹ ಆನೆ ಹತ್ತಿ ಹೊರಟ. ಜೊತೆಗೇ ಗಜರಾಜಸಿಂಹನೂ ಎದ್ದ. "ಒಳ್ಳೇದು, ಜ್ವಾಲಾಬಾಬು. ನಾನೂ ಹೊರಟೆ. ಇದು ನಿಲ್ಲೋ ಮಳೆಯಲ್ಲ. ನನಗ

ಸ್ನಾನ–ಪೂಜೆಗೆ ಹೊತ್ತಾಯಿತು. ಮನೆ ಮುಟ್ಟುವ ಹೊತ್ತಿಗೆ ನನಗೂ ಈ ಮೊದಲ ಮಳೇಲಿ ಸ್ನಾನವಾಗಿರುತ್ತೆ. ನೀವು ಆ ಪರಭೂದಯಾಳನನ್ನು ಆದಷ್ಟುಬೇಗ ಕಂಡು ಈ ವಿಷಯಾನ ಬಗೆಹರಿಸೋ ಪ್ರಯತ್ನಮಾಡಿ. ಬರಜೋರಸಿಂಹ ತನ್ನ ಆನೆ ಮಾರೋಕ್ಕೆ ಸಿದ್ಧವಾಗಿದಾನೆ. ನಾನೂ ಒಂದಿಷ್ಟು ವ್ಯವಸ್ಥೆ ಮಾಡ್ತೀನಿ."

ಜ್ವಾಲಾಪ್ರಸಾದ ಪ್ರಭುದಯಾಳನನ್ನು ಈಗ ಸ್ವಲ್ಪ ಸ್ವಲ್ಪ ಅರ್ಥಮಾಡಿಕೊಳ್ಳಲು ಆರಂಭಿಸಿದ್ದ. ಎಷ್ಟೇ ಬೇಡವೆಂದರೂ ಪ್ರಭುದಯಾಳ–ಜ್ವಾಲಾಪ್ರಸಾದರ ಕುಟುಂಬ ಗಳ ನಡುವೆ ಆತ್ಮೀಯತೆ ಬೆಳೆಯುತ್ತಲೇ ಹೋಯಿತು. ಈ ಆತ್ಮೀಯತೆ ಬೆಳೆದಿದ್ದು ದು ಜೈದೇಯಿಯಿಂದಾಗಿ. ಪ್ರಭುದಯಾಳನ ಹೆಂಡತಿ ಜೈದೇಯಿ, ಅರ್ಥಾತ್ ಯಾರನ್ನು ಎಲ್ಲರೂ ಲಂಬರ್‌ದಾರಿಣಿಯೆಂದು ಕರೆಯುತ್ತಿದ್ದರೋ ಅವಳು, ಹಸನ್ಮುಖಿಯೂ ಸ್ನೇಹಪರಳೂ ಆಗಿದ್ದಳು. ಲಂಬರ್‌ದಾರಿಣಿ ಜ್ವಾಲಾಪ್ರಸಾದನನ್ನು ಮೈದುನನೆಂದು ಕರೆಯುತ್ತಿದ್ದಳು, ಅವನಿಂದ ಅತ್ತಿಗೆಯೆಂದು ಕರೆಸಿಕೊಂಡಿದ್ದಳು. ಗಂಡನಿಗೆ ವಿರುದ್ಧ ವಾಗಿ ಅವಳು ಬಿಚ್ಚುಗೈಯಿನ ಹೆಂಗಸು, ಉದಾರಿ. ಅವಳಲ್ಲಿ ಮಮತೆ, ಭಾವನೆ ಮುಂತಾದ ಮಾನವೀಯ ಗುಣಗಳು ತುಂಬಿದ್ದವು.

ಯಮುನಾ ಹಾಗೂ ಜೈದೇಯಿಯರ ವಯಸ್ಸಿನಲ್ಲಿ ಸಾಕಷ್ಟು ಅಂತರವಿದ್ದರೂ ಆ ಅಂತರ ಸ್ಪಷ್ಟವಾಗಿ ಎದ್ದು ಕಾಣುತ್ತಿರಲಿಲ್ಲ. ಜೈದೇಯಿಗೆ ಸುಮಾರು ಮೂವತ್ತೈದರ ವಯಸ್ಸು. ಆದರೆ ಹತ್ತೊಂಬತ್ತು ಇಪ್ಪತ್ತು ವರ್ಷ ವಯಸ್ಸಿನ ಯಮುನಳ ಮುಂದೆ ಸಮ ವಯಸ್ಕಳಂತೆ ಕಾಣಿಸುತ್ತಿದ್ದಳು. ಆದ್ದರಿಂದಲೇ ಅವಳು ಯಮುನಳ ಜೊತೆ ಸ್ನೇಹಿತೆ ಯಂತೆ ನಡೆದುಕೊಳ್ಳುತ್ತಿದ್ದಳು. ಮೊದಲ ಸಂತಾನವಾದ ಮೇಲೆ ಜೈದೇಯಿಗೆ ಮತ್ತೆ ಮಕ್ಕಳಾಗದಿದ್ದುದೇ ಇದಕ್ಕೆ ಕಾರಣವೇನೊ. ಆ ಮೊದಲ ಸಂತಾನವೆಂದರೆ ಮಗ ಲಕ್ಷ್ಮೀಚಂದ.

ತಂದೆತಾಯಿಯರಿಗೆ ಒಬ್ಬನೇ ಮಗನಾದ ಕಾರಣ ಲಕ್ಷ್ಮೀಚಂದನು ಸ್ವಭಾವತಃ ಒರಟನೂ ಸ್ವಾಭಿಮಾನಿಯೂ ಆಗಿದ್ದ. ತಂದೆಯ ಎಲ್ಲ ಗುಣಗಳೂ ಅವನಿಗೆ ಬಂದಿದ್ದವು. ವಯಸ್ಸು ಇನ್ನೂ ಹದಿನಾರಾದರೂ ಅವನು ತುಂಬ ಸಾಹಸಿ. ಅವನನ್ನು ಕಂಡರೆ ನೆರೆಹೊರೆಯವರಿಗೆ ಭಯವಾಗುತ್ತಿತ್ತು. ಬನಿಯನ ಮಗನಾಗಿಯೂ ಅವನು ಇಷ್ಟೊಂದು ಧೈರ್ಯಸಾಹಸಗಳನ್ನು ಸಂಪಾದಿಸಲು ಎರಡು ಕಾರಣಗಳಿದ್ದವು; ಒಂದು, ಲಾಲಾ ಪ್ರಭುದಯಾಳ ದೊಡ್ಡ ಜಮೀನುದಾರನಾಗಿದ್ದ ಕಾರಣ ಆಡಳಿತ ನಡಸಬೇಕಾಗಿ ಬರುತ್ತಿತ್ತು. ಎರಡು, ಲಕ್ಷ್ಮೀಚಂದ ಕಾನಪುರದಲ್ಲಿ ತನ್ನ ಮಾವನ ಮನೆಯಲ್ಲಿದ್ದು ಕೊಂಡು ಇಂಗ್ಲಿಷ್ ಶಿಕ್ಷಣ ಪಡೆಯುತ್ತಿದ್ದ. ಪಟ್ಟಣವಾಸಿಯಾದುದರಿಂದ ಅವನಲ್ಲಿ ಧೈರ್ಯ ಅರಳಿತ್ತು.

ಊಟ ಮುಗಿಸಿ ಜ್ವಾಲಾಪ್ರಸಾದ ಶಿವಪುರಕ್ಕೆ ಹೊರಟ. ಲಾಲಾ ಪ್ರಭುದಯಾಳನ ಬಂಗಲೆಯ ಮುಂದೆ ಬಂದಾಗ ಅಭ್ಯಾಸಬಲದಿಂದ ಬಂಗಲೆಯ ಹೆಬ್ಬಾಗಿಲಲ್ಲಿದ್ದ ರಾಧಾ

ಕೃಷ್ಣನ ಗುಡಿಯ ಮುಂದೆ ನಿಂತು ಕೈಯೆತ್ತಿ ಮುಗಿದು ಹೆಬ್ಬಾಗಿಲನ್ನು ಪ್ರವೇಶಿಸಿದ. ಮೆಟ್ಟಲು ಹತ್ತಿ ಮೇಲೆ ಹೋದರೆ ಮನೆಯ ಹೊರ ಅಂಗಳ; ಅದಕ್ಕೆ ಹತ್ತಿಕೊಂಡಂತೆಯೇ ಒಂದು ದೊಡ್ಡ ವರಾಂಡ. ವರಾಂಡದಲ್ಲಿ ಗದ್ದುಗೆಯ ಮೇಲೆ ಲಾಲಾ ಪ್ರಭುದಯಾಳ ದುಂಡುದಿಂಬಿಗೆ ಒರಗಿಕೊಂಡು ಕಾಲುಚಾಚಿ ಕುಳಿತಿದ್ದ. ಗದ್ದುಗೆಯ ಮುಂದೆ ನೆಲದ ಮೇಲೆ ಜಮಖಾನ ಹಾಸಿತ್ತು. ಅದರ ಮೇಲೆ ಪ್ರಭುದಯಾಳನ ಗುಮಾಸ್ತ ಲಚ್ಛೀ ರಾಮನೂ ಚುನೌತದ ಪಟವಾರಿ ಸೀತಲಾಪ್ರಸಾದನೂ ಕಾಗದಪತ್ರ ಹರಡಿಕೊಂಡು ಕುಳಿತಿದ್ದರು. ಗದ್ದುಗೆಯಿಂದ ತುಸುದೂರದಲ್ಲಿ ಬಲಕ್ಕೆ ಪೋಲೀಸ್ ಠಾಣೇದಾರ ಅಮಜದ್ ಆಲಿ ಆರಾಮ ಕುರ್ಚಿಯಮೇಲೆ ಕಾಲು ಚಾಚಿಕೊಂಡು ಆಕಾಶದ ಕಡೆ ನೋಡುತ್ತ ಕುಳಿತಿದ್ದ. ಅವನ ಕೈ ಯಾಂತ್ರಿಕವಾಗಿ ಮುಂದಿದ್ದ ಮದ್ಯದ ಪಾತ್ರೆಯಿಂದ ಬೆಳ್ಳಿಯ ಗ್ಲಾಸಿಗೆ ಮದ್ಯ ಬಗ್ಗಿಸಿ ಬಾಯಿಗೆ ಕೊಂಡೊಯ್ಯುತ್ತಿತ್ತು; ಮತ್ತೆ ಖಾಲಿ ಗ್ಲಾಸಿಗೆ ಮದ್ಯ ತುಂಬುತ್ತಿತ್ತು. ಮಗ ಲಕ್ಷ್ಮೀಚಂದ ಅಂಗಳದಿಂದಲೇ ತಂದೆಗೆ ಕೂಗಿಹೇಳಿದ, "ಅಪ್ಪಾ, ಚಾಚಾಜಿ ಬಂದಿದಾರೆ."

ಲಕ್ಷ್ಮೀಚಂದನ ಧ್ವನಿ ಕೇಳಿ ಪ್ರಭುದಯಾಳ ಕಣ್ಣೆತ್ತಿ ನೋಡಿದ; ಜ್ವಾಲಾಪ್ರಸಾದ ನನ್ನು ಕಂಡವನೇ ಎದ್ದುನಿಂತ. ಗುಮಾಸ್ತೆ ಪಟವಾರಿಗಳು ಕಾಗದಪತ್ರಗಳನ್ನು ಮುಚ್ಚಿದರು; ಪಟವಾರಿ ಸೀತಲಾಪ್ರಸಾದ ಕೈಜೋಡಿಸಿಕೊಂಡು ದೂರಸರಿದು ನಿಂತ. ಅಮಜದ್ ಆಲಿ ಕುಳಿತಲ್ಲಿಂದಲೇ ಹೇಳಿದ, "ಒಳ್ಳೆಯ ಹೊತ್ತಿಗೆ ಬಂದಿರಿ, ನಾಯಬ್ ಸಾಹೇಬ್. ಲಾಲಾ ಪ್ರಭುದಯಾಳ್, ಇನ್ನೊಂದು ಗ್ಲಾಸು ತರಿಸಿ, ಹವಾ ಎಷ್ಟು ಚೆನ್ನಾಗಿದೆ ಅಂತೀರಿ. ದಿನವೆಲ್ಲಾ ಕುಡಿದೆ; ಕುಡಿದೆನೇನು, ಕುಡಿಯುತ್ತಲೇ ಇದೀನಿ. ಮತ್ತು ಬಂದು ಮೈಯಲ್ಲಿ ಪ್ರಜ್ಞೆ ಉಳೀದಷ್ಟು ಗಡತ್ತಾಗಿ ಕುಡಿದಿದೀನಿ!" ಅಮಜದ್‌ಆಲಿ ನಗತೊಡಗಿದ.

ಆದರೆ ಜ್ವಾಲಾಪ್ರಸಾದನ ಹೃದಯದಲ್ಲಿ ಮಾತ್ರ ಮಳೆಗಾಲದ ಉಲ್ಲಾಸವಿರಲಿಲ್ಲ. ಅವನು ಕೊಂಚ ಬಿರುಸಾಗಿಯೇ ಹೇಳಿದ, "ನನಗೆ ಮದ್ಯದ ಚಟವಿಲ್ಲ, ಅದರಲ್ಲೂ ಮಧ್ಯಾಹ್ನದ ಹೊತ್ತು ಅನ್ನೋದು ನಿಮಗೆ ಚೆನ್ನಾಗಿಯೇ ಗೊತ್ತಿದೆ, ಠಾಣೇದಾರ್ ಸಾಹೇಬರೇ, ಈ ಮಳೇಲಿ ಘಾಟಮಪುರದಿಂದ ಇಲ್ಲಿಗೆ ನಡಕೊಂಡೇ ಬಂದಿರಬೇಕಾದರೆ ಯಾವುದೋ ಜರೂರಿ ಕೆಲಸವಿರಬೇಕು ಅಂತ ತಿಳೀರಿ," ಎಂದವನೇ ಪಟವಾರಿ ಸೀತಲಾ ಪ್ರಸಾದನ ಕಡೆ ತಿರುಗಿ "ಏನಯ್ಯ, ಸೀತಲಾಪ್ರಸಾದ್, ಈ ಹೊತ್ತಿನಲ್ಲಿ ನೀನು ನಿನ್ನ ಇಲಾಖೆಯಲ್ಲಿರದೆ ಇಲ್ಲಿ?" ಎಂದು ಕೇಳಿದ.

"ಹುಜೂರ್, ಲಂಬರ್‌ದಾರ್ ಸಾಹೇಬರು ಬರಹೇಳಿದ್ದರು. ತಮ್ಮಿಬ್ಬರ ಸ್ನೇಹ ಎಂಥಾದ್ದು ಅಂತ ತಿಳಿದೂ ತಿಳಿದೂ ಅವರ ಆಜ್ಞೆ ಮುರಿಯೋ ಜೂರತ್ತು ನನಗೆಲ್ಲಿ ಬರಬೇಕು!" ಸೀತಲಾಪ್ರಸಾದ ಕೊಂಚ ಗತ್ತಿನಿಂದಲೇ ಉತ್ತರಿಸಿದ. ಸೀತಲಾ ಪ್ರಸಾದನ ಈ ಉದ್ಧಟತನ ಜ್ವಾಲಾಪ್ರಸಾದನಿಗೆ ಹಿಡಿಸಲಿಲ್ಲವಾದರೂ ಅವನ ಮಾತಿನಲ್ಲಿ ತಪ್ಪೇನಿರಲಿಲ್ಲವೆಂದು ಅನ್ನಿಸಿತು. ಅವನು ಮದ್ಯ ಕುಡಿಯುತ್ತ ಕುಳಿತಿದ್ದ ಅಮಜದ

ಅಲಿಯ ಕಡೆ ಒಮ್ಮೆ ನೋಡಿದ; ಕಣ್ಣುಮುಂದೆ ತನ್ನದೇ ರೂಪ ಬಂದಂತಾಯಿತು. "ಒಳ್ಳೇದು, ನೀವಿಬ್ಬರೂ ಸ್ವಲ್ಪ ಹೊರಗಿರಿ. ಪ್ರಭುದಯಾಳರ ಜತೆ ಒಂದಿಷ್ಟು ಜರೂರೀ ಮಾತಾಡೋದಿದೆ. ಮಾತು ಮುಗಿದ ಮೇಲೆ ನಿಮ್ಮನ್ನ ಬರಹೇಳ್ತೀನಿ," ಎಂದು ಸೀತಲಾ ಪ್ರಸಾದ್, ಲಚ್ಛೀರಾಮರಿಗೆ ಹೇಳಿದ.

ಸೀತಲಾಪ್ರಸಾದ್ ಲಚ್ಛೀರಾಮರು ಹೊರಗೆ ಹೋದರು. ಅಮಜದ್ ಆಲಿ ಯಾದರೋ ಜೋರಾಗಿ ನಗುತ್ತ ಹೇಳಿದ, "ಆದರೆ ನಾಯಬ್ ಸಾಹೇಬ್, ಈ ಬಾಟಲ್ ಮುಗಿಯೋವರೆಗೆ ನಾನು ಮಾತ್ರ ಇಲ್ಲಿಂದ ಹೊರಡೋ ಹಾಗಿಲ್ಲ. ಅಲ್ಲದೆ ನಾನು ಎಷ್ಟರಮಟ್ಟಿಗೆ ಎಚ್ಚರವಾಗಿದೀನಿ ಅಂದರೆ ನೀವು ಆಡ್ತಿರೋದು ನನಗೆ ಕೇಳಿ ಸೋಲ್ಲ; ಕೇಳಿಸಿದರೂ ಅದು ನನ್ನ ತಲೇಗೆ ಹೋಗೋಲ್ಲ. ಆದ್ದರಿಂದ ನೀವು ನನ್ನ ಮುಂದೆ ನಿಸ್ಸಂಕೋಚವಾಗಿ ಮಾತನಾಡಬಹುದು."

ಇಷ್ಟುಹೊತ್ತಿಗೆ ಜ್ವಾಲಾಪ್ರಸಾದನ ಒಳಗಿನ ಬಿಗಿತ ದೂರವಾಗುತ್ತ ಬಂದಿತ್ತು. ಅವನೂ ನಗುತ್ತಲೇ ಹೇಳಿದ, "ಆ ಮಾತು ನಿಮ್ಮನ್ನ ಕುರಿತು ಹೇಳಿದ್ದಲ್ಲ, ಠಾಣೇದಾರ್ ಸಾಹೇಬರೇ. ನಮ್ಮ ಮಾತಂಕತೇಲಿ ನೀವೂ ದಯಮಾಡಿ ಭಾಗವಹಿಸೋದಾದರೆ ಅದರಿಂದ ನನಗೆ ತುಂಬ ಸಂತೋಷವೇ. ವಿಷಯ ಸ್ವಲ್ಪ ತೊಡಕಿನದು. ಅದನ್ನು ಬಿಡಿಸೋದರಲ್ಲಿ ನಿಮ್ಮ ಸಲಹೆಯಿಂದ ಸಹಾಯವಾಗುತ್ತೆ."

"ಸೇವಕ ಸಿದ್ಧನಾಗಿದಾನೆ," ಅನ್ನುತ್ತ ಅಮಜದ್ ಆಲಿ ತನ್ನ ಕುರ್ಚಿಯನ್ನು ಗದ್ದುಗೆಯ ಹತ್ತಿರಕ್ಕೆ ಎಳೆದುಕೊಂಡು ಕೂತ. ಜ್ವಾಲಾಪ್ರಸಾದ ಗುದ್ದುಗೆಯ ಮೇಲೆ ಪ್ರಭುದಯಾಳನ ಪಕ್ಕದಲ್ಲಿ ಕುಳಿತುಕೊಂಡ. ಸ್ವಲ್ಪ ಹೊತ್ತು ಮೌನವಾಗಿದ್ದು ಆಮೇಲೆ ಹೇಳಿದ, "ಲಾಲಾ ಪ್ರಭುದಯಾಳ ಸಾಹೇಬರೇ, ಈ ಬರಜೋರಸಿಂಹನ ಪ್ರಸಂಗ ಬಲು ಕೆಟ್ಟ ಸ್ವರೂಪಕ್ಕೆ ತಿರುಗಿದೆ."

ಪ್ರಭುದಯಾಳ ನಕ್ಕ, "ಅಂದರೆ ನಿಮಗೂ ಸುದ್ದಿ ತಿಳಿದಿದೆ. ನಾನು ಠಾಣೇದಾರರ ಅಮಜದ್ ಆಲಿ ಅವರಿಗೆ ತೊಂದರೆ ಕೊಟ್ಟು ಬರಮಾಡಿಕೊಂಡದ್ದು ಇದೇ ಸಂಬಂಧ ದಲ್ಲಿ. ನಿಮ್ಮ ಜೊತೆ ಇನ್ನು ಯಾವಾಗಲಾದರೂ ಅವಕಾಶಪಡೆದು ಮಾತಾಡೋಣ ಅಂತ ಯೋಚಿಸಿದ್ದೆ. ಇವತ್ತು ಬೆಳ್ಳಂಬೆಳಗೇ ಅವನು ಬಂದು ನನಗೆ ಬೆದರಿಕೆ ಹಾಕಿ ಹೋಗಿದಾನೆ. ನಾನೂ ನನ್ನ ರಕ್ಷಣೇಗೆ ಏನಾದರೊಂದು ವ್ಯವಸ್ಥೆ ಮಾಡಿಕೋಬೇಕು ತಾನೆ. ಆಂಗ್ರೇಜಿ ಸರಕಾರದ ಆಳಿಕೆ ಇದೆ, ಪೋಲೀಸ್ ಇದೆ, ಮಿಲಿಟರಿಯಿದೆ."

"ನಿಜ . . . ಆದರೆ," ಜ್ವಾಲಾಪ್ರಸಾದ ಏನೋ ಹೇಳಹೊರಟವನು ಸುಮ್ಮನಾದ. ತನ್ನ ಮನಸ್ಸಿನಲ್ಲಿರುವುದನ್ನು ಪ್ರಭುದಯಾಳನಿಗೆ ಯಾವ ರೀತಿ ಹೇಳಬೇಕೆಂದು ಅವನಿಗೆ ತಿಳಿಯದಾಯಿತು. ಅವನ ಮುಂದೆ ಬಿಡಿಸಿಟ್ಟಿದ್ದ ಚಿತ್ರದ ಪ್ರಕಾರ ಬರಜೋರಸಿಂಹ ತಪ್ಪಿತಸ್ಥನಾಗಿದ್ದ, ಬರಜೋರಸಿಂಹ ಕಾನೂನು ಭಂಗಮಾಡುವ ಅಪರಾಧಿಯಾಗಿದ್ದ, ಬರಜೋರಸಿಂಹ ಪೀಡೆಯಾಗಿದ್ದ. ಲಾಲಾ ಪ್ರಭುದಯಾಳನಿಗೆ ರಕ್ಷಣೆಯ ಅವಶ್ಯಕತೆ

ಯಿತ್ತು, ಸಹಾಯದ ಅವಶ್ಯಕತೆಯಿತ್ತು. ಮೇಲೆ ಲಾಲಾ ಪ್ರಭುದಯಾಳ ಒಂದು
ವಿಚಿತ್ರವಾದ ದಯಾಯಾಚಕ ಮುಖಮುದ್ರೆ ಹಾಕಿಕೊಂಡು ಕುಳಿತಿದ್ದ.

"'ಆದರೆ' ಅಂದರೇನು? ನೀವು ಮಾತಾಡುತ್ತ ಆಡುತ್ತ ಯಾಕೆ ನಿಲ್ಲಿಸಿದಿರಿ
ನಾಯಬ್ ಸಾಹೇಬ್?" ಅಮಜದ್ ಆಲಿ ಕೇಳಿದ.

"ಅಮಜದ್ ಆಲಿ ಸಾಹೇಬರೇ, ನಾನು ಲಾಲಾ ಪ್ರಭುದಯಾಳರಿಗೆ ಏನು ಹೇಳೋಣ
ಅಂತ ಬಂದೆ ಅಂದರೆ, ಬರಜೋರಸಿಂಹನ ಹತ್ತಿರ ಇರೋದು ಒಟ್ಟು ನೂರು ಬೀಘಾ
ಓಡುವಳಿ ಜಮೀನು. ಅದೇ ಅವನ ಜೀವನೋಪಾಯ. ಅದೇ ಅವನಿಗಿರೋ
ಆಸರೆ. ಅವನ ಜಮೀನು ಅವನಿಗೇ ಉಳಿಯೋ ಹಾಗೆ ಏನಾದರೂ ಮಾಡೋಕ
ಗೋಲ್ಲವೆ?" ಜ್ವಾಲಾಪ್ರಸಾದ ಪ್ರಭುದಯಾಳನ ಕಡೆ ನೋಡುತ್ತ ಹೇಳಿದ.

ಪ್ರಭುದಯಾಳ ಉತ್ತರಿಸಿದ, "ನಾಯಬ್ ಸಾಹೇಬ್, ಸಾಲ ಕೊಡೋದು ಅದು
ವಾಪಸು ಬರಲಿ ಅಂತಾನೇ. ಅದೇನು ದಾನವಲ್ಲ, ದಕ್ಷಿಣೆಯಲ್ಲ. ಈಗ ನೀವೆ
ಅವನಿಂದ ಸಾಲ ಸಂದಾಯವಾಗೋ ಉಪಾಯ ತಿಳಿಸಿ. ಇವತ್ತು ಅವನು ತನ್ನ ಆನೆ
ಕೊಡೋಕ್ಕೆ ಬಂದಿದ್ದ. ಆನೆ ಸಾಕಬಲ್ಲವರು ರಾಜಕುಲದವರು, ನಿನ್ನಂಥ ಚಿಲ್ಲರೆ
ವ್ಯಾಪಾರದ ಬನಿಯಾ ಜನ ಏನು ತಾನೆ ಆನೆ ಸಾಕಿಯಾರು ಅಂತ ಅವನು ಸರಿಯಾಗಿಯೆ
ಹೇಳಿಹೋದ. ತನ್ನ ದೊಡ್ಡಸ್ತಿಕೆ ತೋರಿಸಿಕೊಂಡು ನನ್ನನ್ನ ಬೈಯುವಾಗ ತಾನು ದರಿದ್ರ
ಬಿಕಾರಿ ಅನ್ನೋದನ್ನ ಅವನು ಯಾಕೆ ಯೋಚಿಸೋದಿಲ್ಲ ಅಂತ ನಾನು ನಿಮ್ಮನ್ನ ಕೇಳ್ತೀನಿ
ಜನ ತಾವು ಮಾಡಿದ್ದನ್ನ ಅನುಭವಿಸುತ್ತಾರೆ. ಇದು ದೇವರು ತೋರಿಸಿದ ದಾರಿ."

"ಆದರೆ ಅವನು ಹಾಳಾಗಿಹೋಗ್ತಾನೆ, ಲಾಲಾ ಪ್ರಭುದಯಾಳ್. ನೀವು ಸ್ವಲ್ಪ ಇದನ್ನ
ಯೋಚಿಸಿ," ಜ್ವಾಲಾಪ್ರಸಾದ ದೈನ್ಯ ತುಂಬಿದ ಅಸಹಾಯತೆಯ ಧ್ವನಿಯಲ್ಲಿ ಹೇಳಿದ

ಪ್ರಭುದಯಾಳ ಜೋರಾಗಿ ನಗಲಾರಂಭಿಸಿದ, "ನಾಯಬ್ ಸಾಹೇಬ್, ಇನ್ನೊಬ್ಬರ
ಹಾಳಾಗೋದನ್ನ ಯೋಚಿಸ್ತಾ ಕುಳಿತರೆ ನಾನು ಲೇವಾದೇವೀನೇ ನಿಲ್ಲಿಸಬೇಕಾಗುತ್ತೆ
ಒಬ್ಬ ಹಾಳಾಗ್ತಾನೆ, ಆ ಹಾಳಿನ ಮೇಲೆ ಇನ್ನೊಬ್ಬ ಮೇಲೆ ಏಳ್ತಾನೆ. ಯಾವನು
ಅಯೋಗ್ಯನೋ, ಬುದ್ಧಿಹೀನನೋ, ಅಸಂಯಮಿಯೋ ಅವನು ಹಾಳಾಗಲೇಬೇಕು
ಅವನನ್ನು ಯಾರು ತಾನೇ ಉಳಿಸಬಲ್ಲರು! ಇವೆಲ್ಲದರ ಯೋಚನೆ ಬಿಡಿ. ಭಾಗ
ಚಕ್ರ ಒಂದು ವಿಚಿತ್ರ ರೀತೀಲಿ ನಡೀತಿದೆ; ಅದು ಹಾಗೇ ವಿಚಿತ್ರವಾಗಿಯೇ ನಡೆಯುತ್ತೆ
ಈ ಪ್ರಪಂಚದಲ್ಲಿ ಯಾವನು ಸಮರ್ಥನೋ ಅವನಷ್ಟೇ ಉಳೀತಾನೆ."

ಪ್ರಭುದಯಾಳನ ಈ ಉತ್ತರ ಕೇಳಿ ಜ್ವಾಲಾಪ್ರಸಾದ ತಳಮಳಿಸಿದ. ಆದ
ಆ ತಳಮಳ ಅವನೊಳಗೆ ಬರಿಯ ಒಂದು ನೋವಾಗಿ ಉಳಿಯಿತು. ಅವನು ಇನ್ನ
ಒಮ್ಮೆ ಪ್ರಯತ್ನಿಸಿದ, "ಮನುಷ್ಯರನ್ನ ನೋಡಿ ವ್ಯವಹಾರ ಮಾಡಬೇಕಾಗುತ್ತ
ಲಾಲಾ ಪ್ರಭುದಯಾಳ್. ಬರಜೋರಸಿಂಹ ಏನು ಹೇಳಿ ಹೋಗಿದ್ದಾನೋ ಅ
ಬರಿಯ ಒಣ ಬೆದರಿಕೆಯಲ್ಲ ಅಂತ ನನಗನ್ನಿಸುತ್ತೆ. ನನಗೆ ಮನುಷ್ಯಸ್ವಭಾವ

ಪರಿಚಯ ಇರೋದಾದರೆ ಇಷ್ಟು ಹೇಳಬಲ್ಲೆ: ಅವನು ತಾನು ಅಂದದನ್ನ ಮಾಡಿಯೇ ತೀರುವ ಆಸಾಮಿ. ನೀವೇನಂತೀರಿ, ಠಾಣೇದಾರ ಸಾಹೇಬರೇ? ನೀವು ಪೋಲೀಸರು, ನಿಮಗೆ ದಿನವೂ ನಾನಾ ತರಹದ ಜನರ ಸಂಪರ್ಕವಾಗ್ತಿರುತ್ತೆ. ನಾನು ಹೇಳ್ತಿರೋದು ತಪ್ಪಲ್ಲ ತಾನೆ? "

ಅಮಜದ್ ಆಲಿ ಈ ಬಾರಿ ಸ್ವಲ್ಪ ಗಂಭೀರನಾಗಿ ಹೇಳಿದ, "ನೀವು ಹೇಳೋದು ಬಿಲ್‌ಕುಲ್ ಸರಿ. ಈ ಬರಜೋರಸಿಂಹ ಯಾವಾಗಲೂ ಮರ್ಯಾದಸ್ಥ. ಮರ್ಯಾದಸ್ಥನಾದ ಕಾರಣ ಆಡಿದಂತೆ ಮಾಡುವವನು. ಹೇಡಿತನ ಅನ್ನೋದು ಅವನನ್ನು ಸೋಂಕಲೂ ಆರದು. ಪ್ರಭುದಯಾಳರಿಗೆ ಏನೂ ವಿಪತ್ತು ಬರದ ಹಾಗೆ ನಾವೂ ನಮ್ಮ ಕೈಲಾದಮಟ್ಟಿಗೆ ನೋಡಿಕೊಳ್ತೀವಿ. ಆದರೆ ಅವರೂ ತಮ್ಮ ಎಚ್ಚರಿಕೇಲಿ ತಾವಿರಬೇಕಾಗುತ್ತೆ. ಬೇಕಾದರೆ ನಾನು ಈ ಬರಜೋರಸಿಂಹನನ್ನು ಜೈಲಿಗೆ ಕಳಿಸಬಲ್ಲೆ. ಆದರೆ ಅವನು ಠಾಕೂರ್ ಗಜರಾಜಸಿಂಹನ ಭಾಮೈದ. ಗಜರಾಜಸಿಂಹನ ಮಾತು ಕಲೆಕ್ಟರ್ ಸಾಹೇಬರು, ಕಪ್ತಾನ ಸಾಹೇಬರು ಎಲ್ಲರ ಹತ್ತಿರವೂ ನಡೆಯುತ್ತೆ."

ಪ್ರಭುದಯಾಳ ಇದ್ದಕ್ಕಿದ್ದಂತೆ ಒರಗುದಿಂಬಿನ ಕೆಳಗಿನಿಂದ ಒಂದು ಪಿಸ್ತೂಲ್ ತೆಗೆದು ಮುಂದಿಟ್ಟ. ಜ್ವಾಲಾಪ್ರಸಾದ ಆಶ್ಚರ್ಯಚಕಿತನಾಗಿ ನೋಡುತ್ತಿದ್ದ. ಪ್ರಭುದಯಾಳ್ ಹೇಳಿದ, "ಜಮೀನುದಾರಿಯೆಂದರೆ ಹುಡುಗಾಟವಲ್ಲ ಅಂತ ನನಗೆ ಗೊತ್ತಿದೆ, ನಾಯಬ್ ಸಾಹೇಬರೇ, ಯಾವನು ಸಾವಿನ ಜತೆ ಆಟ ಆಡಲು ಸಂಕೋಚಪಡುವುದಿಲ್ಲವೋ ಅವನಷ್ಟೇ ಬದುಕಬಲ್ಲ. ನಾನು ಓಬೀರಾಯನ ಕಾಲದ ಅಂಜುಬುರುಕ ಬನಿಯಾ ಅಂತ ತಿಳೀಬೇಡಿ. ಬರಜೋರಸಿಂಹನಂಥವರ ಬೆದರಿಕೆಗೆ ಸೊಪ್ಪುಹಾಕಿದರೆ ಮುಗೀತು, ಗಜರಾಜಸಿಂಹ ನನಗೆ ಭೋಗ್ಯ ಮಾಡಿರೋ ಐದು ಹಳ್ಳಿಗಳನ್ನ ಒಂದಲ್ಲ ಒಂದು ದಿನ ಕೊಳ್ತೀನಿ ಅನ್ನೋ ಕನಸನ್ನೂ ಬಿಡಬೇಕಾದೀತು. ನೀವು ನನ್ನಬಗ್ಗೆ ಯೋಚಿಸಬೇಡಿ, ನಾಯಬ್ ಸಾಹೇಬರೇ. ದೊಂಬಿಜಗಳದಲ್ಲೂ ನಾನು ಬರಜೋರಸಿಂಹನಿಗೆ ಜೋಡಿಯಾಗಬಲ್ಲೆ."

ಜ್ವಾಲಾಪ್ರಸಾದ ಲಾಲಾ ಪ್ರಭುದಯಾಳನನ್ನು ಈಗ ಯಾವ ರೂಪದಲ್ಲಿ ಕಾಣುತ್ತಿದ್ದನೋ ಅದರ ಕಲ್ಪನೆ ಸಹ ಅವನಿಗೆ ಹಿಂದೆಂದೂ ಮಾಡುವುದಾಗಿರಲಿಲ್ಲ. ಭಯ, ಭಾವನೆ, ಅಳುಕು, ಶಂಕೆಗಳೊಂದೂ ಇಲ್ಲದ ವಿಶಾಲ ಕಾಯದ ದೈತ್ಯನೊಬ್ಬನು ತನ್ನ ಮುಂದೆ ಕುಳಿತಿರುವಂತೆ ಜ್ವಾಲಾಪ್ರಸಾದನಿಗೆ ಭಾಸವಾಯಿತು. ಜೊತೆಗೇ ತಾನು ಅವನಿಗಿಂತ ಸಣ್ಣವನು, ತೀರಾ ಸಣ್ಣವನು, ಕುಬ್ಜನ ಸಮಾನ ಎಂಬ ಅನುಭವವೂ ಆಯಿತು. ಅಷ್ಟೇಅಲ್ಲ, ಅಸಂಖ್ಯಜನ ಆ ದೈತ್ಯನ ಕಾಲಕೆಳಗೆ ಹೊಟ್ಟೆಹೊಸೆಯುತ್ತಿದ್ದಾರೆ, ಅವನ ಆಜ್ಞೆ ಪಾಲಿಸುತ್ತಿದ್ದಾರೆ ಎಂದೂ ಅನ್ನಿಸಿತು.

ಈ ದುಃಸ್ವಪ್ನಕ್ಕೆ ಬೆದರಿ ಜ್ವಾಲಾಪ್ರಸಾದ ತಲೆ ಕೊಡವಿದ. ಒಮ್ಮೆಲೇ ದುಃಸ್ವಪ್ನ ದೂರವಾಯಿತು. ಅವನ ಮುಂದೆ ಒಬ್ಬ ಚಿಂತಾಗ್ರಸ್ತನಾದ, ಮುದಿಯಾದ ಬಡಕಲ

ದೇಹದ ವ್ಯಕ್ತಿ ಕುಳಿತಿದ್ದ. ಅವನ ಕೈ ಪಿಸ್ತೂಲಿನ ಭಾರಕ್ಕೆ ನಡುಗುತ್ತಿತ್ತು. ಅ
ಜೊತೆಗೇ ಅವನ ಭಯಾನಕವೂ ಕುರೂಪವೂ ಆದ ಮುಖದಮೇಲೆ ರಾಕ್ಷಸ ಕಠೋ
ಹಾಗೂ ಸಂಕಲ್ಪಗಳು ಮನೆ ಮಾಡಿದ್ದವು.

ಜ್ವಾಲಾಪ್ರಸಾದ ಎದ್ದುನಿಂತ, "ನಾನು ನನ್ನ ಕರ್ತವ್ಯ ಮಾಡಿದೀನಿ, ಲಾಲಾ ಪ್ರ
ದಯಾಳ್. ಈಗ ನನ್ನ ಮನಸ್ಸು ಹಗುರವಾಗಿದೆ. ಆದರೆ ಇಷ್ಟು ಮಾತ್ರ ಖಂಡಿ
ನಿಮ್ಮ ಮಾತು ನನಗೆ ಅರ್ಥವಾಗೋಲ್ಲ. ನಮ್ಮಗಳ ದೃಷ್ಟಿಕೋನ ಬೇರೆಬೇರೆಯಾಗಿ
ಒಳ್ಳೇದು, ಅಪ್ಪಣೆಯಾದರೆ ನಾನು ಹೊರಟೆ."

ಅದೇ ಹೊತ್ತಿಗೆ ಲಕ್ಷ್ಮೀಚಂದ ಬಂದು ಹೇಳಿದ, "ಚಾಚಾಜೀ, ಅಮ್ಮ ಹೇಳಿಕ
ದಾಳೆ. ಅವಳ ಕೈಯ ಮಿಠಾಯಿ ತಿನ್ನದೇ ನೀವು ಹೋಗೋಹಾಗಿಲ್ಲವಂತೆ, ಒ
ಬರಬೇಕಂತೆ."

## ನಾಲ್ಕು

ಬರಜೋರಸಿಂಹನ ಮೇಲಿನ ವ್ಯಾಜ್ಯದಲ್ಲಿ ಲಾಲಾ ಪ್ರಭುದಯಾಳನೇ ಗೆದ್ದ. ಸ
ಸಂದಾಯ ಎರಡು ಸಾವಿರ ರೂಪಾಯಿಗಳಿಗೆ ಡಿಕ್ರಿಯಾಯಿತು. ಬರಜೋರಸಿಂ
ನೂರು ಬೀಘಾ ಜಮೀನು ಜಪ್ತಿಯಾಯಿತು. ಜಮೀನು ಹರಾಜಿಗೆ ಬಂದ ದಿನ ಲಾ
ಪ್ರಭುದಯಾಳನ ಹೊರತು ಬೇರೆ ಯಾರೂ ಹರಾಜು ಕೂಗಲು ಹಾಜರಿರಲಿ
ಅವನು ಡಿಕ್ರಿಯ ಮೊಬಲಗಾದ ಎರಡು ಸಾವಿರ ರೂಪಾಯಿಗಳಿಗೇ ಜಮೀನು ಕೊ
ಕೊಂಡ.

ತನ್ನ ಹೆಸರಿಗೆ ಜಮೀನು ದಾಖಲು ಮಾಡಿಸಿಕೊಂಡು ಲಾಲಾ ಪ್ರಭುದಯ
ಕೋರ್ಟಿನಿಂದ ಹಿಂದಿರುಗುವ ಹೊತ್ತಿಗೆ ಸಂಜೆಯಾಗಿತ್ತು. ಘಾಟಮಪುರದಲ್ಲಿ ಅ
ಎತ್ತಿನ ಗಾಡಿ ಸಿದ್ಧವಾಗಿತ್ತು. ಗಾಡಿ ಹತ್ತಿ ಅವನು ಮನೆಯ ದಾರಿ ಹಿಡಿದು ಹೊ

ಜನವರಿ ತಿಂಗಳ ಮೊದಲ ವಾರ. ಆಕಾಶದ ತುಂಬೆಲ್ಲ ಪುಷ್ಯಮಾಸದ ಮೊ
ಕವಿದಿತ್ತು. ಲಾಲಾ ಪ್ರಭುದಯಾಳನ ಸಂಗಡ ಅವನ ಗುಮಾಸ್ತೆ ಲಚ್ಛೀರಾಮ ಮ
ಪಟವಾರಿ ಸೀತಲಾಪ್ರಸಾದರೂ ಇದ್ದರು. ಘಾಟಮಪುರದಿಂದ ಶಿವಪುರಕ್ಕೆ ಹೋಗ
ಕಾಡುದಾರಿಯಲ್ಲಿ ಗಾಡಿ ತಿರುಗಿದಾಗ ಅವನಿಗೆ ಬರಜೋರಸಿಂಹನ ಧ್ವನಿ ಕೇಳಿಸಿ
"ಲಾಲಾ ಪ್ರಭುದಯಾಳ್, ಸ್ವಲ್ಪ ನಿಲ್ಲು!"

ಗಾಡಿ ನಿಂತಿತು. ಲಾಲಾ ಪ್ರಭುದಯಾಳ ಪಿಸ್ತೂಲನ್ನು ಹೊರತೆಗೆದು ಭದ್ರವ
ಹಿಡಿದುಕೊಂಡ. ಅಷ್ಟುಹೊತ್ತಿಗೆ ಬರಜೋರಸಿಂಹ ಗಾಡಿಯ ಹತ್ತಿರ ಬಂದ. ಅ
ಬಳಿ ಯಾವ ಆಯುಧವೂ ಇರಲಿಲ್ಲ. ಅವನ ಮುಖ ಕೆಂಪೇರಿತ್ತು. ಗಾಡಿಯ ಹ

ಬಂದವನೇ ಹೇಳಿದ, "ಜಮಿನಾನು ದಾಖಲು ಮಾಡಿಸಿಕೊಂಡು ಬಂದಿದಿ, ಲಾಲಾ ಪ್ರಭು ದಯಾಳ್ ! ತಲೆಯ ಮೇಲೆ ಸಾವು ಸುತ್ತು ಹೊಡೀತಿದೆ ಅಂತ ಕಾಣುತ್ತೆ."

"ಏನು ಒದರ್‍ತಿದಿ, ಸ್ವಲ್ಪ ಹುಷಾರಾಗಿ ಮಾತಾಡು," ಲಾಲಾ ಪ್ರಭುದಯಾಳ ಬಿರುಸಾಗಿ ಹೇಳಿದ.

ಪ್ರಭುದಯಾಳನ ಕೈಲಿದ್ದ ಪಿಸ್ತೂಲು ಬರಜೋರಸಿಂಹನ ಕಣ್ಣಿಗೆ ಬಿತ್ತು. ಅವನು ನಗುತ್ತ ಹೇಳಿದ, "ಓಹೋ, ಪಿಸ್ತೂಲು ಹಿಡಕೊಂಡು ಓಡಾಡ್ತಿದೀಯೋ ! ಆದರೆ ಈ ಪಿಸ್ತೂಲು ಬನಿಯರ ಕೈಯಲ್ಲಿ ಶೋಭಿಸೋದಿಲ್ಲ, ಪ್ರಭುದಯಾಳ್," ಹೀಗಂದವನೇ ಬರಜೋರಸಿಂಹ ನಿರ್ಭೀತನಾಗಿ ಒಂದೇ ಏಟಿಗೆ ಪ್ರಭುದಯಾಳನ ಕೈಯಿಂದ ಪಿಸ್ತೂಲನ್ನು ಕಿತ್ತುಕೊಂಡ. ಪ್ರಭುದಯಾಳ ಭಯದಿಂದ ಕಿರಚಿದ, ಅವನ ಮುಖ ಬಿಳುಪಾಗಿತ್ತು. ಸೀತಲಾಪ್ರಸಾದ್ ಮತ್ತು ಲಚ್ಛೀರಾಮರು ಕೈಜೋಡಿಸಿ ಅಡಗಿ ಕುಳಿತುಕೊಂಡರು. "ಹೆದರಬೇಡ, ಲಾಲಾ. ನಾನೇನೂ ನಿನ್ನನ್ನ ಕೊಲ್ಲೋಲ್ಲ. ಆದರೆ ಇಷ್ಟು ಹೇಳ್ತೀನಿ, ಕೇಳು. ನೀನು ಜೀವಂತವಾಗಿದ್ದು ನನ್ನ ಜಮಿನಾನ್ನ ವಶಪಡಿಸಿಕೊಳ್ಳೋಕಾಗೋಲ್ಲ. ಸತ್ತಮೇಲೆ, ವಶಪಡಿಸಿಕೊಂಡದ್ದು ನಿನ್ನ ಪಾಲಿಗೆ ದಕ್ಕೋಲ್ಲ. ಆದ್ದರಿಂದ ಆ ಮೂರ್ಖತನಕ್ಕೆ ಕೈಹಾಕಬೇಡ." ಹೀಗನ್ನುತ್ತ ಬರಜೋರಸಿಂಹ ಪಿಸ್ತೂಲನ್ನು ಪ್ರಭು ದಯಾಳನ ಮುಂದೆಸೆದು, ಬೇಗ ಬೇಗ ಘಾಟಮಪುರದ ದಾರಿ ಹಿಡಿದು ಹೊರಟ.

ಪ್ರಭುದಯಾಳ ಈಗ ತನ್ನ ಗಾಡಿಯನ್ನು ಶಿವಪುರದ ಬದಲು ಜ್ವಾಲಾಪ್ರಸಾದನ ಮನೆಯ ಕಡೆ ತಿರುಗಿಸಿದ. ಅವನೊಳಗೆ ಒಂದು ವಿಚಿತ್ರ ತರದ ಭಯ ತುಂಬಿ ಕೊಂಡಿತ್ತು.

ಈಚೆಗೆ ಒಂದೆರಡು ದಿನಗಳಿಂದ ಜ್ವಾಲಾಪ್ರಸಾದನ ಆರೋಗ್ಯ ಸರಿಯಾಗಿರಲಿಲ್ಲ, ಬಲು ಕೆಟ್ಟ ನೆಗಡಿ ಕಾಡುತ್ತಿತ್ತು. ಯಮುನಾ ರಾಜಪುರಕ್ಕೆ ಮಾವ ಮುನಿಷಿ ರಾಮ ಸಹಾಯನ ಮನೆಗೆ ಹೋಗಿದ್ದಳು. ಮನೆಯಲ್ಲಿ ಜ್ವಾಲಾಪ್ರಸಾದ ಒಬ್ಬನೇ ಇದ್ದ. ಅವನು ಒಳಗಿನ ಕೋಣೆಯಲ್ಲಿ ರಜಾಯಿ ಹೊದ್ದು ಮಲಗಿದ್ದ. ಭೀಖೂ ಹೊರಗೆ ಪಡಸಾಲೆಯಲ್ಲಿ ಅಗ್ಗಿಷ್ಟಿಕೆಯ ಮುಂದೆ ಚಿಲುಮೆಯೆಳೆಯುತ್ತ ಕುಳಿತಿದ್ದ. ಪ್ರಭು ದಯಾಳನನ್ನು ನೋಡಿದವನೇ ಭೀಖೂ ಎದ್ದುನಿಂತ, "ಯಜಮಾನರಿಗೆ ಕೆಮ್ಮುಜ್ವರ ಕಾಡ್ತಾ ಇದೆ; ಮಲಗಿದಾರೆ. ತುಂಬ ಜರೂರೀ ಕೆಲಸವಿದ್ದರೆ ಹೇಳಿ, ಎಬ್ಬಿಸ್ತೀನಿ."

ಪ್ರಭುದಯಾಳ ಕಿಡಿಕಿಡಿಯಾಗಿ ಹೇಳಿದ, "ಹೌದು, ಬಹಳ ಜರೂರೀ ಕೆಲಸವಿದೆ. ಈ ಕ್ಷಣ ಎಬ್ಬಿಸು. ನಾವು ಬಂದಿದೀವಿ ಅಂತ ಹೇಳು. ಪ್ರಶ್ನೆ ಸಾವುಬದುಕಿನದು."

"ಅರೆ ಬಾಪ್‌ರೇ," ಭೀಖೂ ಒದರಿದ. "ಹಾಗಾದರೆ ಇರಿ, ಬೈಠಕ್‌ಖಾನೆಯ ಬಾಗಿಲು ತೆಗೀತೀನಿ." ಭೀಖೂ ಬೈಠಕ್‌ಖಾನೆಯ ಬಾಗಿಲು ತೆಗೆದು ಜ್ವಾಲಾಪ್ರಸಾದನಿಗೆ ಪ್ರಭುದಯಾಳ ಬಂದಿರುವ ಸುದ್ದಿ ತಿಳಿಸಲು ಹೋದ.

"ಯಜಮಾನರು ಒಳಗೆ ತಮ್ಮ ಕೋಣೆಗೇ ನಿಮ್ಮನ್ನ ಬರಹೇಳಿದಾರೆ," ಭೀಖೂ ಹಿಂದಿರುಗಿ ಬಂದು ಪ್ರಭುದಯಾಳನಿಗೆ ಹೇಳಿದ, "ಒಬ್ಬರೇ ಇದಾರೆ. ಅತ್ತಿಗೆ ರಾಜ ಪುರಕ್ಕೆ ಹೋಗಿದಾರೆ."

ಜ್ವಾಲಾಪ್ರಸಾದ ಮಲಗಿದ್ದ ಚಾರಪಾಯಿಯ ಮೇಲೆಯೇ ದಿಂಬಿಗೊರಗಿ ಕುಳಿತು ಪ್ರಭುದಯಾಳನ ದಾರಿ ನೋಡುತ್ತಿದ್ದ. "ಬನ್ನಿ, ಲಾಲಾ ಪ್ರಭುದಯಾಳ ಸಾಹೇಬ್. ಏನು ಹೇಳಲಿ, ಈಗೆರಡು ದಿನದಿಂದ ತುಂಬ ನೆಗಡಿಯಾಗಿದೆ. ಕೊಂಚ ಕೊಂಚ ಜ್ವರವೂ ಇದೆ. ಮನೆಯವರೂ ಊರಲ್ಲಿಲ್ಲ. ಹೀಗಾಗಿ ಸ್ವಲ್ಪ ಮೈಗೆ ಆಲಸ್ಯವಾಯಿತು. ಕೂತುಕೊಳ್ಳಿ. ಯಾಕೋ ಬಹಳ ಗಾಬರಿಯಾಗಿರೋ ಹಾಗಿದೆಯಲ್ಲ, ಏನು ಸಮಾಚಾರ?"

ಎದುರಿಗಿದ್ದ ಖಾಲಿ ಚಾರಪಾಯಿಯ ಮೇಲೆ ಕೂರುತ್ತ ಪ್ರಭುದಯಾಳ ಹೇಳಿದ, "ನಾಯಬ್ ಸಾಹೇಬ್, ಇವತ್ತು ಬರಜೋರಸಿಂಹನ ಜಮೀನನ್ನು ದಾಖಲು ಮಾಡಿಸಿ ಕೊಂಡು ಶಿವಪುರಕ್ಕೆ ವಾಪಸು ಹೋಗ್ತಿದ್ದೆ . . ."

ಅವನ ಮಾತಿಗೆ ಅಡ್ಡವಾಗಿ ಜ್ವಾಲಾಪ್ರಸಾದ ಕೇಳಿದ, "ಏನು, ಬರಜೋರಸಿಂಹನ ಜಮೀನನ್ನ ನೀವು ಕೊಂಡುಕೊಂಡಿರಾ?"

"ನಿಮಗೆ ತಿಳೀದೆ? ಏನು ಮಾಡಲಿ, ಅವನಿಗೆ ಭಯಬಿದ್ದು ಯಾರೂ ಹರಾಜು ಕೂಗೋಕ್ಕೆ ಮುಂದಾಗಲಿಲ್ಲ. ನಾನೇ ಬಲವಂತವಾಗಿ ಹರಾಜು ಕೂಗಿ, ಕೊಳ್ಳಬೇಕಾಯಿತು.

"ಹ್ಞೂ!" ಜ್ವಾಲಾಪ್ರಸಾದ ಏನನ್ನೋ ಯೋಚಿಸಲಾರಂಭಿಸಿದ. ಆಮೇಲೆ ಖಿನ್ನನಾಗಿ ಪ್ರಭುದಯಾಳನ ಕಡೆ ನೋಡಿದ, "ನನಗೆ ಇದೊಂದೂ ತಿಳೀದು. ನಾನು ಈಚೆಗೆ ನನ್ನ ಕೆಲಸಕಾರ್ಯದಲ್ಲೇ ಮೈಮರೆತಿರ್ತೀನಿ. ಜೊತೆಗೆ ಆರೋಗ್ಯವೂ ಚೆನ್ನಾಗಿಲ್ಲ." ಒಂದು ನಿಟ್ಟುಸಿರು ಬಿಟ್ಟು ಜ್ವಾಲಾಪ್ರಸಾದ ಮುಂದುವರಿಸಿದ, "ಅಂದರೆ ನೀವು ಆ ಜಮೀನನ್ನ ನಿಮ್ಮ ಹೆಸರಿಗೆ ದಾಖಲು ಮಾಡಿಸಿಕೊಂಡಿರಿ, ಹೌದು ತಾನೆ?"

"ಹೌದು, ಇವತ್ತು ತಾನೇ ಡಿಪ್ಟಿ ಸಾಹೇಬರ ಕಚೇರೀಲಿ ದಾಖಲು ಮಾಡಿಸಿಕೊಂಡು ಕಾನಪುರದಿಂದ ಹಿಂದಿರುಗಿದೀನಿ. ಬರಜೋರಸಿಂಹನ ಮಕ್ಕಳ ಪರವಾಗಿ ಆಕ್ಷೇಪಣೆ ಹೂಡಿದ್ದರು; ಆದರೆ ಕೋರ್ಟಿನಲ್ಲಿ ಯಾರೂ ಹಾಜರಿರಲಿಲ್ಲ," ಪ್ರಭುದಯಾಳ ಹೇಳಿದ. ಭಯದಿಂದ ಅಂಜಿದ್ದಾನೋ ಎಂಬಂತೆ ಅವನ ಧ್ವನಿ ಇದ್ದಕ್ಕಿದ್ದಂತೆ ಮೆತ್ತ ಗಾಯಿತು, "ನಾಯಬ್ ಸಾಹೇಬ್, ನನ್ನ ಗಾಡಿ ಶಿವಪುರದ ಕಡೆ ತಿರುಗಿದಾಗ ಬರಜೋರ ಸಿಂಹ ಅದನ್ನ ತಡೆದು ನಿಲ್ಲಿಸಿದ. ಅವನ ಮುಖದಲ್ಲಿ ಒಂದು ತರಹದ ವಿಚಿತ್ರವಾದ ಹುಚ್ಚು ಕುಣೀತ್ತಿತ್ತು. ನನ್ನ ಪ್ರಾಣ ತೆಗೀತೀನಿ ಅಂತ ಹೆದರಿಸಿದಾನೆ."

ತನ್ನ ಎದುರಿಗೆ ಕುಳಿತಿದ್ದ ವ್ಯಕ್ತಿಯ ಬಗ್ಗೆ ಜ್ವಾಲಾಪ್ರಸಾದನಿಗೆ ಭಯಂಕರ ಅಸಹ್ಯ ವುಂಟಾಯಿತು. ಅವನು ಸ್ವಲ್ಪ ಬಿರುಸಾಗಿಯೇ ಹೇಳಿದ, "ಲಾಲಾ ಪ್ರಭುದಯಾಳ್, ಅವನೇನೂ ಈ ಬೆದರಿಕೆಯನ್ನ ಹೊಸದಾಗಿ ಹಾಕ್ತಿಲ್ಲ ಅಂತ ನಿಮಗೆ ಗೊತ್ತಿದೆ. ಅವನ ಮೇಲೆ ನೀವು ಯಾವತ್ತು ದಾವಾ ಹಾಕಿದರೋ ಅವತ್ತಿನಿಂದಲೇ ಅವನು ಹುಚ್ಚನಾಗಿ

ದಾನೆ. ಆದ್ದರಿಂದ ನನಗೆ ಇದರಲ್ಲಿ ಏನೂ ಹೊಸದಾಗಲೀ, ವಿಚಿತ್ರವಾಗಲೀ ಕಾಣ್ತಾ ಇಲ್ಲ. ನಿಮ್ಮ ಹತ್ತಿರ ಸದಾ ಪಿಸ್ತೂಲು ಇದ್ದೇ ಇರುತ್ತೆ. ಠಾಣೇದಾರ ಅಮಜದ್ ಅಲಿ ನಿಮ್ಮನ್ನ ಕಾಪಾಡೋ ಭಾರ ಹೊತ್ತಿದಾನೆ. ಅಂದಮೇಲೆ ನಿಮಗೆ ಯಾಕೆ ಹೆದರಿಕೆ ? "

ಪ್ರಭುದಯಾಳ ಸ್ವಲ್ಪ ಅನುಮಾನಿಸುತ್ತ ಹೇಳಿದ, "ಹೌದು, ಅದೇನೋ ಸರಿ. ಹೆದರಿಕೆಗೆ ಅವಕಾಶವಿಲ್ಲ. ಆದರೆ ಏನೋ ಆಗಬಾರದ್ದು ಆಗೋದಿದೆ ಅಂತ ನನಗನ್ನಿ ಸುತ್ತೆ. ನಾಳೆಯೇ ನಾನು ಅವನ ಜಮೀನನ್ನ ವಶಕ್ಕೆ ತೊಗೋಬೇಕಾಗಿದೆ."

"ಅದು ಸರಿ, ಆ ಜಮೀನನ್ನ ವಶಪಡಿಸಿಕೊಳ್ಳೋಕ್ಕೆ ಕಾಯಿದೆಯ ಪ್ರಕಾರ ನಿಮಗೆ ಪೂರ್ತಿ ಹಕ್ಕಿದೆ. ಆದರೆ ಕೊಯ್ಲಾಗೋವರೆಗೂ ನೀವು ತಡೆಯೋದು ಒಳ್ಳೇದು," ಜ್ವಾಲಾಪ್ರಸಾದ ಉದಾಸೀನನಾಗಿ ಹೇಳಿದ.

"ಆ ಜಮೀನು ನನ್ನದು, ಫಸಲು ಜಮೀನಿನದು. ಆದ್ದರಿಂದ ಫಸಲೂ ನನ್ನದೇ. ನಾಯಬ್ ಸಾಹೇಬ್, ಆ ಜಮೀನನ್ನ ವಶಪಡಿಸಿಕೊಳ್ಳೋದರಲ್ಲಿ ನೀವು ನನಗೆ ಸಹಾಯ ಮಾಡಬೇಕಾಗುತ್ತೆ. ಇದನ್ನ ಹೇಳೋಣ ಅಂತಾನೇ ಬಂದೆ."

ಜ್ವಾಲಾಪ್ರಸಾದ ಸ್ವಲ್ಪ ಹೊತ್ತು ಸುಮ್ಮನಿದ್ದ. ಆಮೇಲೆ ಇದ್ದಕ್ಕಿದ್ದಂತೆ ತನ್ನ ಸಮಸ್ತ ಸಾಹಸವನ್ನೂ ಒಟ್ಟುಗೂಡಿಸಿ ಹೇಳುತ್ತಿದ್ದಾನೆಯೋ ಎಂಬಂತೆ, "ಕ್ಷಮಿಸಿ, ಪ್ರಭುದಯಾಳ್. ಈ ವಿಷಯದಲ್ಲಿ ತಲೆಹಾಕೋಕ್ಕೆ ನಾನು ತಯಾರಿಲ್ಲ. ಕಾಯಿದೆ ನಿಮ್ಮ ಪರವಾಗಿದೆ ಅಂತ ನಾನು ಬಲ್ಲೆ, ಆದರೆ ಧರ್ಮ ನಿಮ್ಮ ಜೊತೆಗಿಲ್ಲ ಅನ್ನೋದನ್ನೂ ಬಲ್ಲೆ. ಅಲ್ಲದೆ ನೀವೇ ನೋಡ್ತಿದೀರಿ. ನನ್ನ ಆರೋಗ್ಯ ನೆಟ್ಟಗಿಲ್ಲ. ಈಗ ಸಹ ಜ್ವರ ಕಾಯ್ತಾ ಇದೆ."

ಪ್ರಭುದಯಾಳನ ಮುಖ ಕೆಂಪೇರಿತು, "ನೀವು ಹೇಳೋದು ಸರಿ, ನಾಯಬ್ ಸಾಹೇಬ್. ಧರ್ಮ ನನ್ನ ಜೊತೆಗಿಲ್ಲ! ಆದರೆ ಅದು ಯಾರ ಜೊತೆಗಿದೆ ಅಂತ ಯಾರಾದರೂ ಸ್ವಲ್ಪ ನನಗೆ ಹೇಳಲಿ! ನೀವು ನನ್ನವರು ಅಂದುಕೊಂಡು ನಿಮ್ಮ ಬಳಿ ಬಂದೆ; ಹಾಗಂದುಕೊಂಡೇ ನಿಮ್ಮ ಸಹಾಯ ಅಪೇಕ್ಷಿಸಿದೆ. ಆದರೆ ನಿಮಗೆ ಠಾಕೂರ್ ಗಜರಾಜಸಿಂಹನ ಹತ್ತಿರವೂ ಗಾಢವಾದ ವ್ಯವಹಾರವಿದೆ ಅನ್ನೋದು ಮರೆತುಹೋಗಿತ್ತು. ಎಷ್ಟೇ ಆದರೂ ಬರಜೋರಸಿಂಹ ಗಜರಾಜಸಿಂಹನ ಭಾವ್ಮೈದ ತಾನೇ! ಒಳ್ಳೇದು, ನಿಮಗೆ ಹೆಚ್ಚು ತೊಂದರೆ ಕೊಡೋಲ್ಲ."

ಪ್ರಭುದಯಾಳ ತೆಪ್ಪಗೆ ತಲೆ ತಗ್ಗಿಸಿಕೊಂಡು ಹೊರಟುಹೋದ. ಜೊತೆಗೇ ಜ್ವಾಲಾಪ್ರಸಾದನ ಎದೆಯಲ್ಲಿ ಒಂದು ಬಗೆಯ ಅಶಾಂತಿ ತುಂಬಿಹೋದ.

ಜ್ವಾಲಾಪ್ರಸಾದ ಈ ಮಾತುಕತೆಯನ್ನು ಮರೆತು ಮಲಗಲು ಎಷ್ಟೇ ಪ್ರಯತ್ನ ಪಟ್ಟರೂ ಅದು ಸಫಲವಾಗಲಿಲ್ಲ. ಸುಮಾರು ಎರಡು ಗಂಟೆಗಳ ಕಾಲ ಆ ಮಗ್ಗುಲಿಂದ ಈ ಮಗ್ಗುಲಿಗೆ ಹೊರಳಾಡುತ್ತಿದ್ದ. ಕೊನೆಗೆ ಸೋತು ಏಳಲೇಬೇಕಾಯಿತು. ಎದ್ದು ಬಟ್ಟೆ ಬದಲಾಯಿಸಿಕೊಂಡು "ನಾನು ಸ್ವಲ್ಪ ಠಾಕೂರ್ ಗಜರಾಜಸಿಂಹರ ಮನೆಗೆ ಹೋಗಿ ಬರ್ತೀನಿ" ಎಂದು ಭೀಖುವಿಗೆ ಹೇಳಿ ಹೊರಟ.

ಗಜರಾಜಸಿಂಹನ ಮನೆಯಲ್ಲಿ ಆಹೊತ್ತು ಕೂಟ ಸೇರಿತ್ತು. ಅವತ್ತು ಬೆಳಗ್ಗೆ ತಾನೇ ಗಜರಾಜಸಿಂಹನ ಬೀಗ ರಾಜಾ ಚಂದ್ರಭೂಷಣ ಬಂದಿಳಿದಿದ್ದ. ಅವನ ಆದರ ಸತ್ಕಾರಕ್ಕಾಗಿ ಗಾಯನ–ಕುಣಿತಗಳ ಏರ್ಪಾಡಾಗಿತ್ತು. ಊಟ–ಕೂಟದಲ್ಲಿ ಬಂದು ಭಾಗಿಯಾಗಬೇಕೆಂದು ಆ ಮಧ್ಯಾಹ್ನ ಜ್ವಾಲಾಪ್ರಸಾದನಿಗೂ ಕರೆ ಬಂದಿತ್ತು. ಆದರೆ ಆಗ ಜ್ವಾಲಾಪ್ರಸಾದನ ದೇಹಸ್ಥಿತಿ ಇದ್ದಿದ್ದೂ ಹೆಚ್ಚು ಭಾರವಾಗಿತ್ತು. ಆ ಕಾರಣದಿಂದಾಗಿ ಬರಲಾಗುವುದಿಲ್ಲವೆಂದು ಅವನು ಹೇಳಿಕಳಿಸಿದ್ದ.

ಜ್ವಾಲಾಪ್ರಸಾದ ಹೀಗೆ ಮುಸುಕು ಹೊದ್ದು ಬಂದುದನ್ನು ಕಂಡು ಗಜರಾಜಸಿಂಹನಿಗೆ ಆಶ್ಚರ್ಯವಾಯಿತು, ಅವನು ಜ್ವಾಲಾಪ್ರಸಾದನನ್ನು ಸ್ವಾಗತಿಸುತ್ತ ಹೇಳಿದ, "ಬನ್ನಿ ಬನ್ನಿ, ಜ್ವಾಲಾಬಾಬು. ಮನೇಲಿ ಒಬ್ಬರೇ ಆದ್ದರಿಂದ ಇರೋಕ್ಕೆ ಮನಸ್ಸಾಗಲಿಲ್ಲ ಅಂತ ಕಾಣುತ್ತೆ. ಈ ನೆಗಡಿಯೂ ಒಂದು ಕಾಹಿಲೆಯೇ ಹೇಳಿ! ತೊಗೊಳ್ಳಿ, ಸ್ವಲ್ಪ ಮೈ ಬೆಚ್ಚಗಾಗುತ್ತೆ! ಬರಜೋರ್, ಸ್ವಲ್ಪ ನಾಯಬ್ ಸಾಹೇಬರಿಗೂ ಗ್ಲಾಸು ತುಂಬು!"

ಬರಜೋರಸಿಂಹ ಬೆಳ್ಳಿಯ ಗ್ಲಾಸಿನಲ್ಲಿ ಮದ್ಯ ತುಂಬಿ ಜ್ವಾಲಾಪ್ರಸಾದನ ಕೈಗಿತ್ತ. ಜ್ವಾಲಾಪ್ರಸಾದ ಒಂದು ಗುಟುಕು ಕುಡಿದು ಗ್ಲಾಸನ್ನು ಕೆಳಗಿಟ್ಟ. ಆಮೇಲೆ ಸುತ್ತಲೂ ನೋಡಿದ. ಕೋಣೆಯಲ್ಲಿ ಎಣಿಸಿದಂತೆ ಕೆಲವೇ ಮಂದಿಯಿದ್ದರು. ಕಾನಪುರದಿಂದ ಬಂದಿದ್ದ ಒಬ್ಬ ಗಾಯಕಿ ಹಾಡುತ್ತಿದ್ದಳು. ರಾಜಾ ಚಂದ್ರಭೂಷಣಸಿಂಹ ಕಣ್ಣುಮಂಚ್ಚಿ ದಿಂಬಿಗೆ ಒರಗಿ ಕುಳಿತಿದ್ದ. ಮೊದಲ ನೋಟಕ್ಕೆ ಅವನು ನಿದ್ರಿಸುತ್ತಿರುವಂತೆ ಕಂಡರೂ ಮತ್ತೆ ನೋಡಿದಾಗ ರಾಜಾಸಾಹೇಬನ ಕೈ ನಡುನಡುವೆ ಮುಂದಿದ್ದ ಬೆಳ್ಳಿಯ ಲೋಟವನ್ನೆತ್ತಿ ತುಟಿಯವರೆಗೂ ಕೊಂಡೊಯ್ಯುತ್ತಿತ್ತು, ವಾಪಸು ಜಮಖಾನದ ಮೇಲಿಡುತ್ತಿತ್ತು. ರಾಜಾ ಚಂದ್ರಭೂಷಣಸಿಂಹನ ಪಕ್ಕದಲ್ಲಿಯೇ ಬರಜೋರಸಿಂಹ ಕುಳಿತಿದ್ದ. ಅವನ ಕಣ್ಣು ಕೆಂಡದಂತೆ ಉರಿಯುತ್ತಿತ್ತು. ಅವನು ಯಾವ ವೇಗದಲ್ಲಿ ರಾಜಾ ಚಂದ್ರಭೂಷಣಸಿಂಹನ ಗ್ಲಾಸಿಗೆ ಮದ್ಯ ತುಂಬುತ್ತಿದ್ದನೋ ಅದರ ಇಮ್ಮಡಿ ವೇಗದಲ್ಲಿ ತನ್ನ ಗ್ಲಾಸನ್ನು ತುಂಬಿಕೊಳ್ಳುತ್ತಿದ್ದ, ಆ ಕೂಟದಲ್ಲಿ ಜ್ವಾಲಾಪ್ರಸಾದ ಈ ಮೊದಲು ನೋಡಿರದಿದ್ದ ಒಂದೆರಡು ಹೊಸ ಮುಖಗಳಿದ್ದವು. ಅವರು ಪ್ರಾಯಶಃ ಚಂದ್ರಭೂಷಣಸಿಂಹನ ಜತೆಗೆ ಬಂದಿದ್ದವರಿರಬೇಕು.

ಎದುರಿಗೆ ಕುಣಿತ ನಡೆದಿತ್ತು. ಕನಿಷ್ಠ ಚಂದ್ರಭೂಷಣಸಿಂಹನಂತೂ ಅದನ್ನು ನೋಡುತ್ತಿರಲಿಲ್ಲ. ಆ ಕೂಟದಲ್ಲಿ ಉತ್ಸಾಹವಿಲ್ಲ, ಉಲ್ಲಾಸವಿಲ್ಲ ಎಂದು ಜ್ವಾಲಾಪ್ರಸಾದನಿಗೆ ಅನ್ನಿಸಿತು. ಜ್ವಾಲಾಪ್ರಸಾದ ಸ್ವಲ್ಪಹೊತ್ತು ಗಾನ ಕೇಳುತ್ತಿದ್ದ. ಆಮೇಲೆ ಮೆಲ್ಲಗೆ ಗಜರಾಜಸಿಂಹನ ಕಿವಿಯಲ್ಲಿ ಉಸುರಿದ, "ಠಾಕೂರ್ ಸಾಹೇಬ್, ನಿಮ್ಮ ಹತ್ತಿರ ಒಂದಿಷ್ಟು ಜರೂರಾಗಿ ಮಾತಾಡೋದಿತ್ತು. ಇಲ್ಲದೆ ಹೋದರೆ ಈ ಅನಾರೋಗ್ಯದ ಸ್ಥಿತೀಲಿ ನಾನು ಇಲ್ಲಿ ಬರ್ತಿರಲಿಲ್ಲ."

"ಹ್ಞಾ, ಹ್ಞಾ, ಪಕ್ಕದ ಕೊಟಡಿಗೆ ಹೋಗೋಣವೆ?" ಗಜರಾಜಸಿಂಹ ಕೇಳಿದ.

"ಬೇಡ, ಇಲ್ಲೇ ಒಂದು ಮೂಲೆಗೆ ಸರಿದುಕೊಂಡರಾಯಿತು. ಬರಜೋರಸಿಂಹನಿಗೂ ಸ್ವಲ್ಪ ಬರೋಕ್ಕೆ ಹೇಳಿ. ವಿಷಯ ಅವನಿಗೆ ಸಂಬಂಧಿಸಿದ್ದು," ಜ್ವಾಲಾಪ್ರಸಾದ ಹೇಳಿದ.

ಗಜರಾಜಸಿಂಹ ಗಂಭೀರನಾಗಿ ಹೇಳಿದ, "ಏನಾಗೋದಿತ್ತೋ ಅದು ಆಗಿಹೋಯಿತು. ಮುಂದೇನಾಗೋದಿದೆಯೋ ಅದು ನಮ್ಮ ಕೈಯಲ್ಲಿಲ್ಲ. ಅದನ್ನ ಯಾರೂ ತಡೆಯೋಕ್ಕಾಗೋಲ್ಲ. ನೀವು ಏನು ಹೇಳಬಯಸಿದೀರಿ ಅಂತ ನನಗೆ ಗೊತ್ತು. ಪ್ರಭುದಯಾಳ ಬರಜೋರಸಿಂಹನ ಜಮೀನನ್ನ ನಾಳೆಯೇ ವಶಪಡಿಸಿಕೊಳ್ತಾನೆ ಅಂತ ತಾನೇ!"

ಜ್ವಾಲಾಪ್ರಸಾದ ಬೆಚ್ಚಿಬಿದ್ದ, "ಇದೆಲ್ಲಾ ನಿಮಗೆ ಗೊತ್ತಿದೆಯೇ? ಆಶ್ಚರ್ಯವೇ ಸರಿ!"

"ಇದರಲ್ಲಿ ಆಶ್ಚರ್ಯಪಡೋಕ್ಕೆ ಏನಿದೆ? ಪ್ರಭುದಯಾಳ ಜಮೀನನ್ನ ತನ್ನ ಹೆಸರಿಗೆ ದಾಖಲು ಮಾಡಿಸಿಕೊಂಡು ಸುಮ್ಮನೆ ಕೂಡೋನಲ್ಲ ಅಂತ ಅವನನ್ನ ಬಲ್ಲವರು ಯಾರೂ ಹೇಳಬಲ್ಲರು. ಗದ್ದೇಲಿ ಫಸಲು ಬೆಳೆದು ನಿಂತಿದೆ. ದೇವರ ದಯದಿಂದ ಈ ಸಲ ಫಸಲು ತುಂಬಾ ಸಿಗೋ ಆಸೆಯೂ ಇದೆ. ಏನೇ ಆಗಲಿ, ಬೀಘಕ್ಕೆ ಹತ್ತು ಮಣಕ್ಕಿಂತ ಕಡಿಮೆಯಿಲ್ಲ. ಪ್ರಭುದಯಾಳ ಈ ಫಸಲನ್ನು ಬಿಡ್ತಾನೆಯೆ? ನಾಳೆಯೇ ಬರಜೋರನ ಜಮೀನನ್ನ ವಶಕ್ಕೆ ತೊಗೋತಾನೆ."

"ನಾಳೆಯೇ ಅಂತ ನೀವು ಹೇಗೆ ಹೇಳ್ತೀರಿ?"

"ನಾಯಬ್ ಸಾಹೇಬ್, ಈ ಸಂಜೆ ಅವನು ನಿಮ್ಮಲ್ಲಿಗೆ ಬಂದಿದ್ದನೋ ಇಲ್ಲವೋ? ಪ್ರಾಯಶಃ ನಿಮ್ಮಿಂದ ಅವನಿಗೆ ನಿರಾಶೆಯಾಯಿತು. ಆದ ಕಾರಣ ಅವನು ಠಾಣೇದಾರ ಅಮಜದ್ ಆಲಿ ಹತ್ತಿರ ಹೋಗಿ ಅವನನ್ನೂ ಜೊತೇಲಿ ಕರಕೊಂಡು ತನ್ನೂರಿಗೆ ಹೋದ. ಗುಂಪುಗಟ್ಟಿಕೊಂಡು ಅವನು ನಾಳೆ ಬರಜೋರನ ಜಮೀನನ್ನ ವಶಪಡಿಸಿಕೊಳ್ಳೋಕೆ ಬರ್ತಾನೆ. ದುರದೃಷ್ಟ ಅಂದರೆ ಅವನ ಹಿಂದೆ ಸರಕಾರದ ಬಲವಿರುತ್ತೆ, ಸರಕಾರದ ಕಾಯಿದೆಯಿರುತ್ತೆ, ಸರಕಾರದ ಸಿಪಾಯಿಗಳಿರ್ತಾರೆ. ಸರಕಾರದ ಸಹಾಯವಿಲ್ಲದೆ ಬರಲಿ, ಆಗ ಜಮೀನು ವಶಕ್ಕೆ ತೊಗೊಳ್ಳೋದು ಹೇಗೆ ಅಂತ ನಾವು ತೋರಿಸಿ ಕೊಡ್ತೀವಿ."

"ಹಾಗಾದರೆ ಮುಂದೇನು ಗತಿ?" ಜ್ವಾಲಾಪ್ರಸಾದ ನಿರಾಶನಾಗಿ ಹೇಳಿದ.

"ರಾಮ ಬರೆದಿಟ್ಟಹಾಗೆ ಆಗುತ್ತೆ!" ಗಜರಾಜಸಿಂಹ ತುಲಸೀದಾಸರ ಒಂದು ಚೌಪದಿಯಿಂದ ಉದ್ಧರಿಸುತ್ತ ಹೇಳಿದ, "ಈಗ ನೀವು ಹೋಗಿ ಸುಧಾರಿಸಿಕೊಳ್ಳಿ, ಜ್ವಾಲಾ ಬಾಬು. ಈ ಜ್ವರದಲ್ಲೂ ನೀವು ನಮ್ಮ ಮೇಲಿನ ಚಿಂತೆಯಿಂದ ಇಲ್ಲಿಗೆ ಓಡಿಬಂದಿರಲ್ಲ, ಅದಕ್ಕೆ ನಾವು ಆಭಾರಿಗಳು. ಆದರೆ ನೀವು ಚಿಂತೆ ಹಚ್ಚಿಕೊಳ್ಳೋದರಿಂದ ಏನೂ ಪ್ರಯೋಜನವಾಗೋಲ್ಲ. ಇದು ನಿಮಗಾಗಲೇ ಗೊತ್ತಿದೆ. ವಿಧಿನಿಯಮವನ್ನು ಯಾರಾದರೂ ಬದಲಾಯಿಸಿದೋರುಂಟೆ!"

"ಅದೇನು ಗುಸಗುಸ ನಡೀತಿರೋದು? ನಮಗೂ ಸ್ವಲ್ಪ ಹೇಳಿ," ಬರಜೋರ

ಸಿಂಹ ಕುಳಿತಲ್ಲಿಂದಲೇ ಕೂಗಿದ. ಅದೇ ಹೊತ್ತಿಗೆ ರಾಜಾ ಚಂದ್ರಭೂಷಣಸಿಂಹನೂ ಚೇತರಿಸಿಕೊಂಡು ಎದ್ದುಕುಳಿತ.

"ಏನೂ ಇಲ್ಲ, ನಾಯಬ್ ಸಾಹೇಬರು ಲಾಲಾ ಪ್ರಭುದಯಾಳನ ವಿಚಾರ ಮಾತಾಡ್ತಿದ್ದರು," ಗಜರಾಜಸಿಂಹ ಉತ್ತರಿಸಿದ.

ಬರಜೋರಸಿಂಹ ನಗತೊಡಗಿದ, "ಆಡಿ, ಆಡಿ, ನೀವಿಬ್ಬರೂ ಆ ಪ್ರಭುದಯಾಳನ ವಿಚಾರವಾಗಿ ಮಾತಾಡಿ. ಆದರೆ ಆ ಮಾತುಕತೇಲಿ ಬರಜೋರಸಿಂಹನನ್ನ ಮಾತ್ರ ಎಳೀಬೇಡಿ. ಬರಜೋರಸಿಂಹನ ಬಗ್ಗೆ ಹೇಳೋದಾದರೆ ಅವನು ತಾನೊಬ್ಬನೇ ಒಂಟಿಯಾಗಿ ಪ್ರಭುದಯಾಳನನ್ನ ನೋಡಿಕೋತಾನೆ!"

ಬರಜೋರಸಿಂಹನ ಧ್ವನಿ ಏನೋ ಒಂದು ಬಗೆಯಾಗಿತ್ತು. ಜ್ವಾಲಾಪ್ರಸಾದನಿಗೆ ಅದು ಹಿಡಿಸಲಿಲ್ಲ. ಅಷ್ಟುಹೊತ್ತಿಗೆ ರಾಜಾ ಚಂದ್ರಭೂಷಣಸಿಂಹ ದನಿ ತೆಗೆದ. "ಧೈರ್ಯದಿಂದಿರು, ಬರಜೋರ್. ನಾವು ನಿನ್ನ ಜೊತೆ ಇದೀವಿ. ರಾಜವಂಶವಿನ್ನೂ ಹೇಡಿಯಾಗಿ ಬಾಯಿಮುಚ್ಚಿ ಕೂರೋ ಅಷ್ಟು ದುರ್ಬಲವಾಗಿಲ್ಲ. ಆ ಬನಿಯನಿಗೆ ನಮಗೆ ಅವಮಾನ ಮಾಡೋ ಅಷ್ಟು ದಮ್ಮಿದೆಯೆ!"

ಜ್ವಾಲಾಪ್ರಸಾದ ಮರ್ಮಾಘಾತವಾದವನಂತೆ ಎದ್ದುನಿಂತ. ಅವನ ಮನಸ್ಸಿನಲ್ಲಿ ಏನೋ ಒಂದು ಬಗೆಯ ಭಯ ತುಂಬಿತ್ತು; ಯಾವದೋ ಶಂಕೆ ಜಾಗ್ರತವಾಗಿತ್ತು. ನಿರಾಶೆ ತುಂಬಿದ ಧ್ವನಿಯಲ್ಲಿ ಅವನು ಗಜರಾಜಸಿಂಹನಿಗೆ ಹೇಳಿದ, "ಒಳ್ಳೇದು, ಹಾಗಾದರೆ ನನಗೀಗ ಅಪ್ಪಣೆಯಾದರೆ ಮನೆಗೆ ಹೋಗಿ ಮಲಕ್ಕೋತೀನಿ. ಏನೋ ಒಂದು ವಿಧವಾದ ಚಿಂತೆ ಕಾಡ್ತಿತ್ತು ಅಂತ ಇಲ್ಲಿಗೆ ಹೊರಟುಬಂದೆ. ಮುಂದಿನದು ನಿಮ್ಮ ಕೈಯಲ್ಲೇ ಇದೆ."

ಜ್ವಾಲಾಪ್ರಸಾದನನ್ನು ಕಳಿಸಿಬರಲೆಂದು ಗಜರಾಜಸಿಂಹನೂ ಎದ್ದ, "ನೀವು ಹೋಗಿ ನಿಶ್ಚಿಂತೆಯಿಂದ ಮಲಕ್ಕೊಳಿ. ಇದು ನಮ್ಮಗಳ ವಿಷಯ. ಒಂದಲ್ಲ ಒಂದು ರೀತೀಲಿ ಬಗೆಹರಿಸಿಕೊಳ್ತೀವಿ. ನಿಮ್ಮಲ್ಲಿ ಒಂದು ಮಾತನ್ನ ಬಿನ್ನವಿಸಿಕೊಳ್ಳಬೇಕಾಗಿದೆ: ನೀವು ಇನ್ನುಮುಂದೆ ಏನೂ ತಿಳಿಯದವರ ಹಾಗೆ, ತಿಳಿಯೋಕ್ಕೆ ಇಷ್ಟವಿಲ್ಲದವರ ಹಾಗೆ ಈ ವಿಷಯದಿಂದ ದೂರ ಇದ್ದುಬಿಡಿ. ಯಾವುದನ್ನ ನೀವು ಸರಿಯಾಗಿ ಮಾಡೋಕ್ಕಾಗಲಿಲ್ಲವೋ, ಅದನ್ನ ಸರಿಯೋ ತಪ್ಪೋ ತನ್ನ ದಾರೀಲಿ ಹೋಗೋಕ್ಕೆ ಬಿಡಿ."

ಜ್ವಾಲಾಪ್ರಸಾದ ಮನೆಗೆ ಬಂದು ಮಲಗಿಕೊಂಡ. ಅವನ ಶರೀರದಲ್ಲಿ, ಮನಸ್ಸಿನಲ್ಲಿ, ಪ್ರಾಣದಲ್ಲಿ ಹೇಳತೀರದಷ್ಟು ಆಯಾಸ ತುಂಬಿಕೊಂಡಿತ್ತು.

ತಾನು ಎಷ್ಟು ಹೊತ್ತು ಮಲಗಿದ್ದನೆಂಬುದರ ಪರಿವೆಯೇ ಜ್ವಾಲಾಪ್ರಸಾದನಿಗಿರಲಿಲ್ಲ. ಗುಮಾಸ್ತ ಲಚ್ಚೀರಾಮ ಬಂದು ಎಬ್ಬಿಸಿದಾಗ ಅವನೆದ್ದು ಕಣ್ಣುಜ್ಜಿಕೊಳ್ಳುತ್ತ ಏನು ಸಮಾಚಾರವೆಂದು ಕೇಳಿದ. ಲಚ್ಚೀರಾಮ ಬಲು ಗಾಬರಿಯ ಧ್ವನಿಯಲ್ಲಿ ಹೇಳಿದ, "ಲಂಬರ್‌ದಾರಿಣಿ ತಮ್ಮನ್ನ ಈಗಲೇ ಹೇಗಿದ್ದರೆ ಹಾಗೇ ಬರಹೇಳಿದಾರೆ. ಲಂಬರ್

ದಾರ್ ಸಾಹೇಬರು ಹೋಗಿಬಿಟ್ಟರು. ಸ್ವಲ್ಪಹೊತ್ತಿನ ಹಿಂದೆ ಯಾರೋ ಅವರನ್ನ ಹೊಡೆದುಹಾಕಿದಾರೆ. ಠಾಣೇದಾರ್ ಸಾಹೇಬರನ್ನ ಶಿವಪುರಕ್ಕೆ ಕಳಿಸಿಕೊಟ್ಟು, ನಾವು ಇಲ್ಲಿ ಬಂದಿದೀವಿ."

ಜ್ವಾಲಾಪ್ರಸಾದ ಝಗ್ಗನೆದ್ದ, "ಏನಂದೆ? ಲಾಲಾ ಪ್ರಭುದಯಾಳರನ್ನ ಯಾರೋ ಹೊಡೆದು ಹಾಕಿದಾರೆಯೇ ಯಾರು? ಹೇಗೆ?"

"ಅದೆಲ್ಲಾ ಅಲ್ಲಿಗೆ ಹೋದ ಮೇಲೆ ಲಂಬರ್‌ದಾರಿಣಿಯವರಿಂದಲೇ ಗೊತ್ತಾಗ ಬೇಕು. ಆಳುಗಳಿಂದ ತಿಳಿದದ್ದು ಇಷ್ಟು: ರಾತ್ರಿ ಹತ್ತು ಹನ್ನೊಂದು ಗಂಟೆಯ ಸುಮಾರಿಗೆ ಲಂಬರ್‌ದಾರ್ ಸಾಹೇಬರು ಠಾಣೇದಾರ್ ಸಾಹೇಬರನ್ನ ಬಂಗಲೆಯ ಹೆಬ್ಬಾಗಿಲ ಬಳಿ ಕಳಿಸಿಕೊಟ್ಟು ವಾಪಸು ಬರುತ್ತಿದ್ದರು. ಹೊರಗಿನ ಕೊಟಡಿಯ ಮೆಟ್ಟಲು ಹತ್ತುತ್ತಾ ಇರುವಾಗ ಅವರು ಇದ್ದಕ್ಕಿದ್ದ ಹಾಗೆ "ಸತ್ತೆ, ಸತ್ತೆ . . . ಉಳಿಸಿ" ಅಂತ ಕಿರಚಿ ಕೊಂಡರು. ಕೂಗು ಕೇಳಿ ಆಳುಗಳು ಓಡಿಬಂದರು. ಬಂದು ನೋಡಿದರೆ ಲಂಬರ್ ದಾರ್ ಸಾಹೇಬರು ಮುಖ ಕೆಳಗಾಗಿ ಬಿದ್ದಿದ್ದಾರೆ, ಬೆನ್ನಿಂದ ರಕ್ತದ ಚಿಲುಮೆ ಹರೀತಿದೆ. ಇದನ್ನ ನೋಡಿ ಲಂಬರ್‌ದಾರಿಣಿ ಮೂರ್ಛೆಹೋದರು. ಆ ಕ್ಷಣ ಒಬ್ಬ ಆಳು ಬಂದು ನಮ್ಮನ್ನ ಕರೆದ. ಮಲಗಿದ್ದವರು ನಾವೂ ಎದ್ದು ಅಲ್ಲಿ ಹೋದೆವು. ಲಂಬರ್‌ದಾರಿಣಿಗೆ ಪ್ರಜ್ಞೆ ಬಂದ ಮೇಲೆ ತಮ್ಮನ್ನೂ ಠಾಣೇದಾರ್ ಸಾಹೇಬರನ್ನೂ ಕರಕೊಂಡು ಬರೋಕ್ಕೆ ಹೇಳಿದರು."

ಏನೋ ಆಗಲಿದೆಯೆಂದು ಜ್ವಾಲಾಪ್ರಸಾದನಿಗೆ ಮುಂದಾಗಿ ಅನಿಸಿತ್ತು. ಆದರೆ ಅದು ಇಷ್ಟು ಬೇಗ ಆಗುವುದೆಂದು ಅವನು ಕಲ್ಪನೆ ಮಾಡಿರಲಿಲ್ಲ. ಜ್ವಾಲಾಪ್ರಸಾದ ಎದ್ದು ಬೇಗಬೇಗನೆ ಬಟ್ಟೆ ಬದಲಾಯಿಸಿದ. ಪ್ರಭುದಯಾಳನ ಕೊಲೆಯ ಸುದ್ದಿ ಯನ್ನು ಠಾಕೂರ್ ಗಜರಾಜಸಿಂಹನಿಗೆ ತಿಳಿಸಿ ಬರಬೇಕೆಂದು ಒಮ್ಮೆ ಅವನ ಮನಸ್ಸಿನಲ್ಲಿ ವಿಚಾರ ಬಂತು. ಆದರೆ ಮರುಕ್ಷಣವೇ ಅದೆಲ್ಲವೂ ಬರಿಯ ವ್ಯರ್ಥವೆನಿಸಿತು. ಹೇಗೋ ಏನೋ ಠಾಕೂರ್ ಗಜರಾಜಸಿಂಹನಿಗೆ ಕೊಲೆಯ ಸುದ್ದಿ ತಿಳಿದಿದೆಯೆಂದು ಅವನ ಮನಸ್ಸು ಹೇಳಿತು. ಲಚ್ಛೀರಾಮ ಹಾಗೂ ಇತರ ಆಳುಗಳ ಜೊತೆಗೂಡಿ ಕುದುರೆಗಾಡಿ ಹತ್ತಿ ಅವನು ಆ ಕ್ಷಣವೇ ಶಿವಪುರಕ್ಕೆ ಹೊರಟ.

ಮಾರನೆಯದಿನ ರಾತ್ರಿ ಹತ್ತು ಗಂಟೆ ಸುಮಾರಿಗೆ ಪ್ರಭುದಯಾಳನ ಕ್ರಿಯಾಕರ್ಮ ಗಳನ್ನು ಮುಗಿಸಿ ಜ್ವಾಲಾಪ್ರಸಾದ ಮನೆಗೆ ಹಿಂದಿರುಗಿದಾಗ ಅವನಿಗೆ ಜೋರಾಗಿ ಜ್ವರ ಕಾಯುತ್ತಿತ್ತು. ಮೂರು ದಿನಗಳವರೆಗೆ ಮೈಮೇಲೆ ಪ್ರಜ್ಞೆಯಿಲ್ಲದೆ ಚಾರಪಾಯಿಯ ಮೇಲೆ ಬಿದ್ದಿದ್ದ. ಭೀಖೂ ರಾಜಪುರಕ್ಕೆ ಜನ ಕಳಿಸಿ ಮುನಿಷಿ ರಾಮಸಹಾಯನಿಗೂ ಯಮುನಳಿಗೂ ಅವನ ಅನಾರೋಗ್ಯದ ಸುದ್ದಿಯನ್ನು ಮುಟ್ಟಿಸಿದ. ಯಮುನಾ ಬರುವ ಸ್ಥಿತಿಯಲ್ಲಿರಲಿಲ್ಲ. ಮುನಿಷಿ ರಾಮಸಹಾಯ ಜ್ವಾಲಾಪ್ರಸಾದನನ್ನು ನೋಡಿಹೋಗಲು

ತಾನೇ ಖುದ್ದಾಗಿ ಬಂದ. ನಾಲ್ಕುದಿನಗಳ ಮೇಲೆ ಜ್ವರ ಇಳಿಯಿತು. ಜ್ವಾಲಾಪ್ರಸಾದನ ಅನಾರೋಗ್ಯದ ಕಾರಣ ಮುನಿಷಿ ರಾಮಸಹಾಯ ಘಾಟಮಪುರದಲ್ಲೇ ಉಳಿದ.

ಗುಣವಾದ ಮೇಲೆ ಜ್ವಾಲಾಪ್ರಸಾದ ಮುನಿಷಿ ರಾಮಸಹಾಯನಿಗೆ ಪ್ರಭುದಯಾಳನ ಕೊಲೆಯ ವೃತ್ತಾಂತವೆಲ್ಲವನ್ನೂ ಹೇಳಿದ. ಅದನ್ನು ಕೇಳಿ ರಾಮಸಹಾಯ ಗಂಭೀರ ನಾದ. "ಮಗು ಜ್ವಾಲಾ, ಈ ಪ್ರಸಂಗದಿಂದ ನೀನು ದೂರವಾದದ್ದೇ ಒಳ್ಳೇದಾಯಿತು. ಪ್ರಭುದಯಾಳನಿಗೆ ಒಂದಲ್ಲ ಒಂದು ದಿನ ಈ ದುರ್ಗತಿ ಒದಗಲೇಬೇಕಾಗಿತ್ತು. ಅಧರ್ಮ, ಅನಾಚಾರ ಬಹಳ ದಿನ ಊರ್ಜಿತವಾಗೋಲ್ಲ."

"ಆದರೆ... ಆದರೆ ಈ ಕಾಯಿದೆ, ಈ ವ್ಯವಸ್ಥೆಯೆಲ್ಲಾ ಯಾತಕ್ಕೋಸ್ಕರ ಇರೋದು?" ಜ್ವಾಲಾಪ್ರಸಾದ ನಿಶ್ಶಕ್ತಿ ತುಂಬಿದ ಧ್ವನಿಯಲ್ಲಿ ಹೇಳಿದ. ಆಮೇಲೆ ಏಕಾಏಕಿ ನೆನಪಾದಂತೆ, "ಹ್ಞಾ, ಮಾವ, ಬರಜೋರಸಿಂಹನ ದಸ್ತಗಿರಿಯಾಯಿತೆ ಹೇಗೆ ಅಂತ ನಿಮಗೇನಾದರೂ ಗೊತ್ತಾಯಿತೆ?" ಎಂದು ಕೇಳಿದ.

"ಬರಜೋರಸಿಂಹನಿನ್ನೂ ಸೆರೆಸಿಕ್ಕಿಲ್ಲ; ಯಾಕೆ ಅಂದರೆ ಅವನು ಘಾಟಮಪುರ ದಲ್ಲಿಲ್ಲ. ಅವನ ಹೆಂಡತಿ, ಮಕ್ಕಳು ಗಜರಾಜಸಿಂಹನ ಮನೇಲಿದಾರೆ. ಪ್ರಭುದಯಾಳನ ಕೊಲೆಯಾಗೋಕ್ಕೆ ಒಂದು ವಾರ ಮೊದಲೇ ಅವರು ಚುನೌಠದಿಂದ ಇಲ್ಲಿ ಬಂದರು. ಕೊಲೆ ಯಾದ ದಿನ ಸಂಜೆಯೇ ರಾಜಾ ಚಂದ್ರಭೂಷಣನ ಸಂಗಡ ಅವನು ಕಾನಪುರದಲ್ಲಿದ್ದ ಅಂತ ಗಜರಾಜಸಿಂಹ ಹೇಳ್ತಾನೆ."

"ಅದು ಸುಳ್ಳು, ಶುದ್ಧ ಸುಳ್ಳು," ಜ್ವಾಲಾಪ್ರಸಾದ ಆವೇಶದಿಂದ ಹೇಳಿದ. "ಅವತ್ತು ರಾತ್ರಿ ಗಜರಾಜಸಿಂಹನ ಮನೇಲಿ ಕೂಟ ಸೇರಿತ್ತು, ಮುಜರೆ ನಡೀತಿತ್ತು, ಮದ್ಯದ ಪಾತ್ರೆ ಕೈಯಿಂದ ಕೈಗೆ ಸುತ್ತಾಡ್ತಿತ್ತು. ಇದನ್ನೆಲ್ಲಾ ನಾನೇ ಕಣ್ಣಾರೆ ನೋಡಿದೀನಿ! ರಾತ್ರಿ ಒಂಬತ್ತು ಗಂಟೆಗೆ ನಾನು ಅಲ್ಲಿಂದ ವಾಪಸು ಬಂದೆ. ನಾನೂ ಆ ಕೂಟದಲ್ಲಿ ಸೇರಿದ್ದೆ."

"ಗಜರಾಜಸಿಂಹ ಹೇಳೋದು, ನೀನು ಹೊರಟ ತಕ್ಷಣವೇ ಅಷ್ಟುಹೊತ್ತಿಗೆ ಮಳೆ ನಿಂತಿದ್ದುದರಿಂದ ಕೂಟ ಮುಕ್ತಾಯವಾಯಿತು. ಮಳೆಯಿಂದಾಗಿ ಅವರು ಹೊರಡೋದು ತಡವಾಯಿತು ಅಂತ," ರಾಮಸಹಾಯ ಹೇಳಿದ. ಮತ್ತೆ ಮೆಲುದನಿಯಲ್ಲಿ "ಈ ವಿಷಯ ದಲ್ಲಿ ನೀನು ಕೈಹಾಕದಂತೆ ತಡೀರಿ ಅಂತ ಗಜರಾಜಸಿಂಹ ನನಗೆ ಅರಿಕೆ ಮಾಡಿಕೊಂಡಿದಾನೆ" ಅಂದ.

ಜ್ವಾಲಾಪ್ರಸಾದ ಸ್ವಲ್ಪ ಹೊತ್ತು ಮೌನವಾಗಿ ಯೋಚಿಸುತ್ತಿದ್ದು, ಆಮೇಲೆ ಹೇಳಿದ, "ಮಾವ ನಾನು ನಿಮ್ಮನ್ನ ಕೇಳೋದು ಇದು; ಈ ವಿಷಯದಲ್ಲಿ ನಾನು ಬಾಯಿಮುಚ್ಚಿ ಕೊಂಡಿರೋದು ಸರಿಯೆ? ನನ್ನ ಮೌನದಿಂದ ಒಬ್ಬ ಕೊಲೆಗಾರನನ್ನ ರಕ್ಷಿಸಿ, ನ್ಯಾಯ ಕಾನೂನುಗಳ ಕತ್ತು ಹಿಸುಕಲೆ? ಈ ಬ್ರಿಟಿಷ್ ಸರಕಾರ ನ್ಯಾಯ ಕಾನೂನುಗಳ ಮೇಲೆ ನಿಂತಿದೆ, ನನಗೆ ಜವಾಬ್ದಾರಿಯ ಪದವಿ ಕೊಟ್ಟು, ನನ್ನ ಮೇಲೆ ವಿಶ್ವಾಸವಿಟ್ಟಿದೆ ಅಂತ ನಿಮಗೆ ಗೊತ್ತಿದೆ. ನ್ಯಾಯಕ್ಕೆ ಅಡ್ಡಿಯಾಗಿ ಸರಕಾರಕ್ಕೆ ನಾನು ವಿಶ್ವಾಸಘಾತಕನಾಗಲೇ?"

ಜ್ವಾಲಾಪ್ರಸಾದನ ಈ ಪ್ರಶ್ನೆಗಳಿಗೆ ರಾಮಸಹಾಯನ ಬಳಿ ಉತ್ತರವಿರಲಿಲ್ಲ. ಅವನು ಸ್ವಲ್ಪ ಹೊತ್ತು ಮೌನವಾಗಿ ಯೋಚಿಸುತ್ತಿದ್ದು, ಆಮೇಲೆ ಒಂದು ನಿಟ್ಟುಸಿರುಬಿಟ್ಟು ಹೇಳಿದ, "ನೀನು ಹೇಳೋದು ಸರಿ, ಮಗು. ಕರ್ತವ್ಯದ ದಾರಿಯಿಂದ ಸರಿಯೋದು ಯಾವಾಗಲೂ ತಪ್ಪು, ನಿಜ. ಆದರೆ ನನಗೆ ಅನ್ನಿಸೋದು, ಬರಜೋರಸಿಂಹನ ಅಪರಾಧ ಕಾಯಿದೆಯ ದೃಷ್ಟೀಲಿ ಕಾಣುವಷ್ಟು ದೊಡ್ಡದೇನಲ್ಲ. ಕಾಯಿದೆಯ ಪ್ರಕಾರ ಬರಜೋರ ಸಿಂಹ ಕೊಲೆಯನ್ನೇನೋ ಮಾಡಿದಾನೆ. ಪ್ರಭುದಯಾಳನಿಗೆ ಬಂದ ದುರ್ಗತಿಯ ಬಗ್ಗೆ ನನಗೇನೂ ದುಃಖವಿಲ್ಲ. ಪ್ರಾಯಶಃ ಅವನು ಅದಕ್ಕೆ ಅರ್ಹನೂ ಆಗಿದ್ದನೇನೋ. ಆದರೆ ಮನಸೋ ಇಚ್ಛೆ ಅವನಿಗೆ ಶಿಕ್ಷೆ ಕೊಡೋ ಅಧಿಕಾರ ಬರಜೋರಸಿಂಹನಿಗಿರಲಿಲ್ಲ. ಆದ್ದರಿಂದ ನಿನಗೆ ಹೇಗೆ ಸರಿ ಅನ್ನಿಸುತ್ತೋ ಹಾಗೆ ಮಾಡು. ನಾನು ಅಡ್ಡಿ ಬರೋದಿಲ್ಲ."

ಅವತ್ತು ಸಂಜೆಯೇ ಮುನಿಷಿ ರಾಮಸಹಾಯ ರಾಜಪುರಕ್ಕೆ ಹೊರಟ. ಜ್ವಾಲಾ ಪ್ರಸಾದನಿಂದ ಬೀಳ್ಕೊಡಿಗೆ ಪಡೆಯುವಾಗ ಅವನು ಹೇಳಿದ, "ಮಗು, ಸ್ವಲ್ಪ ಹುಷಾರಾಗಿರು, ಹುಷಾರಾಗಿ ಕೆಲಸ ನಡಸು. ನೀನು ದೊಡ್ಡ ಅಧಿಕಾರಿ, ನಿನ್ನ ಮೇಲೆ ಯಾರೂ ಕೈ ಎತ್ತುವ ಧೈರ್ಯಮಾಡಲಾರರು. ಆದರೂ ಎಚ್ಚರಿಕೆಯಿಂದಿರೋದು ಒಳ್ಳೇದು. ಎಚ್ಚರಿಕೆಗೆ ನಾಶವಿಲ್ಲ ಅಂತ ಶಾಸ್ತ್ರದಲ್ಲಿ ಬರೆದಿದೆ."

ಎಂಟು ದಿನಗಳ ಮೇಲೆ ಜ್ವಾಲಾಪ್ರಸಾದ ಮ್ಯಾಜಿಸ್ಟ್ರೇಟರ ಮುಂದೆ ತನ್ನ ಹೇಳಿಕೆ ಕೊಟ್ಟ. ಅವನ ಹೇಳಿಕೆಯ ಆಧಾರದ ಮೇಲೆ ಬರಜೋರಸಿಂಹನ ದಸ್ತಗಿರಿಗೆ ವಾರಂಟ್ ಹೊರಟಿತು.

ಪ್ರಭುದಯಾಳನ ಹದಿಮೂರನೆಯ ದಿನದ ಕಾರ್ಯದಲ್ಲಿ ಜ್ವಾಲಾಪ್ರಸಾದ ಭಾಗವಹಿಸಲಿಲ್ಲ. ಅದಾದ ಹದಿನೈದು ದಿನಗಳ ಮೇಲೆ ಜೈದೇಯಿ ಮಗ ಲಕ್ಷ್ಮೀಚಂದನ ಜೊತೆಗೂಡಿ ಜ್ವಾಲಾ ಪ್ರಸಾದನ ಮನೆಗೆ ಬಂದಳು. ಹದಿಮೂರನೆಯ ದಿನದ ಕಾರ್ಯದಲ್ಲಿ ಜ್ವಾಲಾಪ್ರಸಾದ ಭಾಗವಹಿಸದಿದ್ದುದಕ್ಕೆ ಆಕ್ಷೇಪಣೆ ಮಾಡುತ್ತ ಹೇಳಿದಳು, "ದೇವರ್‌ಜೀ, ನಮ್ಮ ಪಾಲಿನ ದೈವಕ್ಕೆ ನಮ್ಮಮೇಲೆ ಅದೇನು ಮುನಿಸೋ, ನೀನೂ ನಮ್ಮಮೇಲೆ ಮುನಿಸಿ ಕೊಂಡಿದಿ! ಹದಿಮೂರನೆ ದಿನ ನಾನು ಅದೆಷ್ಟು ನಿನ್ನ ದಾರಿನೋಡಿದೆ ಅಂತೀ. ಇವರು ಹೋದಾಗಿನಿಂದ ನಿನ್ನ ದರ್ಶನವೇ ಆಗಲಿಲ್ಲ. ಈಗ ಈ ಅನಾಥ ಮಗನನ್ನೂ ಕರಕೊಂಡು ಬಂದು ನಿನ್ನ ಮೊರೆ ಹೊಕ್ಕಿದೀನಿ."

ಜ್ವಾಲಾಪ್ರಸಾದ ಜೈದೇಯಿಯ ಕಡೆ ನೋಡಿದ. ಅವಳ ಮುಖದ ಕಾಂತಿ ಇಳಿಯುತ್ತಿತ್ತು. ಮರುಕ ತುಂಬಿದ ಧ್ವನಿಯಲ್ಲಿ ಅವನು ಹೇಳಿದ, "ಅತ್ತಿಗೆ, ಬರಜೋರ ಸಿಂಹನ ವಿರುದ್ಧ ಹೇಳಿಕೆ ಕೊಟ್ಟಿದೀನಿ, ಆ ಹೇಳಿಕೆಯ ಆಧಾರದಮೇಲೆ ಅವನ ದಸ್ತಗಿರಿಗೆ ವಾರಂಟ್ ಹೊರಟಿದೆ ಅಂತ ನಿಮಗೆ ಗೊತ್ತೇ ಇದೆ. ಸಂದರ್ಭ ಹೀಗಿರೋವಾಗ ನಾನು ನಿಮ್ಮಲ್ಲಿಗೆ ಬಂದಿದ್ದರೆ ಅದು ಸರಿಕಾಣ್ತಿರಲಿಲ್ಲ."

"ಹೌದಪ್ಪ, ದೇವರ್‌ಜಿ. ನೀನು ನಮಗೆ ದೊಡ್ಡ ಆಸರೆಯಾಗಿದಿ. ಠಾಣೇದಾರ್ ಅಮಜದ್ ಅಲಿ ಇವರಿಗೆ ಅಷ್ಟು ಬೇಕಾಗಿದ್ದವನು, ಒಂದು ರೀತಿಯಲ್ಲಿ ಈ ವಿಷಯಾನೇ ಅಡಗಿಸಿಬಿಟ್ಟಿದ್ದ." ಜೈದೇಯಿ ಕಣ್ಣಲ್ಲಿ ನೀರು ತಂದುಕೊಂಡು ಹೇಳಿದಳು. "ಇನ್ನು ಈ ಘಾಟಮಪುರದಲ್ಲಿ ನಮ್ಮವರಾಗಿ ಯಾರೂ ಉಳೀಲಿಲ್ಲಪ್ಪ. ಕಾನಪುರದಿಂದ ನಮ್ಮಣ್ಣ ಬಂದಿದಾನೆ. ಇನ್ನು ನೀವು ಇಲ್ಲಿರೋದು ಸರಿಯಲ್ಲ, ಬಂದು ಕಾನಪುರದಲ್ಲೇ ಇರಿ ಅಂತ ಹೇಳ್ತಿದಾನೆ. ನಿನ್ನ ಸಲಹೆ ಕೇಳೋಣ ಅಂತ ಬಂದೆ."

"ನಾನು ನಿಮಗೆ ಏನು ತಾನೇ ಸಲಹೆ ಕೊಡಲಿ, ಅತ್ತಿಗೆ. ಹೇಗೆ ಸರಿ ಅನ್ನಿಸುತ್ತೋ ಹಾಗೆ ಮಾಡಿ. ಆದರೆ ಒಂದು ಮಾತ್ರ ಭರವಸೆ ಕೊಡ್ತೀನಿ. ಶಿವಪುರದಲ್ಲಿ ನಿಮ್ಮ ಮೇಲೆ ಯಾವ ತರಹದ ಅನಾಚಾರ ಅತ್ಯಾಚಾರವೂ ಆಗೋಲ್ಲ. ಸರಕಾರವಿದೆ, ಸರಕಾರದ ಕಾಯಿದೆ ಇದೆ, ಅವನ್ನು ಎಲ್ಲರೂ ಗೌರವಿಸಬೇಕಾಗುತ್ತೆ."

"ನಾನು ಅಣ್ಣನಿಗೆ ಹೇಳಿಬಿಟ್ಟಿದೀನಿ, ಲಕ್ಷ್ಮೀಚಂದನನ್ನು ತನ್ನ ಜೊತೆ ಕರಕೊಂಡು ಹೋಗಿ, ಕಾನಪುರದಲ್ಲಿ ಅವನ ವಿದ್ಯಾಭ್ಯಾಸ ಪೂರ್ತಿಮಾಡಿಸಬೇಕು ಅಂತ. ನಾನು ಇಲ್ಲಿ ಶಿವಪುರದಲ್ಲಿದ್ದುಕೊಂಡು ಆಸ್ತಿಪಾಸ್ತಿ ನೋಡಿಕೋತೀನಿ. ಇಲ್ಲಿ ಹರಡಿರೋ ಅವರ ಕಾರಬಾರನ್ನೆಲ್ಲಾ ಕೊಂಚ ಕೊಂಚವಾಗಿ ಒಟ್ಟುಗೂಡಿಸಿ ಒಪ್ಪಮಾಡಬೇಕಾಗಿದೆ. ನೀನು ನಮಗೆ ಮಾಡಿರೋ ಉಪಕಾರಕ್ಕೆ ಕಾಣಿಕೆಯಾಗಿ ಇದೋ ಈ ನೂರು ಚಿನ್ನದ ವರಹ ತಂದಿದೀನಿ" ಎಂದು ಜೈದೇಯಿ ಒಂದು ಚೀಲ ತೆಗೆದು ಜ್ವಾಲಾಪ್ರಸಾದನ ಮುಂದಿಟ್ಟಳು.

ಆ ಚೀಲವನ್ನು ನೋಡಿ ಜ್ವಾಲಾಪ್ರಸಾದ ನಕ್ಕ, "ಅತ್ತಿಗೆ, ನಾನೇನು ಮಾಡಿದೆನೋ ಅದನ್ನ ನನ್ನ ಕರ್ತವ್ಯ ಅಂದುಕೊಂಡು ಮಾಡಿದೆ. ಮಮತೆ, ನ್ಯಾಯ — ಇವು ಮಾರೋ ವಸ್ತುವಲ್ಲ, ಕೊಂಡುಕೊಳ್ಳೋ ವಸ್ತುವಲ್ಲ. ಈ ಹಣವೇ ಬದುಕಿನ ಎಲ್ಲ ಕೆಡುಕಿಗೂ ಮೂಲ. ಅತ್ತಿಗೆ, ಮುಂದೆ ಎಂದೆಂದಿಗೂ ನನ್ನನ್ನ ಈ ಪ್ರಲೋಭನೇಲಿ ಸಿಕ್ಕಿಸೋ ಪ್ರಯತ್ನ ಮಾಡಬೇಡಿ. ಸಾಧ್ಯವಾದಮಟ್ಟಿಗೆ ನೀವೂ ಈ ಪ್ರಲೋಭನೆಯಿಂದ ದೂರ ಇರಿ."

ಜ್ವಾಲಾಪ್ರಸಾದನ ಈ ನಡವಳಿಕೆಯನ್ನು ಕಂಡು ಜೈದೇಯಿ ಅವಾಕ್ಕಾದಳು. ಅವಳು ಹುಟ್ಟಿ ಬೆಳೆದಿದ್ದ ಪರಂಪರೆಯಲ್ಲಿ ಪ್ರತಿಯೊಂದು ವಸ್ತುವೂ ಮಾರಾಟಕ್ಕೆ ಇರುತ್ತಿತ್ತು; ಕೊಳ್ಳಲು ಸಿಗುತ್ತಿತ್ತು. "ನೀನು ಮನುಷ್ಯನಲ್ಲಪ್ಪ, ದೇವತೆ. ಭಗವಂತ ನಿನ್ನನ್ನ ಕಾಪಾಡಲಿ," ಎನ್ನುತ್ತ ಜೈದೇಯಿ ಎದ್ದು, ತಡೆದರೂ ಬಿಡದೆ ಜ್ವಾಲಾಪ್ರಸಾದನ ಕಾಲು ಮುಟ್ಟಿ ನಮಸ್ಕಾರ ಮಾಡಿದಳು.

ಅವತ್ತು ಜ್ವಾಲಾಪ್ರಸಾದ ಕಾಗದಪತ್ರಗಳೊಡನೆ ಮೀರ್‌ಸಾಹೇಬರಲ್ಲಿಗೆ ಹೋಗಿ ಬರಬೇಕಾಗಿತ್ತು. "ಅತ್ತಿಗೆ, ನೀವು ಊಟಮಾಡಿಕೊಂಡು ಹೋಗಬೇಕು" ಎಂದು ಜೈದೇಯಿಗೆ ಹೇಳಿ, ಭೀಖುವಿಗೆ "ಲಂಬರ್‌ದಾರಿಣಿ ಇಲ್ಲೇ ಊಟಕ್ಕೆ ಉಳೀತಾರೆ. ಅವರನ್ನ

ಕೂರಿಸಿ ಮಾತನಾಡಸ್ತಿರು. ನಾನು ಸ್ವಲ್ಪ ತಹಸೀಲದಾರರಲ್ಲಿಗೆ ಹೋಗಿಬರ್ತೀನಿ. ಒಂದು ಒಂದೂವರೆ ಗಂಟೆಯೊಳಗೆ ವಾಪಸಾಗ್ತೀನಿ " ಅಂದ.

ಜ್ವಾಲಾಪ್ರಸಾದ ಮೀರ್‌ಸಾಹೇಬರ ಮನೆ ತಲಪಿದಾಗ ಗಜರಾಜಸಿಂಹ ಅವರೊಡನೆ ಮಾತನಾಡುತ್ತ ಕುಳಿತಿದ್ದ. ಮೀರ್‌ಸಾಹೇಬರು ಜ್ವಾಲಾಪ್ರಸಾದನನ್ನು ಕಂಡೊಡನೆಯೇ, "ಬಾ ಮಗು, ನಿನಗೆ ನೂರುವರ್ಷ ವಯಸ್ಸು. ನಾವು ಇದೇ ತಾನೇ ನಿನ್ನ ವಿಷಯ ಮಾತನಾಡ್ತಿದ್ದೆವು " ಅಂದರು.

ಗಜರಾಜಸಿಂಹನ ಮುಖ ವಿಪರೀತ ಬಾಡಿತ್ತು. ಅವನು ತಲೆತಗ್ಗಿಸಿ ನೆಲನೋಡುತ್ತ ಕುಳಿತಿದ್ದ. ಜ್ವಾಲಾಪ್ರಸಾದನ ಕಡೆ ಕಣ್ಣೆತ್ತಿ ಸಹ ನೋಡಲಿಲ್ಲ. ಜ್ವಾಲಾಪ್ರಸಾದ ಕುಳಿತುಕೊಂಡ ಮೇಲೆ ಮೀರ್ ಸಖಾವತ್ ಹುಸೇನರು ಹೇಳಿದರು, "ಜ್ವಾಲಾಬಾಬು, ಠಾಕೂರ್ ಗಜರಾಜಸಿಂಹರು ಹೇಳ್ತಾರೆ, ಬರಜೋರಸಿಂಹನ ದುರಂತಕ್ಕೆ ನೀನೇ ಹೊಣೆ, ನೀನು ಅವನ ವಿರುದ್ಧ ಹೇಳಿಕೆ ಕೊಡದೆ ಹೋಗಿದ್ದರೆ ಅವನ ಮೇಲೆ ವಾರಂಟ್ ಹೊರಡ್ತಿರ ಲಿಲ್ಲ ಅಂತ."

ಜ್ವಾಲಾಪ್ರಸಾದ ಮೆಲ್ಲಮೆಲ್ಲಗೆ ಹೇಳಿದ, "ಹೌದು, ಹುಜೂರ್. ಬರಜೋರಸಿಂಹನ ವಿರುದ್ಧ ನಾನು ಹೇಳಿಕೆ ಕೊಡದೆ ಇದ್ದಿದ್ದರೆ ಅವನ ಮೇಲೆ ವಾರಂಟ್ ಹೊರಡುತ್ತಿರಲಿಲ್ಲ, ಜೊತೆಗೇ ಒಂದು ಖೂನಿ ಅಡಗಿಹೋಗ್ತಿತ್ತು. ಆದರೆ ನಾನು ಸರಕಾರೀ ಸೇವಕನಾಗಿ ಕಾಯಿದೆ ಹಾಗೂ ನ್ಯಾಯಗಳ ಕತ್ತು ಹಿಸುಕಲೆ ! ಈಗ ಆದದ್ದಾದರೂ ಏನು, ಇನ್ನೂ ಮೊಕದ್ದಮೆ ನಡೀಬೇಕಲ್ಲ ! "

ಗಜರಾಜಸಿಂಹ ಕತ್ತೆತ್ತಿ ಜ್ವಾಲಾಪ್ರಸಾದನನ್ನು ದೃಷ್ಟಿಸಿ ನೋಡಿದ. ಅವನ ಮುಖ ಬಿಳುಪೇರಿ ದುಃಖದಿಂದ ತುಂಬಿತ್ತು. ಕಣ್ಣು ತೇವವಾಗಿತ್ತು. "ಸತ್ತ ಹೆಣದ ಮೇಲೆ ಮೊಕ ದ್ದಮೆ ನಡಸೋಕ್ಕಾಗೋಲ್ಲ, ಜ್ವಾಲಾಬಾಬು. ಬರಜೋರಸಿಂಹ ಈ ಪ್ರಪಂಚ ಬಿಟ್ಟು ಹೋಗಿದಾನೆ. ಅವನು ಮಾಡಿದ ತಪ್ಪಿಗೆ ತನಗೆ ತಾನೇ ಶಿಕ್ಷೆ ವಿಧಿಸಿಕೊಂಡ. ಮೊನ್ನೆ ರಾತ್ರಿ ತನ್ನ ಊರು ವಿಧನೂನಲ್ಲಿ ಅವನು ಆತ್ಮಹತ್ಯೆ ಮಾಡಿಕೊಂಡ. ಯಜ್ಞಪುರದಿಂದ ಅಲ್ಲಿಗೆ ಹಿಂದಿರುಗಿದಾಗ ಅವನಿಗೆ ತನ್ನ ವಾರಂಟಿನ ಸುದ್ದಿ ತಿಳೀತು. ನಿನ್ನೆ ಬೆಳಗ್ಗೆ ಅವನ ಮಕ್ಕಳುಮರೀನ ಕರಕೊಂಡು ನಾನು ವಿಧನೂಗೆ ಹೋಗಿದ್ದೆ. ಕ್ರಿಯಾಕರ್ಮ ಗಳನ್ನೆಲ್ಲಾ ಮುಗಿಸಿ ರಾತ್ರಿಯ ಹೊತ್ತಿಗೆ ವಾಪಸು ಬಂದೆ." ಗಜರಾಜಹಿಂಹ ಒಂದು ಒಣನಗೆ ನಕ್ಕ, "ಹೋಗಲಿ ಬಿಡಿ, ಈ ಪ್ರಕರಣವೂ ಮುಗಿದ ಹಾಗಾಯಿತು. ಇನ್ನು ಬರಜೋರಸಿಂಹನೇ ಹೋದ ಮೇಲೆ ಅವನಿಗೆ ಯಾರೇನು ತಾನೆ ಹಾನಿ ಮಾಡಿಯಾರು ! " ಗಜರಾಜಸಿಂಹನ ಕಣ್ಣಿಂದ ಇದ್ದಕ್ಕಿದ್ದಂತೆ ನೀರು ಉಕ್ಕಿಹರಿಯಿತು. "ಆದರೆ, ಜ್ವಾಲಾ ಬಾಬು, ಇಷ್ಟೆಲ್ಲಾ ಆದರೂ ಒಂದು ಮಾತನ್ನ ಒಪ್ಪಲೇಬೇಕು. ಬರಜೋರ್ ಯೋಗ್ಯ, ಅಷ್ಟೇ ಹತಭಾಗ್ಯ. ಅವನು ಜಗತ್ತಿನಲ್ಲಿ ಯಾವಾಗಲೂ ಕೆಟ್ಟದ್ದು ಮಾಡಿದವನಲ್ಲ. ಸಾಧ್ಯವಾದಷ್ಟು ಹೊಟ್ಟೆಗೆ ಎದೆ ಬಿಚ್ಚಿ ಇತರರಿಗೆ ಸಹಾಯಾನೇ ಮಾಡಿದ. ಆದರೆ ಅದೆಲ್ಲದ

ರಿಂದ ಅವನಿಗೆ ಏನು ಪುರಸ್ಕಾರ ಸಿಕ್ಕಿತು ಅಂದರೆ ಅವನ ಜಮೀನು ಹೋಯಿತು, ಜೀವ ಹೋಯಿತು, ಅವನ ಮಕ್ಕಳು ಅನಾಥರಾದರು, ಹೆಂಡತಿ ವಿಧವೆಯಾದಳು. ಹೆಂಡತಿಯ ತವರಿನವರು ವಿಧನೂನಲ್ಲಿದಾರೆ. ಅವಳು ಅಲ್ಲಿ ಕೂತುಕೊಂಡು ಗೋಳಾಡ್ತಿದಾಳೆ. ಇಬ್ಬರು ಗಂಡುಮಕ್ಕಳಿದಾರೆ, ಒಬ್ಬನ ವಯಸ್ಸು ಹದಿನಾಲ್ಕು, ಇನ್ನೊಬ್ಬನದು ಹತ್ತು. ಜೊತೇಗೆ ಹನ್ನೆರಡು ಹದಿಮೂರು ವರ್ಷದ ಒಬ್ಬ ಮಗಳೂ ಇದಾಳೆ. ಅವಳ ಮದುವೆ ಚಿಂತೆ ಬೇರೆ ಇದೆ. ಅವರೆಲ್ಲರ ಗತಿ ಏನು? ದೇವರೇ ಕಾಪಾಡಬೇಕು!"

ಮೀರ್‌ಸಾಹೇಬರು ಜ್ವಾಲಾಪ್ರಸಾದನ ಕಡೆ ನೋಡಿದರು, "ಕೇಳಿದೆಯಾ, ಮಗು. ನಿನ್ನ ನ್ಯಾಯಧರ್ಮಗಳ ಪರಿಣಾಮ ಏನಾಯಿತು ಅಂತ? ಆದರೆ ನಾನು ಠಾಕೂರ್ ಗಜರಾಜಸಿಂಹರಿಗೆ ಇದನ್ನ ತಿಳಿಸಿಕೊಡ್ಡೋಕ್ಕೆ ಪ್ರಯತ್ನಪಡ್ತಿದ್ದೆ, ಎಲ್ಲಿ ನ್ಯಾಯಕರ್ತವ್ಯಗಳಿಗೂ ದಯಾಧರ್ಮಗಳಿಗೂ ವಿರೋಧ ಹುಟ್ಟುತ್ತೋ ಅಲ್ಲಿ ನಾವು ನ್ಯಾಯಕರ್ತವ್ಯಗಳಿಗೇ ಪ್ರಾಧಾನ್ಯ ಕೊಡಬೇಕು ಅಂತ. ಆದ್ದರಿಂದ ನೀನು ಮಾಡಿದ್ದು ಸರಿಯಾಗಿತ್ತು."

ಬರಜೋರಸಿಂಹ ಆತ್ಮಹತ್ಯೆ ಮಾಡಿಕೊಳ್ಳಬಹುದೆಂಬ ಕಲ್ಪನೆ ಜ್ವಾಲಾಪ್ರಸಾದನಿಗಿರಲಿಲ್ಲ. ಬರಜೋರಸಿಂಹನಿಗೆ ಏನು ಗತಿಯಾಗಬಹುದೆಂಬುದನ್ನು ಸಹ ಅವನು ಪ್ರಾಯಶಃ ಯೋಚಿಸಿರಲಿಲ್ಲ. ಅವನು ತಾನು ಮಾಡಿದ್ದುದನ್ನು ಅತ್ಯಂತ ಪ್ರಜ್ಞಾಹೀನ ಸ್ಥಿತಿಯಲ್ಲಿ ಮಾಡಿದ್ದ; ಅಪರಾಧಿಗೆ ದಂಡ ದೊರೆತೇ ತೀರಬೇಕೆಂಬ ತರ್ಕದಿಂದ ಪ್ರೇರಿತನಾಗಿ ಮಾಡಿದ್ದ. ಬರಜೋರಸಿಂಹನ ಆತ್ಮಹತ್ಯೆಯ ಸುದ್ದಿ ಕೇಳಿ ಅವನ ಕರುಳು ಕಿವುಚಿತು. ಅವನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ಯೋಚಿಸುತ್ತಿದ್ದ. ಬರಜೋರಸಿಂಹನ ಸಾವಿಗೆ ಪೂರ್ಣವಾಗಿ ತಾನೆಯೇ ಹೊಣೆ ಎಂದು ಅವನಿಗೆ ಅನಿಸತೊಡಗಿತು. ಇದ್ದಕ್ಕಿದ್ದಂತೆ ಕತ್ತೆತ್ತಿ ಅವನು ಮೀರ್‌ಸಾಹೇಬರಿಗೆ ಹೇಳಿದ, "ಹುಜೂರ್, ತಾವು ಅಧಿಕಪ್ರಸಂಗಿತನ ಅಂತ ಅಂದುಕೊಳ್ಳದಿದ್ದರೆ ಒಂದು ಪ್ರಶ್ನೆ ಕೇಳಬಯಸ್ತೀನಿ."

"ಹ್ಞಾ. . . ಹ್ಞಾ, ಅದರಲ್ಲಿ ಅಧಿಕಪ್ರಸಂಗವೇನು ಬಂತು? ಸಂತೋಷದಿಂದ ಕೇಳು," ಮೀರ್‌ಸಾಹೇಬರು ಹೇಳಿದರು.

"ನನ್ನ ಜಾಗದಲ್ಲಿ ಹುಜೂರರು ಇದ್ದಿದ್ದರೆ ಏನು ಮಾಡ್ತಿದ್ದರು?"

ಮೀರ್‌ಸಾಹೇಬರ ಮುಖದ ನಗೆ ಅಡಗಿಹೋಯಿತು, "ನೀನು ಬಹಳ ಕಠಿಣವಾದ ಪ್ರಶ್ನೆ ಕೇಳ್ತಿದಿ, ಜ್ವಾಲಾಬಾಬು. ನಾನು ಏನು ಮಾಡ್ತಿದ್ದೆ ಅಂತ ಹೇಳಲಾರೆ. ನೀನು ಮಾಡಿದ ಹಾಗೆ ಮಾಡ್ತಿರಲಿಲ್ಲವೇನೋ; ಅಥವಾ ನೀನು ಮಾಡಿದ ಹಾಗೆಯೇ ಮಾಡ್ತಿದ್ದೆನೇನೋ — ಎರಡೂ ಸಂಭವವೇ. ನೀನು ಬಹಳ ಕಠಿಣವಾದ ಪ್ರಶ್ನೆ ಕೇಳಿದೆ ಅಂತ ಹೇಳಿದೆನಲ್ಲವೇ!"

ಜ್ವಾಲಾಪ್ರಸಾದ ಈಗ ಹೇಳಿದ, "ಇಲ್ಲ ಹುಜೂರ್, ನಾನು ಮಾಡಿದ ಹಾಗೆ ನೀವು ಮಾಡ್ತಿರಲಿಲ್ಲ ಅಂತ ನನಗೀಗ ಖಾತರಿಯಾಗಿದೆ. ನಮ್ಮ ಮಾವ ಮುನಿಷಿ ರಾಮಸಹಾಯರೂ ಇಂಥದೇ ಬುದ್ಧಿವಾದ ಹೇಳಿದ್ದರು. ನಾನು ಮಾಡಿದ್ದು ತಪ್ಪಾಯಿತೇನೋ

ಅಂತ ತೋರ್ತಿದೆ." ಜ್ವಾಲಾಪ್ರಸಾದನ ಧ್ವನಿ ಈಗ ಮರುಕದಿಂದ ಮಿದುವಾಗಿತ್ತು, "ನ್ಯಾಯಸತ್ಯಗಳಿಗೆ ಎಲ್ಲೆಕಟ್ಟಿಲ್ಲ, ಅಲ್ಲಿ ಭಾವನೆಗೆ ಸ್ವಲ್ಪವೂ ಎಡೆಯಿಲ್ಲ ಅಂತಾನೇ ನಾನು ಇದುವರೆಗೆ ತಿಳಕೊಂಡಿದ್ದೆ. ಆದರೆ ನನ್ನದು ತಪ್ಪು ಅಂತ ಈಗ ಕಾಣ್ತಿದೆ."

ಜ್ವಾಲಾಪ್ರಸಾದನ ಕರುಣೆಯ ಧ್ವನಿಗೆ ಮಿರ್‌ಸಾಹೇಬರು ಕರಗಿ ನೀರಾದರು, "ಇಲ್ಲ ಜ್ವಾಲಾಬಾಬು, ಭಾವನೆಯ ದೌರ್ಬಲ್ಯಗಳನ್ನ ಒಪ್ಪಿ ಎತ್ತಿ ಹಿಡಿಯೋನು ನಾನು ಅಂತ ಹೇಳಲಿಲ್ಲ. ಯಾವನಿಗಾದರೂ ಈ ದೌರ್ಬಲ್ಯಗಳನ್ನ ಮೆಟ್ಟಿ ಮೇಲೇಳೋದು ಸಾಧ್ಯವಾದರೆ ನಾನು ಅವನನ್ನ ತುಂಬ ಉಚ್ಚ ಅಂತ ಮರ್ಯಾದೆ ಕೊಡ್ತೀನಿ. ಆದರೆ ಯಾವ ಮನುಷ್ಯನೇ ಆಗಲಿ ಭಾವನೆಗಳಿಂದ ಮೇಲೇಳಬಲ್ಲ ಅನ್ನೋ ನಂಬಿಕೆ ನನಗಿಲ್ಲ." ಈ ಪ್ರಸಂಗವನ್ನು ಮುಕ್ತಾಯ ಮಾಡುತ್ತ ಮಿರ್‌ಸಾಹೇಬರು ಹೇಳಿದರು, "ಹೋಗಲಿ ಬಿಡು, ಮಗು. ಆದದ್ದು ಆಗಲೇಬೇಕಾಗಿತ್ತು. ಯಾರೂ ಅದನ್ನ ತಡೆಯೋ ಹಾಗಿರ ಲಿಲ್ಲ. ಆದ್ದರಿಂದ ಸುಮ್ಮನೇ ಅದನ್ನ ಕುರಿತು ಮಾತನಾಡೋದು ವ್ಯರ್ಥ. ಎಲ್ಲಿ, ಕಾಗದಗಳನ್ನ ತಾ. ರುಜು ಮಾಡಿಕೊಡ್ತೀನಿ."

ಜ್ವಾಲಾಪ್ರಸಾದ ಮನೆಗೆ ಹಿಂದಿರುಗಿದಾಗ ಜೈದೇಯಿ ಕೇಳಿದಳು, "ಯಾಕಪ್ಪಾ ದೇವರ್‌ಜಿ, ಮುಖ ಯಾಕೆ ಇಷ್ಟು ಸಪ್ಪಗಾಗಿದೆ? ಏನಾಯಿತು, ಇಲ್ಲಿಂದ ಹೋಗೋ ವಾಗ ಚೆನ್ನಾಗೇ ಇದ್ದೆಯಲ್ಲ?"

ಜ್ವಾಲಾಪ್ರಸಾದ ನಿಟ್ಟುಸಿರು ಬಿಡುತ್ತ ಹೇಳಿದ, "ತಹಸೀಲದಾರ ಸಾಹೇಬರ ಮನೇಲಿ ಗಜರಾಜಸಿಂಹನಿಂದ ಸುದ್ದಿ ತಿಳೀತು, ಮೊನ್ನೆ ರಾತ್ರಿ ವಿಧನೂನಲ್ಲಿ ಬರಜೋರಸಿಂಹ ಆತ್ಮಹತ್ಯೆ ಮಾಡಿಕೊಂಡನಂತೆ, ಅತ್ತಿಗೆ."

"ಆತ್ಮಹತ್ಯೆ ಮಾಡಿಕೊಂಡನೆ? ಬರಜೋರ?" ಜೈದೇಯಿ ಆಶ್ಚರ್ಯದಿಂದ ಕೇಳಿದಳು. ಸ್ವಲ್ಪ ಹೊತ್ತು ಬಿಟ್ಟು ಮತ್ತೆ ಹೇಳಿದಳು, "ಹೋಗಲಿ, ಬಿಡು. ಅವನು ತನ್ನ ಅಪರಾಧಕ್ಕೆ ತಾನೇ ದಂಡ ವಿಧಿಸಿಕೊಂಡ. ಆದರೆ ನೋಡಪ್ಪ, ಅವನು ನನ್ನಿಂದ ಕಿತ್ತುಕೊಂಡದ್ದು ಮಾತ್ರ ನನಗೆ ವಾಪಸು ಬರೋ ಹಾಗಿಲ್ಲ."

ಜ್ವಾಲಾಪ್ರಸಾದ ಜೈದೇಯಿಯ ಮಾತಿಗೆ ಉತ್ತರಕೊಡಲಿಲ್ಲ; ಪ್ರಾಯಶಃ ಅವನಲ್ಲಿ ಅದಕ್ಕೆ ಉತ್ತರವೂ ಇರಲಿಲ್ಲ. ಅವನು ತನ್ನದೇ ಮಾನಸಿಕ ತೊಡಕಿನಲ್ಲಿ ಸಿಕ್ಕಿಬಿದ್ದಿದ್ದ. ಅವನ ಮನಸ್ಸು ಬರಜೋರಸಿಂಹನ ಹೆಂಡತಿಮಕ್ಕಳನ್ನು ಕುರಿತು ಯೋಚಿಸುತ್ತಿತ್ತು. ಜೈದೇಯಿಯಿಂದ ವಿಧಿ ಕಸಿದುಕೊಂಡಿದ್ದುದು ಅಲ್ಪ ಮಾತ್ರ. ಅವಳಲ್ಲಿ ಲಕ್ಷಾಂತರ ರೂಪಾಯಿಗಳ ಆಸ್ತಿಪಾಸ್ತಿಯಿತ್ತು. ಅವುಗಳ ಮೇಲೆ ಅವಳಿಗೆ ಈಗ ಪೂರ್ಣ ಅಧಿಕಾರ ವಿತ್ತು. ನೂರು ಚಿನ್ನದ ವರಹಗಳನ್ನು ಕಾಣಿಕೆ ಕೊಡುವ ಸ್ಥಿತಿಯಲ್ಲಿದ್ದಳು ಅವಳು. ಆದರೆ ಬರಜೋರಸಿಂಹನ ಹೆಂಡತಿ? ಆಸರೆ ಬೇಡಿ ಅಣ್ಣನ ಮನೆಗೆ ಹೋಗಿದ್ದಳು. ಅವಳ ಮಕ್ಕಳು ಅನಾಥರಾಗಿದ್ದರು.

# ಐದು

ಜ್ವಾಲಾಪ್ರಸಾದ ಹೆಂಡತಿಯನ್ನು ಬಾಣಂತನಕ್ಕೆ ಫತಹಪುರದಲ್ಲಿದ್ದ ತಂದೆ–ಚಿಕ್ಕಪ್ಪಂದಿರ ಮನೆಗೆ ಕಳಿಸದೆ ರಾಜಪುರದಲ್ಲಿದ್ದ ಸೋದರಮಾವನ ಮನೆಗೆ ಕಳಿಸಿಕೊಟ್ಟಿದ್ದ. ಈ ಬಗ್ಗೆ ಮುನಿಷಿ ಶಿವಲಾಲನಿಗೆ ಏನೂ ಅಭ್ಯಂತರವಿರಲಿಲ್ಲ. ಆದರೆ ಅವನ ತಮ್ಮ ಮುನಿಷಿ ರಾಧೇಲಾಲನಾದರೋ ದೊಡ್ಡ ರಂಪವನ್ನೇ ಎಬ್ಬಿಸಿದ. ಅವನು ಮುನಿಷಿ ಶಿವಲಾಲನಿಗೆ ಹೇಳಿದ, "ಏನಣ್ಣ, ಸೊಸೆಯ ಬಾಣಂತನದ ಏರ್ಪಾಡನ್ನ ನಮ್ಮ ತಂದೆತಾತಂದಿರ ಮನೇಲಿ ಮಾಡೋಕ್ಕಾಗ್ತಿರಲಿಲ್ಲವೆ? ಜನ ಕೇಳಿ ಏನಂದಾರು? ಮಗ ಆಫೀಸರಾದ ಮಾತ್ರಕ್ಕೆ ತನ್ನ ತಂದೆ, ಚಿಕ್ಕಪ್ಪ, ಕೊನೆಗೆ ಮನೆತನವನ್ನೇ ಮರೆಯೋದು ಅಂತಲೇ ಅರ್ಥ!"

ಮುನಿಷಿ ಶಿವಲಾಲ ಹಾರಿಕೆಯ ಉತ್ತರ ಕೊಡುತ್ತ ಹೇಳಿದ, "ಹಾಗಲ್ಲ, ರಾಧೇ. ಇರೋ ಸಂಗತಿ ಅಂದರೆ ರಾಜಪುರ ಘಾಟಮಪುರಕ್ಕೆ ಹತ್ತಿರವಾಗಿದೆ. ಅಲ್ಲದೇ ಮುನಿಷಿ ರಾಮಸಹಾಯ ಖುದ್ದಾಗಿ ಬಂದು ಹುಡುಗೀನ ಕರಕೊಂಡು ಹೋದ. ಅಲ್ಲಿ ಸೇವೇಗೆ ಬೇಕಾದ ಹಾಗೆ ಆಳುಕಾಳು ಇದಾರೆ. ಇದರಲ್ಲಿ ನನಗೇನೂ ತಪ್ಪು ಕಾಣೋಲ್ಲ."

"ವ್ಹಾಹ್ ದೊಡ್ಡಪ್ಪ, ಹಾಗಾದರೆ ನಾವುಗಳೆಲ್ಲಾ ಯಾತಕ್ಕಾದೆವು?" ರಾಧೇ ಲಾಲನ ಹಿರಿಯಮಗ ರಾಮಲಾಲ ಬಾಯಿಹಾಕಿದ, "ನಾವುಗಳು ನೋಡಿಕೊಳ್ಳೋ ಹಾಗೆ ಆಳುಕಾಳು ಏನು ತಾನೇ ನೋಡಿಕೊಂಡಾರು?"

ರಾಮಲಾಲನ ಈ ಮಾತು ಶಿವಲಾಲನಿಗೆ ರುಚಿಸಲಿಲ್ಲ. ಇದನ್ನು ಗ್ರಹಿಸಿದ ರಾಧೇ ಲಾಲ ಮಗನ ಮಾತನ್ನು ತಿದ್ದುತ್ತ ಹೇಳಿದ, "ರಾಮು ಹೇಳೋದು ಸರಿ! ಅವನ ಹೆಂಡತಿ ಇರೋದಾದರೂ ಯಾಕೆ? ಹೋಗಲಿ, ಹೆರಿಗೆಯಾದಮೇಲಾದರೂ ಹುಡುಗೀಗೆ ಒಂದೆರಡು ತಿಂಗಳು ಇಲ್ಲಿ ಬಂದಿರೋಕ್ಕೆ ಹೇಳು."

ಮುನಿಷಿ ಶಿವಲಾಲನ ಹುಕ್ಕವನ್ನು ಅಣಿಮಾಡಿ ತಂದಿದ್ದ ಛಿನಕಿ ಅಲ್ಲೇ ನಿಂತು ಈ ಮಾತುಕತೆ ಕೇಳುತ್ತಿದ್ದಳು. ಅವಳಂದಳು, "ಹೌದು, ಸರಿಯಾದ ಮಾತು! ಸೊಸೆ ಹೋಗಿ ಎರಡು ವರ್ಷವಾಯಿತು. ಒಂದೆರಡು ತಿಂಗಳು ಇಲ್ಲೂ ಬಂದಿರಲಿ. ಕರಸೋದು ತಾನೆ!" ಆಮೇಲೆ ಏನೋ ಯೋಚಿಸಿದವಳಂತೆ, "ನೀವೇ ಒಂದು ಸಲ ಘಾಟಮಪುರಕ್ಕೆ ಯಾಕೆ ಹೋಗಿ ಬರಬಾರದು ಅಂತೀನಿ. ಏನು, ಮಗನ ಮೇಲಿನ ಮೋಹವೆಲ್ಲಾ ಒಟ್ಟಿಗೆ ಬಿಟ್ಟುಹೋಯ್ತು? ವಾಪಸು ಬರೋವಾಗ ಸೊಸೇನೂ ಜೊತೇಲಿ ಕರೆತರಬಹುದಲ್ಲ?" ಅಂದಳು.

ಮುನಿಷಿ ಶಿವಲಾಲ ಹುಕ್ಕದಿಂದ ದಮ್ಮೆಳೆಯುತ್ತ ಹೇಳಿದ. "ಹೌದು, ನೀನು ಹೇಳೋದು ಸರಿಯೇ. ಜ್ವಾಲನ್ನ ನೋಡಿ ಬಹಳ ದಿನವಾಯಿತು. ಒಳ್ಳೇದು,

ಮುಂದಿನ ತಿಂಗಳು ಘಾಟಮಪುರ, ರಾಜಪುರಗಳಿಗೆ ಹೋಗಿಬರ್‍ತೀನಿ . . . . ಏನೇ, ಘಸೀಟೆಯ ಆರೋಗ್ಯ ಹೇಗಿದೆಯೆ ? " ಶಿವಲಾಲ ಛಿನಕಿಯನ್ನು ಕೇಳಿದ.

ವಿಷಯ ಬದಲಾದುದನ್ನು ನೋಡಿ ರಾಧೇಲಾಲ, ರಾಮಲಾಲರು ಅಲ್ಲಿಂದ ಎದ್ದರು. ಅವರು ಹೋದಮೇಲೆ ಛಿನಕಿ ಕಣ್ಣಲ್ಲಿ ನೀರು ತಂದುಕೊಂಡು ಹೇಳಿದಳು, "ಏನು ಹೇಳಲಿ, ಈಗಂತೂ ಚಾರಪಾಯಿ ಬಿಟ್ಟು ಏಳೋದಕ್ಕೂ ಆಗೋದಿಲ್ಲ. ಜ್ವರ ಮೂರು ದಿನದಿಂದ ಒಂದೇಸಮನೆ ಏರ್‍ತಾನೇ ಇದೆ. ದೇವರು ಈಗ ಅವರನ್ನ ಕರಸಿಕೊಂಡರೇ ಮೇಲು. ಹೀಗೆ ಜೀವಿಸಿರೋದಕ್ಕಿಂತ ಸಾಯೋದು ವಾಸಿ. ಅವರ ಸ್ಥಿತೀನ ನೋಡೋಕ್ಕಾಗೋಲ್ಲ. ಅಂದಹಾಗೆ ನಿನ್ನೆ ನಿಮ್ಮನ್ನ ಕೇಳ್ತಿದ್ದರು."

"ಒಳ್ಳೇದು, ಇನ್ನೊಂದು ಸ್ವಲ್ಪ ಹೊತ್ನಲ್ಲಿ ಬರ್‍ತೀನಿ. ನೀನು ಮನೇಗೆ ನಡಿ, ನಾನು ವೈದ್ಯರನ್ನ ಕರಕೊಂಡು ಬರೋಕ್ಕೆ ಹೊರಟಿದೀನಿ."

"ನಿಮ್ಮ ವೈದ್ಯನಿಗೆ ಬೆಂಕಿ ಹಾಕ ! ಇದುವರೆಗೆ ಹತ್ತು ಸಲ ಔಷಧಿ ಬದಲಾಯಿಸಿದ್ದಾಯ್ತು. ಇಷ್ಟಾದರೂ ದೇಹಸ್ಥಿತಿ ಮಾತ್ರ ಕೆಡ್ತಾನೇ ಹೋಗ್ತಿದೆ. ಮೊನ್ನೆಯಿಂದ ಔಷಧಿ ತೊಗೋಳೋದನ್ನೇ ಬಿಟ್ಟುಬಿಟ್ಟಿದಾರೆ," ಎನ್ನುತ್ತ ಛಿನಕಿ ಅಲ್ಲಿಂದ ಎದ್ದು ಹೋದಳು.

ಶಿವಲಾಲ ಕೊಂಚ ಹೊತ್ತು ಸುತ್ತ ಕವಿಯುತ್ತಿದ್ದ ರಾತ್ರಿಯ ಕತ್ತಲೆಯನ್ನೇ ನೋಡುತ್ತಿದ್ದು ಆಮೇಲೆ ಪ್ರಯತ್ನಪೂರ್ವಕವಾಗಿ ಎದ್ದುನಿಂತ. ಈಚೆಗೆ ಕೆಲವು ದಿನಗಳಿಂದ ಅವನ ಆರೋಗ್ಯ ಇಳಿಮುಖವಾಗುತ್ತಿತ್ತು. ಘಸೀಟೆಯ ದೀರ್ಘ ಅನಾರೋಗ್ಯದಿಂದಾಗಿ ಶಿವಲಾಲನ ದಿನನಿತ್ಯದ ಕಾರ್ಯಕ್ರಮವೇ ಬದಲಾಗುತ್ತಿತ್ತು. ಈಗ ಸಂಜೆಯ ಹೊತ್ತು ಒಬ್ಬನೇ ಕುಳಿತು ಸಾರಾಯಿ ಕುಡಿಯಬೇಕಾಗಿತ್ತು. ಹೀಗಾಗಿ ಕುಡಿತದ ಪ್ರಮಾಣ ಹೆಚ್ಚಿತ್ತು. ಬಹುತರ ಅವನು ಕುಡಿಕುಡಿಯುತ್ತಲೇ ಪ್ರಜ್ಞೆ ತಪ್ಪುತ್ತಿದ್ದ. ಈಚೆಗೆ ಅವನಿಗೆ ತನ್ನೊಳಗೆ ಒಂದು ಬಗೆಯ ನಿಶ್ಶಕ್ತಿಯ ಅನುಭವವಾಗತೊಡಗಿತ್ತು. ಛಿನಕಿಯೇನೋ ತನ್ನ ಕೈಲಾದಮಟ್ಟಿಗೆ ಅವನನ್ನು ನೋಡಿಕೊಳ್ಳುತ್ತಿದ್ದಳು. ಆದರೂ ಘಸೀಟೆಯ ಅನಾರೋಗ್ಯದಿಂದಾಗಿ ಅವಳು ತನ್ನ ಸಮಯದ ಅಧಿಕಾಂಶವನ್ನು ಅವನ ಸೇವೆಗೆ ತೊಡಗಿಸಬೇಕಾಗುತ್ತಿತ್ತು.

ಘಸೀಟೆಯ ಅನಿರೀಕ್ಷಿತ ಮೃತ್ಯು ಶಿವಲಾಲನ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡಲಿಲ್ಲ. ಇದುವರೆಗೆ ಅವನು ಎಂದೂ ಸಾವಿನ ಬಗ್ಗೆ ಗಂಭೀರವಾಗಿ ಯೋಚಿಸಿದವನೇ ಅಲ್ಲ. ಆದರೆ ಈಗ ಘಸೀಟೆ ಸತ್ತಂದಿನಿಂದ ಅವನಲ್ಲಿ ಸಾವಿನ ಬಗ್ಗೆ ಒಂದು ಬಗೆಯ ಭಯಾನಕವಾದ ಭೀತಿ ತುಂಬಿಕೊಂಡಿತು. ಅವನಿಗೆ ತನ್ನ ಶರೀರ ಬೇಗಬೇಗನೆ ಶಿಥಿಲವಾಗುತ್ತಿದೆಯೆಂದು ಅನಿಸತೊಡಗಿತು. ಈ ಭಯದಿಂದ ಹೇಗೋ ಬಿಡುಗಡೆ ಪಡೆದು ಅವನು ಘಾಟಮಪುರಕ್ಕೆ ಹೋಗುವ ದಿನವನ್ನು ತುಂಬ ಕಾತರದಿಂದ ಎದುರು ನೋಡತೊಡಗಿದ.

ಛಿನಕಿ ಘಸೀಟೆಯನ್ನು ಕಳೆದುಕೊಂಡಿದ್ದಳು. ಈ ಕಡೆ ಮುನಿಷಿ ಶಿವಲಾಲನ ಆರೋಗ್ಯ ದಿನೇ ದಿನೇ ಕುಗ್ಗುತ್ತಿದ್ದುದು ಅವಳನ್ನು ತುಂಬ ಚಿಂತೆಗೊಡ್ಡಿತ್ತು. ಘಸೀಟೆಯ ಕ್ರಿಯಾಕರ್ಮಗಳನ್ನು ಅವಳು ವಿಧಿಪೂರ್ವಕವಾಗಿ ನಡಸಿದಳು. ಅವೆಲ್ಲವೂ ಮುಗಿದ ಮೇಲೆ ಮುನಿಷಿ ಶಿವಲಾಲನ ಮನೆಯಲ್ಲಿಯೇ ಒಂದು ಇರತೊಡಗಿದಳು.

ಒಂದು ದಿನ ಛಿನಕಿ ಶಿವಲಾಲನನ್ನು ಕೇಳಿದಳು, "ಏನು, ಜ್ವಾಲನ ಮನೆಗೆ ಹೊರಡೋದು ಯಾವಾಗ? ಸೊಸೆಗೆ ಗಂಡುಮಗುವಾಗಿದೆ. ಇನ್ನು ಅವಳು ಘಾಟಮಪುರಕ್ಕೆ ಬರಬಹುದಲ್ಲ?"

"ಹೌದು, ಕಾಗದ ಬಂದಿದೆ. ಇನ್ನೊಂದು ವಾರದಲ್ಲಿ ರಾಜಪುರದಿಂದ ಘಾಟಮ ಪುರಕ್ಕೆ ಬರ್ತಾಳಂತೆ. ಮುಂದಿನ ಸೋಮವಾರ ಇಲ್ಲವೇ ಮಂಗಳವಾರ ಇಲ್ಲಿಂದ ಹೊರಡೋಣ ಅಂತ ಯೋಚಿಸ್ತಿದೀನಿ."

"ನೀವು ಇಲ್ಲಿಂದ ಬೇಗ ಹೊರಡಬೇಕು ಅಂತ ನಾನೆಲ್ಲಿ ಅಂದೆ. ನೀವು ಒಪ್ಪೋ ದಾದರೆ ಒಂದು ಮಾತು ಹೇಳ್ತೀನಿ. ನಿಮ್ಮ ಜೊತೆ ನನ್ನನ್ನೂ ಘಾಟಮಪುರಕ್ಕೆ ಕರಕೊಂಡು ಹೋಗಿ."

"ಏನು, ನೀನೂ ಘಾಟಮಪುರಕ್ಕೆ ಬರ್ತೀಯಾ?" ಮುನಿಷಿ ಶಿವಲಾಲ ಆಶ್ಚರ್ಯ ದಿಂದ ಕೇಳಿದ.

"ಇಲ್ಲಿದ್ದು ಏನು ಮಾಡಲಿ? ಅವರಂತೂ ದೇವರ ಪಾದ ಸೇರಿಕೊಂಡರು; ನೀವು ಘಾಟಮಪುರಕ್ಕೆ ಹೋಗ್ತಿದೀರಿ. ನಾನು ಅನ್ನೋದು ನೀವು ಇಲ್ಲಿಗೆ ವಾಪಸು ಬರೋ ಅಗತ್ಯವೇ ಇಲ್ಲ ಅಂತ. ಇನ್ನುಮೇಲೆ ಹೋಗಿ ಮಗನ ಮನೇಲೀ ಇದ್ದುಬಿಡಿ. ನಾನೂ ನಿಮ್ಮ ಜೊತೆ ಬರೋಕ್ಕೆ ಆಸೆಪಟ್ಟದ್ದು ಅದಕ್ಕೇ. ಜ್ವಾಲಾ, ಭೀಖೂ ಇಬ್ಬರೂ ನನಗೆ ಮಕ್ಕಳು ಅಂತ ಅಂದುಕೊಂಡಿದೀನಿ. ಅವರ ಆಶ್ರಯದಲ್ಲಿ ಬದುಕು ಕಳೀತೀನಿ. ಇಲ್ಲಿ ನನಗೆ ಯಾರಿದಾರೆ?"

ಛಿನಕಿ ಹೇಳಿದ ಮಾತಿನಲ್ಲಿ ತಥ್ಯವಿದೆಯೆಂದು ಶಿವಲಾಲನಿಗೆ ಅನ್ನಿಸಿತು. "ನೀನು ಹೇಳೋದು ಸರಿ. ನೀನೂ ಹೊರಡೋಕ್ಕೆ ತಯಾರಿ ಮಾಡಿಕೊ. ನಾವು ಸೋಮ ವಾರವೇ ಹೊರಡೋಣ."

ಮುನಿಷಿ ಶಿವಲಾಲನ ಜತೆ ಛಿನಕಿಯೂ ಹೊರಡುವಳೆಂದು ಕೇಳಿ ರಾಧೇಲಾಲನಿಗೆ ಕಳವಳಕ್ಕಿಟ್ಟುಕೊಂಡಿತು. ಅಣ್ಣ ಮಗನ ಜತೆ ಇರುವ ಯೋಚನೆಯಿಂದ ಒಟ್ಟಿಗೆ ಒಮ್ಮೆಲೇ ಹೊರಟುಹೋಗುತ್ತಿದ್ದಾನೆಯೋ ಹೇಗೆ? ರಾಧೇಲಾಲ ತನ್ನ ಮನಸ್ಸಿನಲ್ಲಿ ಈ ಪ್ರಶ್ನೆಗೆ ಉತ್ತರ ಪಡೆಯಲು ಪ್ರಯತ್ನಿಸುತ್ತಿದ್ದ. ಈ ಸುದ್ದಿ ಕೇಳಿ ರಾಧೇಲಾಲನ ಕುಟುಂಬದಲ್ಲಿಯೂ ಕೋಲಾಹಲವೆದ್ದಿತು. ಶನಿವಾರ ಸಂಜೆ ಸಮಯ ಕಾದು ರಾಧೇ ಲಾಲ ಶಿವಲಾಲನ ಹತ್ತಿರ ಮಾತು ತೆಗೆದ, "ಅಣ್ಣ, ಛಿನಕಿ ಹೋಗೋದರಿಂದ ಮನೆಯ ವ್ಯವಸ್ಥೆಯೆಲ್ಲಾ ಎಡವಟ್ಟಾಗುತ್ತದೆ. ನೀನು ಸುಮ್ಮನೇ ವ್ಯರ್ಥವಾಗಿ ಅವಳನ್ನ ನಿನ್ನ

ಜೊತೆ ಕರಕೊಂಡು ಹೋಗ್ತಿದಿ. ತಿಂಗಳು, ಎರಡು ತಿಂಗಳು ಘಾಟಮಪುರದಲ್ಲಿದ್ದು ನೀನು ಹೇಗೂ ಸೊಸೆ ಜೊತೆ ವಾಪಸು ಬರಲೇಬೇಕು ತಾನೆ."

"ಯಾಕೆ, ಮನೆ ನೋಡಿಕೊಳ್ಳೋಕೆ ಛೋಟೀ ಇದಾಳೆ, ರಾಮೂನ ಹೆಂಡತಿ ಇದಾಳೆ. ನನ್ನನ್ನ ನೋಡಿಕೊಳ್ಳೋಕೂ ಯಾರಾದರೂ ಬೇಕಲ್ಲವೆ? ಅದಕ್ಕೋಸ್ಕರ ಛಿನಕೀನ ನನ್ನ ಜೊತೆ ಕರಕೊಂಡು ಹೋಗ್ತಿದೀನಿ," ಶಿವಲಾಲ ಕೊಂಚ ಬಿರುಸಾಗಿಯೇ ಉತ್ತರಕೊಟ್ಟ.

"ಅಲ್ಲಿ ಜ್ವಾಲನ ಹೆಂಡತಿ ಇದಾಳಲ್ಲ. ನೀನು ಹೋಗ್ತಿರೋದು ತಿಂಗಳು ಎರಡು ತಿಂಗಳಿಗೋಸ್ಕರ; ಸೊಸೇನ ಕರಕೊಂಡು ವಾಪಸು ಬಂದೇ ಬರಬೇಕಾಗುತ್ತೆ. ಅಷ್ಟು ದಿನ ಜ್ವಾಲನ ಹೆಂಡತಿ ನಿನ್ನನ್ನ ಚೆನ್ನಾಗಿಯೇ ನೋಡಿಕೋತಾಳೆ."

ರಾಧೇಲಾಲ ಮತ್ತೆ ಮತ್ತೆ ತಿಂಗಳು ಎರಡು ತಿಂಗಳು ಬಿಟ್ಟು ತಾನು ಸೊಸೆಯ ಜತೆ ವಾಪಸು ಬರುವ ಮಾತೆತ್ತಿದ್ದನ್ನು ಕಂಡು ಶಿವಲಾಲ ಸಿಟ್ಟಿಗೆದ್ದ, "ಜ್ವಾಲನ ಹೆಂಡತಿ ದೊಡ್ಡ ಆಫೀಸರನ ಹೆಂಡತಿ; ಅಲ್ಲದೇ ಅವಳು ಬಾಣಂತಿ. ಇನ್ನೊಬ್ಬರ ಸೇವೆ ಮಾಡಲಿ ಅಂತ ದೇವರು ಅವಳನ್ನ ತಹಸೀಲದಾರನ ಹೆಂಡತಿಯನ್ನಾಗಿ ಮಾಡಿದಾನೆಯೆ! ಇಲ್ಲ ರಾಧೇ, ನಾನು ಅವಳಿಂದ ಸೇವೆ ಮಾಡಿಸಿಕೊಳ್ಳೋಲ್ಲ. ದೇವರ ದಯೆಯಿಂದ ಈಗ ಜ್ವಾಲಾ ದೊಡ್ಡ ಹುದ್ದೇಲಿದಾನೆ. ಅವನ ಹಾಗೂ ಅವನ ಹೆಂಡತಿಯ ಘನತೆ ಗೌರವ ಹೆಚ್ಚಲಿ! ಈಗ ನನ್ನ ವೃದ್ಧಾಪ್ಯದ ಕಾಲ ಬೇರೆ. ತಿಂಗಳು, ಎರಡು ತಿಂಗಳಲ್ಲಿ ವಾಪಸು ಬರಬೇಕು ಅಂತ ಇರಾದೆಯೇನೋ ಇದೆ, ಆದರೂ ಮನಸ್ಸಾದರೆ ಅಲ್ಲೇ ಆರು ತಿಂಗಳು ವರ್ಷ ಇದ್ದರೂ ಇದ್ದೆ. ಅದನ್ನ ಅಲ್ಲಿ ಹೋದ ಮೇಲೆ ನಿಷ್ಕರ್ಷೆ ಮಾಡ್ತೀನಿ. ಎಷ್ಟೇ ಆದರೂ ನನ್ನ ಮಗ, ಹೊರಗಿನವನೇನೂ ಅಲ್ಲ."

ಮುನಿಷಿ ಶಿವಲಾಲನಿಗೆ ಫತಹಪುರಕ್ಕೆ ವಾಪಸು ಬರುವ ಇಚ್ಛೆಯಿಲ್ಲವೆಂಬುದು ರಾಧೇಲಾಲನಿಗೆ ಅರಿವಾಯಿತು. ರಾಧೇಲಾಲನ ಕುಟುಂಬ ದೊಡ್ಡದು. ಮನೆಯ ಖರ್ಚುವೆಚ್ಚವೂ ಬೆಳೆದಿತ್ತು. ರಾಧೇಲಾಲನಿಗೆ ನಾಲ್ಕು ಮಕ್ಕಳು — ರಾಮಲಾಲ, ಶ್ಯಾಮಲಾಲ, ಕಿಶನಲಾಲ, ಬಿಶನಲಾಲ. ರಾಮಲಾಲ ಶ್ಯಾಮಲಾಲರು ಓದು ಬಿಟ್ಟಿದ್ದರು. ಅವರಲ್ಲಿ ರಾಮಲಾಲನಿಗೆ ಮದುವೆಯಾಗಿತ್ತು. ಕಿಶನಲಾಲ, ಬಿಶನಲಾಲರಿನ್ನೂ ಓದುತ್ತಿದ್ದರು. ರಾಮಲಾಲ ಉರ್ದೂ ಮಿಡಲ್ ಮುಗಿಸಿ ಪಟವಾರಿಯ ಕೆಲಸಕ್ಕಾಗಿ ಪ್ರಯತ್ನ ನಡಸಿದ್ದ. ಶ್ಯಾಮಲಾಲ ಮೂರು ಬಾರಿ ಉರ್ದೂ ಮಿಡಲ್‌ನಲ್ಲಿ ಢುಂಕೀ ಹೊಡೆದು ಪುಂಡತನಕ್ಕೆ ಇಳಿದಿದ್ದ. ಮುನಿಷಿ ಶಿವಲಾಲ ಒಂದಿಷ್ಟು ಹಣ ಉಳಿಸಿ ಹತ್ತು ಬೀಘಾ ಜಮೀನು ಕೊಂಡು, ಅದರ ಬೇಸಾಯವನ್ನು ಶ್ಯಾಮಲಾಲನಿಗೇ ವಹಿಸಿದ್ದ. ಆದರೆ ಶ್ಯಾಮಲಾಲನ ಕೈಯಲ್ಲಿ ಕೆಲಸ ಹರಿಯುತ್ತಿರಲಿಲ್ಲ. ಹೀಗಾಗಿ ಜಮೀನಿನಿಂದ ಕಂದಾಯದ ಹಣ ಹುಟ್ಟುವುದೇ ಕಷ್ಟವಾಗುತ್ತಿತ್ತು.

ರಾಧೇಲಾಲ ಜೋಲುಮುಖ ಹಾಕಿಕೊಂಡು ಹೇಳಿದ, "ಅಣ್ಣ, ಮನೇ ಸ್ಥಿತಿ ನಿನಗೆ

ಗೊತ್ತೇ ಇದೆ. ನೀನು ಹೋದ ಮೇಲೆ ಜ್ವಾಲಾ ತಿಂಗಳು ತಿಂಗಳೂ ಮನೆಗೆ ಕಳಿಸ್ತಾ ಇದ್ದ ಇಪ್ಪತ್ತು ರೂಪಾಯಿಯೇನೂ ನಿಂತು ಹೋಗೋಲ್ಲ ಅಲ್ಲವೇ?"

"ಇಲ್ಲ, ರಾಧೇ," ಮುನಿಷಿ ಶಿವಲಾಲ ನಗುತ್ತ ಹೇಳಿದ, "ನೀನು ನಿಶ್ಚಿಂತೆಯಿಂದಿರು. ನಾನು ಅವನಿಗೆ ಹೇಳಿ ತಿಂಗಳಿಗೆ ತಪ್ಪದೆ ಹತ್ತು ರೂಪಾಯಿ ಕಳಿಸಿಕೊಡ್ತೀನಿ. ಯಾವಾಗ ಲಾದರೂ ಹೆಚ್ಚು ಬೇಕಾದರೆ ತಿಳಿಸು. ಎಷ್ಟು ಸಾಧ್ಯವಾಗುತ್ತೋ ಅಷ್ಟು ಕಳಿಸ್ತೀನಿ. ರಾಮೂಗೆ ಹೇಳು, ಪಟವಾರಿಕೆ ಸಿಗದಿದ್ದರೆ ಜಿಲ್ಲಾಸ್ಕೂಲಿನಲ್ಲಿ ಮಾಸ್ತರಿಕೆ ಮಾಡಲಿ. ಮೌಲ್ವಿ ಸಲಾಮತುಲ್ಲಾರ ಜತೆ ನಾನು ಮಾತಾಡಿದೀನಿ. ಶ್ಯಾಮೂಗೆ ಸ್ವಲ್ಪ ಸರಿಯಾಗಿ ಬುದ್ಧಿ ಹೇಳಬೇಕು. ಮೈಮುರಿದು ಕೆಲಸಮಾಡಲಿ. ನಮ್ಮ ಜಮೀನಿನ ಪಕ್ಕದಲ್ಲೇ ಆ ಗೊಲ್ಲರ ಪಂಚಮ ಇದಾನಲ್ಲ ಅವನದ್ದು ಐದು ಬೀಘಾ ಜಮೀನು ಬಿಕರಿಗಿದೆ. ಅವನ ಜೊತೆ ಮಾತಾಡಿ ಅದನ್ನ ಖರೀದಿ ಮಾಡು, ಹಣದ ವ್ಯವಸ್ಥೆ ಮಾಡೋಣವಂತೆ. ನೋಡು, ಸಾಧ್ಯವಾದರೆ ಬರೋ ಬೇಸಗೆಯೊಳಗೆ ಶ್ಯಾಮೂಗೆ ಮದುವೆ ಮಾಡಿಬಿಡು. ಮದುವೆ ಯಾದ ಮೇಲೆ ಅವನ ಚಾಳಿ ಬದಲಾಗಬಹುದು."

ಶಿವಲಾಲನ ಆಶ್ವಾಸನೆಯ ಮಾತನ್ನು ಕೇಳಿ ರಾಧೇಲಾಲನ ಮನಸ್ಸು ಸ್ವಲ್ಪ ಹಗುರ ವಾಯಿತು. ಆದರೆ ಜೀವನಕ್ರಮದಲ್ಲಿ ಏನೋ ಬದಲಾವಣೆಯಾಗಲಿದೆಯೆಂದು ಅವನಿಗೆ ಅನಿಸದೇ ಇರಲಿಲ್ಲ. ಒಂದು ಕಡೆ ಅವನಿಗೆ ತನ್ನ ಮಕ್ಕಳ ಕುಬುದ್ಧಿ, ಮೈಗಳ್ಳತನಗಳನ್ನು ನೆನೆದು ಕ್ರೋಧ ಉಕ್ಕಿದರೆ ಇನ್ನೊಂದು ಕಡೆ ಅದಕ್ಕಿಂತ ಹೆಚ್ಚಾಗಿ ಜ್ವಾಲಾಪ್ರಸಾದ ಹಾಗೂ ಅವನ ಹೆಂಡತಿಯ ಭಾಗ್ಯವನ್ನು ಕಂಡು ಅಸೂಯೆ ಉರಿಯುತ್ತಿತ್ತು. ಮುನಿಷಿ ಶಿವ ಲಾಲನನ್ನು ಇನ್ನು ಹೆಚ್ಚು ಬಲವಂತ ಪಡಿಸುವುದು ವ್ಯರ್ಥವೆಂದು ಅವನು ಬಲ್ಲ. ಅಣ್ಣನ ಬಗೆಗೆ ಅವನಲ್ಲಿ ಒಂದು ಬಗೆಯ ಜುಗುಪ್ಸೆಯೂ ಉಂಟಾಗತೊಡಗಿತು. ಆದರೆ ಅವ ನೊಳಗಿನ ಭಯ ಆ ಜುಗುಪ್ಸೆಯನ್ನು ಮುಚ್ಚಿಬಿಟ್ಟಿತ್ತು.

ಘಾಟಮಪುರ ತಲಪಿದಾಗ ಮುನಿಷಿ ಶಿವಲಾಲನಿಗೆ ತಾನು ಸ್ವರ್ಗಕ್ಕೇ ಬಂದೆನೇನೋ ಎಂದು ಅನಿಸತೊಡಗಿತು. ಜ್ವಾಲಾಪ್ರಸಾದ ಹೆಸರಿಗೆ ಮಾತ್ರ ನಾಯಬ್–ತಹಸೀಲ ದಾರನಾಗಿದ್ದ. ವಾಸ್ತವವಾಗಿ ಅವನ ಅಧಿಕಾರ, ಆಡಳಿತ, ದರ್ಪಗಳೆಲ್ಲವೂ ತಹಸೀಲ ದಾರನವೇ. ಜ್ವಾಲಾಪ್ರಸಾದನ ತಂದೆ ಎಂಬ ಕಾರಣದಿಂದಾಗಿ ಶಿವಲಾಲನಿಗೆ ಎಲ್ಲೆಲ್ಲೂ ತುಂಬ ಮರ್ಯಾದೆ ಸಿಗುತ್ತಿತ್ತು; ಅವನ ಮಾತೂ ನಡೆಯುತ್ತಿತ್ತು. ಊರ ಜನ ಅವನಿಂದ ಸಲಹೆ ಪಡೆಯಲು ಬರುತ್ತಿದ್ದರು; ಅವನ ಸಲಹೆಗೆ ಬೆಲೆಯೂ ಇತ್ತು. ಯಾವುದಕ್ಕೂ ಅಭಾವವಿಲ್ಲವೆಂಬಂತೆ ಮನೆ ಸದಾ ತುಂಬಿರುತ್ತಿತ್ತು. ಅವನು ಚದುರಂಗ ವಾಡಲು ಆಗಾಗ್ಗೆ ಮೀರ್ ಸಾಹೇಬರಲ್ಲಿಗೆ ಹೋಗುತ್ತಿದ್ದ. ಅವರಿಬ್ಬರ ನಡುವೆ ಆತ್ಮೀಯವಾದ ಸ್ನೇಹ ಬೆಳೆದಿತ್ತು.

ಚಳಿಗಾಲ ಮುಗಿದು ಎಲ್ಲೆಲ್ಲೂ ಫಸಲು ಬಲಿಯ ಹತ್ತಿತ್ತು. ಮಧ್ಯಾಹ್ನದ

ಹೊತ್ತು. ಮುನಿಷಿ ಶಿವಲಾಲ ಬೈಠಕ್‌ಖಾನೆಯಲ್ಲಿ ಹುಕ್ಕ ಕುಡಿಯುತ್ತ ಕುಳಿತಿದ್ದ. ಹೊರಗೆ ಯಾರೋ 'ಜ್ವಾಲಾಬಾಬು' ಎಂದು ಕೂಗಿದರು.

ಮುನಿಷಿ ಶಿವಲಾಲ ಎದ್ದು ಹೊರಗೆ ಬಂದು ನೋಡಿದ. ಬಂದಿದ್ದವನು ಠಾಕೂರ್ ಗಜರಾಜಸಿಂಹ. ಇದುವರೆಗೆ ಅವನ ಭೇಟಿಯಾಗಿರಲಿಲ್ಲವಾದ್ದರಿಂದ ಮುನಿಷಿ ಶಿವಲಾಲನಿಗೆ ಠಾಕೂರ್ ಗಜರಾಜಸಿಂಹನ ಗುರುತು ಹಿಡಿಯುವುದಾಗಲಿಲ್ಲ. ಬರಜೋರಸಿಂಹನ ಪ್ರಸಂಗದಿಂದಾಗಿ ಗಜರಾಜಸಿಂಹ, ಜ್ವಾಲಾಪ್ರಸಾದರ ಮನಸ್ಸಿನಲ್ಲಿ ಉಂಟಾಗಿದ್ದ ಕಹಿ ಇದುವರೆಗೂ ದೂರವಾಗಿರಲಿಲ್ಲ. ತನ್ನ ಮುಂದೆ ನಿಂತಿರುವ ವ್ಯಕ್ತಿ ಸಾಧಾರಣನಲ್ಲವೆಂಬುದನ್ನು ಮುನಿಷಿ ಶಿವಲಾಲನ ಅನುಭವೀದೃಷ್ಟಿ ಕಂಡುಕೊಂಡಿತು. "ಬನ್ನಿ, ಕೂತುಕೊಳ್ಳಿ. ಜ್ವಾಲಾ ಸರ್ಕೀಟಿನ ಮೇಲೆ ಹೋಗಿದಾನೆ. ನಾಳೆ ಸಾಯಂಕಾಲದೊಳಗೆ ಬರ್‍ತಾನೆ. ನೀವು ಅವನಿಗೆ ಏನಾದರೂ ಹೇಳೋದಿದ್ದರೆ ತಿಳಿಸಿ; ಬಂದಮೇಲೆ ಹೇಳ್ತೀನಿ."

"ಠಾಕೂರ್ ಗಜರಾಜಸಿಂಹ ಏನೋ ಜರೂರೀ ಕೆಲಸದ ಮೇಲೆ ಬಂದಿದ್ದರು ಅಂತ ಅವರಿಗೆ ಹೇಳಿಬಿಡಿ, ಅಷ್ಟೇ ಸಾಕು. ನಾನು ನಾಡಿದ್ದು ಬೆಳಗ್ಗೆ ಅವರನ್ನ ಬಂದು ಕಾಣ್ತೇನಿ," ಹೀಗೆಂದು ಠಾಕೂರ್ ಗಜರಾಜಸಿಂಹ ಹೊರಡಲೆಂದು ತಿರುಗಿದವನು ಕಾಲುಗಳು ತಾವೇತಾವಾಗಿ ನಿಂತವೋ ಎಂಬಂತೆ ಮತ್ತೆ ಮುನಿಷಿ ಶಿವಲಾಲನ ಕಡೆ ತಿರುಗಿ ಅವನನ್ನೊಮ್ಮೆ ದೃಷ್ಟಿಸಿ ನೋಡಿದ. "ತಮ್ಮನ್ನ ನೋಡ್ತಿರೋದು ಇದೇ ಮೊದಲು. ತಾವು ಜ್ವಾಲಾಬಾಬೂನ ತಂದೇನೆ?"

ಮುನಿಷಿ ಶಿವಲಾಲ ನಗುತ್ತ ಉತ್ತರ ಕೊಟ್ಟ, "ಹೌದು, ನೀವು ಸರಿಯಾಗಿ ಗುರುತು ಹಿಡಿದಿರಿ. ನಾನು ಜ್ವಾಲಾಪ್ರಸಾದನ ತಂದೆ. ಜರೂರಾದ ವಿಷಯ ಏನಾದರೂ ಇದ್ದರೆ ನನಗೆ ಹೇಳಬಹುದು. ನಾನು ಅವನಿಗೆ ತಿಳಿಸ್ತೀನಿ."

"ಅಯ್ಯೋ, ನಿಮಗೆ ಯಾಕೆ ತೊಂದರೆ? ನಾನೇ ಖುದ್ದಾಗಿ ಬಂದು ಅವರನ್ನ ಕಾಣ್ತೇನಿ" ಎಂದವನು ಮತ್ತೆ ತಡೆದು ಹೇಳಿದ, "ನೀವು ಅನುಭವಸ್ಥರು. ನಿಮಗೆ ಪೂರ್ತಿ ಕತೆ ಹೇಳೋದರಲ್ಲಿ ಏನೂ ತಪ್ಪಿಲ್ಲ. ದೊಡ್ಡ ಧರ್ಮಸಂಕಟದಲ್ಲಿ ಸಿಕ್ಕಿ ಬಿದ್ದಿದೀನಿ. ನೀವು ಏನಾದರೂ ಪರಿಹಾರ ಸೂಚಿಸಬಹುದು."

ಗಜರಾಜಸಿಂಹನಿಂದ ಪೂರ್ತಿ ಕತೆ ಕೇಳಿದ ಮೇಲೆ ಬರಜೋರಸಿಂಹನ ಕುಟುಂಬದ ಬಗ್ಗೆ ಮುನಿಷಿ ಶಿವಲಾಲನ ಮನಸ್ಸಿನಲ್ಲಿ ದಯೆ ಉಕ್ಕಿಬಂತು. "ನೀವು ನಿಶ್ಚಿಂತೆಯಿಂದಿರಿ, ಠಾಕೂರ್ ಸಾಹೇಬ್. ನಾನು ಜ್ವಾಲನಿಗೆ ಎಲ್ಲಾನ್ನೂ ಹೇಳ್ತೀನಿ. ಜ್ವಾಲನ ಕೈಯಲ್ಲಿ ಏನಾದರೂ ಮಾಡೋಕ್ಕೆ ಸಾಧ್ಯವಾಗೋದಾದರೆ ಅವನು ಇಲ್ಲ ಅನ್ನೊಲ್ಲ. ಆ ಬಗ್ಗೆ ನಾನು ಭರವಸೆ ಕೊಡ್ತೀನಿ."

ಮಾರನೆಯ ದಿನ ಜ್ವಾಲಾಪ್ರಸಾದ ಪ್ರವಾಸದಿಂದ ಹಿಂದಿರುಗಿದ ಮೇಲೆ ಶಿವಲಾಲ ಹೇಳಿದ, "ಮಗೂ, ನಿನ್ನೆ ಮಧ್ಯಾಹ್ನ ಠಾಕೂರ್ ಗಜರಾಜಸಿಂಹ ನಿನ್ನನ್ನ ಕಾಣೋಕ್ಕೆ ಬಂದಿದ್ದರು."

ಜ್ವಾಲಾಪ್ರಸಾದ ಆಶ್ಚರ್ಯದಿಂದ ಕೇಳಿದ. "ಏನು, ಠಾಕೂರ್ ಗಜರಾಜಸಿಂಹ ಬಂದಿದ್ದರೆ? ನನ್ನನ್ನ ಕಾಣೋಕ್ಕೆ? ಏನಾದರೂ ಹೇಳಿದರೇನು?"

"ಹೌದು, ಬರಜೋರಸಿಂಹನ ಜಮೀನಿನ ವಿಷಯವಾಗಿ ಮಾತಾಡೋಕ್ಕೆ ಬಂದಿದ್ದರು. ಫಸಲು ಬಲಿತು ನಿಂತಿದೆ. ಜೈದೇಯಿಯ ಹೆಸರಿನಲ್ಲಿ ಜಮೀನು ದಾಖಲಾಗಿಬಿಟ್ಟಿದೆ. ಜಮೀನನ್ನ ವಶಪಡಿಸಿಕೊಡಬೇಕು ಅಂತ ಜೈದೇಯಿಯ ಗುಮಾಸ್ತೆ ಲಚ್ಛೀರಾಮ ಕೋರ್ಟಿಗೆ ಅರ್ಜಿ ಹಾಕಿದಾನಂತೆ. ಬೆಳೆದು ನಿಂತ ಫಸಲಿನ ವಿಷಯ. ನಿನ್ನ ಸಹಾಯ ಕೇಳ್ತಿದ್ದರು."

ಜ್ವಾಲಾಪ್ರಸಾದನ ಮುಖ ಖಿನ್ನವಾಯಿತು. "ನಾನೇನು ಮಾಡೋಕ್ಕಾಗುತ್ತೆ, ಅಪ್ಪ. ಲಂಬರ್‌ದಾರಿಣಿಯ ಹೆಸರಿನಲ್ಲಿ ದಾಖಲೆಪತ್ರವಾಗಿದೆ. ಅಂದಮೇಲೆ ಅವಳಿಗೆ ಜಮೀನು ವಶವಾಗಿಯೇ ತೀರುತ್ತೆ. ನಾನೇನು ತಾನೇ ಮಾಡಬಲ್ಲೆ. ನೀವೇ ಹೇಳಿ," ಅವನ ಧ್ವನಿಯಲ್ಲಿ ಕರುಣೆ, ಅಸಹಾಯತೆಗಳು ತುಂಬಿದ್ದವು.

"ನೀನು ಇಷ್ಟು ಮಾಡಬಹುದು. ಬರಜೋರಸಿಂಹನ ಹೆಂಡತಿಯಿಂದ ನೇರವಾಗಿ ಲಂಬರ್‌ದಾರಿಣಿಗೆ ಜಮೀನಿನ ವಶ ಕೊಡಿಸಿಕೊಡು. ಆದರೆ ಒಂದು ಷರತ್ತಿನ ಮೇಲೆ —ಲಂಬರ್‌ದಾರಿಣಿ ಬರಜೋರಸಿಂಹನ ಹೆಂಡತಿಗೆ ಫಸಲು ಕೊಯ್ದುಕೊಳ್ಳೋಕ್ಕೆ ಬಿಡಬೇಕು. ಹೀಗಾದರೆ ಸಮಸ್ಯೆ ಸುಲಭವಾಗಿ ಬಗೆಹರಿಯುತ್ತೆ ಅಂತ ನನಗನ್ನಿಸುತ್ತೆ."

"ಏನು, ಬರಜೋರಸಿಂಹನ ಹೆಂಡತಿ ಇಲ್ಲಿ ಘಾಟಮಪ್ಪುರಕ್ಕೆ ಬಂದಿದಾಳೆಯೆ?"

"ಹೌದು, ತನ್ನ ಮಕ್ಕಳುಮರಿ ಸಮೇತ ಗಜರಾಜಸಿಂಹನ ಮನೇಲಿ ಇಳಿಕೊಂಡಿದಾಳಂತೆ. ಗಜರಾಜಸಿಂಹ ಮತ್ತೆ ನಾಳೆ ಬೆಳಗ್ಗೆ ಬಂದು ಕಾಣೋದಾಗಿ ಹೇಳಿಹೋದರು." ಸ್ವಲ್ಪ ಹೊತ್ತು ಸುಮ್ಮನಿದ್ದು ಶಿವಲಾಲ ಮತ್ತೆ ಹೇಳಿದ, "ಅನಾಥ ವಿಧವೆ! ಕೈಲಾದ್ದನ್ನ ಮಾಡು, ಮಗು!"

ಜ್ವಾಲಾಪ್ರಸಾದ ಖಿನ್ನನಾಗಿ ಉತ್ತರ ಕೊಟ್ಟ, "ಏನಾದರೂ ಮಾಡೋಕ್ಕೆ ಪ್ರಯತ್ನಿಸ್ತೀನಿ. ನೀವು ಕೊಟ್ಟ ಸೂಚನೆಗೆ ಜೈದೇಯಿ ಒಪ್ಪಿದರೂ ಒಪ್ಪಬಹುದು."

ಸಂಜೆಗೆ ಸ್ವಲ್ಪ ಮುಂಚೆ ಜ್ವಾಲಾಪ್ರಸಾದ ಶಿವಪುರಕ್ಕೆ ಹೊರಟ. ಅವನು ಶಿವಪುರ ತಲಪಿದಾಗ ಕತ್ತಲೆ ಕವಿಯುತ್ತಿತ್ತು. ಪ್ರಭುದಯಾಳನ ಬಂಗಲೆಯ ಹೆಬ್ಬಾಗಿಲಲ್ಲಿದ್ದ ರಾಧಾಕೃಷ್ಣರ ಗುಡಿಯಲ್ಲಿ ಆರತಿ ನಡೆಯುತ್ತಿತ್ತು. ಅದರ ವೈಭವ ಮೊದಲಿನಂತೆಯೇ ಇತ್ತು. ಲಂಬರ್‌ದಾರಿಣಿಯ ಆಳುಗಳು ಜ್ವಾಲಾಪ್ರಸಾದನಿಗೆ ಬಗ್ಗಿ ನಮಸ್ಕಾರಮಾಡಿ ಸ್ವಾಗತಿಸಿದರು; ಅವನನ್ನು ಬೈಠಕ್‌ಖಾನೆಯಲ್ಲಿ ಕೂರಿಸಿ ಅವನು ಬಂದಿರುವ ಸುದ್ದಿಯನ್ನು ಜೈದೇಯಿಗೆ ತಿಳಿಸಿದರು. ಗುಮಾಸ್ತೆ ಲಚ್ಛೀರಾಮನಾಗಲೇ ತನ್ನ ಮನೆಗೆ ಹೊರಟು ಹೋಗಿದ್ದ; ಜ್ವಾಲಾಪ್ರಸಾದ ಬಂದಿರುವನೆಂದು ಅವನಿಗೂ ಸುದ್ದಿ ಕಳಿಸಿದರು.

ಜೈದೇಯಿ ಜ್ವಾಲಾಪ್ರಸಾದನನ್ನು ತನ್ನ ಸ್ವಂತ ಕೋಣೆಗೆ ಬರಮಾಡಿಕೊಂಡಳು. ಅವನು ಬಂದೊಡನೆಯೇ ಎದ್ದು ಸ್ವಾಗತ ಕೋರುತ್ತ ಹೇಳಿದಳು, "ನೀನು ಬಂದದ್ದು ದೊಡ್ಡ ಭಾಗ್ಯ, ದೇವರ್‌ಜಿ. ನಾನು ಒಂದೆರಡು ಸಲ ಹೇಳಿಕಳಿಸಿದ್ದೆ. ಆದರೆ ನೀನು

ಸರಕಾರೀ ಅಧಿಕಾರಿ ತಾನೇಪ್ಪ! ಯಾವಾಗ ನೋಡಲಿ ಸರ್ಕೀಟಿನ ಮೇಲಿರ್‍ತಿ!" ಜೈದೇಯಿ ನಕ್ಕಳು.

ಜ್ವಾಲಾಪ್ರಸಾದನೂ ನಗುತ್ತ ಹೇಳಿದ, "ಏನು ಹೇಳಲಿ, ಅತ್ತಿಗೆ. ಉಸಿರು ಕಟ್ಟೋ ಅಷ್ಟು ಕೆಲಸದ ಹೊಡೆತ! ಮನೇಲಿ ನೆಟ್ಟಗೆ ಕೂತುಕೊಳ್ಳೋಕ್ಕೂ ಪುರಸೊತ್ತು ಸಿಗೋಲ್ಲ. ನನ್ನ ಕೆಲಸದ ಜೊತೆಗೆ ಮೀರ್‌ಸಾಹೇಬರ ಕೆಲಸಾನೆಲ್ಲಾ ನೋಡಿಕೋ ಬೇಕಾಗಿದೆ. ನಿನ್ನೆ ರಾತ್ರಿ ತಾನೇ ಸರ್ಕೀಟಿನಿಂದ ಹಿಂದಿರುಗಿ ಬಂದೆ. ಇವತ್ತು ಬೆಳಗ್ಗೆ ಇದ್ದಕ್ಕಿದ್ದ ಹಾಗೆ ಅತ್ತಿಗೇನ ನೋಡಿ ಬಹಳ ದಿನವಾಯಿತು ಅಂತ ನೆನಪಾಯ್ತು. ಈಗ ಪುರಸೊತ್ತು ಮಾಡಿಕೊಂಡು ಹೊರಟುಬಂದೆ."

"ನೀನು ಬಂದದ್ದು ದೊಡ್ಡ ಕೃಪೆ, ದೇವರ್‌ಜಿ! ನನಗೆ ಇಲ್ಲಿ ಇರೋ ಒಂದು ಆಸರೆ ಅಂದರೆ ನೀನು, ನೋಡು. ಕೂತುಕೋ, ಅದ್ಯಾಕೆ ನಿಂತಿದಿ? ನಾನು ನಿಮ್ಮ ಮನೆಗೂ ಬಂದಿದ್ದೆ. ನಿಮ್ಮ ಮಗು ಅದೆಷ್ಟು ಮುದ್ದಾಗಿದೆ! ನನ್ನ 'ಗೆಳತಿ' ಹುಷಾರಾಗಿದಾಳೆ, ಅಲ್ಲವೆ?"

ಜೈದೇಯಿ ಯಮುನಳನ್ನು 'ಗೆಳತಿ' ಯೆಂದೇ ಕರೆಯುತ್ತಿದ್ದಳು. ಇದು ಜ್ವಾಲಾ ಪ್ರಸಾದನಿಗೂ ಗೊತ್ತಿತ್ತು. ಅವನಂದ, "ಹ್ಞೂ, ಅತ್ತಿಗೆ. ನಿಮಗೆ ನಮಸ್ಕಾರ ತಿಳಿಸೋಕ್ಕೆ ಹೇಳಿದಾಳೆ." ಸ್ವಲ್ಪ ತಡೆದು ಅವನು ಮುಂದುವರಿಸಿದ. "ಅತ್ತಿಗೆ. ಒಂದು ಜರೂರೀ ಕೆಲಸದ ಮೇಲೆ ನಿಮ್ಮ ಹತ್ತಿರ ಬಂದಿದೀನಿ! ನಿಮ್ಮಲ್ಲಿ ಒಂದು ಅರಿಕೆ ಮಾಡಿ ಕೊಳ್ಳೋದಿದೆ. ನೀವು ಬರಜೋರನ ಜಮೀನನ್ನ ವಶಕ್ಕೆ ತೊಗೋತಿದೀರಂತಲ್ಲ, ಅತ್ತಿಗೆ."

"ಹೌದಪ್ಪ, ಲಚ್ಛೀರಾಮನಿಗೆ ಹೇಳಿ ಆಗಬೇಕಾದ ಕೆಲಸಕಾರ್ಯಾನೆಲ್ಲಾ ಮುಗಿಸಿದೀನಿ. ನಾಲ್ಕಾರು ದಿನದಲ್ಲಿ ಜಮೀನು ವಶಕ್ಕೆ ತೊಗೋಬೇಕು. ಬಹಳ ದಿನದಿಂದ ಹಾಗೆಯೇ ಉಳಿದಿದೆ ಈ ವಿಷಯ."

"ಅತ್ತಿಗೆ, ಬರಜೋರಸಿಂಹನ ಹೆಂಡತಿ ಮಕ್ಕಳು ಇಲ್ಲಿ ಬಂದಿದಾರೆ ಅಂತ ನಿಮಗೆ ತಿಳಿಸೋಕ್ಕೆ ಬಂದೆ. ಕವಡೇಗೂ ದಿಕ್ಕಿಲ್ಲ ಅನ್ನೋ ಸ್ಥಿತಿಯಾಗಿದೆ ಅವರದ್ದು. ನೀವು ಅವರಿಗೆ ಈ ಫಸಲು ಕೊಯ್ದುಕೊಳ್ಳೋಕ್ಕೆ ಬಿಡಿ. ಕೊಯಿಲಾದ ಮೇಲೆ ಅವರಾಗಿಯೇ ನಿಮಗೆ ಜಮೀನನ್ನ ಒಪ್ಪಿಸಿಕೊಡ್ತಾರೆ. ಈಗಲೇ ಜಮೀನನ್ನ ವಶಕ್ಕೆ ತೊಗೊಳ್ಳೋದು ಬೇಡ ಅಂತ ಲಚ್ಛೀರಾಮನಿಗೆ ಹೇಳಿ."

ಜೈದೇಯಿಯ ಮುಖ ಗಂಭೀರವಾಯಿತು. ಅವಳು ತಲೆಯೆತ್ತದೆ ಹೇಳಿದಳು, "ಪ್ರತಿಯೊಬ್ಬರಿಗೂ ಅವರವರದ್ದೇ ಭಾಗ್ಯವಿರುತ್ತಪ್ಪ, ದೇವರ್‌ಜಿ. ಈ ಜಗತ್ತು ಬಡವರಿಂದ, ಅನಾಥರಿಂದ ತುಂಬಿದೆ. ಯಾರ ಯಾರ ದುಃಖಾನ ದೂರ ಮಾಡೋ ಕ್ಕಾಗುತ್ತೆ! ಆ ಜಮೀನಿನ ಮೇಲೆ ನನಗೆ ಅಧಿಕಾರವಿದೆ ಅಂತ ಒಪ್ತೀಯೋ ಇಲ್ಲವೋ ಹೇಳು."

"ನೀವು ಹೇಳೋದು ಸರಿ, ಅತ್ತಿಗೆ. ಜಮೀನಿನ ಜೊತೆಗೆ, ಬರಜೋರಸಿಂಹನ ಪ್ರಯಾಸದ ಫಲವಾಗಿ ಅಲ್ಲಿ ಬೆಳೆದು ನಿಂತಿರೋ ಫಸಲಿನ ಮೇಲೂ ನಿಮಗೆ ಅಧಿಕಾರ ವಿದೆ. ಇದು ಕಾನೂನಿನ ಮಾತಾಯಿತು. ಆದರೆ ನಾನು ನಿಮ್ಮನ್ನ ನಡಸಿಕೊಡಿ ಅಂತ ಕೇಳ್ತಿರೋದು ದಯಾದೃಷ್ಟಿಯಿಂದ, ಉಪಕಾರದ ದೃಷ್ಟಿಯಿಂದ."

ಜೈದೇಯಿಯ ಮುಖದ ಮೇಲೆ ಮತ್ತೊಮ್ಮೆ ನಗೆ ಸುಳಿಯಿತು. "ನೀನು ಎಷ್ಟು ಒಳ್ಳೆಯವನಪ್ಪ, ದೇವರ್‌ಜಿ! ಎಂಥ ದೊಡ್ಡ ಗುಣ ನಿನ್ನದು! ಈಗ ಜಮೀನು ವಶಪಡಿಸಿಕೊಳ್ಳೋದು ಬೇಡ ಅಂತ ಲಚ್ಚೀರಾಮನಿಗೆ ಹೇಳಿಬಿಡು. ನಾನು ನಿನ್ನ ಮಾತನ್ನು ಹೇಗೆ ತಾನೇ ತಳ್ಳಿಹಾಕಲಿ!" ಜೈದೇಯಿ ಮುಂದುವರಿದು ಹೇಳಿದಳು, "ಊಟ ಮಾಡಿಕೊಂಡು ಹೋಗಪ್ಪ. ನಾನೇ ಕೈಯಾರೆ ಅಡಿಗೆ ಮಾಡಿ ಬಡಿಸ್ತೀನಿ, ಈಗಲೇ. ಅಲ್ಲೀವರೆಗೆ ಕೊಂಚ ವಿಶ್ರಮಿಸಿಕೋ."

"ಈ ಸಲ ಕ್ಷಮಿಸಿಬಿಡಿ, ಅತ್ತಿಗೆ. ಅಪ್ಪನಿಗೆ ಹೇಳಿಬಂದಿಲ್ಲ. ಅವರು ಊಟಕ್ಕೆ ನನ್ನ ದಾರಿ ಕಾಯ್ತಾ ಇರ್‍ತಾರೆ. ಮುಂದಿನ ಸಲ ಬರೋವಾಗ ಮನೇಲಿ ಹೇಳಿ ಬಂದಿರ್‍ತೀನಿ. ನಿಮ್ಮ ಕೈಯ ಅಡಿಗೆ ಉಂಡುಕೊಂಡೇ ವಾಪಸು ಹೋಗ್ತೀನಿ."

"ಒಳ್ಳೇದು, ಆದರೆ ಒಂದಿಷ್ಟು ತಿಂಡೀನಾದರೂ ತಿನ್ನಲೇಬೇಕು."

ಜ್ವಾಲಾಪ್ರಸಾದ ತಿಂಡಿ ತಿಂದು ಹೊರಬಿದ್ದಾಗ ಲಚ್ಚೀರಾಮ ಹೊರಗೆ ಪಡಸಾಲೆ ಯಲ್ಲಿ ಕುಳಿತು ತನ್ನ ದಾರಿ ನೋಡುತ್ತಿದ್ದುದು ಕಾಣಿಸಿತು. ಜ್ವಾಲಾಪ್ರಸಾದ ಬಂದೊಡನೆಯೇ ಅವನು ಎದ್ದುನಿಂತು, "ಅಪ್ಪಣೆಯಾಗಲಿ, ಯಾಕಿಷ್ಟು ಶ್ರಮ ತೊಗೊಂಡಿರಿ" ಅಂದ.

"ನೀನು ಹೊತ್ತಿಗೆ ಸರಿಯಾಗಿ ಬಂದೆ, ಲಚ್ಚೀರಾಮ್. ಇನ್ನೊಂದೆರಡು ದಿನ ದಲ್ಲಿ ಬರಜೋರಸಿಂಹನ ಜಮೀನನ್ನ ವಶಪಡಿಸಿಕೊಳ್ಳೋ ಯೋಚನೇಲಿದೀಯಂತೆ?" ಜ್ವಾಲಾಪ್ರಸಾದ ಕೇಳಿದ.

"ಹೌದು, ನಾಯಬ್ ಸಾಹೇಬರೇ. ಲಂಬರ್‌ದಾರಿಣಿಯವರ ಅಪ್ಪಣೆಯಾಗಿದೆ. ವಶಕ್ಕೆ ತೊಗೊಳ್ಳೋದು ತುಂಬಾ ತಡವಾಯಿತು. ಕೊಯಿಲು ಹತ್ತಿರ ಬರ್‍ತಿದೆ."

"ಕೊಯಿಲು ಹತ್ತಿರ ಬರ್‍ತಿದೆ ಅಂತಾನೇ ಇದನ್ನ ಹೇಳೋಕ್ಕೆ ಬಂದೆ. ಅವರು ಫಸಲು ಕೊಯಿದುಕೊಳ್ಳೋವರೆಗೆ ಜಮೀನು ವಶ ತೊಗೊಳ್ಳೋದು ಬೇಡ. ಫಸಲು ಕೊಯಿದುಕೊಂಡಾದಮೇಲೆ ಬರಜೋರಸಿಂಹನ ಹೆಂಡತಿ ತಾನಾಗಿಯೇ ಜಮೀನನ್ನ ಬಿಟ್ಟುಕೊಡ್ತಾಳೆ. ನಾನು ಲಂಬರ್‌ದಾರಿಣಿ ಸಂಗಡ ಮಾತಾಡಿದೀನಿ. ಅವರು ಒಪ್ಪಿಗೆ ಕೊಟ್ಟಿದಾರೆ, ನಿನಗೆ ತಿಳಿಸು ಅಂತ ಹೇಳಿದಾರೆ."

ಲಚ್ಚೀರಾಮನಿಗೆ ಜ್ವಾಲಾಪ್ರಸಾದನ ಮಾತು ಸರಿಬೀಳಲಿಲ್ಲ. ಅವನಂದ, "ಲಂಬರ್ ದಾರಿಣಿ ಯಜಮಾನಿ, ಅವರ ಇಚ್ಛೆ ಪೂರೈಸುತ್ತೆ. ಆದರೆ, ನಾಯಬ್ ಸಾಹೇಬ್, ಜಮೀನು, ಆಸ್ತಿಪಾಸ್ತಿಗಳ ವ್ಯವಹಾರದಲ್ಲಿ ದಯಾಧರ್ಮಗಳಿಗೆ ಎಡೆಯಿಲ್ಲ. ಇದರಲ್ಲೇ

ಯಜಮಾನರ ಜೀವಹೋಯಿತು. ಲಂಬರ್‌ದಾರಿಣಿ ಇದಕ್ಕೆ ಹೇಗೆ ಒಪ್ಪಿದರು?"

ಲಚ್ಛೀರಾಮನ ಈ ದೂಷಣೆ ಜ್ವಾಲಾಪ್ರಸಾದನಿಗೆ ಕೆಟ್ಟನಿಸಿತು. ಅವನು ಬಿರುಸಾಗಿ ಹೇಳಿದ, "ಅದನ್ನೆಲ್ಲಾ ನಿಮ್ಮ ಯಜಮಾನೀನ ಕೇಳು. ನನಗೆ ಒಂದು ಮಾತ್ರ ಗೊತ್ತು; ಲಾಲಾ ಪ್ರಭುದಯಾಳ, ಲಂಬರ್‌ದಾರಿಣಿಯರಲ್ಲಿ ಭೂಮಿ–ಆಕಾಶಗಳ ಅಂತರವಿದೆ. ಈಗ ನಾನು ಹೇಳಬೇಕಾಗಿರೋದು ಇಷ್ಟು, ಜಮೀನು ವಶಪಡಿಸಿಕೊಳ್ಳೋ ತಂಟೆಗೆ ಹೋಗಕೂಡದು. ತಿಳೀತೇ?" ಲಚ್ಛೀರಾಮನ ಉತ್ತರಕ್ಕೆ ಕಾಯದೆ ಜ್ವಾಲಾಪ್ರಸಾದ ಅಲ್ಲಿಂದ ಹೊರಟುಬಿಟ್ಟ.

ಲಚ್ಛೀರಾಮ ಜೈದೇಯಿಯ ಹತ್ತಿರ ಹೋದ. ಅವಳು ಮಂಚದ ಮೇಲೆ ಕಣ್ಣುಮುಚ್ಚಿ ಮಲಗಿ, ಕನಸು ಕಾಣುವ ಪ್ರಯತ್ನದಲ್ಲಿದ್ದಳು, ಲಚ್ಛೀರಾಮನ ಹೆಜ್ಜೆಯ ಸಪ್ಪಳ ಕೇಳಿ ಅವಳಿಗೆ ಬರತೊಡಗಿದ್ದ ಕನಸು ಕಣ್ಣಿಂದ ಹಾಗೆಯೇ ಹಿಂದಿರುಗಿತೋ ಎಂಬಂತಾಯಿತು. ಅವಳು ಕಣ್ಣು ತೆರೆದಳು. ಲಚ್ಛೀರಾಮ ಎದುರಿಗೆ ನಿಂತಿದ್ದುದನ್ನು ಕಂಡು ಕೇಳಿದಳು, "ಯಾಕೆ ಲಚ್ಛೀ? ಏನಾಯಿತು?"

ಲಚ್ಛೀರಾಮ ಆವೇಶದಿಂದ ಹೇಳಿದ, "ಏನ್ರವ್ವಾ, ಇನ್ನುಮೇಲೆ ಈ ಮನೇಲಿ ನಾಯಬ್ ಸಾಹೇಬರ ಅಪ್ಪಣೆ ನಡೆಯುತ್ತೋ ಹೇಗೆ?"

ಲಚ್ಛೀರಾಮನ ಈ ರೂಪ ಜೈದೇಯಿಗೆ ಸರಿಕಾಣಲಿಲ್ಲ. ಆದರೂ ತನ್ನನ್ನು ತಾನೇ ತಡೆದುಕೊಂಡು ಸಹಜವಾದ ನಗೆ ಬೀರುತ್ತ ಹೇಳಿದಳು, "ನಾನು ನಾಯಬ್ ಸಾಹೇಬರಿಗೆ ನಿನ್ನ ಜೊತೆ ಮಾತನಾಡಿ ಅಂತ ಹೇಳಿದ್ದೆ. ಬಲು ಸಣ್ಣ ವಿಷಯ, ಅದಕ್ಕೆ ಕೋಪಿಸಿಕೊಳ್ಳೋದು ವ್ಯರ್ಥ."

ಲಚ್ಛೀರಾಮ ಹೇಳಿದ, "ಹಾಗಿದ್ದರೆ ನೀವು ಮೊದಲು ನನ್ನ ಜೊತೆ ಮಾತನಾಡಬೇಕಾಗಿತ್ತು, ಯಜಮಾನಿತಿಯೋರೆ. ಈ ಮನೆಯ ಕಾರಬಾರನ್ನ ನನಗೆ ವಹಿಸಿಕೊಟ್ಟಿದೀರಿ ಅಲ್ಲವೆ!"

ಜೈದೇಯಿ ಈ ಸಲ ಜೋರಾಗಿ ನಕ್ಕಳು, "ಹೌದು ಲಚ್ಛೀ, ನಾನೇ ನಿನಗೆ ಈ ಮನೆಯ ಕಾರಬಾರನ್ನ ವಹಿಸಿಕೊಟ್ಟಿದೀನಿ. ಆದರೆ ನಾಯಬ್ ಸಾಹೇಬರು ದೇವರಂಥ ಮನುಷ್ಯರು ಅಂತ ನಿನಗೆ ಗೊತ್ತಿದೆ. ಅವರು ನಮಗೆ ಎಷ್ಟೋಂದು ಆಸರೆಯಾಗಿದಾರೆ!"

"ಆದರೆ ಜಮೀನನ್ನ ನಾವು ವಶಕ್ಕೆ ತೊಗೊಳ್ಳಲೇಬೇಕು ಅಂತ ನನಗನ್ನಿಸುತ್ತೆ."

ಜೈದೇಯಿ ಸ್ವಲ್ಪ ಗಂಭೀರಳಾಗಿ ಹೇಳಿದಳು, "ಲಚ್ಛೀ, ಈ ಜಮೀನನ್ನ ವಶಕ್ಕೆ ತೊಗೊಳ್ಳೋಕ್ಕೆ ಹೋಗಿ ಯಜಮಾನರು ಜೀವ ತೆತ್ತರು. ಈಗ ನನಗಿರೋ ನೆರವು ಅಂದರೆ ನಿನ್ನೊಬ್ಬನದು. ನಾನು ನಿನ್ನನ್ನೂ ಕಳಕೊಂಡು ಕೈತೊಳಕೋಬೇಕು ಅಂತೀಯ?"

ಲಚ್ಛೀರಾಮನ ಧ್ವನಿಯಲ್ಲಿ ಇದ್ದಕ್ಕಿದ್ದಹಾಗೆ ಗಾಬರಿ ಕಾಣಿಸಿಕೊಂಡಿತು. "ಏನು ಆ ಭಯ ಇದೆಯೆ? ನಾಯಬ್ ಸಾಹೇಬರು ಅದನ್ನ ಹೇಳಿಹೋಗೋಕ್ಕೆ ಬಂದಿದ್ದರೆ?"

ಲಚ್ಛೀರಾಮುನಲ್ಲಿ ಭಯ ಹುಟ್ಟಿಸುವುದರಿಂದ ತನಗೆ ವಿನೋದವುಂಟಾಗುತ್ತಿದೆಯೋ ಎಂಬಂತೆ ಜೈದೇಯಿ ಹೇಳಿದಳು, "ದೇವರ್‌ಜೀಗೆ ಅಂಥಾದ್ದೇ ಏನೋ ಸುದ್ದಿ ತಿಳಿದು ಬಂದಿದೆಯಂತೆ! ಠಾಕೂರ್ ಗಜರಾಜಸಿಂಹನ ಮನೇಲಿ ಅವನ ಬೀಗರ ಮನೆಯಿಂದ ಎಂಟು ಪತ್ತು ಜನ ಲಾಠೀವರಸೆಯವರು ಬಂದಿಳಿದಿದ್ದಾರಂತೆ. ಈಗ ನಾಯಬ್ ಸಾಹೇಬರು ಈ ಕಡೆ ಬರ್‍ತಿರೋವಾಗ ಇಲ್ಲಿಂದ ಒಂದು ಕೋಸು ದೂರದಲ್ಲಿ ಬಂದೂಕ ಹಿಡಿದ ಇಬ್ಬರು ಸಿಕ್ಕಿದ್ದರಂತೆ. ನಾಯಬ್ ಸಾಹೇಬರು ಅವರನ್ನ ತಡೆದು ಯಾರು ಏನು ಅಂತ ವಿಚಾರಿಸಿದಾಗ ಹೇಳಿದರಂತೆ, 'ನಾವು ಗಜರಾಜಸಿಂಹನ ಸಂಬಂಧಿಕರು; ಶಿಕಾರಿಗೆ ಹೊರಟಿದೀವಿ' ಅಂತ."

ಲಚ್ಛೀರಾಮುನ ಮೈಯಿಂದ ಬೆವರಿಳಿಯಲು ಶುರುವಾಯಿತು. "ಹಾಗಾದರೆ ಪೋಲೀಸು, ಸರಕಾರ ಎಲ್ಲಾ ಬಾಯಿ ಮುಚ್ಚಿಕೊಂಡು ನೋಡ್ತಾ ಕೂತಿರುತ್ತೆ ಅಂತೀರಾ, ಯಜಮಾನಿತಿಯೋರೆ?"

"ಅದನ್ನ ನಾನೇನು ಬಲ್ಲೆ! ಠಾಣೇದಾರ ಅಮಜದ್ ಆಲಿ ಸಮಯಕ್ಕೆ ಕೈಕೊಟ್ಟು ಹೋದದ್ದು ನಿನಗೆ ಗೊತ್ತೇ ಇದೆ. ನಮಗಿರೋ ಒಂದು ಆಸರೆ ಅಂದರೆ ನಾಯಬ್ ಸಾಹೇಬರು. ನಿನಗೆ ಅವರ ಮಾತೂ ರುಚಿಸೋಲ್ಲ. ಇನ್ನು ದೇವರೊಬ್ಬನೇ ನಮಗೆ ದಿಕ್ಕು!"

"ಇಲ್ಲ ಇಲ್ಲ, ನಾಯಬ್ ಸಾಹೇಬರು ಹೇಗೆ ಹೇಳ್ತಾರೋ ಹಾಗೆ ಆಗಲಿ. ಅದರಲ್ಲಿ ಒಂದು ಚೂರೂ ತಪ್ಪೋಲ್ಲ," ಲಚ್ಛೀರಾಮು ಹೇಳಿದ.

ಜೈದೇಯಿ ಆಕಳಿಸಿದಳು, "ನನಗೆ ಮೈ ಚೆನ್ನಾಗಿಲ್ಲ, ಲಚ್ಛೀ! ಊಟದ ಹೊತ್ತಾಯಿತು. ನೀನಿನ್ನು ಮನೆಗೆ ಹೋಗು. ನೋಡು, ಸ್ವಲ್ಪ ಹುಷಾರಿಂದಿರು. ತಾವು ಎಲ್ಲಾನ್ನೂ ಸರಿಪಡಿಸೋದಾಗಿ ನಾಯಬ್ ಸಾಹೇಬರು ಮಾತುಕೊಟ್ಟಿದ್ದಾರೆ."

ಲಚ್ಛೀರಾಮು ಬಂಗಲೆ ಬಿಟ್ಟು ಹೊರಬಂದ. ಅವನಿಗೀಗ ಮನೆಯವರೆಗೆ ಒಬ್ಬಂಟಿಯಾಗಿ ಹೋಗುವ ಧೈರ್ಯ ಉಳಿದಿರಲಿಲ್ಲ. ಒಬ್ಬ ಆಳನ್ನು ಜತೆಮಾಡಿಕೊಂಡು ಹೇಗೋ ಮನೆ ಸೇರಿಕೊಂಡ.

## ಆರು

ಮುನಿಷಿ ರಾಮುಸಹಾಯ ಹೋಳಿಯ ಹಬ್ಬಕ್ಕೆ ರಾಜಪುರಕ್ಕೆ ಬರಬೇಕೆಂದು ಮುನಿಷಿ ಶಿವಲಾಲ, ಜ್ವಾಲಾಪ್ರಸಾದ ಮತ್ತು ಯಮುನರಿಗೆ ಆಗ್ರಹಪೂರ್ವಕವಾಗಿ ಕರೆ ಕಳಿಸಿದ್ದ. ರಾಮುಸಹಾಯನ ಕಾಗದ ಓದಿ ಶಿವಲಾಲ ಮಗನಿಗೆ ಹೇಳಿದ, "ಹೋಗದೆ ಇರೋದು ಹೇಗಪ್ಪ, ಮಗೂ! ನಿಮ್ಮ ಸೋದರಮಾವ ತುಂಬ ಉತ್ಸಾಹದಿಂದ ನಮ್ಮನ್ನೆಲ್ಲಾ

ಕರೆದಿದಾನೆ. ಹೋಗಿ ರಾಜಪುರದಲ್ಲೇ ಒಂದಿಷ್ಟು ದಿನ ಇರೋಣ ಅಂತ ಮನಸ್ಸಾಗ್ತಿದೆ. ಇನ್ನು ಮುಂದೆಲ್ಲಾ ನನ್ನದು ಓಡಾಟ–ಸುತ್ತಾಟದ ದಿನಗಳೇ ಅಂತ ಇಟ್ಟುಕೋ!"

"ನಾನು ಬರಬೇಕಾದರೆ ಅದಕ್ಕೋಸ್ಕರವೇ ರಜ ತೊಗೋಬೇಕಾಗುತ್ತೆ, ಅಪ್ಪ. ಈ ಹಬ್ಬ-ಹರಿದಿನಗಳು ಸರಕಾರೀ ಮೇಲಧಿಕಾರಿಗಳಿಗಲ್ಲ. ಅವು ಬಂದಾಗ ನಮ್ಮ ಕೆಲಸ ಇದ್ದಿದ್ದೂ ಹೆಚ್ಚಾಗುತ್ತೆ. ನೀವು ನಿಮ್ಮ ಸೊಸೇನ ಕರಕೊಂಡು ಹೋಗಿಬನ್ನಿ. ಛಿನಕಿಚಾಚೀನೂ ಜೊತೇಗೆ ಕರಕೊಂಡು ಹೋಗಿ. ಭೀಖೂ ಒಬ್ಬ ಇಲ್ಲಿದ್ದರೆ ಸಾಕು."

ಛಿನಕಿ ಅಲ್ಲೇ ಹತ್ತಿರದಲ್ಲೇ ನಿಂತಿದ್ದಳು. ಅವಳಂದಳು, "ಸೊಸೆ ಇಷ್ಟು ದಿನ ಅಲ್ಲಿದ್ದು ಈಗಿನ್ನೂ ಬಂದಿದಾಳೆ. ಮತ್ತೆ ಈಗ ಹೇಗೆ ಹೋಗೋಕ್ಕಾಗುತ್ತೆ? ಅಲ್ಲದೆ ಹೋಳಿಹಬ್ಬ ಅಂದರೆ ಮನೆಹಬ್ಬ. ದೊಡ್ಡ ಆಫೀಸರು ಅಂದಮೇಲೆ ಮನೆಬಾಗಿಲಿಗೆ ಜನ ಬರ್ತಾರೆ, ಗಾನ–ಕುಣಿತ ಆಗುತ್ತೆ. ಅವರ ಆದರಸತ್ಕಾರಕ್ಕೆ ಇಲ್ಲಿ ಯಾರಾದರೂ ಇರಬೇಡವೆ? ನೀವೊಬ್ಬರು ಹೋಗಿಬನ್ನಿ. ಮನೆಮಠಾನೆಲ್ಲಾ ಕಟ್ಕೊಂಡು ಹೋಗಿ ಅಲ್ಲೇನು ಬಿಡಾರ ಹೂಡಬೇಕೆ?"

ಜ್ವಾಲಾಪ್ರಸಾದ ಹೇಳಿದ, "ಒಂದು ದಿನದ ಮಟ್ಟಿಗಾದರೆ ನಾನು ನಿಮ್ಮ ಜತೆ ರಾಜಪುರಕ್ಕೆ ಬರಬಲ್ಲೆ. ಅಲ್ಲಿಯ ಪ್ರವಾಸವೂ ಆದ ಹಾಗಾಯಿತು. ನಿಮ್ಮನ್ನ ತಲಪಿಸಿ ನಾನು ವಾಪಸು ಬರ್ತೀನಿ."

ಮುನಿಷಿ ಶಿವಲಾಲನನ್ನು ರಾಜಪುರಕ್ಕೆ ತಲಪಿಸಿ ಜ್ವಾಲಾಪ್ರಸಾದ ಮನೆಗೆ ಹಿಂದಿರುಗಿ ಬಂದಾಗ ಠಾಕೂರ್ ಗಜರಾಜಸಿಂಹ ಅವನ ದಾರಿ ನೋಡುತ್ತ ಕುಳಿತಿದ್ದ. ಜ್ವಾಲಾ ಪ್ರಸಾದನ ಕುದುರೆಗಾಡಿ ವಾಪಸು ಬರುತ್ತಿರುವುದನ್ನು ಅವನು ತನ್ನ ಮನೆಯಿಂದಲೇ ನೋಡಿ ಹೊರಟುಬಂದಿದ್ದ. ಆದರೆ ಜ್ವಾಲಾಪ್ರಸಾದ ಮನೆ ತಲಪುವ ಮೊದಲು ದಾರಿ ಯಲ್ಲಿ ಕೊಂಚ ಹೊತ್ತು ತಹಸೀಲಿನ ಕಚೇರಿಯಲ್ಲಿ ನಿಂತ ಕಾರಣ ಗಜರಾಜಸಿಂಹ ಕಾಯು ವಂತಾಯಿತು.

"ಕ್ಷಮಿಸಬೇಕು, ನಾಯಬ್ ಸಾಹೇಬ್. ಅವತ್ತಾದಮೇಲೆ ಮತ್ತೆ ನಿಮ್ಮನ್ನು ಕಾಣಲಾಗಲಿಲ್ಲ. ಮಗಳನ್ನ ಕಳಿಸಿಬರೋಕ್ಕೆ ಹೋಗಿದ್ದೆ. ನನಗೇನೂ ಹೋಗೋ ಇಚ್ಛೆಯಿರಲಿಲ್ಲ, ಆದರೆ ನಿರ್ವಾಹವಿಲ್ಲದೆ ಹೋಗಬೇಕಾಗಿಬಂತು. ಮನೇಲಿ ಈಗ ನನ್ನ ಕೆಲಸದಲ್ಲಿ ನೆರವಾಗೋರು ಯಾರೂ ಉಳಿದಿಲ್ಲ. ಬರಜೋರನೊಬ್ಬ ಆಸರೆ ಯಾಗಿದ್ದ, ಅವನೂ ಹೋದ. ಮಗಳನ್ನ ಗಂಡನ ಮನೇಲಿ ಬಿಟ್ಟು ನಿನ್ನೆ ತಾನೇ ಬಂದೆ. ಮೊದಲ ಹೋಳಿ ತಾನೆ! ನಿಮ್ಮ ವಿಷಯ ವಿಚಾರಿಸಿದಾಗ ಇವತ್ತು ಸರ್ಕೀಟಿನಿಂದ ವಾಪಸು ಬರ್ತೀರಿ ಅಂತ ತಿಳೀತು."

ಜ್ವಾಲಾಪ್ರಸಾದ ಎಲೆಯಡಿಕೆ ತರಲು ಹೇಳಿ ಮಾತಿಗೆ ತೊಡಗಿದ, "ಠಾಕೂರ್ ಸಾಹೇಬ್, ನೀವು ಬರಜೋರನ ಜಮೀನಿನ ಬಗ್ಗೆ ಹೇಳಿದ್ದ ಕೆಲಸಾನ ಮಾಡಿದೀನಿ.

ಲಂಬರ್‌ದಾರಿಣಿ ಈಗಲೇ ಜಮೀನು ವಶಪಡಿಸಿಕೊಳ್ಳೋಕ್ಕೆ ಕ್ರಮ ಜರುಗಿಸೋಲ್ಲ. ಫಸಲು ಕೊಯ್ದುಕೊಂಡ ಮೇಲೆ ನೀವೇ ಅವರಿಗೆ ಜಮೀನು ಬಿಟ್ಟುಕೊಡಿ. ಕೋರ್ಟು ನಡುವೆ ಪ್ರವೇಶಿಸೋ ಅಗತ್ಯ ಏನಿದೆ? ನಾನು ಅವತ್ತೇ ಲಂಬರ್‌ದಾರಿಣಿ ಸಂಗಡ ಇದೆಲ್ಲಾ ಮಾತಾಡಿದ್ದೆ."

"ಆ ಅನಾಥರಿಗೆ ನಿಮ್ಮಿಂದ ತುಂಬ ಉಪಕಾರವಾಗಿದೆ, ಜ್ವಾಲಾಬಾಬು! ದೇವರು ನಿಮಗೆ ಒಳ್ಳೇದು ಮಾಡ್ತಾನೆ. ಬರಜೋರನ ಹೆಂಡತಿಗೆ ಈ ಸುದ್ದಿ ತಿಳಿಸ್ತೀನಿ. ಅವಳು ಚುನೌತಾದಲ್ಲಿರೋ ತಮ್ಮ ಮನೇಗೆ ಹೋಗಿದ್ದಾಳೆ. ಜಮೀನನ್ನ ಬಿಟ್ಟುಕೊಡೋ ಜವಾಬ್ದಾರಿ ನನಗಿರಲಿ."

ಠಾಕೂರ್ ಗಜರಾಜಸಿಂಹ ಸಂತೋಷದಿಂದ ಹಿಂದಿರುಗಿದ.

ಮಾರನೆಯ ದಿನ ಸಂಜೆ ಠಾಕೂರ್ ಗಜರಾಜಸಿಂಹ ಜ್ವಾಲಾಪ್ರಸಾದನಲ್ಲಿಗೆ ಮತ್ತೆ ಬಂದ. ಆಗ ಅವನು ಪ್ರಸನ್ನನಾಗಿ ಕಾಣುತ್ತಿದ್ದ. ಎಲ್ಲೆಲ್ಲೂ ಹೋಳಿಯ ಗದ್ದಲ; ವಾತಾವರಣ ಒಂದು ಬಗೆಯ ಹರ್ಷೋಲ್ಲಾಸಗಳಿಂದ ತುಂಬಿತ್ತು. ಗಜರಾಜಸಿಂಹ ಜ್ವಾಲಾಪ್ರಸಾದ ನನ್ನು ತನ್ನ ಮನೆಗೆ ಹೋಳಿಯ ಔತಣಕ್ಕೆ ಕರೆಯಲು ಬಂದಿದ್ದ. ಅವನಂದ, "ಜ್ವಾಲಾ ಬಾಬು, ಆದದ್ದು ಆಗಿಹೋಯಿತು. ನೀವು ಮಾಡಿದ್ದು ನ್ಯಾಯದ ದೃಷ್ಟಿಯಿಂದ ಸರಿಯಾಗೇ ಇತ್ತು. ನಿಮ್ಮ ಜೊತೆ ವೈಮನಸ್ಯ ಕಟ್ಟಿಕೊಂಡದ್ದು ನನ್ನ ತಪ್ಪು. ಅದ ರಿಂದಾಗಿ ಈಗ ನನಗೆ ನಾನೇ ಅಪರಾಧಿಯಾಗಿ ಕಾಣ್ತೀನಿ. ನೀವು ನಮ್ಮಲ್ಲಿಗೆ ಬಂದು ಭೋಜನ ಮಾಡಿದ ದಿನ ನನ್ನ ಅಪರಾಧವನ್ನ ಕ್ಷಮಿಸಿದೀರಿ ಅಂದುಕೋತೀನಿ. ತಹಸೀಲ ದಾರಣಿಯೋರಿಗೆ ರಾಣಿಸಾಹೇಬಳೂ ವಿಶೇಷರೂಪವಾಗಿ ಆಮಂತ್ರಣ ಕಳಿಸಿದಾಳೆ."

ಗಜರಾಜಸಿಂಹನ ಆಮಂತ್ರಣದ ಹಿಂದಿದ್ದ ಆತ್ಮೀಯತೆಯನ್ನು ಜ್ವಾಲಾಪ್ರಸಾದ ತಿರಸ್ಕರಿಸಲಾಗಲಿಲ್ಲ, "ಖಂಡಿತ ಬರ್ತೀವಿ, ಠಾಕೂರ್ ಸಾಹೇಬ್. ಪ್ರಪಂಚದಲ್ಲಿ ಒಳ್ಳೇದು ಕೆಟ್ಟದು ಎರಡೂ ನಡೀತಿರುತ್ತೆ. ನಾವುಗಳು ತಪ್ಪುಮಾಡ್ತೀವಿ, ತಪ್ಪಿಗೆ ಶಿಕ್ಷೇನೂ ಅನುಭವಿಸ್ತೀವಿ. ಈ ಜಗತ್ತಿನಲ್ಲಿ ತಮ್ಮ ಭಾವನೆ ಮೀರಿ ಮೇಲೇಳಬಲ್ಲವರು ಬಹು ಕಡಿಮೆ ಜನ. ಮನುಷ್ಯನ ಭಾವನೆ ಅವನನ್ನು ತಪ್ಪುದಾರೀಗೂ ಎಳೆಯೋ ದುಂಟು. ಹಾಗೆ ದಾರಿ ತಪ್ಪಿ ಮತ್ತೆ ಸರಿಯಾದ ದಾರಿಗೆ ಬಂದಮೇಲೆ ಏನು ಹೇಳೋದಿದೆ!

ಹೋಳಿ ಸುಟ್ಟ ಮಾರನೆಯ ದಿನ ಓಕುಳಿಯಾಟ. ಜ್ವಾಲಾಪ್ರಸಾದನನ್ನು ಕಂಡು ಅವನೊಂದಿಗೆ ಹೋಳಿ ಆಡಲು ಬಹುಶಃ ಘಾಟಮಪುರದವರೆಲ್ಲರೂ ಬಂದಿದ್ದರು. ಅವರಿಗೆ ಚೆನ್ನಾಗಿ ಆದರ-ಸತ್ಕಾರಗಳಾದವು. ಬೆಳಗಿನಿಂದಲೇ ಮದ್ಯದ ಪಾತ್ರೆ ಸುತ್ತ ತೊಡಗಿತ್ತು. ಅತಿಥಿಗಳ ಜೊತೆ ಜ್ವಾಲಾಪ್ರಸಾದನೂ ಕುಡಿಯಬೇಕಾಗಿ ಬರುತ್ತಿತ್ತು.

ಮಧ್ಯಾಹ್ನದ ಹೊತ್ತಿಗೆ ಜ್ವಾಲಾಪ್ರಸಾದ ಯಮುನಳನ್ನೂ ಕರೆದುಕೊಂಡು

ಠಾಕೂರ್ ಗಜರಾಜಸಿಂಹನ ಮನೆ ತಲಪಿದ. ಯಮುನಾ ಒಳಗೆ ರಾಣೀವಾಸಕ್ಕೆ ಹೋದಳು. ಗಜರಾಜಸಿಂಹನ ದಿವಾನಖಾನೆಯಲ್ಲಿ ಗಾನ–ಕುಣಿತ ನಡೆದಿತ್ತು. ಹಳ್ಳಿಯ ಹೆಂಗಸರ ಗುಂಪೊಂದು ಕುಣಿಯುತ್ತಿತ್ತು, ಮದ್ಯದ ವಿತರಣೆಯಾಗುತ್ತಿತ್ತು.

ಸುಮಾರು ಎರಡು ಗಂಟೆಯ ಹೊತ್ತಿಗೆ ಕೂಟ ಕೊನೆಗೊಂಡಿತು. ಜನ ಊಟಕ್ಕೆ ಕುಳಿತರು. ಗಜರಾಜಸಿಂಹ ಜ್ವಾಲಾಪ್ರಸಾದನನ್ನು ತನ್ನ ಬದಿಯಲ್ಲೇ ಕೂರಿಸಿಕೊಂಡ. ಬರಜೋರಸಿಂಹನ ಇಬ್ಬರು ಮಕ್ಕಳೂ ಬಡಿಸುತ್ತಿದ್ದರು. ಗಜರಾಜಸಿಂಹ ಹೇಳಿದ, "ಈ ಹುಡುಗರ ಮನೇಲಿ ಹೋಳಿಹಬ್ಬ ಆಚರಿಸಲಿಲ್ಲ, ಜ್ವಾಲಾಬಾಬು. ಆದಕಾರಣ ನಾನು ಇವರನ್ನು ನಮ್ಮಲ್ಲಿಗೇ ಬರಹೇಳಿದೆ. ಪಾಪ! ಈ ಬಡಪಾಯಿಗಳು ತಾವೇನು ಕಳಕೊಂಡಿದಾರೆ ಅನ್ನೋದನ್ನ ಕಾಣರು! ಇವರ ಅಮ್ಮ ಚುನೌತಾದಲ್ಲಿ ಬಿದ್ದುಕೊಂಡು ತನ್ನ ಪಾಡಿಗೆ ತಾನು ಒಬ್ಬಳೇ ಗೋಳಾಡ್ತಿದಾಳೇನೋ. ಅವಳು ಸಾಕ್ಷಾತ್ ಲಕ್ಷ್ಮೀ! ಅವಳು ಏನು ಪಾಪ ಮಾಡಿದ್ದಳು ಅಂತ ಭಗವಂತ ಅವಳಿಗೆ ಈ ಶಿಕ್ಷೆ ಕೊಟ್ಟನೋ! ನೀವು ಮಾಡಿದ ಉಪಕಾರದಿಂದಾಗಿ ಇವರು ಕನಿಷ್ಠ ತಮ್ಮ ಮನೆಗೆ ತಾವು ಹಿಂದಿರುಗೋ ಹಾಗಾಗಿದೆ, ಜ್ವಾಲಾಬಾಬು!"

ಜ್ವಾಲಾಪ್ರಸಾದನ ಕಣ್ಣು ಅಮಲಿನಿಂದ ಮಂಜಾಗಿತ್ತು. ಈ ಕರುಣಕಥೆಯನ್ನು ಕೇಳಿ ಅವನ ಎದೆಯಲ್ಲಿ ಕರುಣೆಯ ಸಾಗರವೇ ಉಕ್ಕಿಹರಿದಂತಾಯಿತು. ಅತ್ಯಂತ ದಯನೀಯವಾದ ಧ್ವನಿಯಲ್ಲಿ ಅವನು ಹೇಳಿದ, "ಇವರಿಗೆ ನನ್ನಿಂದ ತಿಳೀದೇ ಅಪರಾಧ ವಾಗಿದೆ, ಅದರ ಮುಂದೆ ನಾನು ಮಾಡಿರೋದು ತೀರಾ ಅಲ್ಪ!"

ಗಜರಾಜಸಿಂಹ ಅನುಭವಸ್ಥ. ಸಮಯ ನೋಡಿ ಅವನು ಹೇಳಿದ, "ನಾಯಬ್ ಸಾಹೇಬ್, ಲಂಬರ್‌ದಾರಿಣಿ ನಿಮ್ಮ ಮಾತಿಗೆ ತುಂಬ ಮನ್ನಣೆ ಕೊಡ್ತಾರೆ. ಆಕೆಗೆ ಹೇಳಿ ಬರಜೋರಸಿಂಹನ ನೂರು ಬೀಘಾ ಜಮೀನನ್ನ ಅವನ ಮಕ್ಕಳಿಗೇ ಗುತ್ತಿಗೆಗೆ ಕೊಡಿಸೋಕ್ಕಾಗೋಲ್ಲವೆ?"

ಜ್ವಾಲಾಪ್ರಸಾದ ಸ್ವಲ್ಪ ಯೋಚಿಸಿ ಹೇಳಿದ, "ಹೌದು, ಅದರಲ್ಲಿ ಏನೂ ಅಭ್ಯಂತರ ಇರಲಾರದು. ಕೊಟ್ಟಕೊನೆಗೆ ಈ ಜಮೀನನ್ನ ಯಾರಿಗಾದರೂ ಗುತ್ತಿಗೆಗೆ ಕೊಡಲೇ ಬೇಕು ತಾನೆ. ಇನ್ನು ಬರಿಯ ಮೇಲುಗಾಣಿಕೆಯ ಹಣದ ಪ್ರಶ್ನೆ ಏಳುತ್ತದೆ. ಆ ನೂರಿನ್ನೂರು ರೂಪಾಯಿಯನ್ನ ಅವರಿಗೆ ಹೇಳಿ ಬಿಡಿಸಿಕೊಡಬಹುದು. ಅವರ ಜೊತೆ ಮಾತಾಡಲೇ ಹೇಳಿ?"

ಗಜರಾಜಸಿಂಹ ನಿಟ್ಟುಸಿರು ಬಿಡುತ್ತ ಹೇಳಿದ, "ರಾಜಕುಲದವರು ಬೇಸಾಯ ಮಾಡೋ ಕಾಲ ಬಂತಲ್ಲ, ಎಂಥ ದೌರ್ಭಾಗ್ಯ ಇದು! ಆದರೆ ಏನು ಮಾಡೋಕ್ಕಾಗುತ್ತೆ. ಕಾಲ ತಾನೇತಾನಾಗಿ ಎಲ್ಲಾನ್ನೂ ಮಾಡಿಸುತ್ತೆ. ವಿಧಿಲಿಖಿತವನ್ನ ಯಾರಾದರೂ ಅಳಿಸಿದ್ದುಂಟೆ! ಹೊಟ್ಟೆಗಿಲ್ಲದೇ ಸಾಯೋಕ್ಕಿಂತ ಬೇಸಾಯ ಮಾಡೋದು ಒಳ್ಳೇದು. ಜ್ವಾಲಾಬಾಬು, ನೀವು ಅಷ್ಟುಮಾಡಿಕೊಟ್ಟರೆ ತುಂಬ

ಉಪಕಾರವಾಗುತ್ತೆ, ಈ ಹುಡುಗರ ಜೀವನೋಪಾಯಕ್ಕೆ ಒಂದು ಮಾರ್ಗ ವಾಗುತ್ತೆ."

ಗಜರಾಜಸಿಂಹನ ಧ್ವನಿಯಲ್ಲಿ ಒಂದು ಬಗೆಯ ವಿವಶತೆ ತುಂಬಿತ್ತು; ಆ ವಿವಶತೆ ಯಲ್ಲಿ ಒಂದು ಬಗೆಯ ದೂಷಣೆಯೂ ಇತ್ತು. ಜ್ವಾಲಾಪ್ರಸಾದನ ಮನಸ್ಸು ಸ್ವಲ್ಪ ಸ್ವಲ್ಪವಾಗಿ ವ್ಯಾಕುಲವಾಗುತ್ತ ಹೋಯಿತು. ಈ ವ್ಯಾಕುಲತೆಯಿಂದಾಗಿಯೋ ಅಥವಾ ಮದ್ಯದ ಅಮಲಿನಿಂದಾಗಿಯೋ, ಅವನಿಗೆ ಅನ್ನ ಗಂಟಲಲ್ಲಿ ಇಳಿಯಲಿಲ್ಲ. ಊಟದ ಶಾಸ್ತ್ರ ಮುಗಿಸಿ ಭಾರವಾದ ಮನಸ್ಸಿನಿಂದ ಅವನು ಮನೆಗೆ ಹಿಂದಿರುಗಿದ. ರಾಣಿ ದೇವಕುವರಳು ಯಮುನೆ ಭಿನಕಿಯರಿಗೆ ಹೋಗಗೊಡಲಿಲ್ಲ. ಭೀಖೂ ಹೋಳಿಯ ವೇಷ ಹಾಕಿ ಹಾಡಿಕುಣಿಯಲು ತನ್ನವರ ಕಹಾರ ಮಂಡಳಿಗೆ ಹೊರಟು ಹೋಗಿದ್ದ.

ಮನೆಗೆ ಬಂದು ಜ್ವಾಲಾಪ್ರಸಾದ ಕಾಲುಚಾಚಿದ. ಮನಸ್ಸು ಬರಜೋರಸಿಂಹನ ಹೆಂಡತಿಮಕ್ಕಳ ಸಮಸ್ಯೆಯನ್ನೇ ಕುರಿತು ಚಿಂತಿಸುತ್ತಿತ್ತು. ಆದಕಾರಣ ಎಷ್ಟೇ ಪ್ರಯತ್ನಪಟ್ಟರೂ ನಿದ್ರೆ ಬರಲಿಲ್ಲ. ಅರ್ಧಗಂಟೆಯವರೆಗೆ ಮಗ್ಗುಲಿಂದ ಮಗ್ಗುಲಿಗೆ ಹೊರಳಾಡುತ್ತಿದ್ದ. ಆತನ ಸುತ್ತ ಎಲ್ಲೆಲ್ಲೂ ಗಾನಬಾಜನೆಗಳಾಗುತ್ತಿದ್ದವು, ಉತ್ಸವ ನಡೆಯುತ್ತಿತ್ತು. ಅವನು ಮಾತ್ರ ಖಿನ್ನತೆಯಲ್ಲಿ ಮುಳುಗಿ ಹೊರಳಾಡುತ್ತಿದ್ದ.

ಆ ಖಿನ್ನತೆಯ ವಿರುದ್ಧ ಬಂಡಾಯ ಹೂಡಲೋ ಎಂಬಂತೆ ಅವನು ಬಲವಂತ ವಾಗಿ ಎದ್ದುನಿಂತ. ಬಟ್ಟೆ ಬದಲಿಸಿದ. ಗಾಡಿ ಹೂಡಿಸಿ ತನ್ನ ಆ ಅಚೇತನ ಸ್ಥಿತಿ ಯಲ್ಲಿಯೇ ಶಿವಪುರದ ಕಡೆ ಗಾಡಿ ನಡೆಸಲು ಹೇಳಿದ.

ಬಿಸಿಲು ಜೋರಾಗಿ ಉರಿಯುತ್ತಿತ್ತು. ಎಲ್ಲೆಲ್ಲೂ ಧೂಳೋ ಧೂಳು. ಓಕುಳಿ ಯಾಟ ನಿಂತಿತ್ತು. ಆದರೆ ಅಲ್ಲಲ್ಲೇ ತಮಟೆ ಮೃದಂಗಗಳ ತಾಳದ ಜತೆಗೆ ಹೋಳಿಯ ಮತ್ತಮದ ಗಾನವಿನ್ನೂ ಕೇಳಿಬರುತ್ತಿತ್ತು. ಶಿವಪುರದಲ್ಲಿ ಲಾಲಾ ಪ್ರಭುದಯಾಳನ ಬಂಗಲೆಯ ಮುಂದೆ ಜ್ವಾಲಾಪ್ರಸಾದನ ಗಾಡಿ ಬಂದು ನಿಲ್ಲುವ ಹೊತ್ತಿಗೆ ಅವನ ಮನಸ್ಸಿನ ಖಿನ್ನತೆ ಮಾಯವಾಗಿತ್ತು.

ಪ್ರಭುದಯಾಳನ ಬಂಗಲೆಯ ಸುತ್ತಮುತ್ತಲಿನಲ್ಲಿ ಎಲ್ಲವೂ ಶಾಂತವಾಗಿತ್ತು. ರಾಧಾಕೃಷ್ಣನ ಗುಡಿಯ ಬಾಗಿಲು ಮುಚ್ಚಿತ್ತು. ಹೆಬ್ಬಾಗಿಲ ಬಳಿ ಕಾವಲಾಳಿನ ಹೊರತು ಬೇರೆ ಯಾರೂ ಇರಲಿಲ್ಲ. ಈ ಸಲ ಪ್ರಭುದಯಾಳನ ಮನೆಯಲ್ಲಿ ಹೋಳಿಯನ್ನು ಆಚರಿಸಲಿಲ್ಲ. ಬಹುತರ ಆಳುಕಾಳುಗಳು ರಜ ಪಡೆದು ಹೋಳಿಯಾಡಲು ತಮ್ಮ ನೆಂಟರಿಷ್ಟರಲ್ಲಿಗೆ ಹೋಗಿದ್ದರು. ಒಬ್ಬಿಬ್ಬರು ಕುಳಿತಲ್ಲೇ ತೂಕಡಿಸುತ್ತಿದ್ದರು. ಜ್ವಾಲಾ ಪ್ರಸಾದನಿಗೆ ಹೋಳಿಯ ದಿನ ಜೈದೇಯಿಯಲ್ಲಿಗೆ ಬಂದದ್ದು ತಪ್ಪಾಯಿತೆನಿಸಿತು; ವಾಪಸು ಹೋಗುವ ಮನಸ್ಸಾಯಿತು. ಮರುಕ್ಷಣವೇ ಅವನೊಳಗಿನಿಂದ ಯಾರೋ "ನೀನು ಹೋಳಿಯಾಡಲು ಬಂದಿಲ್ಲ. ಬರಜೋರಸಿಂಹನ ಕುಟುಂಬದ ಸಮಸ್ಯೆಯನ್ನು ಬಗೆಹರಿ

ಸಲು ಬಂದಿದ್ದಿ" ಅಂದರು. ಜ್ವಾಲಾಪ್ರಸಾದ ಜೈದೇಯಿಗೆ ತಾನು ಬಂದಿರುವುದಾಗಿ ಹೇಳಿಕಳಿಸಿದ.

ಜೈದೇಯಿ ಮಂಚದ ಮೇಲೆ ಕಾಲುಚಾಚಿ ಮಲಗಿದ್ದಳು. ಸ್ವಲ್ಪ ಹೊತ್ತಿಗೆ ಮುಂಚೆ ಅವಳ ನಿದ್ರೆ ಹರಿದಿತ್ತು; ಆದರೆ ಶರೀರದ ಜಡ ಮಾತ್ರ ದೂರವಾಗಿರಲಿಲ್ಲ. ಜ್ವಾಲಾ ಪ್ರಸಾದ ಬಂದಿರುವ ಸುದ್ದಿಯನ್ನು ಕೇಳಿ ಆ ಜಡ ಎಲ್ಲಿ ಹೋಯಿತೋ ಏನೋ! ಜೈದೇಯಿ ಉಲ್ಲಾಸದಿಂದ ಎದ್ದುನಿಂತಳು. ಅವನನ್ನು ಒಳಗಿನ ದಿವಾನಖಾನೆಯಲ್ಲಿ ಕೂರಿಸುವಂತೆ ಹೆಣ್ಣಾಳಿಗೆ ಹೇಳಿ, ತಾನು ಸರಿಯಾಗಿ ಬಟ್ಟೆ ತೊಟ್ಟು ಬಂದಳು. ಅವಳು ಒಗೆದು ಮಡಿಯಾದ ಬಿಳಿಯ ಸೀರೆ ಉಟ್ಟಿದ್ದಳು. ಮೈಮೇಲೆ ಬೇರೆ ಯಾವ ಒಡವೆ ತೊಡವೆಗಳಾಗಲೀ ಶೃಂಗಾರವಾಗಲೀ ಇರಲಿಲ್ಲ. "ಬಾ ದೇವರ್‌ಜಿ. ಹೋಳಿಯ ದಿನ ಅತ್ತಿಗೇನ ಮರೆಯದೆ ದೊಡ್ಡ ಉಪಕಾರ ಮಾಡಿದೆ!" ಎಂದು ನಗುತ್ತ ಜ್ವಾಲಾ ಪ್ರಸಾದನನ್ನು ಸ್ವಾಗತಿಸಿ, ಅವನಿಂದ ಕೊಂಚ ದೂರದಲ್ಲಿ ಕುಳಿತಳು.

ಜೈದೇಯಿ ಆ ಸಾಧಾರಣ ಉಡಿಗೆಯಲ್ಲಿಯೂ ಅದೆಷ್ಟು ಸುಂದರವಾಗಿ ಕಾಣು ತ್ತಿದ್ದಳು, ಅವಳ ಆ ನಗೆ ಅದೆಷ್ಟು ಮಧುರವಾಗಿತ್ತು! ಸ್ವಲ್ಪ ಹೊತ್ತಿನವರೆಗೆ ಜ್ವಾಲಾ ಪ್ರಸಾದನೇ ಮಾತು ತೆಗೆಯುವನೆಂದು ಕಾದಿದ್ದು ಆಮೇಲೆ ಜೈದೇಯಿ ಹೇಳಿದಳು, "ನನ್ನನ್ನ ಹೀಗೇಕೆ ನೋಡ್ತಿದಿ, ದೇವರ್‌ಜೀ! ತುಂಬಾ ಗಂಭೀರವಾಗಿದಿ. ಹೋಳಿ ಚೆನ್ನಾಗಿ ರಂಗೇರಿರೋ ಹಾಗೆ ಕಾಣುತ್ತೆ." ಜೈದೇಯಿ ಈ ಸಲ ಜೋರಾಗಿ ನಕ್ಕಳು, "ಏನು ಹೇಳಲಿ, ಈ ಸಲ ನಮ್ಮಲ್ಲಿ ಹೋಳಿ ಆಚರಿಸಲಿಲ್ಲ. ಇಲ್ಲದೆ ಹೋದರೆ ನಿನಗೆ ಚೆನ್ನಾಗಿ ಮದ್ಯ ಕುಡಿಸ್ತಿದ್ದೆ."

ಜ್ವಾಲಾಪ್ರಸಾದನ ಮೌನ ಒಡೆಯಿತು. "ಇಲ್ಲ, ಅತ್ತಿಗೆ, ಕುಡಿಯೋ ಆಸೆಯಿಂದ ಇಲ್ಲಿ ಬರಲಿಲ್ಲ. ಹಾಗೆ ನೋಡಿದರೆ ದಿನವಲ್ಲಾ ಕುಡೀತಾನೇ ಇದೀನಿ, ಕೊಂಚ ವ್ಯವ ಹಾರದ ವಿಷಯ ಮಾತನಾಡೋದಿತ್ತು ಅಂತ ಬಂದೆ."

ಜೈದೇಯಿ ಮುನಿಸು ನಟಿಸುತ್ತ ಹೇಳಿದಳು, "ನೀನು ಯಾವಾಗ ಬರಲಿ, ಈ ವ್ಯವಹಾರದ ಗೋಳು ಇದ್ದೇ ಇರುತ್ತೆ. ಅದಕ್ಕಾದರೆ ಬರೋ ಅವಶ್ಯಕತೆಯೇನಿತ್ತು. ಹೇಳಿಕಳಿಸಿದ್ದರೆ ಸಾಕಾಗಿತ್ತು. ನನಗೆ ನಿನ್ನ ಮಾತು ಅಂದರೆ ವೇದವಾಕ್ಯ ಅಂತ ಎಂದೋ ಹೇಳಿದೀನಿ. ಹೇಳು, ನಗುನಗುತ್ತಾ ಹೇಳು. ಹೀಗೆ ಗಂಭೀರವಾಗಿ ಕೂತುಕೋಬೇಡ."

ಜ್ವಾಲಾಪ್ರಸಾದನಿಗೆ ತಾನು ಅಗತ್ಯಕ್ಕಿಂತ ಹೆಚ್ಚು ಗಂಭೀರನಾಗಿದ್ದೇನೆಂದು ಅನ್ನಿಸಿತು. ನಗಲು ಪ್ರಯತ್ನಿಸುತ್ತ ಅವನು ಹೇಳಿದ, "ಅತ್ತಿಗೆ, ನಾನು ಬರಜೋರಸಿಂಹನ ಜಮೀನಿನ ವಿಷಯ ಯೋಚಿಸ್ತಿದ್ದೆ. ಆ ಜಮೀನು ಅವನ ಮಕ್ಕಳಿಗೆ ದಕ್ಕಲಾರದೆ? ಅವರು ತೀರಾ ಅನಾಥರಾಗಿದ್ದಾರೆ."

"ನೀನು ಕಾಯಿದೇನ ಬಲ್ಲೆ. ನಾನು ಆ ಜಮೀನನ್ನ ಹೇಗೆ ಬಿಟ್ಟುಕೊಡಲಿ? ಹ್ಞಾ, ಅವರು ಸಾಲದ ಹಣಾನ ಪೂರ್ತಿ ಸಂದಾಯ ಮಾಡಿದರೆ ಪ್ರಾಯಶಃ—ಇದೆಲ್ಲಾ

ಕಾಯಿದೇನೂ ನೀನು ಬಲ್ಲೆ—ಅವರಿಗೆ ಆ ಜಮೀನು ಸಿಗಬಹುದು. ಯಾಕೆ ಅಂದರೆ ಅದನ್ನ ನಾನಿನ್ನೂ ವಶಕ್ಕೆ ತೊಗೊಂಡಿಲ್ಲ."

"ಆದರೆ, ಅತ್ತಿಗೆ, ಸಾಲ ತೀರಿಸೋಕ್ಕೆ ಆ ಅನಾಥ ಮಕ್ಕಳ ಹತ್ತಿರ ಅಷ್ಟೊಂದು ಹಣ ಎಲ್ಲಿದೆ! ನನ್ನ ಹತ್ತಿರ ಸಹ ಅಷ್ಟೊಂದು ಹಣವಿಲ್ಲ, ಇದ್ದಿದ್ದರೆ ನಾನೇ ಆ ಹಣಾನ ಅವರಿಗೆ ಕೊಡ್ತಿದ್ದೆ," ಜ್ವಾಲಾಪ್ರಸಾದ ಭಾವನಾಪರವಶವಾದ ಧ್ವನಿಯಲ್ಲಿ ಹೇಳಿದ.

ಜೈದೇಯಿ ಜ್ವಾಲಾಪ್ರಸಾದನ ಕಡೆ ನೋಡಿದಳು. ಒಂದು ಕ್ಷಣ ಅವರಿಬ್ಬರ ದೃಷ್ಟಿಗಳೂ ಒಂದಕ್ಕೊಂದಕ್ಕೆ ತಾಗಿಕೊಂಡವೊ ಎಂಬಂತೆ ಕಂಡಿತು. ಜೈದೇಯಿ ಇದ್ದಕ್ಕಿದ್ದಂತೆ ಎದ್ದು ನಿಂತಳು. "ಈಗ ಬಂದೆ" ಎನ್ನುತ್ತ ದಡದಡನೆ ಒಳಗೆ ಹೋದಳು.

ಜೈದೇಯಿಯ ಈ ಚರ್ಯೆ ಜ್ವಾಲಾಪ್ರಸಾದನಿಗೆ ಆಶ್ಚರ್ಯವನ್ನುಂಟುಮಾಡಿತು. ಅವಳು ಅವನಿಗೆ ತಾನು ಹೇಳಲಿದ್ದುದನ್ನು ಪೂರ್ತಿಮಾಡುವ ಅವಕಾಶವನ್ನೇ ಕೊಡಲಿಲ್ಲ. ತನ್ನ ಮನಸ್ಸಿನಲ್ಲಿರುವುದನ್ನು ಅವಳಿಗೆ ಹೇಗೆ ಹೇಳುವುದೆಂದು ಅವನು ಯೋಚಿಸುತ್ತಾ ಕುಳಿತಿದ್ದ. ಅಷ್ಟರಲ್ಲಿ ಜೈದೇಯಿಯ ಹೆಣ್ಣಾಳು ಬಂದು, "ಹುಜೂರ್, ಲಂಬರ್‌ದಾರಿಣಿ ನಿಮ್ಮನ್ನ ಅವರ ಕೋಣೆಗೇ ಬರಹೇಳಿದಾರೆ" ಅಂದಳು.

ಜ್ವಾಲಾಪ್ರಸಾದ ಜೈದೇಯಿಯ ಕೋಣೆಯೊಳಗೆ ಕಾಲಿಟ್ಟೊಡನೆಯೇ ಹೆಣ್ಣಾಳು ಅಲ್ಲಿಂದ ಹೊರಟುಹೋದಳು. ಜ್ವಾಲಾಪ್ರಸಾದ ನೋಡಿದ. ಜೈದೇಯಿಯ ರೂಪವೇ ಬದಲಾಗಿತ್ತು. ಅವಳ ಮೈ ಒಡವೆತೊಡವೆಗಳಿಂದ ಬೀಗುತ್ತಿತ್ತು. ಅವಳು ಬೆಲೆ ಬಾಳುವ ಹರಳು ಹಚ್ಚಿದ ಲಂಗ ತೊಟ್ಟಿದ್ದಳು, ಮೇಲೆ ರೇಷ್ಮೆಯ ಮೇಲುಹೊದಿಕೆ ಹೊದ್ದಿದ್ದಳು. "ದೇವರ್‌ಜೀ, ಒಳ್ಳೇ ಹೋಳಿಯ ದಿನ ಬಂದು ಹೋಳಿ ಹೊತ್ತಿಸಿದಿ, ಅಂದಮೇಲೆ ನಿಮ್ಮ ಅತ್ತಿಗೆ ಜೊತೆ ನೀನು ಹೋಳೀನೂ ಆಡಬೇಕಾಗುತ್ತೆ; ಅವಳಿಂದ ಹಬ್ಬದ ಉಡುಗೊರೇನೂ ತೊಗೋಬೇಕಾಗುತ್ತೆ!" ಎಂದವಳೇ ಜೈದೇಯಿ ಚಿನ್ನದ ವರಹಗಳ ಒಂದು ಚೀಲವನ್ನು ಜ್ವಾಲಾಪ್ರಸಾದನ ಮುಂದಿಟ್ಟಳು. "ಈ ನೂರು ವರಹ ತೊಗೊಂಡು ಹಿಂದೊಂದು ಸಲ ನಾನು ನಿನ್ನ ಹತ್ತಿರ ಬಂದಿದ್ದೆ. ಆ ಹೊತ್ತು ನೀನು ಆಫೀಸರಾಗಿದ್ದೆ. ಇದನ್ನ ಲಂಚ ಅಂತ ಅಂದುಕೊಂಡು ತೊಗೋಳ್ಳೋಕ್ಕೆ ನಿರಾಕರಿಸಿದೆ. ಇವತ್ತು ಆ ನೂರು ವರಹ ಕೊಡ್ತಿದೀನಿ—ನೀನು ಆಫೀಸರು ಅಂತಲ್ಲ, ನನ್ನ ಮೈದುನ ಅಂತ. ಇವತ್ತು ನೀನು ಬೇಡ ಅನ್ನೋ ಹಾಗಿಲ್ಲ. ಮುಂದೆ ಎಂದೆಂದಿಗೂ ನಿನ್ನ ಹತ್ತಿರ ಹಣ ಇಲ್ಲ ಅನ್ನಕೂಡದು, ನನ್ನ ಹತ್ತಿರ ಇರೋದೆಲ್ಲಾ ನಿನ್ನದೇಯೇ" ಅನ್ನುತ್ತ ಜೈದೇಯಿ ಒಂದು ಹಿಡಿ ಗುಲಾಲನ್ನು ಜ್ವಾಲಾಪ್ರಸಾದನ ಮುಖಕ್ಕೆ ಹಚ್ಚಿದಳು.

ಚಿನ್ನದ ವರಹವಿದ್ದ ಚೀಲವನ್ನು ತೆಗೆದುಕೊಂಡು ಜ್ವಾಲಾಪ್ರಸಾದ ಜೈದೇಯಿಯ ಕೋಣೆಯಿಂದ ಹೊರಬಿದ್ದಾಗ ಸಂಜೆ ಕಳೆದು ಆಕಾಶದಲ್ಲಿ ಚಂದ್ರ ಹುಟ್ಟಿದ್ದುದು ಕಾಣಿಸಿತು. ಬಂಗಲೆಯ ಹೊರಗೆ ಜನ ಗುಂಪುಗುಂಪಾಗಿ ಹೋಳಿಯ ಹಾಡು ಹಾಡುತ್ತ, ಬೈಗಳಗಳನ್ನು ಒದರುತ್ತ ಅತ್ತಿತ್ತ ಹೊರಟಿದ್ದರು. ಜೈದೇಯಿಯ ಆಳು ಜ್ವಾಲಾ

ಪ್ರಸಾದನನ್ನು ಕಳಿಸಿಕೊಡಲು ಹೆಬ್ಬಾಗಿಲವರೆಗೆ ಬಂದ. ಹೆಬ್ಬಾಗಿಲ ಬಳಿ ರಾಧಾಕೃಷ್ಣನ ಗುಡಿಯ ಬಾಗಿಲು ತೆರೆದಿತ್ತು; ಆರತಿ ನಡೆಯುತ್ತಿತ್ತು. ಜ್ವಾಲಾಪ್ರಸಾದನಿಗೆ ದೇವರ ದರ್ಶನ ಮಾಡುವ ಧೈರ್ಯವಾಗಲಿಲ್ಲ. ಜೊತೆಗಿದ್ದ ಆಳು ತನ್ನನ್ನು ವ್ಯಂಗ್ಯವಾಗಿ ನೋಡುತ್ತಿದ್ದಾನೆ ಎಂದು ಭಾಸವಾಯಿತು. ಅವನ ಮನಸ್ಸು, ಅವನ ಕಣ್ಣು, ಅವನ ಇಡೀ ಮೈಯೇ ಯಾವುದೋ ಉರಿಯಿಂದ ಬೇಯುತ್ತಿತ್ತು. ಬೇಗಬೇಗನೆ ಗಾಡಿ ಹತ್ತಿ ಅವನು ಘಾಟಮಪುರಕ್ಕೆ ಹೊರಟ.

## ಏಳು

ಠಾಕೂರ್ ಗಜರಾಜಸಿಂಹನ ಮನೆಯ ಔತಣಕ್ಕೆ ಮೀರ್ ಸಖಾವತ್ ಹುಸೇನರು ಬಂದಿದ್ದುದನ್ನು ನೋಡಿ ಜ್ವಾಲಾಪ್ರಸಾದನಿಗೆ ಆಶ್ಚರ್ಯವಾಯಿತು. ಬಗ್ಗಿ ಸಲಾಮು ಮಾಡುತ್ತ ಅವನು ಹೇಳಿದ, "ಹುಜೂರರು ಇವತ್ತು ತಮ್ಮ ನೇಮ ಮುರಿದರು. ಠಾಕೂರ್ ಗಜರಾಜಸಿಂಹರ ಮಹಾಭಾಗ್ಯ. ಹುಜೂರರು ಅವರಲ್ಲಿಗೆ ಔತಣಕ್ಕೆ ಬಂದದ್ದು."

ಮೀರ್‌ಸಾಹೇಬರು ನಗುತ್ತ ಉತ್ತರ ಕೊಟ್ಟರು, "'ತಪ್ಪಾಯ್ತು, ಇನ್ನುಮೇಲೆ ಮಾಡೋಲ್ಲ' ಅನ್ನೋದು ಮತ್ತೆ ಆ ತಪ್ಪನ್ನ ಮಾಡೋಕ್ಕೋಸ್ಕರವೇ, ಮಗು. ಗಜರಾಜಸಿಂಹಂದಿರ ಬೀಗರು, ರಾಜಾ ಚಂದ್ರಭೂಷಣಸಿಂಹ, ಬಲವಂತ ಮಾಡಿದಾಗ ಹೇಗೆ ತಾನೆ ಇಲ್ಲ ಅನ್ನೋದು ! ಗಜರಾಜಸಿಂಹರ ಮರ್ಯಾದೆ ನನ್ನ ಮರ್ಯಾದೆಯೂ ಅಲ್ಲವೇ ?" ಹೀಗನ್ನುತ್ತ ಮೀರ್ ಸಾಹೇಬರು ರಾಜಾ ಚಂದ್ರಭೂಷಣಸಿಂಹನ ಕಡೆ ತಿರುಗಿ ಹೇಳಿದರು, "ರಾಜಾ ಸಾಹೇಬರೇ. ಈ ಹುಡುಗ ಬಲು ಯೋಗ್ಯ, ಗುಣವಂತ ! ಇಲ್ಲಿ ನಾಯಬ್ ತಹಸೀಲದಾರನಾಗಿ ಬಂದಿದಾನೆ. ಇವನು ನನ್ನ ಬಲಗೈ ಅಂತಾನೇ ಇಟ್ಕೊಳ್ಳಿ; ತಿಳಿವಳಿಕಸ್ಥ, ನಂಬಿಕಸ್ಥ, ಜವಾಬ್ದಾರಿಯಿಂದ ಕೆಲಸಮಾಡ್ತಾನೆ ! ನಾನಂತೂ ನನ್ನ ಇಲಾಖೆಯ ಎಲ್ಲಾ ಕೆಲಸಾನ್ನೂ ಇವನ ಮೇಲೆ ಬಿಟ್ಟುಬಿಟ್ಟಿದೀನಿ. ಎಲ್ಲೂ ಯಾವ ತರಹದ ದೂರೂ ಇಲ್ಲ, ನೋಡಿ."

ನವಂಬರ್ ತಿಂಗಳು ಮುಗಿದು ಚಳಿ ಶುರುವಾಗಿತ್ತು. ರಾಜಾ ಚಂದ್ರಭೂಷಣ ಸಿಂಹ ಅಲಹಾಬಾದಿನಿಂದ ಕಾನಪುರದ ಮಾರ್ಗವಾಗಿ ತನ್ನ ಊರಿಗೆ ಹಿಂದಿರುಗುವಾಗ ಗಜರಾಜ ಸಿಂಹನ ಒತ್ತಾಯಕ್ಕೆ ಮಣಿದು ವಾರದ ಕಾಲ ಘಾಟಮಪುರದಲ್ಲಿ ಇರಲು ಬಂದಿದ್ದ. ಅವನು ಬಂದ ಸಂತೋಷಕ್ಕಾಗಿ ಠಾಕೂರ್ ಗಜರಾಜಸಿಂಹ ಈ ಔತಣ ಏರ್ಪಡಿಸಿದ್ದ.

ರಾಜಾ ಚಂದ್ರಭೂಷಣಸಿಂಹ ಈಗ ಜ್ವಾಲಾಪ್ರಸಾದನ ಕಡೆ ದೃಷ್ಟಿಸಿ ನೋಡಿದ. ಅವನ ಕಣ್ಣು ಅಮಲಿನಿಂದ ಕೆಂಪೇರುತ್ತಿತ್ತು. ಅವನು ವ್ಯಂಗ್ಯವಾಗಿ ನಗುತ್ತ ಮೀರ್

ಸಾಹೇಬರಿಗೆ ಹೇಳಿದ, " ಇವರನ್ನ ಈ ಮೊದಲು ಭೇಟಿಯಾಗಿದೀನಿ. ಮಿರ್ ಸಾಹೇಬ್ ! ಅದಕ್ಕಿಂತ ಹೆಚ್ಚಾಗಿ ಇವರ ಬಗ್ಗೆ ಕೇಳಿದೀನಿ. ಒಳ್ಳೆಯವರಾಗಿದ್ದರೂ ತುಂಬ ನ್ಯಾಯ ಪ್ರಿಯರು, ತಮ್ಮ ಕರ್ತವ್ಯದ ವಿಷಯದಲ್ಲಿ ಬಹು ಉತ್ಸಾಹಿಗಳು." ರಾಜಾ ಚಂದ್ರ ಭೂಷಣಸಿಂಹ ಈ ಬಾರಿ ಜ್ವಾಲಾಪ್ರಸಾದನ ಕಡೆ ತಿರುಗಿ ಹೇಳಿದ, " ನೀವು ಇಲ್ಲೇ ಇದ್ದಿರಿ, ನಾನು ನಿಮ್ಮನ್ನ ನೋಡಲೇ ಇಲ್ಲವೆ ! ನಿಮಗೆ ಮದ್ಯ ಅಂದರೆ ಅರುಚಿಯೇನೂ ಇಲ್ಲ ತಾನೆ? ತೊಗೊಳ್ಳಿ, ನೀವೇ ಗ್ಲಾಸಿಗೆ ಬಗ್ಗಿಸಿಕೊಳ್ಳಿ. ಹೋದ ಸಲ ಬರಜೋರ ಸಿಂಹ ನಿಮಗೆ ಗ್ಲಾಸಿಗೆ ಮದ್ಯ ಬಗ್ಗಿಸಿಕೊಟ್ಟಿದ್ದ. ಹಾಗೆ ಕೊಟ್ಟದ್ದಕ್ಕೆ ನಿಮ್ಮಿಂದ ಅವನಿಗೆ ಸಿಕ್ಕಿದ ಪುರಸ್ಕಾರಾನ ನೆನೆದಾಗ ನಿಮಗೆ ಮದ್ಯ ಬಗ್ಗಿಸಿಕೊಡೋಕ್ಕೆ ಭಯವಾಗುತ್ತೆ !" ರಾಜಾ ಚಂದ್ರಭೂಷಣಸಿಂಹ ಗೊಳ್ಳನೆ ನಗತೊಡಗಿದ.

ಮಾತುಕತೆ ಕಹಿಗೆ ತಿರುಗುತ್ತಿದೆಯೆಂದು ಗಜರಾಜಸಿಂಹನಿಗೆ ತೋರಿತು. ಸತ್ಯವನ್ನು ತಿಳಿಯದೆ ಬೇಕೆಂದೇ ಜ್ವಾಲಾಪ್ರಸಾದನಿಗೆ ಅವಮಾನಮಾಡಲಾಗಿತ್ತೆಂಬುದು ಸ್ಪಷ್ಟ ವಾಗಿತ್ತು. ಅವನು ತನ್ನ ಕೈಯಿಂದ ಬೆಳ್ಳಿಯ ಬಟ್ಟಲಿಗೆ ಮದ್ಯ ತುಂಬಿ ಜ್ವಾಲಾಪ್ರಸಾದನ ಕಡೆ ಚಾಚುತ್ತ ಚಂದ್ರಭೂಷಣಸಿಂಹನಿಗೆ ಹೇಳಿದ, " ರಾಜಾಸಾಹೇಬ್, ನಿಮಗೆ ನಾಯಬ್ ತಹಸೀಲದಾರರ ವಿಷಯದಲ್ಲಿ ಕೊಂಚ ತಪ್ಪುತಿಳಿವಳಿಕೆಯುಂಟಾಗಿದೆ. ಬರಜೋರ ಸಿಂಹನ ಹೆಂಡತಿಮಕ್ಕಳಿಗೆ ಅವನ ಜಮೀನು ಹಿಂದಿರುಗಿ ಬಂದದ್ದು ನಾಯಬ್ ಸಾಹೇಬರ ಕೃಪೆಯಿಂದಾನೇ."

ಇದುವರೆಗೆ ಈ ದೃಶ್ಯವನ್ನು ತಟಸ್ಥರಾಗಿ ನಗುತ್ತ ನೋಡುತ್ತಿದ್ದ ಮೀರ್ ಸಖಾವತ್ ಹುಸೇನರು ಇದ್ದಕ್ಕಿದ್ದಂತೆ ಬೆಚ್ಚಿಬಿದ್ದರು, " ಬರಜೋರಸಿಂಹನ ಹೆಂಡತಿಗೆ ಅವನ ಜಮೀನು ಹಿಂದಿರುಗಿ ಬಂದದ್ದು ಜ್ವಾಲಾಬಾಬೂನ ಕೃಪೆಯಿಂದ ! ನನಗೆ ಈ ವಿಷಯ ಗೊತ್ತೇ ಇರಲಿಲ್ಲವೆ ! ಇದೆಲ್ಲಾ ಹೇಗಾಯಿತು, ಏನೇನಾಯಿತು ಅಂತ ನನಗೂ ಸ್ವಲ್ಪ ಹೇಳಿ."

ಜ್ವಾಲಾಪ್ರಸಾದ ಈ ವಿಷಯವನ್ನು ಹಾರಿಸಲು ಪ್ರಯತ್ನಿಸಿದ, " ಏನೂ ಇಲ್ಲ. ನನಗೆ ಜ್ಞಾಪಕವೇ ಇರಲಿಲ್ಲ. ತೀರಾ ಸಾಧಾರಣವಾದ ವಿಷಯ. ನಿಮಗೆ ಆಮೇಲೆ ಹೇಳ್ತೀನಿ."

ಆದರೆ ಗಜರಾಜಸಿಂಹನಿಗೆ ಜ್ವಾಲಾಪ್ರಸಾದನ ಗುಣಗಾನ ಮಾಡಬೇಕಾಗಿತ್ತು— ಕನಿಷ್ಠ ಚಂದ್ರಭೂಷಣಸಿಂಹನ ಮುಂದೆ, ಅವನ ಮನಸ್ಸಿನಲ್ಲಿ ಜ್ವಾಲಾಪ್ರಸಾದನ ಬಗ್ಗೆ ಉಂಟಾಗಿದ್ದ ತಪ್ಪು ಅಭಿಪ್ರಾಯವನ್ನು ದೂರಮಾಡುವ ಉದ್ದೇಶದಿಂದ. ಜ್ವಾಲಾ ಪ್ರಸಾದನ ಧ್ವನಿಯಲ್ಲಿದ್ದ ಗಾಬರಿಯನ್ನಾಗಲೀ ಸಂಕೋಚವನ್ನಾಗಲೀ ಅವನು ಗುರುತಿಸ ದಾದ. " ಮೀರ್ ಸಾಹೇಬ್, ಲಂಬರ್‌ದಾರಿಣಿಗೆ ಜ್ವಾಲಾಬಾಬೂರನ್ನ ಕಂಡರೆ ತುಂಬ ಗೌರವವಿರೋದರಿಂದ ಆಕೆಗೆ ಹೇಳಿ ಈ ಜಮೀನಿನ ಗುತ್ತಿಗೆ ಪಟ್ಟೇನ ಬರಜೋರ ಸಿಂಹನ ಮಕ್ಕಳ ಹೆಸರಿಗೆ ಮಾಡಿಸಿಕೊಡಿ ಅಂತ ನಾನು ಅವರನ್ನ ಕೇಳಿಕೊಂಡಿದ್ದೆ. ಜ್ವಾಲಾ ಬಾಬು ಬರಜೋರಸಿಂಹನ ಮಕ್ಕಳಿಗೆ ನೂರುವರಹ ಕೊಟ್ಟರು. ಆ ಹಣದಿಂದ

ಜಮೀನಿನ ಮೇಲಿನ ಸಾಲ ತೀರಿಸಿದ್ದಾಯಿತು. ಲಂಬರ್‌ದಾರಿಣಿ ಜಮೀನು ಬಿಟ್ಟು ಕೊಡೋ ಹಾಗೆ ನಾಯಬ್ ಸಾಹೇಬರು ಆಕೇನ ಒಪ್ಪಿಸಿದರು. ರಾಜಾಸಾಹೇಬರಿಗೆ ಇದೊಂದೂ ಗೊತ್ತಿರಲಿಲ್ಲ. ಆದ್ದರಿಂದಲೇ ಅವರಿಗೆ ತಪ್ಪು ತಿಳಿವಳಿಕೆಯಾಗಿತ್ತು. ಹೌದು ತಾನೆ, ರಾಜಾಸಾಹೇಬ್ ? "

ಗಜರಾಜಸಿಂಹ ಆಡಿದ ಮಾತು ಅಲ್ಲಿ ಕುಳಿತಿದ್ದ ಪ್ರತಿಯೊಬ್ಬರ ಮೇಲೆಯೂ ಪ್ರಭಾವ ಬೀರಿತು. ಅವನು ಒಂದು ದೊಡ್ಡ ರಹಸ್ಯವನ್ನು ಬಯಲುಮಾಡಿದ್ದ. ಪ್ರತಿಯೊಬ್ಬರ ದೃಷ್ಟಿಯಲ್ಲೂ ಜ್ವಾಲಾಪ್ರಸಾದನ ಘನತೆ ಹೆಚ್ಚಿತ್ತು. ಆದರೆ ಮೀರ್ ಸಾಹೇಬರು ಮಾತ್ರ ಮೌನವಾಗಿ ಕುಳಿತಿದ್ದರು. ಅವರ ಮುಖದ ಮೇಲೆ ಹರ್ಷವಾಗಲೀ ವಿಷಾದ ವಾಗಲೀ ಇರಲಿಲ್ಲ. ಇನ್ನೆಲ್ಲೋ ಸಿಕ್ಕಿಬಿದ್ದಿರುವವರಂತೆ, ಎದುರಿಗೆ ನಡೆಯುತ್ತಿದ್ದ ಮಾತು ಕತೆಯಲ್ಲಿ ಎಳ್ಳಷ್ಟೂ ಆಸಕ್ತಿಯಿಲ್ಲದಿರುವವರಂತೆ ಅವರು ಕಾಣುತ್ತಿದ್ದರು. ಗಜರಾಜ ಸಿಂಹ ಮೀರ್ ಸಾಹೇಬರ ಔದಾಸೀನ್ಯವನ್ನು ದೂರಮಾಡಲು ಪ್ರಯತ್ನಿಸುತ್ತ ಹೇಳಿದ, "ತಹಸೀಲದಾರ ಸಾಹೇಬ್, ಇಲ್ಲಿಯ ಜನಕ್ಕೆ ನಾಯಬರಿಂದ ಎಷ್ಟು ಸಂತೋಷವಾಗಿದೆ ಅಂತ ಹೇಳೋಕ್ಕಾಗೋಲ್ಲ! ಇಷ್ಟು ಚಿಕ್ಕವಯಸ್ಸಿಗೆ ಇವರು ದೊಡ್ಡೋರು ಚಿಕ್ಕೋರು ಅನ್ನದೆ ಎಲ್ಲರ ಹೃದಯದಲ್ಲೂ ಸ್ಥಾನ ಗಳಿಸಿಕೊಂಡಿದಾರೆ. ಪ್ರತಿಯೊಬ್ಬರೂ ಅವರನ್ನ ಹೊಗಳುವವರೇ !"

ಮೀರ್ ಸಾಹೇಬರು ಈಗ ಮಾತನಾಡಲೇಬೇಕಾಯಿತು. "ನೀವೆಲ್ಲರೂ ಜ್ವಾಲಾ ಪ್ರಸಾದನನ್ನ ಇಷ್ಟೊಂದು ಗೌರವಿಸ್ತೀರಿ ಅಂತ ನನಗೆ ಸಂತೋಷವಾಗಿದೆ. ಜ್ವಾಲಾ ಬಾಬು ನ್ಯಾಯಿಷ್ಠ, ಅವನ ಹೃದಯ ದಯೆಯಿಂದ ತುಂಬಿದೆ ಅನ್ನೋದೂ ಸಂತೋಷದ ಮಾತೇ. ಆದರೆ ನಾನು ಅನ್ನೋದು ಅವನಿಗಿನ್ನೂ ಚಿಕ್ಕವಯಸ್ಸು, ಪ್ರಪಂಚದ ಅನುಭವ ಸಾಲದು ಅಂತ. ಇದರಲ್ಲಿ ತಪ್ಪೇನಿಲ್ಲ. ಜೀವನದಲ್ಲಿ ಅನುಭವ ಬೆಳೀತಾನೇ ಹೋಗುತ್ತೆ. ಅನುಭವದ ಜೊತೆಜೊತೆಗೇ ಅವನ ಗುಣ ಇದ್ದಿದ್ದೂ ಬೆಳಗುತ್ತೆ."

ಮೀರ್ ಸಾಹೇಬರ ಈ ಮಾತಿನಿಂದ ಅಲ್ಲಿದ್ದವರಿಗೆಲ್ಲಾ ಆಶ್ಚರ್ಯವಾಯಿತು, ಆದರೆ ಯಾರೂ ಏನನ್ನೂ ಹೇಳಲಿಲ್ಲ.

ಊಟ ಮುಗಿಸಿ ಹೊರಡುವಾಗ ಮೀರ್ ಸಾಹೇಬರು ಜ್ವಾಲಾಪ್ರಸಾದನಿಗೆ ಹೇಳಿ ದರು, "ನನ್ನನ್ನ ಮನೆ ಮುಟ್ಟಿಸಿಹೋಗು, ಮಗು. ನಿನ್ನ ಜತೆ ಒಂದೆರಡು ಮಾತೂ ಆಡೋದಿದೆ."

ಜ್ವಾಲಾಪ್ರಸಾದನ ಮನಸ್ಸು ಸ್ವಲ್ಪ ಭಾರವಾಗಿತ್ತು. ಮೀರ್‌ಸಾಹೇಬರ ಮಾತು ಉಳಿದವರಿಗೆ ಅರ್ಥವಾಗದಿದ್ದರೆ ಏನಂತೆ, ಜ್ವಾಲಾಪ್ರಸಾದ ಮಾತ್ರ ಆ ಮಾತಿನ ಮರ್ಮ ವನ್ನು ಗ್ರಹಿಸಿದ್ದ. ತಾನು ಯಾವದಕ್ಕೆ ಹೆದರುತ್ತಿದ್ದನೋ ಆ ಅಂಶ ಅವರ ಮಾತಿನಲ್ಲಿ ಸ್ಪಷ್ಟವಾಗಿ ಎದ್ದುಕಂಡಿತ್ತು. ಅವನು ಅಳುಕು ಮನಸ್ಸಿನಿಂದಲೇ ಮೀರ್‌ಸಾಹೇಬರನ್ನು ಮನೆ ತಲಪಿಸಿ ಬರಲು ಹೋದ.

ಮಿರ್ ಸಾಹೇಬರು ದಾರಿಯುದ್ದಕ್ಕೂ ಮೌನದಿಂದಿದ್ದು, ಮನೆ ತಲಪಿದಮೇಲೆ ಹೇಳಿದರು. "ಕ್ಷಮಿಸು, ಮಗು. ರಾತ್ರಿ ಬಹಳ ಹೊತ್ತಾಗಿದೆ. ಆದರೆ ಅಗತ್ಯವಾಗಿ ಮಾತನಾಡಲೇ ಬೇಕಾಗಿತ್ತು ಅಂತ ನಿನ್ನನ್ನ ಜತೆಗೆ ಬಾ ಅಂದದ್ದು. ಈ ಮಾತು ಮುಗಿಸದೇ ಇದ್ದರೆ ಇಡೀ ರಾತ್ರಿ ನನಗೆ ನಿದ್ರೆ ಬರೋಲ್ಲ ಅಂತ ನೀನು ಕಾಣೆ."

ಜ್ವಾಲಾಪ್ರಸಾದನ ಎದೆ ಹೊಡೆದುಕೊಳ್ಳುತ್ತಿತ್ತು, "ಹುಜೂರರು ಹುಷಾರಾಗಿದಾರೆ ಅಲ್ಲವೆ ? "

ಮಿರ್ ಸಾಹೇಬರು ನಕ್ಕರು, "ನನ್ನ ಮಟ್ಟಿಗೆ ಹುಷಾರಾಗಿಯೇ ಇದೀನಿ. ಆದರೆ ನನಗೆ ಚಿಂತೆಯಾಗಿರೋದು ನಿನ್ನ ಬಗ್ಗೆ. ನಿನ್ನ ಯೋಗಕ್ಷೇಮ ವಿಚಾರಿಸೋಕ್ಕೆ ಅಂತ ನಿನ್ನನ್ನ ಜೊತೆಗೆ ಕರಕೊಂಡು ಬಂದೆ." ಹೀಗಂದು ಮಿರ್ ಸಾಹೇಬರು ತೆಪ್ಪಗಾದರು.

ಜ್ವಾಲಾಪ್ರಸಾದನ ಮನಸ್ಸಿನ ಶಂಕೆ ಈಗ ಭಯದ ರೂಪ ತಾಳಿತು. ಅವನು ಮಾತನಾಡದೆ ತಲೆ ತಗ್ಗಿಸಿಕೊಂಡು ಮಿರ್ ಸಾಹೇಬರ ಪ್ರಶ್ನೆಗಳನ್ನು ಎದುರುನೋಡ ತೊಡಗಿದ. ಆ ಪ್ರಶ್ನೆಗಳು ಏನಾಗಿರಬಹುದೆಂದು ಅವನ ಮನಸ್ಸಿಗೆ ಗೊತ್ತಿತ್ತು.

ಚರ್ಚೆಯನ್ನು ಹೇಗೆ ಪ್ರಾರಂಭಿಸುವುದು, ಮಾತನ್ನು ಹೇಗೆ ಮುಂದ ವರಿಸುವುದು ಎಂದು ತಿಳಿಯದವರಂತೆ ಮಿರ್ ಸಾಹೇಬರು ಕೊಂಚ ಹೊತ್ತು ಯೋಚಿಸುತ್ತಿದ್ದರು. ಆಮೇಲೆ ಒಂದು ನಿಟ್ಟುಸಿರು ಬಿಟ್ಟು ಹೇಳಿದರು, "ಸರಿ, ಮಗು, ಬರಜೋರಸಿಂಹನ ವಿರುದ್ಧ ಹೇಳಿಕೆ ಕೊಟ್ಟು ಅವನು ಆ ಕಾರಣದಿಂದಾಗಿ ಆತ್ಮಹತ್ಯೆ ಮಾಡಿಕೊಂಡ ಮೇಲೆ ನೀನು ಅವನ ಹೆಂಡತಿ ಮಕ್ಕಳಿಗೆ ನೂರು ವರಹಕೊಟ್ಟೆ. ನೀನು ಮಾಡಿದ ಕೆಲಸ ಮನುಷ್ಯರು ಮಾಡೋ ಅಂಥಾದ್ದಲ್ಲ. ದೇವತೆಗಳು ಮಾಡೋದು. ನಿಮ್ಮ ತಂದೆ ನಿನ್ನ ಬಗ್ಗೆ ಅಭಿಮಾನ ಪಡೋದು ಸರಿಯೇ ಸರಿ! ಆದರೆ ಮನುಷ್ಯ ನಿಜವಾಗಿಯೂ ದೇವತೆಯಾಗಬಲ್ಲನೆ ಅಂತ ನಾನು ಯೋಚಿಸ್ತಿದೀನಿ. ನಾನೂ ಪ್ರಪಂಚಾನ ನೋಡಿದೀನಿ, ನನಗೂ ದೀರ್ಘ ಅನುಭವವಿದೆ. ಏನು, ನಾನೀಗ ಆ ನನ್ನ ಅನುಭವವನ್ನ ತಿದ್ದಿಕೊಳ್ಳ ಬೇಕೆ ? "

ಜ್ವಾಲಾಪ್ರಸಾದನಲ್ಲಿ ಈ ಮಾತಿಗೆ ಉತ್ತರವಿರಲಿಲ್ಲ. ಅವನು ಮೌನವಾಗಿದ್ದ. ಮಿರ್ ಸಾಹೇಬರೂ ಮೌನ ತಾಳಿದರು. ತಮ್ಮ ಪ್ರಶ್ನೆಯ ಮಹತ್ವವನ್ನು ತಾವೇ ಅನುಭವಿಸಿ ಅದಕ್ಕೆ ಮನಸ್ಸಿನಲ್ಲೇ ಉತ್ತರ ಪಡೆಯುತ್ತಿದ್ದಾರೆಯೋ ಎಂಬಂತಿತ್ತು ಅವರ ಮೌನ. ರಾತ್ರಿಯ ಕತ್ತಲೆ ಅವರ ಮುಖದ ಮೇಲೂ ಕವಿಯುತ್ತಿತ್ತು: ಅದೇ ಕತ್ತಲೆ ಜ್ವಾಲಾಪ್ರಸಾದನ ಎದೆಯೊಳಗೂ ಹೆಪ್ಪುಗಟ್ಟುತ್ತಿತ್ತು. ಗಾಳಿಯಲ್ಲಿ ಒಂದು ಬಗೆಯ ನಡುಕವಿತ್ತು. ಆ ನಡುಕ ಜ್ವಾಲಾಪ್ರಸಾದನ ರೋಮರೋಮವನ್ನೂ ಆವರಿಸಿತ್ತು. ಮಿರ್ ಸಾಹೇಬರು ತಮ್ಮ ಧ್ವನಿಯಿಂದ ಆ ಮಂಜು ಮುಸುಕಿದ ಶೀತಲ ವಾತಾವರಣ ವನ್ನು ಹರಿಯುವವರಂತೆ ಹೇಳಿದರು. "ಮಗು, ನೂರು ವರಹ ಅಂದರೆ ತುಂಬ ಹಣವಾಯ್ತು. ನಿನ್ನಲ್ಲಿ ಅಷ್ಟು ಹಣವಿತ್ತು ಅಂದರೆ ನನಗೆ ಆಶ್ಚರ್ಯವಾಗುತ್ತೆ. ನಿಮ್ಮ

ತಂದೆಯನ್ನ ನಾನು ಬಲ್ಲೆನಾದ್ದರಿಂದ ನಿಮ್ಮ ಮನೆತನ ಎಂಥಾದ್ದು ಅನ್ನೋ ಕಲ್ಪನೆ ನನಗಿದೆ. ನೀನು ಲಂಚ ತೊಗೊಳ್ಳೋನಲ್ಲ ಅನ್ನೋದೂ ನನಗೆ ಗೊತ್ತಿದೆ. ಯಾವನು ಲಂಚ ತೊಗೊಳ್ಳೋದಿಲ್ಲವೋ ಅವನು ಇನ್ನೊಬ್ಬರಿಗೆ ದಾನಧರ್ಮದ ರೂಪದಲ್ಲಿ ಇಷ್ಟೊಂದು ಹಣ ಕೊಡಲಾರ."

ಜ್ವಾಲಾಪ್ರಸಾದ ಈಗಲೂ ಮೌನದಿಂದಿರಬಹುದಾಗಿತ್ತು. ಯಾಕಂದರೆ ಮಿರ್ ಸಾಹೇಬರು ತಮಗೆ ತಾವೇ ಮಾತನಾಡಿಕೊಂಡಿದ್ದರು. ಯಾವ ಪ್ರಶ್ನೆಯನ್ನೂ ಕೇಳಿರಲಿಲ್ಲ. ಆದರೆ ಅವರ ಮಾತಿನಲ್ಲಿ 'ನಿಜ ಹೇಳು' ಎಂಬ ಕರೆಯಿದ್ದುದು ಜ್ವಾಲಾಪ್ರಸಾದನಿಗೆ ಸ್ಪಷ್ಟವಾಗಿ ಅರಿವಾಯಿತು. ಜ್ವಾಲಾಪ್ರಸಾದನ ಅಂತರಂಗದಲ್ಲಿನ ಸತ್ಯ ಥಟ್ಟನೆ ಹೊರಬಂತು. "ಹುಜೂರ್. ಆ ವರಹ ನನ್ನವಲ್ಲ. ಬರಜೋರಸಿಂಹನ ಹೆಂಡತಿ ಸಾಲ ತೀರಿಸಿ. ಜಮೀನನ್ನ ವಾಪಸು ಪಡೀಲಿ ಅಂತ ಲಂಬರ್‌ದಾರಿಣಿ ಅವಳಿಗೆ ಕೊಡಿಸಿದ್ದ ಹಣ ಅದು."

ಮಿರ್ ಸಾಹೇಬರ ಹಣೆ ಗಂಟಿಕ್ಕಿತು. "ಯಾವ ಜಮೀನನ್ನ ಕಸಿದುಕೊಳ್ಳೋಕೆ ಹೋಗಿ ಪ್ರಭುದಯಾಳ ಪ್ರಾಣ ತೆರಬೇಕಾಯಿತೋ, ಬರಜೋರಸಿಂಹ ಆತ್ಮಹತ್ಯೆ ಮಾಡಿಕೊಳ್ಳಬೇಕಾಯಿತೋ ಆ ಜಮೀನನ್ನ ವಾಪಸು ಪಡೀಲಿ ಅಂತಲೇ! ವಿಚಿತ್ರ ಪ್ರಪಂಚ, ಮಗು. ಅದನ್ನ ಅರ್ಥಮಾಡಿಕೊಳ್ಳೋದು ಸಾಧ್ಯವೆ? ಲಂಬರ್‌ದಾರಿಣಿ ಬರಜೋರಸಿಂಹನ ಜಮೀನನ್ನ ತಾನೇತಾನಾಗಿ ವಾಪಸು ಕೊಟ್ಟಳೇ? ಇದರಲ್ಲಿ ಏನೋ ರಹಸ್ಯವಿದೆ!" ಮಿರ್ ಸಾಹೇಬರು ಜ್ವಾಲಾಪ್ರಸಾದನ ಮೇಲೆ ದೃಷ್ಟಿ ನೆಟ್ಟರು: "ಮಗೂ. ಈ ರಹಸ್ಯಾನ ನಿನ್ನೊಳಗೇ ಇಟ್ಟುಕೋ. ಯಾರಿಗೂ ಬಿಟ್ಟುಕೊಡಬೇಡ. ನಿನಗೆ ಹೆಂಡತಿಮಕ್ಕಳಿದಾರೆ, ಮಾನಮರ್ಯಾದೆಯಿದೆ. ಪ್ರಪಂಚದಲ್ಲಿ ಮುನ್ನಡೆಯೋಕ್ಕೆ, ಯಶಸ್ಸು ಗಳಿಸೋಕ್ಕೆ ನಿನ್ನ ಮುಂದೆ ದೀರ್ಘಜೀವನವಿದೆ. ಈ ಸ್ಥಿತೀಲಿ ನೀನು ನಿನ್ನ ರಹಸ್ಯವನ್ನ ಉಪಾಯವಾಗಿ ಕಾಪಾಡಿಕೊಳ್ಳಬೇಕು."

ಮಿರ್ ಸಾಹೇಬರ ಒಂದೊಂದು ಮಾತೂ ಜ್ವಾಲಾಪ್ರಸಾದನ ಮನಸ್ಸಿನ ಮೇಲೆ ಸುತ್ತಿಗೆಯ ಏಟಿನಂತೆ ಬೀಳುತ್ತಿತ್ತು. ಅವನ ಮುಖ ಭಯಾನಕವಾಗಿ ಬಿಳುಪಾಗಿತ್ತು. ಅವನು ನೆಲ ನೋಡುತ್ತ ಬಾಯಿ ತೆರೆದ, "ಹುಜೂರ್!"

ಆದರೆ ಮಿರ್ ಸಾಹೇಬರು ಜ್ವಾಲಾಪ್ರಸಾದ ಮಾತಾಡದಂತೆ ತಡೆದರು, "ಇಲ್ಲ, ಮಗು, ಇನ್ನೊಂದು ಚಕಾರವನ್ನೂ ಎತ್ತಬೇಡ. ಎಲ್ಲಿಯವರೆಗೆ ಮನುಷ್ಯ ತಪ್ಪನ್ನ ಮುಚ್ಚಿಟ್ಟುಕೊಳ್ಳಬಯಸ್ತಾನೋ ಅಲ್ಲಿಯವರೆಗಷ್ಟೇ ಆ ತಪ್ಪನ್ನ ತಪ್ಪು ಅಂತ ತಿಳೀಬೇಕು. ಯಾವಾಗ ಮನುಷ್ಯನಿಗೆ ತನ್ನ ತಪ್ಪನ್ನ ಹೊರಗೆಡಹೋ ಧೈರ್ಯ ಬರುತ್ತೋ ಆಗ ಅವನ ಪಾಲಿಗೆ ಆ ತಪ್ಪು ತಪ್ಪಾಗಿರೋದಿಲ್ಲ. ಇನ್ನೂ ಒಂದು ಮಾತನ್ನ ಒಪ್ಪಲೇಬೇಕು, ಮಗು. ಪ್ರಪಂಚದಲ್ಲಿ ದೌರ್ಬಲ್ಯಗಳಿರುತ್ತವೆ, ತಪ್ಪುಗಳಿರುತ್ತವೆ. ಜನ ದೌರ್ಬಲ್ಯಗಳನ್ನ ದೌರ್ಬಲ್ಯಗಳು ಅಂತ ತಿಳಿದು ಮುಚ್ಚಿಕೊಳ್ಳೋದರಲ್ಲಿ. ತಪ್ಪು

ಗಳನ್ನ ತಪ್ಪುಗಳು ಅಂತ ತಿಳಿದು ಹೊರಹಾಕದೆ ಇರೋದರಲ್ಲಿ ಪ್ರಪಂಚದ ಹಿತ ಅಡಗಿದೆ. ಆಗಲೇ ಜನ ಆ ದೌರ್ಬಲ್ಯಗಳನ್ನ ದೂರ ಮಾಡೋಕ್ಕೆ, ತಪ್ಪುಗಳನ್ನ ಬಿಡೋಕ್ಕೆ ಪ್ರಯತ್ನ ಮಾಡಬಲ್ಲರು."

ಮಿರ್ ಸಾಹೇಬರು ಮಾತುಮುಗಿಸಿ ಸ್ವಲ್ಪ ಹೊತ್ತು ಸುಮ್ಮನೆ ಏನನ್ನೋ ಯೋಚಿಸುತ್ತಿದ್ದರು. ಅವರ ಮುಖದ ಮೇಲೆ ಒಳಗೆ ನಡೆಯುತ್ತಿದ್ದ ಒಳತೋಟಿ ಬರೆದಂತಿತ್ತು. ಆಮೇಲೆ ಅವರು ಸ್ವತಃ ತಮಗೆ ಪ್ರಿಯವಲ್ಲದ, ಆದರೂ ಅನಿವಾರ್ಯ ವಾದ, ಯಾವುದೋ ನಿರ್ಣಯ ತೆಗೆದುಕೊಂಡವರಂತೆ ಹಠಾತ್ತನೆ ಎದ್ದುನಿಂತರು. "ಮಗೂ. ಅದೇಕೋ ಕಾಣೆ, ನಿನ್ನ ಬಗ್ಗೆ ನನ್ನ ಹೃದಯದಲ್ಲಿ ಒಂದು ಮಮತೆ ಬೆಳೆದು ಬಿಟ್ಟಿದೆ. ನನಗೆ ಹಿಂದೆ ಮುಂದೆ ಯಾರೂ ಇಲ್ಲ. ಆದ್ದರಿಂದ ನನಗೇ ಗೊತ್ತಿಲ್ಲದ ಹಾಗೆ ನಿನ್ನನ್ನ ನನ್ನ ಮಗ ಅಂತ ತಿಳಕೊಂಡಿದೇನೋ ಏನೋ. ಒಂದು ಸಲ ನಿನ್ನನ್ನ ಮಗ ಅಂತ ಅಂದುಕೊಂಡ ಮೇಲೆ ತಂದೆಯ ಕರ್ತವ್ಯವನ್ನ ನಿಬಾಯಿಸೋಕ್ಕೋಸ್ಕರ ನಿನ್ನನ್ನ ಕಾಪಾಡಬೇಕಾಗಿದೆ. ನಿನ್ನಲ್ಲಿ ಒಳ್ಳೆಯತನವಿದೆ, ಹಸುಳೆತನವಿದೆ. ನಿನ್ನಿಂದ ಬೇರೆ ಯಾಗೋದಕ್ಕೆ ನೋವಾಗುತ್ತೆ. ಆದರೆ ಅದನ್ನ ಹೇಗೋ ಸಹಿಸಿಕೋತೀನಿ. ನಿನ್ನನ್ನ ಉಳಿಸೋದಕ್ಕೆ ಒಂದೇ ಒಂದು ಮಾರ್ಗವಿದೆ. ಅದೆಂದರೆ ನಿನ್ನನ್ನ ಇಲ್ಲಿಂದ ವರ್ಗ ಮಾಡಿಸೋದು. ಕಮಿಷನರ್ ಸಾಹೇಬರಿಗೆ ನನ್ನನ್ನ ಕಂಡರೆ ತುಂಬ ಮರ್ಯಾದೆ. ಅಲಹಾಬಾದ್ ಜಿಲ್ಲೆಯ ಸೋರಾವಿನ ತಹಸೀಲದಾರನಿಗೆ ಮುಂದಿನವರ್ಷ ರಿಟೈರ್ ಆಗೋದಿದೆ. ನಾನು ಒತ್ತಾಯಮಾಡಿದರೆ ಕಮಿಷನರ್ ಸಾಹೇಬರು ನಿನ್ನನ್ನು ಅಲ್ಲಿ ತಹಸೀಲದಾರನನ್ನಾಗಿ ಮಾಡಬಲ್ಲರು ಅಂತ ಅಂದುಕೊಂಡಿದೀನಿ. ಇಷ್ಟುಬೇಗ ನಿನಗೆ ಬಡತಿಯಾದರೆ ಜನ ಆಕ್ಷೇಪಣೆ ಮಾಡಬಹುದು. ಆದರೆ, ಹೇಳಿದೆನಲ್ಲ, ಇದು ನನ್ನ ಮಗನ ವಿಷಯ. ಕಮಿಷನರ್ ಸಾಹೇಬರಿಗೆ ಹೇಗಾದರೂ ಮಾಡಿ ಒಪ್ಪಿಸ್ತೀನಿ."

ಜ್ವಾಲಾಪ್ರಸಾದ ಬಿಕ್ಕಿಬಿಕ್ಕಿ ಅಳತೊಡಗಿದ. ಕಣ್ಣಲ್ಲಿ ನೀರು ತುಂಬಿತು. ಒಂದೇ ಸಮನೆ ಬಿಕ್ಕಳಿಸುತ್ತ ಅವನು ಹೇಳಿದ, "ಹುಜೂರ್, ನಾನು ತಪ್ಪಿತಸ್ಥ. ಆದರೆ ನನ್ನನ್ನ ದೂರಮಾಡಬೇಡಿ. ಮುಂದೆ ಎಂದೆಂದಿಗೂ ನನ್ನ ಮೇಲೆ ದೂರು ಏಳೋ ಸಂದರ್ಭ ಬರೋದಿಲ್ಲ ಅಂತ ಪ್ರಮಾಣ ಮಾಡಿ ಹೇಳ್ತೀನಿ."

ಮಿರ್ ಸಾಹೇಬರು ನಕ್ಕರು, "ಮಗು, ಒಂದು ಸಲ ಹೆಜ್ಜೆಯಿಟ್ಟ ಮೇಲೆ ಅದನ್ನ ವಾಪಸು ತೂಗೋಳೋಕ್ಕಾಗೋಲ್ಲ. ಆದ್ದರಿಂದ ನನಗೆ ನಿನ್ನ ವಾಗ್ದಾನದಲ್ಲಿ ಆಣೆ-ಪ್ರಮಾಣದಲ್ಲಿ ನಂಬಿಕೆಯಿಲ್ಲ. ಮಮತೆ ಮತ್ತು ನ್ಯಾಯಗಳಲ್ಲಿ ಒಂದನ್ನ ಆರಿಸಬೇಕಾಗಿ ಬಂದಾಗ ನ್ಯಾಯಾನೇ ಆರಿಸಬೇಕು ಅಂತ ನಿನಗೆ ಗೊತ್ತಿದೆ. ಆದರೆ ಆ ನ್ಯಾಯವೂ ಮಮತೆಯಿಂದ ಕೂಡಿರಬೇಕು. ನೀನು ಇಲ್ಲಿಂದ ಬಡತಿಯಾಗಿ ಹಾನೇ ಹೋಗ್ತಿದಿ."

"ನೀವು ಬೇಕಾದರೆ ನನಗೆ ಶಿಕ್ಷೆ ಕೊಡಿ." ಜ್ವಾಲಾಪ್ರಸಾದ್ ಹೇಳಿದ.

"ನಾನು ನಿನಗೆ ಶಿಕ್ಷೇನೇ ಕೊಡ್ತಿರೋದು, ಮಗು. ಘಾಟಮಪುರದ ಇಲಾಕೆ ದಾರಿಕೆಗಿಂತ ಸೋರಾವಿನ ತಹಸೀಲದಾರಿಕೆ ಕೆಳಮಟ್ಟದ್ದು!" ವಿಾರ್ ಸಾಹೇಬರು ಕಿಲಕಿಲನೆ ನಕ್ಕರು.

ಮಾರನೆಯ ದಿನ ಬೆಳಕು ಹರಿದೊಡನೆಯೇ ಶಿವಲಾಲ ಜ್ವಾಲಾಪ್ರಸಾದನ ಹತ್ತಿರ ಬಂದು ಕುಳಿತುಕೊಂಡ. ಜ್ವಾಲಾಪ್ರಸಾದ ಚಿಂತಿತನಾಗಿದ್ದ, ಗಂಭೀರನಾಗಿದ್ದ. ರಾತ್ರಿ ಸರಿಯಾಗಿ ನಿದ್ದೆ ಬಂದಿರಲಿಲ್ಲ. ಗಜರಾಜಸಿಂಹನ ಮನೆಯ ಔತಣದಲ್ಲಿ ಶಿವಲಾಲನೇನೋ ಮಗನ ಸಮರ್ಥನೆ ಮಾಡಿದ್ದರೂ ಅವನಿಗೆ ಮಗ ಯಾರಿಗೇ ಆಗಲಿ ನೂರು ವರಹ ದಾನ ಕೊಡುವಷ್ಟು ತಪ್ಪು ಮಾಡಿದನೆಂಬುದು ಸಹಿಸಲಾರದ ವಿಷಯವಾಗಿತ್ತು. ಮುನಿಷಿ ಶಿವಲಾಲ ಮಗನನ್ನು ಇದುವರೆಗೂ ಪ್ರಾಮಾಣಿಕ, ನೀತಿವಂತ ಎಂದು ತಿಳಿದಿದ್ದ. ಆದರೆ ಅವನು ಬರಜೋರಸಿಂಹನ ಹೆಂಡತಿಗೆ ತನ್ನಲ್ಲಿದ್ದ ನೂರು ವರಹ ಕೊಟ್ಟನೆಂಬ ಹೊಸ ಸುದ್ದಿ ಶಿವಲಾಲನ ಮನಸ್ಸಿನಲ್ಲಿ ಸಂಶಯದ ಭೂತವನ್ನು ಬಡಿದೆಬ್ಬಿಸಿತ್ತು. ಎರಡೇ ತಿಂಗಳ ಹಿಂದೆ ಅವನು ರಾಧೇಲಾಲನಿಗೆ ಜಮಿಾನು ಕೊಳ್ಳಲು ಕೊಡಲೆಂದು ಜ್ವಾಲಾಪ್ರಸಾದನಿಂದ ಇನ್ನೂರೈವತ್ತು ರೂಪಾಯಿ ಕೇಳಿದ್ದ. ಆದರೆ ಜ್ವಾಲಾಪ್ರಸಾದ ಆಯವ್ಯಯದ ಲೆಕ್ಕ ತೋರಿಸಿ ತಾನು ಹಣ ಕೊಡಲು ಅಸಮರ್ಥನೆಂದು ತೋರಿಸಿ ಕೊಂಡಿದ್ದ. ಹಿಂದಿನ ರಾತ್ರಿ ವರಹದ ವಿಷಯ ಕೇಳಿ ಅವನಿಗೆ ತುಂಬ ಕೆಟ್ಟನಿಸಿತು. ತಾನು ಯೋಗ್ಯ, ಪ್ರಾಮಾಣಿಕ ಎಂದುಕೊಂಡಿದ್ದ ತನ್ನ ಮಗನೇ ಈ ಭೇದಭಾವ ಮಾಡಿದನೆ?

ತಂದೆಯ ಈ ಮುಖಭಂಗಿಯನ್ನು ನೋಡಿ ಜ್ವಾಲಾಪ್ರಸಾದ ಕಕ್ಕಾಬಿಕ್ಕಿಯಾದ. "ನಿನ್ನೆ ರಾತ್ರಿ, ಬರಜೋರಸಿಂಹನ ಹೆಂಡತಿಗೆ ನೀನು ನೂರು ವರಹ ಕೊಟ್ಟೆ ಅಂತ ಕೇಳಿದೆ. ಆಶ್ಚರ್ಯವಾಯಿತು. ರಾಧೇ ಜಮಿಾನುಕೊಳ್ಳಬೇಕು ಅಂತಿದ್ದ. ಇವತ್ತೆಲ್ಲಾ ಇನ್ನೂರೈ ವತ್ತು ರೂಪಾಯಿನ ಮಾತು. ಆದರೆ ನೀನು ಖಂಡಿತವಾಗಿ ಇಲ್ಲ ಅಂದುಬಿಟ್ಟೆ," ಶಿವಲಾಲ ಹೇಳಿದ.

"ಆ ರೂಪಾಯಿ ನನ್ನದಲ್ಲ. ಮನೆಯ ಲೆಕ್ಕಪತ್ರವೆಲ್ಲಾ ನಿಮ್ಮ ಹತ್ತಿರವೇ ಇರುತ್ತೆ. ನನ್ನ ಇಡೀ ಸಂಬಳಾನ ತಂದು ನಿಮ್ಮ ಕೈಲಿಡ್ತೀನಿ." ಜ್ವಾಲಾಪ್ರಸಾದ ಉತ್ತರ ಕೊಟ್ಟ. ಅವನ ಧ್ವನಿ ತೊದಲುತ್ತಿತ್ತು.

ಮುನಿಷಿ ಶಿವಲಾಲ ಇದ್ದಿದ್ದೂ ಗಂಭೀರನಾದ, "ಹೌದು, ಸಂಬಳಾನೇನೋ ಪೂರ್ತಿ ಯಾಗಿಯೇ ಕೊಡ್ತಿ, ನಿಜ. ಆದರೆ ಮೇಲುಸಂಪಾದನೆಯೆಲ್ಲಾ ಎಲ್ಲಿ ಹೋಗುತ್ತೆ? ನೀನು ಮೇಲುಸಂಪಾದನೆ ಮಾಡೋನಲ್ಲ ಅಂತ ನಾನು ಇದುವರೆಗೂ ಅಂದುಕೊಂಡಿದ್ದೆ. ಆದರೆ ನಾನು ತಿಳಕೊಂಡಿದ್ದದ್ದು ತಪ್ಪು ಅಂತ ಈಗ ಕಾಣ್ತದೆ. ಅಂತೂ ಈಗ ಗೊತ್ತಾದ ಹಾಗಾಯ್ತು."

ಜ್ವಾಲಾಪ್ರಸಾದನ ಗಂಟಲು ಬಿಗಿಯಿತು. "ನಾನು ನಿಮ್ಮ ಹತ್ತಿರ ನಿಜ ಹೇಳ್ತಿದೀನಿ. ನನಗೆ ಯಾವ ಮೇಲುಸಂಪಾದನೆಯೂ ಇಲ್ಲ. ಆ ನೂರು ವರಹ ನಂದಲ್ಲ. ನಿಮ್ಮ ಮುಂದೆ ಆಣೆ ಮಾಡಿ ಹೇಳ್ತೀನಿ. ಯಾರಿಂದಲಾದರೂ ಒಂದು ಕಾಸು ಲಂಚ ತೊಗೋಳೋದು ಸಹ ಪಾಪ ಅಂತ ನಾನು ತಿಳಿದಿದೀನಿ."

ಮುನಿಷಿ ಶಿವಲಾಲ ತೊಡಕಿನಲ್ಲಿ ಸಿಕ್ಕಿಬಿದ್ದ. ಕ್ಷಣಕಾಲ ಯೋಚಿಸುತ್ತಿದ್ದು ಆಮೇಲೆ ಅವನು ಬಿರುಸಾದ ಧ್ವನಿಯಲ್ಲಿ ಕೇಳಿದ, "ಜನ ನೀನು ಕೊಟ್ಟೆ ಅಂತ ತಿಳಕೊಂಡಿದಾರಲ್ಲ. ಆ ಹಣ ಯಾರದ್ದು, ಹಾಗಾದರೆ! ಈ ಕಲಿಯುಗದಲ್ಲಿ ಅಂಥ ಅನಾಥಬಂಧು ಯಾರು ಹುಟ್ಟಿದಾರೆ ಹೇಳು, ನಾನೂ ಸ್ವಲ್ಪ ಕೇಳಿ ತಿಳಕೋತೀನಿ."

ಜ್ವಾಲಾಪ್ರಸಾದ ಇಷ್ಟವಿಲ್ಲದಿದ್ದರೂ ಉತ್ತರ ಕೊಡಬೇಕಾಗಿ ಬಂತು. "ನೀವು ಯಾರಿಗೂ ಹೇಳಬೇಡಿ. ನೀವು ನಿರ್ವಾಹವಿಲ್ಲದ ಹಾಗೆ ಮಾಡಿದಿರಿ ಅಂತ ನಿಮಗೆ ಹೇಳ್ತಿದೀನಿ. ಬರಜೋರಸಿಂಹನ ಹೆಂಡತಿ ಸಾಲ ತೀರಿಸಿ ತನ್ನ ಜಮೀನು ವಾಪಸು ಪಡೀಲಿ ಅಂತ ಲಂಬರ್‌ದಾರಿಣಿ ಜೈದೇಯಿ ಆ ಹಣಾನ ಕೊಟ್ಟಿದ್ದಳು."

ಮುನಿಷಿ ಶಿವಲಾಲನ ಮುಖದಮೇಲೆ ಕವಿದಿದ್ದ ಮೋಡ ಇದ್ದಕ್ಕಿದ್ದಂತೆ ಚದುರಿತು. ಅವನ ಕಣ್ಣು ಸಂತೋಷದಿಂದ ಹೊಳೆಯುತೊಡಗಿತು. "ಓಹೋ! ಈಗ ಅರ್ಥವಾಯಿತು. ನಾನು ಲಂಬರ್‌ದಾರಿಣಿ ಜೈದೇಯಿಯ ವಿಷಯಾನ ಯೋಚಿಸಿಯೇ ಇರಲಿಲ್ಲ. ಅಂದರೆ ಜೈದೇಯಿ ನಿನ್ನ ಮಾತಿನ ಮೇಲೆ ಬರಜೋರಸಿಂಹನ ಹೆಂಡತಿಗೆ ಹಣ ಕೊಟ್ಟಳು ಅಂತ ನಾನು ಅಂದುಕೊಡರೆ ತಪ್ಪಲ್ಲ ತಾನೆ!"

ಜ್ವಾಲಾಪ್ರಸಾದ ಮತ್ತೆ ನಿಜ ಹೇಳಬೇಕಾಯಿತು. "ಹೌದು, ಪ್ರಾಪಂಚಿಕ ವ್ಯವಹಾರದ ವಿಷಯದಲ್ಲಿ ನೀವು ತಪ್ಪು ಮಾಡೋದು ಸಾಧ್ಯವೇ ಇಲ್ಲ."

ಸತ್ಯಸಂಗತಿ ತಿಳಿದಮೇಲೆ ಶಿವಲಾಲನ ಮುಖಮುದ್ರೆ ಬದಲಾಯಿತು. ಅವನು ನಗುತ್ತ ಹೇಳಿದ. "ಮಗು ಜ್ವಾಲಾ. ನಿನ್ನ ಭಾಗ್ಯ ತೆರೀತು ಅಂದುಕೋ. ಬಲು ಭಾರೀ ಬೇಟೆ ಹಿಡಿದಿದಿ. ಮುಂದೆ ಹೀಗೆಲ್ಲಾ ಇನ್ನೊಬ್ಬರಿಗೆ ಹಣ ಕೊಡಿಸೋಲ್ಲ ಅಂತ ಪ್ರಮಾಣ ಮಾಡು. ನಿನಗೋಸ್ಕರ ಆಸ್ತಿಪಾಸ್ತಿ ಮಾಡಿಕೊ. ಲಂಬರ್‌ದಾರಿಣಿ ಹತ್ತಿರ ಇರೋ ನಗ–ನಗದೇ ಲಕ್ಷ ರೂಪಾಯಿನಷ್ಟಾಗುತ್ತೆ."

ಜ್ವಾಲಾಪ್ರಸಾದ ತಂದೆಯ ಮಾತಿಗೆ ಏನೂ ಉತ್ತರಕೊಡಲಿಲ್ಲ. ಅವನೊಳಗೆ ತನ್ನ ಬಗ್ಗೆ, ತನ್ನ ತಂದೆಯ ಬಗ್ಗೆ, ಅಷ್ಟೇಕೆ ಇಡೀ ಪ್ರಪಂಚದ ಬಗ್ಗೆಯೇ ಒಂದು ಬಗೆಯ ಜುಗುಪ್ಸೆ ಹುಟ್ಟಿತ್ತು!

## ಎಂಟು

ತ್ರಿವೇಣಿಯಲ್ಲಿ ಸ್ನಾನಮಾಡಿ ತನ್ನ ಗುಡಿಸಲು ಸೇರಿಕೊಳ್ಳುವ ಹೊತ್ತಿಗೆ ಮುನಿಷಿ ಶಿವ ಲಾಲ ತುಂಬ ದಣಿದಿದ್ದ. ಛಿನಕಿ ಗುಡಿಸಲನ್ನು ಗುಡಿಸಿ ಸಾರಿಸಿ, ಒಲೆ ಹಚ್ಚಿ ಖಿಚಡಿ ಬೇಯಿಸಲು ಇಟ್ಟಿದ್ದಳು.

ಮುನಿಷಿ ಶಿವಲಾಲ ಅಲಹಾಬಾದಿನಲ್ಲಿ ತ್ರಿವೇಣಿ ದಂಡೆಯ ಮೇಲೆ ಕಲ್ಪವಾಸ ನಡಸಿದ್ದ. ಸೋರಾವಿಗೆ ಬಂದಮೇಲೆ ಅವನು ಪ್ರತಿವರ್ಷವೂ ಮಾಘಮಾಸದ ಮೇಳದಲ್ಲಿ ಕಲ್ಪವಾಸ ಮಾಡಲು ಅಲಹಾಬಾದಿಗೆ ಬರುತ್ತಿದ್ದ. ಅವನಿಗೆ ಎಲ್ಲ ತರಹದ ಅನುಕೂಲ ಗಳೂ ಇದ್ದವು. ಅವನ ಗುಡಿಸಲು ಸಂಗಮದಿಂದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿತ್ತು. ಅದನ್ನು ಬಹಳ ಯುಕ್ತಿಯಿಂದ ಕಟ್ಟಿದ್ದರು. ನೀರು ಗಾಳಿಯಿಂದ ಪೂರ್ತಿ ರಕ್ಷಣೆಯಿದ್ದು, ಅದು ಸಾಕಷ್ಟು ದೊಡ್ಡದೂ ಆಗಿತ್ತು.

ಸುಮಾರು ಅರ್ಧಗಂಟೆಯ ಮೇಲೆ ಛಿನಕಿ ಮಡಿಯುಟ್ಟು ಬಂದು ನೋಡುವಾಗ ಮುನಿಷಿ ಶಿವಲಾಲ ಮೈಮೇಲೆ ರಜಾಯಿ ಎಳೆದುಕೊಂಡು ಮಲಗಿದ್ದ, ಒಲೆ ಆರಿಹೋದಂತಿತ್ತು. ಶಿವಲಾಲನ ತಲೆದೆಸೆಯ ಹತ್ತಿರ ಬಂದು ನಿಂತುಕೊಂಡು ಅವಳು ಹೇಳಿದಳು, "ಏನು, ಮೈ ನೆಟ್ಟಗಿದೆ ತಾನೆ? ಒಲೆ ಆರಿಹೋಗಿದೆ, ಖಿಚಡಿ ಕುದ್ದಿಲ್ಲ ಅಂತ ಕಾಣುತ್ತೆ. ನೀವು ಹೀಗೆ ಪಾಲುಮಾರಿಕೆ ಮಾಡಿದರೆ ನಡೆಯೋಲ್ಲ. ಏಳಿ. ಎದ್ದು ಒಲೆ ಹೊತ್ತಿಸಿ. ಖಿಚಡಿ ಉಂಡು ಮತ್ತೆ ಮಲಕ್ಕೊಳ್ಳೋರಂತೆ."

"ಅರೇ, ನೀನೇ ಒಲೆ ಊದೆ. ಖಿಚಡಿಯಾದ ಮೇಲೆ ಹೇಳು. ಎದ್ದು ಉಣ್ತೇನಿ. ಈಗಲೇ ಏಳೋಕ್ಕೆ ಮನಸ್ಸಾಗೋಲ್ಲ." ಶಿವಲಾಲ ರಜಾಯಿಯ ಒಳಗಿನಿಂದಲೇ ಹೇಳಿದ.

"ರಾಮ ರಾಮ! ಅಡಿಗೆ ಕೋಣೆಗೆ ನಾನು ಹೋಗೋದೆ? ಕಲ್ಪವಾಸ ಮಾಡ್ತಿದೀರಿ. ಸ್ವಲ್ಪ ಆಚಾರವ್ಯವಹಾರಕ್ಕೆ ಗಮನಕೊಡಿ. ಅಡಿಗೆ ಕೋಣೆಗೆ ನಾನು ಕಾಲಿಟ್ಟರೆ ಅದು ಮೈಲಿಗೆಯಾಗೋಲ್ಲವೆ?"

"ಆದರೆ ಆಯಿತು. ನನಗಂತೂ ಅಡಿಗೆ ಮಾಡಿ ಮಾಡಿ ಬೇಜಾರಾಗಿದೆ. ರಾಧೆಯ ಹೆಂಡತಿ ಇಲ್ಲವೇ ಸೊಸೇರಲ್ಲಿ ಯಾರಾದರೂ ಬರಬಹುದಾಗಿತ್ತು, ಅವರೂ ಬರಲಿಲ್ಲ. ನೋಡು. ಖಿಚಡಿ ಮಾಡಿ ತಟ್ಟೆಗೆ ಬಡಿಸಿ ನನ್ನನ್ನ ಕರಿ. ಈಗ ಏಳೋಕ್ಕೆ ಸ್ವಲ್ಪವೂ ಮನಸ್ಸಿಲ್ಲ. ಇವತ್ತು ಇದ್ದಕ್ಕಿದ್ದ ಹಾಗೇ ಚಳಿ ಜೋರಾಗಿದೆ."

ಮುನಿಷಿ ಶಿವಲಾಲನ ಮಾತನ್ನು ಕೇಳಿ ಛಿನಕಿ ಸ್ತಂಭಿತಳಾದಳು. "ಇದೇನು, ನೀವು ಆಡೋ ಮಾತು. ನೀವು ನಾನು ಬೇಯಿಸಿದ ಮುಸುರೆ ಅಡಿಗೇನ ಹೇಗೆ ಉಣ್ತೀರಿ? ರಾತ್ರಿ ಹೊತ್ತು ಹೇಗಿದ್ದರೂ ಪೂರಿ–ಸಾಗು ಮಾಡ್ತೀನಲ್ಲ. ಹಗಲುಹೊತ್ತು ನೀವು ಮಾಡಿ

ಕೊಳ್ಳಿ. ಹಾಗೆ ಅಡಿಗೆ ಮಾಡೋಕ್ಕೆ ಬೇಜಾರು ಅನ್ನೋದಾದರೆ ಹಾಲು ಕುಡಿದುಬಿಡಿ ! ಮಧ್ಯಾಹ್ನ ಮಾಡಿಕೊಳ್ಳೋರಂತೆ ! "

ಮುನಿಷಿ ಶಿವಲಾಲ ನಿಷ್ಠುರನಾಗಿ ಹೇಳಿದ, "ಇಲ್ಲ, ನನಗೆ ತುಂಬ ಹಸಿವಾಗಿದೆ. ನನಗೆ ಬೇಯಿಸಿದ ಅಡಿಗೆಯೇ ಆಗಬೇಕು. ಹೇಳಿದ್ದು ಕೇಳೇ, ಖಿಚಡಿ ಮಾಡೆ ! "

ಧಿನಕಿಯ ಕಣ್ಣಲ್ಲಿ ನೀರೂರಿತು, "ದಮ್ಮಯ್ಯ, ನಿಮಗೆ ಕೈ ಮುಗೀತೀನಿ. ನನ್ನ ಕೈಯಲ್ಲಿ ಈ ಪಾಪ ಮಾಡಿಸಬೇಡಿ. ನಾನು ಮಡಿ ಮಾಡಿರೋ ಅಡಿಗೆಕೋಣೇಲಿ ಕಾಲಿರಿಸೋಲ್ಲ. ನನ್ನಿಂದಾಗಿ ಪರಲೋಕದಲ್ಲಿ ನಿಮಗೆ ಕೇಡಾಗದಿರಲಿ."

ಮುನಿಷಿ ಶಿವಲಾಲನಿಗೆ ಕೋಪ ಉಕ್ಕಿಬಂತು. ಎದ್ದು ಧಿನಕಿಯ ಕಪಾಳಕ್ಕೆ ಒಂದೇಟು ಬಿಗಿದ, "ಬಂದಳು ದೊಡ್ಡದಾಗಿ, ಪರಲೋಕಕ್ಕೆ ಹುಟ್ಟಿದವಳು ! ಹೇಳ್ತಿದೀನಿ ಹೋಗಿ ಖಿಚಡಿ ಮಾಡೇ ಅಂತ." ಮುನಿಷಿ ಶಿವಲಾಲ ಮತ್ತೆ ರಜಾಯಿ ಹೊದ್ದು ಮಲಗಿದ.

ಧಿನಕಿ ಸದ್ದಿಲ್ಲದೆ ಅಳುತ್ತ ಅಡಿಗೆಯ ಕೋಣೆಗೆ ಹೋಗಿ, ಒಲೆ ಊದತೊಡಗಿದಳು, ಒಲೆ ಊದುಊದುತ್ತಲೇ ಅವಳ ಬಾಯಿ ಒದರತೊಡಗಿತ್ತು, "ಹೇ ಗಂಗಾ ಮಾತೆ ! ನೀನೇ ಸಾಕ್ಷಿ. ನಾನಾಗಿಯೇ ಇವರ ಧರ್ಮ ಕೆಡಿಸಲಿಲ್ಲ. ಇವರ ಬುದ್ಧಿ ಕೆಟ್ಟಿದೆ. ಇವರ ಪಾಪಾನ ಕ್ಷಮಿಸು. ಅಡಿಗೆ ಮಾಡಿ ಊಟಕ್ಕೆ ಹಾಕಿದರೆ ಇವರ ಧರ್ಮ ಹಾಳಾಗುತ್ತೆ, ಮಾಡಿ ಹಾಕದಿದ್ದರೆ ಹಸಿವಿನಿಂದ ಸಾಯ್ತಾರೆ. ಮೇಲೆ ನನಗೆ ಹೊಡೀತಾರೆ ! "

ಖಿಚಡಿ ಮಾಡಿ ಧಿನಕಿ ಕರೆದಳು, "ಏಳಿ, ಖಿಚಡಿ ಆಗಿದೆ. ಬೇಗ ಉಣ್ಣಿ. ಏಳಿ. ಮಧ್ಯಾಹ್ನ ಡೆಪ್ಟಿ ಸಾಹೇಬರ ಬಿಡಾರಕ್ಕೆ ಹೋಗಬೇಕಲ್ಲವೇ ? "

ಮುನಿಷಿ ಶಿವಲಾಲ ಎದ್ದು ಜುಬ್ಬ, ಒಳಅಂಗಿಗಳನ್ನು ಬಿಚ್ಚಿದ. ಒಂದು ಉಣ್ಣೆಯ ಶಾಲು ಹೊದ್ದುಬಂದು ಮಣೆಯ ಮೇಲೆ ಕುಳಿತುಕೊಂಡ, "ಬೇಗ ಬಡಿಸು, ಬಾ. ಡಿಪ್ಟೀ ಸಾಹೇಬರಲ್ಲಿಗೆ ಹೋಗಬೇಕು ಅನ್ನೋದನ್ನ ಮರೆತೇ ಬಿಟ್ಟಿದ್ದೆ."

ಧಿನಕಿ ಬಡಿಸತೊಡಗಿದಳು. ಮುನಿಷಿ ಶಿವಲಾಲ ಊಟಕ್ಕೆ ಆರಂಭಿಸಿದ, "ಇಷ್ಟು ದಿನಕ್ಕೆ ಇವತ್ತು ಖಿಚಡಿ ರುಚಿಯಾಗಿದೆ. ಅಡಿಗೆ ಮಾಡೋಕ್ಕೆ ಬರದೇ ಇರೋವಾಗ ಹೇಗೆ ಮಾಡೋದು ಹೇಳು. ಇನ್ನೊಂದು ಸ್ವಲ್ಪ ಖಿಚಡಿ ಬಡಿಸು: ಸ್ವಲ್ಪ ಆಲೂಗೆಡ್ಡೆ ಬಜ್ಜೀನೂ ತಾ. ಎಷ್ಟು ರುಚಿಕಟ್ಟಾಗಿ ಮಾಡಿದಿ ! "

ಧಿನಕಿ ಸೌಟಿನಿಂದ ಖಿಚಡಿ ತೆಗೆದು ಶಿವಲಾಲನ ತಟ್ಟೆಗೆ ಬಡಿಸುತ್ತಿರುವಂತೆಯೇ ಮುನಿಷಿ ರಾಧೇಲಾಲ ಗುಡಿಸಿಲೊಳಗೆ ಕಾಲಿಟ್ಟ. ರಾಧೇಲಾಲ ಒಬ್ಬನೇ ಇರಲಿಲ್ಲ, ಜೊತೆಗೆ ಅವನ ಹೆಂಡತಿಯೂ ಇದ್ದಳು.

ರಾಧೇಲಾಲ. ರಾಧೇಲಾಲನ ಹೆಂಡತಿಯರನ್ನು ಕಂಡು ಧಿನಕಿ ಅಪರಾಧಿಯಂತೆ ಎದ್ದು ಅಡಿಗೆಕೋಣೆಯಿಂದ ಹೊರಬಿದ್ದಳು.

ಮುನಿಷಿ ಶಿವಲಾಲ ಹೇಳಿದ, "ಬಾ ರಾಧೆ, ಜೊತೆಗೆ ಛೋಟೀನೂ ಕರೆತಂದದ್ದು ಒಳ್ಳೇದಾಯಿತು. ನನಗೆ ಊಟತಿಂಡೀಗೆ ಬಹಳ ಕಷ್ಟವಾಗಿತ್ತು. ಮನೆಕಡೆ ಎಲ್ಲಾ ಕ್ಷೇಮ ತಾನೆ?"

ರಾಧೇಲಾಲ ಉತ್ತರಿಸಿದ, "ಹ್ಞಾ, ಕ್ಷೇಮ ಅಂತಾನೇ ತಿಳಿಯಣ್ಣ. ಏನು ಹೇಳಲಿ. ಕಿಶನೂ ಎಲ್ಲಿದಾನೆ ಏನು ಅನ್ನೋದೇ ತಿಳಿದಿಲ್ಲ. ಯಾರೋ ಬನಾರಸ್ಸಿನಲ್ಲಿ ಅವನನ್ನ ಸಾಧುಗಳ ಸಂಗಡ ನೋಡಿದ್ದರಂತೆ. ಆದರೆ ಅವರ ಗುಂಪಿನಿಂದಲೂ ತಪ್ಪಿಸಿಕೊಂಡು ಹೋದನಂತೆ. ಇಲ್ಲಿ ಅವನ ಮದುವೆಯ ದಿನ ಹತ್ತಿರವಾಗ್ತಾ ಇದೆ, ಅಲ್ಲಿ ಅವನು ಕಣ್ಮರೆಯಾಗಿದ್ದಾನೆ. ಅವನು ಎಲ್ಲಿದಾನೆ, ಏನು ಅಂತ ಸ್ವಲ್ಪ ಹುಡುಕಿಸು ಅಂತ ಜ್ವಾಲನಿಗೆ ತುಂಬ ಹೇಳಿದೆ. ಆದರೆ ಜ್ವಾಲನಿಗೆ ಪುರಸೊತ್ತೆಲ್ಲಿದೆ?"

ಮುನಿಷಿ ಶಿವಲಾಲ ಊಟಮುಗಿಸಿ ಕೈಬಾಯಿ ತೊಳೆಯುತ್ತಿದ್ದ. ಅವನಂದ, "ಹೌದು, ಮದುವೆಯೇನೋ ಹತ್ತಿರ ಬಂತು, ನಿಜ. ಆದರೆ ನನ್ನ ಸಲಹೆ ಕೇಳೋದಾದರೆ ಈಗಲೇ ಅವನ ಮದುವೆ ಮಾಡಬೇಡ. ಇನ್ನೊಬ್ಬರ ಮನೆಯ ಹುಡುಗೀನ ಮನೇಲಿ ತಂದು ಇಟ್ಕೋತಿದಿ, ಕಿಶನೂದು ಸ್ವಲ್ಪವೂ ಭರವಸೆಯಿಲ್ಲ. ಅವನಂತೂ ಶುದ್ಧ ಪೋಲಿಯಾಗಿಹೋದ."

ಮುನಿಷಿ ರಾಧೇಲಾಲನ ಹೆಂಡತಿಗೆ ಮಗನ ದೂಷಣೆ ಸರಿಬೀಳಲಿಲ್ಲ. ಕಣ್ಣಲ್ಲಿ ನೀರು ತಂದುಕೊಂಡು ಅವಳು ದೂರದಿಂದಲೇ ಹೇಳಿದಳು, "ನಮ್ಮ ಕಿಶನೂಗೆ ಏನೂ ತಿಳಿಯೋಲ್ಲ. ಯಾರು ಯಾವ ಕಡೆ ಎಳೆದರೆ ಆ ಕಡೆ ಹೋಗ್ತಾನೆ. ಮದುವೆಯಾದ ಮೇಲೆ ಎಲ್ಲಾ ಸರಿಹೋಗುತ್ತೆ. ದಾದಾಜೀ, ಜ್ವಾಲಾ ದೊಡ್ಡ ಸರಕಾರೀ ಆಫೀಸರು. ಅವನು ಮನಸ್ಸುಮಾಡಿದರೆ ಒಂದು ದಿನದಲ್ಲಿ ಕಿಶನೂನ ಹುಡುಕಿಸಿ ತರಿಸಬಲ್ಲ. ಈಗಂತೂ ಜ್ವಾಲನಿಗೆ ನಮ್ಮ ಮಾತು ಕೇಳಿಸೋದು ಸಹ ಇಲ್ಲ. ತನ್ನ ತಮ್ಮನ ಬಗ್ಗೆ ಈ ಉದಾಸೀನ ಸರಿಯೆ?"

ಜ್ವಾಲನ ಮೇಲೆ ಮಾಡಿದ ಈ ದೂಷಣೆ ಛಿನಕಿಗೆ ಕೆಡುಕೆನಿಸಿತು. "ಪಾಪ, ಜ್ವಾಲಾ ಎಲ್ಲಾನ್ನೂ ಮಾಡ್ತಿದಾನೆ. ಮನೆ ಮನೆ ಹುಡುಕಿಸೋದೊಂದು ಬಾಕಿ. ಅವನನ್ನೇನು ತಹಸೀಲದಾರಿಕೆ ಮಾಡು ಅಂತೀರೋ, ಕಿಶನೂನ ಹುಡುಕಿಕೊಂಡು ಊರೂ ದೇಶ ತಿರುಗು ಅಂತೀರೋ!"

"ನೀನು ಸುಮ್ಮನಿರೇ, ಛಿನಕಿ. ದೊಡ್ಡದಾಗಿ ಬಂದಳು, ಜ್ವಾಲನ ಕಡೆ ವಹಿಸಿಕೊಳ್ಳೋಕ್ಕೆ," ರಾಧೇಲಾಲನ ಹೆಂಡತಿ ಹೇಳಿದಳು.

"ನೀನು ಯಾಕೆ ಎಲ್ಲಾದಕ್ಕೂ ತಲೆ ಹಾಕ್ಕೊಂಡು ಬರ್‍ತೀಯೆ?" ಮುನಿಷಿ ಶಿವಲಾಲನೂ ಛಿನಕಿಯನ್ನು ಅಟ್ಟಿಕೊಂಡ. ಆಮೇಲೆ ರಾಧೇಲಾಲನ ಕಡೆ ತಿರುಗಿ, "ರಾಧೇ, ನಿಮಗಿನ್ನೂ ಊಟಗೀಟ ಆಗಿರಲಾರದು. ಛಿನಕಿ, ಹೋಗಿ ಮಿಠಾಯಿ ಅಂಗಡಿಯಿಂದ ಒಂದು ಸೇರು ಪೂರಿ–ಮಿಠಾಯಿ ತೊಗೊಂಬಾ."

ಛಿನಕಿ ಶಿವಲಾಲನ ಎಂಜಲು ತಟ್ಟೆಯನ್ನು ಎತ್ತುತ್ತ ಹೇಳಿದಳು, "ನಾನು ಈಗಲೇ ಅಡಿಗೆಕೋಣೇನ ತೊಳೆದು ಸಾರಸ್ತೀನಿ. ಅಷ್ಟುಹೊತ್ತಿಗೆ ಚಿಕ್ಕಯಜಮಾನಿತಿ ಗಂಗೇಲಿ ಮುಳುಗಿ ಬರಲಿ. ಆಮೇಲೆ ಅಡಿಗೆ ಮಾಡಲಿ. ಅಂಗಡಿಯಿಂದ ತರೋ ಪೂರಿ–ಮಿಠಾಯಿಯಲ್ಲಿ ಏನು ಹೊಟ್ಟೆ ತುಂಬುತ್ತೆ!"

ರಾಧೇಲಾಲ ಹೇಳಿದ. "ಅಡಿಗೆಕೋಣೆ ಸಾರಿಸಬೇಕಾದ್ದಿಲ್ಲ. ನಾವು ದೂರಪ್ರಯಾಣ ಮಾಡಿ ಬಂದಿದ್ದೀವಿ. ಸುಸ್ತಾಗಿದೆ. ಸ್ನಾನದ ಹೊತ್ತೂ ಕಳೆದುಹೋಗಿದೆ. ಛಿನಕಿ, ಹೋಗಿ ಪೂರಿ–ಮಿಠಾಯಿಯನ್ನೇ ತೊಗೊಂಬಾ."

"ಹಾಗಾದರೆ ನಾನೇ ಪೂರಿ–ಸಾಗು ಮಾಡಿಹಾಕ್ತೀನಿ." ಛಿನಕಿ ಇನ್ನೂ ಒಂದು ಪ್ರಯತ್ನ ಮಾಡಿದಳು.

ಈ ಸಲ ರಾಧೇಲಾಲನ ಹೆಂಡತಿ ಉತ್ತರಿಸಿದಳು, "ಹೌದು. ಛಿನಕಿರಾಣಿ. ಈಗ ಅಡಿಗೆಮನೆಗೂ ಕಾಲಿಟ್ಟೇ ಅಲ್ಲವೆ! ದಾದಾಜೀಗೆ ಅನ್ನ–ತೊವ್ವೆ ಉಣ್ಣಿಸಿ ಅವರ ಆಚಾರ ಕೆಡಿಸಿದ್ದಾಯಿತು. ಈಗ ನಮ್ಮ ಸರದಿ: ದಾದಾಜೀಗೆ ಬೇಸಿಹಾಕೋಕ್ಕೆ ಛಿನಕಿರಾಣಿ ಇರೋವಾಗ ಇವರು ನನ್ನನ್ನ ವ್ಯರ್ಥವಾಗಿ ಇಲ್ಲಿ ಕರಕೊಂಡು ಬಂದರು."

ರಾಧೇಲಾಲ ಬಾಯಿಹಾಕಿದ. "ಏನೇ ಛಿನಕಿ. ಅಣ್ಣನಿಗಂತೂ ಅರುಳು–ಮರುಳು, ಜಾತಿಗೀತಿ ಒಂದನ್ನೂ ನೋಡೋಲ್ಲ, ಅವನ ಬುದ್ಧಿ ಕೆಟ್ಟಿದೆ ಅಂದರೆ ಮುಸುರೆ ಅಡಿಗೇನ ನೀನು ಹೇಗೆ ಅವರಿಗೆ ಬೇಯಿಸಿ ಹಾಕಿದೆ?"

ಛಿನಕಿ ದೈನ್ಯದಿಂದ ಶಿವಲಾಲನ ಕಡೆ ನೋಡಿದಳು. ಮುನಿಷಿ ಶಿವಲಾಲ ಹೇಳಿದ, "ದಿನವೂ ನಾನೇ ಮಾಡ್ಕೊಳ್ತಿದ್ದೆ. ಇವತ್ತು ಸಹ ಇವಳು ಅಡಿಗೆಗೆ ಎಲ್ಲಾ ಅಣಿಮಾಡಿ ಕೊಟ್ಟಿದ್ದಳು. ಆದರೆ ಏನು ಹೇಳಲಿ. ಗಂಗೇಲಿ ಮುಳುಗಿ ಬಂದ ತಕ್ಷಣ ಮೈಯಲ್ಲಿ ಸ್ವಲ್ಪ ಇರಸುಮುರಸಾಯಿತು. ನಾನಾಗಿಯೇ ಇವಳಿಗೆ ಅಡಿಗೆ ಮಾಡು ಅಂದೆ." ಶಿವಲಾಲ ಸ್ವಲ್ಪ ತಡೆದು ಮುಂದುವರಿಸಿದ. "ನನಗೆ ಅಡಿಗೆ ಮಾಡಿ ಬಡಿಸಿ ಇವಳು ಪಾಪಮಾಡಿದಳು, ಇವಳ ಕೈಯ ಅಡಿಗ ಉಂಡು ನಾನು ಪಾಪಮಾಡಿದೆ ಅಂತ ನನಗೇನೂ ಅನಿಸೋಲ್ಲ."

ರಾಧೇಲಾಲ ಕೊಂಚ ತಡವರಿಸುತ್ತ ಹೇಳಿದ. "ಅದೇನೋ ಸರಿ. ಆದರೆ ಜಾತಿಯ ಜನ ಅದನ್ನ ಪಾಪ ಅಂತಾರಲ್ಲ. ಆದದ್ದು ಆಯಿತು. ಈಗ ಇವಳು ಬಂದಿದಾಳೆ, ನಿನಗೆ ಮಾಡಿಬಡಿಸ್ತಾಳೆ. ನೀನು ಛಿನಕಿ ಮಾಡಿದ್ದನ್ನ ಉಂಡೆ ಅಂತ ಯಾರ ಕಿವೀಗೂ ಬೀಳೋದು ಬೇಡ."

ಛಿನಕಿ ಅಪರಾಧಿಯಂತೆ ಪೆಚ್ಚಾಗಿ ರಾಧೇಲಾಲನಿಗೂ ಅವನ ಹೆಂಡತಿಗೂ ಪೂರಿ–ಮಿಠಾಯಿ ತರಲು ಅಂಗಡಿಗೆ ಹೋದಳು. ಮುನಿಷಿ ಶಿವಲಾಲ ಬಟ್ಟೆ ತೊಟ್ಟು ಒಂದು ಗಂಟೆ ಮುಂಚೆಯೇ ಡಿಪ್ಟಿ ಸಾಹೇಬರ ಬಿಡಾರದ ಕಡೆ ನಡೆದ.

ಡಿಪ್ಟಿ ಕಲೆಕ್ಟರ್ ಘಮ್ಮನ್‌ಸಿಂಹ ಅದೇ ತಾನೇ ಮಾಘಮೇಳದ ಉಸ್ತುವಾರಿ ಮುಗಿಸಿ

ಕೊಂಡು ಬಂದು, ಆರಾಮಕುರ್ಚಿಯಲ್ಲಿ ಕುಳಿತು ಅವತ್ತಿನ ವರ್ತಮಾನ ಪತ್ರಿಕೆ ಓದುತ್ತಿದ್ದ. ಶಿವಲಾಲನನ್ನು ಕಂಡವನೇ ಎದ್ದು ಸ್ವಾಗತಿಸುತ್ತ, "ಬನ್ನಿ, ಮುನಿಷಿ ಶಿವಲಾಲ ಸಾಹೇಬರೇ, ಇವತ್ತು ಬಹುಶಃ ನಿಮಗೆ ವಿಶ್ರಾಂತಿಯಿಲ್ಲದೆ ಹೋಯಿತೇನೋ. ಮೀಟಿಂಗ್ ಶುರು ವಾಗೋಕ್ಕೆ ಇನ್ನೂ ಒಂದು ಗಂಟೆ ಹೊತ್ತಿದೆ" ಅಂದ.

ಮುನಿಷಿ ಶಿವಲಾಲ ದಣಿದವನಂತೆ ಎದುರಿನ ಕುರ್ಚಿಯಮೇಲೆ ಕುಳಿತುಕೊಂಡ. "ಏನು ಹೇಳಲಿ, ನನ್ನ ತಮ್ಮ, ತಮ್ಮನ ಹೆಂಡತಿ ಇಬ್ಬರೂ ಬಂದಿದಾರೆ, ಆದರೂ ನಾನು ಹೊರಟುಬರಬೇಕಾಯಿತು. ಒಂದು ವಿಚಿತ್ರ ಸಂಕಟದಲ್ಲಿ ಸಿಕ್ಕಿಬಿದ್ದಿದಾರೆ ಅವರು. ನನ್ನ ತಮ್ಮನ ಕಿರಿಯ ಮಗ ಸ್ವಲ್ಪ ದಿನದ ಹಿಂದೆ ಮನೆಬಿಟ್ಟು ಹೋದ. ಸಾಧುವಾಗಿದಾನೆ ಅಂತ ಹೇಳ್ತಾರೆ. ಕಾಶೀಲಿ ಸಾಧುಗಳ ಒಂದು ಗುಂಪಿನಲ್ಲಿ ಕಾಣಿಸಿಕೊಂಡಿದ್ದ; ಆದರೆ ಆಮೇಲೆ ಅಲ್ಲಿಂದಲೂ ಕಣ್ಮರೆಯಾದ. ಮಾಘಮೇಳಕ್ಕೆ ಬಂದಿರೋ ಸಂಭವವಿದೆ. ಅವರು ಅವನನ್ನು ಹುಡುಕೋದಕ್ಕೆ ಬಂದಿದಾರೆ."

ಠಾಕೂರ್ ಥಮ್ಮನ್‌ಸಿಂಹ ಕೊಂಚಹೊತ್ತು ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದು ಆಮೇಲೆ ಕೇಳಿದ, "ಅವನಿಗೆ ಎಷ್ಟು ವಯಸ್ಸಿರಬಹುದು? ನೋಡೋಕ್ಕೆ ಹೇಗಿದಾನೆ ಅಂತ ಹೇಳ್ತೀರಾ?"

"ಸುಮಾರು ಇಪ್ಪತ್ನಾಲ್ಕು–ಇಪ್ಪತ್ತೈದರ ವಯಸ್ಸು. ತೆಳ್ಳನೆಯ ದೇಹ, ನಡು ತರದ ಎತ್ತರ, ಉದ್ದನೆಯ ಮುಖ. ಮಾಸಿದ ಗೋದಿಯ ಮೈಬಣ್ಣ. ಹಣೆಯಮೇಲೆ ಗಾಯದ ಗುರುತಿದೆ."

"ಚಹರೆಯೇನೋ ಹೋಲುತ್ತೆ," ಠಾಕೂರ್ ಥಮ್ಮನ್‌ಸಿಂಹ ತನಗೆ ತಾನೇ ಹೇಳಿ ಕೊಳ್ಳುತ್ತಿರುವವನಂತೆ ಮೆಲ್ಲಗೆ ಹೇಳಿದ.

"ಏನು ವಿಷಯ, ಠಾಕೂರ್ ಸಾಹೇಬ್? ಚಹರೇನ ಏಕೆ ವಿಚಾರಿಸಿದಿರಿ?"

"ಇವತ್ತು ಬೆಳಗ್ಗೆ ಇದೇ ಚಹರೆ ಇರೋ ಒಬ್ಬ ಸಾಧು—ಯುವಕ—ಮಾಘಮೇಳ ದಲ್ಲಿ ಹೆಂಗಸರನ್ನ ಕೆಣಕ್ತಿದ್ದಾಗ ಸಿಕ್ಕಿಬಿದ್ದಿದಾನೆ. ಅವನು ಇಲ್ಲಿ ಕರೀಮನ್ ಅನ್ನೋಳ ಮನೇಲಿ ಇಳಕೊಂಡಿದ್ದ. ಅವನನ್ನ ಈಗ ಬಂದೀಖಾನೇಲಿ ಇಟ್ಟಿದೀವಿ. ತನ್ನ ಹೆಸರು, ವಿಳಾಸ ತಿಳಿಸೋಕ್ಕೆ ಸುತರಾಂ ಒಪ್ತಿಲ್ಲ. ಇನ್ನೇನು, ಈ ಮೀಟಿಂಗಿಗೆ ಠಾಣೇದಾರ ಬಿಶನ ದಯಾಳ ಬರೋನಿದಾನೆ. ಅವನಿಂದ ಎಲ್ಲಾ ವಿಷಯಾನೂ ತಿಳಿಯುತ್ತೆ. ಆ ಸಾಧು ಪೋಲಿಪೋಕರಿಗಳ ಜಾತಿಗೆ ಸೇರಿದವನು."

ಕರೀಮನ್‌ಳ ಹೆಸರು ಕೇಳುತ್ತಲೇ ಮುನಿಷಿ ಶಿವಲಾಲನಿಗೆ ಸಂದೇಹವುಂಟಾಯಿತು. ತನ್ನ ಮನಸ್ಸಿನ ಶಂಕೆಯನ್ನು ದೂರಮಾಡಲೆಂಬಂತೆ ಆತನು ಹೇಳಿದ, "ಅವನು ನಮ್ಮ ಕಿಶನೂ ಆಗಿರಲಾರ. ಅವನು ಕರೀಮನ್‌ಳ ಮನೇಲಿರೋದು ಹೇಗೆ ಸಾಧ್ಯ! ಅಲ್ಲದೆ ಅವನ ನಡತೆ ಕೆಟ್ಟದು ಅಂತ ಇದುವರೆಗೆ ಯಾರೂ ಆರೋಪಿಸಿಲ್ಲ."

ಠಾಕೂರ್ ಥಮ್ಮನ್‌ಸಿಂಹ ನಗಲಾರಂಭಿಸಿದ, "ಅಯ್ಯೋ ಬಿಡಿ! ಈ ಹುಡು

ಗರು ಏನೆಲ್ಲಾ ಮಾಡಬಲ್ಲರು ಅಂತ ಕೇಳಬೇಡಿ. ಮೀಟಿಂಗ್ ಮುಗಿದಮೇಲೆ ಠಾಣೇದಾರ ಬಿಶನದಯಾಳನಿಗೆ ಹೇಳಿ ಅವನನ್ನ ಕರೆಸೋಣ. ನೀವೇ ಖುದ್ದಾಗಿ ನೋಡಿ ಗುರುತಿಸೋರಂತೆ."

ಠಾಣೇದಾರ ಬಿಶನದಯಾಳ ಆ ಸಾಧುವನ್ನು ಠಾಕೂರ್ ಥಮ್ಮನ್‌ಸಿಂಹನ ಬಿಡಾರಕ್ಕೆ ಕರೆತಂದಾಗ ಮುನಿಷಿ ರಾಧೇಲಾಲನಿಗೂ ಬರಹೇಳಲಾಗಿತ್ತು. ಆ ಸಾಧುವನ್ನು ನೋಡಿ ರಾಧೇಲಾಲ ಅರಚಿದ, "ಅರೇ ಕಿಸನೂ. ಇದೇನೋ ಅವಸ್ಥೆ ನಿನ್ನದು ! ನಮ್ಮ ಮರ್ಯಾದೆ ಕಳೆದೆಯಲ್ಲೋ !"

ಕಿಶನಲಾಲ ತಂದೆಯ ಮುಖ ಕಂಡೊಡನೆಯೇ ಅಳತೊಡಗಿದ, "ನನ್ನ ಕಾಪಾಡೋ, ಅಪ್ಪಾ ! ಇವರು ನನ್ನನ್ನ ಕೊಂದುಬಿಡ್ತಾರೆ, ನನ್ನನ್ನ ಕಾಪಾಡೋ" ಎಂದವನೇ ತೂರಾಡುತ್ತಾ ನೆಲಕ್ಕುರುಳಿದ.

ಕಿಶನಲಾಲನ ಮೈಯೆಲ್ಲಾ ಊದಿಕೊಂಡಿತ್ತು. ಅಲ್ಲಲ್ಲಿ ಚರ್ಮ ಕಿತ್ತು ಬಂದು ರಕ್ತ ಒಸರತೊಡಗಿತ್ತು. ಅವನನ್ನು ಸಿಕ್ಕಾಪಟ್ಟೆ ಹೊಡೆದಿದ್ದಂತೆ ತೋರುತ್ತಿತ್ತು. ಪ್ರಾಯಶಃ ಹೊಡೆದದ್ದು ಇನ್ನೂ ಮುಗಿದಿರಲಿಲ್ಲವೇನೋ. ಮುನಿಷಿ ಶಿವಲಾಲ ಠಾಣೇದಾರ ಬಿಶನದಯಾಳನನ್ನು ಕೇಳಿದ, "ಠಾಣೇದಾರ್ ಸಾಹೇಬ್, ಇವನನ್ನು ಹೀಗೆ ಹೊಡೆದದ್ದೇಕೆ ?"

"ಒಂದು ವಾರದಿಂದ ಕರೀಮನ್‌ಳ ಮನೇಲಿ ತಂಗಿರೋ ವಿಷಯ ಹೊರಬಿದ್ದದ್ದು ಹಾಗೆ ಹೊಡೆದದ್ದರಿಂದಲೇ ! ಆದರೆ ಅಷ್ಟು ಬಿಟ್ಟು ಇನ್ನೇನು ಹೇಳೋದಕ್ಕೂ ಇವನು ಸುತರಾಂ ಒಪ್ತಿಲ್ಲ. ತನ್ನ ಹೆಸರು, ತಂದೆ ಹೆಸರು ಸಹ ಹೇಳ್ತಾ ಇಲ್ಲ. ಕರೀಮನ್ ಇವನು ಯಾರು ಅಂತ ಹೇಳಿರೋದನ್ನ ಇವನು ಒಪ್ಪಿಕೊಳ್ಳೋಹಾಗೆ ಮಾಡಿ ಇವನಿಂದ ಅದಕ್ಕೆ ಸಮರ್ಥನೆ ಪಡೀಬೇಕಾಗಿದೆ. ಮರ್ಯಾದಸ್ಥರ ನಡುವಿನ ವಿಷಯ !" ಠಾಣೇದಾರ ಬಿಶನದಯಾಳ ನಕ್ಕ.

ಠಾಕೂರ್ ಥಮ್ಮನ್‌ಸಿಂಹ ನಗುತ್ತ ಹೇಳಿದ, "ಸರಿ, ತಂದೆಯ ಹೆಸರು, ವಿಳಾಸ ಗೊತ್ತಾದ ಹಾಗಾಯಿತು ! ಬೆಳಗ್ಗೆ ಹೆಂಗಸರನ್ನ ಕೆಣಕಿದ್ದಕ್ಕೆ ಸಿಗಬೇಕಾದ್ದಕ್ಕಿಂತ ಹೆಚ್ಚಾಗಿಯೇ ಶಿಕ್ಷೆ ಸಿಕ್ಕಿದೆ. ಮುನಿಷಿ ಶಿವಲಾಲ ಸಾಹೇಬರೇ, ಇವನನ್ನ ಕರಕೊಂಡು ಹೋಗಿ. ಯಾವದಾದರೂ ಸರಿಯಾದ ಕೆಲಸಕ್ಕೆ ಹಾಕಿ." ಹೀಗಂದು ಠಾಕೂರ್ ಥಮ್ಮನ್‌ಸಿಂಹ ಕಿಶನಲಾಲನ ಕೈಬೇಡಿ ಬಿಚ್ಚಿಸಿದ.

ಮುನಿಷಿ ಶಿವಲಾಲ ಗುಡಿಸಿಲು ತಲಪಿದಾಗ ಅವನಿಗೆ ಹೊರಗಿನಿಂದಲೇ ಒಳಗಿನ ಧ್ವನಿ ಕೇಳಿಸಿತು. ರಾಧೇಲಾಲನ ಹೆಂಡತಿ, ಛಿನಕಿಯರ ನಡುವೆ ವಾಗ್ವಾದ ನಡೆದಿತ್ತು. ರಾಧೇಲಾಲನ ಹೆಂಡತಿ ಛಿನಕಿಯನ್ನು ಫತಹಪುರಕ್ಕೆ ಸಾಗಹಾಕಬಯುಸಿದ್ದಳು. ತಾನಿಲ್ಲ

ದಿರುವಾಗ ಅಲ್ಲಿ ಮನೆಯ ಮೇಲ್ವಿಚಾರಣೆಯ ಭಾರವನ್ನು ಛಿನಕಿಯ ಮೇಲೆ ಹೊರಿಸಲು ಯತ್ನಿಸುತ್ತಿದ್ದಳು. ಆದರೆ ಅದಕ್ಕೆ ಛಿನಕಿ ಒಪ್ಪುತ್ತಿರಲಿಲ್ಲ. ಅವಳಿಗೆ ಜ್ವಾಲಾಪ್ರಸಾದನ ಹೆಂಡತಿ ಯಮುನಾ, ಮಗ ಗಂಗಾಪ್ರಸಾದರನ್ನು ನೋಡಿಕೊಳ್ಳಲು ಸೋರಾವಿಗೆ ಹೋಗುವ ಆಸೆ. ರಾಧೇಲಾಲನ ಹೆಂಡತಿ ಸಾಕಷ್ಟು ಕಾವೇರಿದ್ದಳು. ಮುನಿಷಿ ಶಿವಲಾಲ ಗುಡಿಸಿಲಿನ ಹತ್ತಿರ ಬಂದಾಗ ರಾಧೇಲಾಲನ ಹೆಂಡತಿ ಒಳಗೆ ಬಾಯಿಮಾಡು ತ್ತಿದ್ದಳು, "ಹ್ಞಾ, ದಾದಾಜಿಯ ಜಾತಿ ಕೆಡಿಸಿದ್ದಾಯಿತು; ಈಗ ನಮ್ಮಮೇಲೆ ನಾಲಿಗೆ ಮಸೆಯೋಕ್ಕೆ ಬಂದೆಯಾ? ಜ್ವಾಲಾ, ದಾದಾಜಿ ನಿನ್ನ ನೆಂಟರಾದರೆ ನೀನು ಅವರನ್ನೇ ನೋಡಿಕೋ, ನಾವು ಇವತ್ತೇ ಹೊರಡ್ತೀವಿ. ನಿನ್ನ ಪಟ್ಟವನ್ನ ನೀನೇ ಇಟ್ಟುಕೊ. ನೀನು ಫತಹಪುರಕ್ಕೆ ಹೋಗೋಕ್ಕೆ ಒಪ್ಪಿದರೇನೇ ನಾವು ಇಲ್ಲಿ ಇರೋದು. ಅವರು ಬರಲಿ. ಇವತ್ತು ದಾದಾಜೀನೂ ಅವರನ್ನೂ ಕೂರಿಸಿ ಫೈಸಲು ಮಾಡಿಸ್ತೀನಿ. ಮರೆ ತೀಯೆ, ಜೋಕೆ!"

ರಾಧೇಲಾಲನ ಹೆಂಡತಿಯ ಕರ್ಕಶ ಧ್ವನಿಯನ್ನು ಕೇಳಿ ಮುನಿಷಿ ಶಿವಲಾಲ ನಡುಗಿ ಹೋದ. ಶಿವಲಾಲನ ಅವಿಭಕ್ತ ಕುಟುಂಬದಲ್ಲಿ ಮನೆಯ ಆಡಳಿತವೆಲ್ಲವೂ ರಾಧೇ ಲಾಲನ ಹೆಂಡತಿಯದೇ. ಶಿವಲಾಲನಿಗೆ ಆ ಆಡಳಿತ ಅಭ್ಯಾಸವಾಗಿ ಹೋಗಿತ್ತು. ಹೀಗಾಗಿ ಅವನಿಗೆ ಗುಡಿಸಿಲಿನೊಳಗೆ ಕಾಲಿಡುವ ಧೈರ್ಯವಾಗಲಿಲ್ಲ. ಹಾಗೆಯೇ ಹೆಜ್ಜೆ ಹಿಂದೆ ಹಾಕಿದ. ಗುರಿ ತಪ್ಪಿದವನಂತೆ ಮೇಳದಲ್ಲಿ ಅತ್ತಿಂದಿತ್ತ ಅಡ್ಡಾಡತೊಡಗಿದ. ಅವನ ಮನಸ್ಸು ಏಕಾಏಕಿ ಭಾರವಾದಂತಾಯಿತು. ತನ್ನ ಜೀವಕ್ಕೆ ಏಟಿನ ಮೇಲೆ ಏಟು ಬೀಳುತ್ತಿದೆಯೋ ಎಂದನ್ನಿಸಿತು. ಅವನ ಕಣ್ಣಿಗೆ ಇಡೀ ಪ್ರಪಂಚವೇ ಬದಲಾದಂತೆ ಕಾಣತೊಡಗಿತು.

ಸಂಜೆಯಾಗುತ್ತಿತ್ತು. ಗಾಳಿ ಜೋರಾಗಿ ಬೀಸತೊಡಗಿತ್ತು. ಉತ್ತರ ದಿಕ್ಕಿನಿಂದ ಸಣ್ಣ ಸಣ್ಣ ಮೋಡದ ತುಂಡುಗಳು ಆಕಾಶದಲ್ಲಿ ತೇಲುತ್ತ ಬರುತ್ತಿದ್ದವು. ಇಡೀ ವಾತಾವರಣವೇ ವಿಕ್ಷುಬ್ಧವಾದಂತಿತ್ತು. ಶಿವಲಾಲ ಬಹಳ ಹೊತ್ತಿನವರೆಗೆ ಹೀಗೆ ಉದ್ದೇಶ ಸಾರ್ಥಕಗಳೊಂದೂ ಇಲ್ಲದೆ ಅಲೆದಾಡುತ್ತಿದ್ದ. ಮಾಘಮೇಳದ ಜನಸಮೂಹ ಬೇಗಬೇಗ ಬೆಳೆಯುತ್ತಿತ್ತು. ಅಂದಿಗೆ ಮೂರು ದಿನಕ್ಕೆ ಮಕರಸಂಕ್ರಾಂತಿ. ಶಿವಲಾಲನಿಗೆ ಇನ್ನು ಚಳಿ ಸಹಿಸಲಾಗಲಿಲ್ಲ. ಅವನ ಕಾಲು ಹೆಚ್ಚು ಹೆಚ್ಚು ಸೋಲಲಾರಂಭಿಸಿತು. ತನ್ನ ಇಚ್ಛೆಗೆ ವಿರುದ್ಧವಾಗಿ ಗುಡಿಸಿಲಿಗೆ ಹಿಂದಿರುಗಿದ.

ಗುಡಿಸಿಲಿನ ಒಳಗಡೆ ಈಗ ಸಾಕಷ್ಟು ಗಡಿಬಿಡಿಯಿತ್ತು. ಜಗಳ ನಿಂತಿತ್ತು. ಛಿನಕಿ ಅಡಿಗೆಯ ವ್ಯವಸ್ಥೆ ಮಾಡುತ್ತಿದ್ದಳು. ಮುನಿಷಿ ಶಿವಲಾಲ ಯಾರೊಡನೆಯೂ ಮಾತ ನಾಡದೆ ಚಾರಪಾಯಿಯ ಮೇಲೆ ತೆಪ್ಪಗೆ ಹೊದ್ದು ಮಲಗಿದ. ಮುನಿಷಿ ರಾಧೇಲಾಲ, ಅವನ ಹೆಂಡತಿ, ಕಿಶನಲಾಲ, ಛಿನಕಿಯರು ಮಾತುಕತೆ ನಡಸಿದ್ದರು. ಮುನಿಷಿ ಶಿವಲಾಲನಿಗೆ ಅವರ ಧ್ವನಿ ಎಲ್ಲೋ ದೂರದಿಂದ ಬರುತ್ತಿರುವಂತೆ, ಇನ್ನೂ ದೂರದೂರಕ್ಕೆ ಹೋಗು

ತ್ತಿರುವಂತೆ ಭಾಸವಾಯಿತು. ನಡುನಡುವೆ ಅವನು ಬೆಚ್ಚಿಬೀಳುತ್ತಿದ್ದ. ಏನೋ ಮಾತುಕತೆ ನಡೆಯುತ್ತಿತ್ತು—ಅವನ ತಲೆಗೆ ಹತ್ತದ ಮಾತುಕತೆ. ಅವನ ಮನಸ್ಸಿಗೆ ಬೇಡದ ಮಾತು ಕತೆ. ಜಾಗೃತಿ ಹಾಗೂ ಜೀವನಗಳ ಅರ್ಥವೇ ತಾನಾಗಿದ್ದ ಮಾತುಕತೆ. ಮುನಿಷಿ ಶಿವ ಲಾಲನಿಗೆ ನಿದ್ದೆ ಕವಿಯುತ್ತಿತ್ತು. ಶಾಂತಿ ಹಾಗೂ ನಿಷ್ಕ್ರಿಯತೆಗಳಿಂದ ತುಂಬಿದ ನಿದ್ದೆ ಅದು. ಅದರ ಮೇಲೆ ಮಾತಿನ ಪೆಟ್ಟು ಒಂದರ ಹಿಂದೊಂದರಂತೆ ಬೀಳುತ್ತಿತ್ತು. ಮತ್ತೆ ಅವನಿಗೆ ಯಾರೋ ತನ್ನ ಶರೀರವನ್ನು ಹಿಡಿದು ಜಾಡಿಸುತ್ತಿದ್ದಾರೋ ಅನ್ನಿಸಿತು. ಕಣ್ಣು ತೆರೆದು ನೋಡಿದ. ಛಿಸಕಿ ತಲೆಯ ಹತ್ತಿರ ನಿಂತು ಹೇಳುತ್ತಿದ್ದಳು, "ಇನ್ನು ಏಳಿ, ಎಷ್ಟು ಹೊತ್ತು ಮಲಗೋದು ? ನೋಡಿ, ಜ್ವಾಲಾ ಬಂದಿದಾನೆ. ಅಡಿಗೇಗೆ ಅಣಿ ಮಾಡಿದೀನಿ."

ಜ್ವಾಲನ ಹೆಸರು ಕೇಳುತ್ತಲೇ ಮುನಿಷಿ ಶಿವಲಾಲ ಮೈಜಾಡಿಸಿ ಎದ್ದುಕುಳಿತ.

ಗುಡಿಸಿಲಿನಲ್ಲಿ ಈಗ ಜನ ತುಂಬಿದ್ದರು. ನೆಲದ ಮೇಲೆ ಜಮಖಾನ ಹಾಸಿತ್ತು. ಜಮಖಾನದ ಮೇಲೆ ಮೆತ್ತೆ ಹಾಕಿದ್ದರು. ಜಮಖಾನದ ಮೇಲೆ ಯಾರು ಯಾರೋ ಹೆಂಗಸರು ಕೂತಿದ್ದರು. ಶಿವಲಾಲ ಅವರನ್ನು ಈ ಹಿಂದೆ ಎಂದೂ ನೋಡಿರಲಿಲ್ಲ.

ಜ್ವಾಲಾಪ್ರಸಾದ ಮುಂದೆ ಬಂದು ಮುನಿಷಿ ಶಿವಲಾಲನ ಕಾಲುಮುಟ್ಟಿ ನಮಸ್ಕಾರ ಮಾಡಿದ. "ಇವರು ಘಾಟಮಪುರದ ಲಂಬರ್‌ದಾರಿಣಿ, ಅಪ್ಪ. ಆಕೆ ಲಕ್ಷ್ಮೀಚಂದನ ಹೆಂಡತಿ. ಮಾಘಮೇಳದಲ್ಲಿ ಸಂಗಮಸ್ನಾನ ಮಾಡೋಕ್ಕೆ ಬಂದಿದಾರೆ. ಲಕ್ಷ್ಮೀಚಂದ ಇವರು ಬರ್‍ತಾರೆ ಅಂತ ಬರೆದಾಗ ನಿಮ್ಮ ಗುಡಿಸಲೇ ಇದೆ. ಸಾಕಷ್ಟು ದೊಡ್ಡದಾಗಿದೆ ಅಂತ ಉತ್ತರ ಕೊಟ್ಟಿದ್ದೆ. ಇವರಿಗೆ ಇಲ್ಲಿ ಉಳಿದುಕೊಳ್ಳೋಕೆ ಏನೂ ಅನಾನುಕೂಲ ವಾಗೋಲ್ಲ. ಇವತ್ತು ಸಂಜೆ ಗಾಡೀಲಿ ಕಾನಪುರದಿಂದ ಬಂದರು. ಇವರನ್ನ ಕರಕೊಂಡು ಬರೋಕ್ಕೆ ನಾನು ಸೋರಾವಿನಿಂದ ನೇರವಾಗಿ ಅಲಹಾಬಾದ್ ಸ್ಟೇಷನ್ನಿಗೇ ಹೋಗಿ, ಅಲ್ಲಿಂದ ಇಲ್ಲಿಗೆ ಬರ್‍ತಿದೀನಿ," ಜ್ವಾಲಾಪ್ರಸಾದ ಹೇಳಿದ.

"ಒಳ್ಳೇದಾಯಿತು. ಒಳ್ಳೇದಾಯಿತು," ಮುನಿಷಿ ಶಿವಲಾಲ ಹೇಳಿದ. ಮುನಿಷಿ ರಾಧೇಲಾಲ, ಕಿಶನಲಾಲ, ರಾಧೇಲಾಲನ ಹೆಂಡತಿ ಇವರುಗಳತ್ತ ಒಮ್ಮೆ ನೋಡಿ "ರಾಧೇ, ಛೋಟಿ ಇಬ್ಬರೂ ಮಧ್ಯಾಹ್ನ ಬಂದರು; ಸಂಜೆ ಕಿಸನುವೂ ಸಿಕ್ಕಿದ. ಈಗ ಇಲ್ಲಿ ಎಲ್ಲಾ ಸೇರಿರೋದು ದೇವರ ದಯೆ !" ಎಂದು ಜ್ವಾಲಾಪ್ರಸಾದನ ಕಡೆ ಒಂದು ಅರ್ಥಪೂರ್ಣ ದೃಷ್ಟಿ ಬೀರಿದ.

ಜ್ವಾಲಾಪ್ರಸಾದನಿಗೆ ಆ ನೋಟದ ಹಿಂದಿದ್ದ ಅರ್ಥ ತಿಳಿಯಿತು. ಅವನಂದ, "ನಾನಂತೂ ಸೋರಾವಿಗೆ ಈಗಲೇ ಹೊರಡಬೇಕಾಗಿದೆ. ಎಲ್ಲರ ಜೊತೆ ಗಂಗಾಸ್ನಾನ ಮಾಡೋಕ್ಕೆ ನಾಡಿದ್ದು ಬರ್‍ತೀನಿ. ಕಿಶನೂನೂ ಚಿಕ್ಕಪ್ಪನ್ನೂ ನನ್ನ ಜೊತೆ ಸೋರಾವಿಗೆ ಕರಕೊಂಡು ಹೋಗ್ತಿದೀನಿ. ಅವರ ಕೂಡ ಅಲ್ಲೇ ಮಾತಾಡ್ತೀನಿ."

ಮುನಿಷಿ ಶಿವಲಾಲನ ಮನಸ್ಸು ಹಗುರವಾಯಿತು. "ಒಳ್ಳೇದು, ಅದೇ ಸರಿ, ಮಗು. ಕಿಶನೂಗೆ ಏನಾದರೂ ಒಂದು ವ್ಯವಸ್ಥೆ ಮಾಡಬೇಕಾಗಿದೆ."

"ಆಗಲಿ, ಆಗಲಿ. ನೀವು ನಿಶ್ಚಿಂತೆಯಿಂದಿರಿ. ಚಿಕ್ಕಪ್ಪನೂ ನಾನೂ ಸೇರಿಕೊಂಡು ಏನಾದರೊಂದು ದಾರಿ ಹುಡುಕೋಕ್ಕೆ ಪ್ರಯತ್ನಮಾಡ್ತೀವಿ."

ಶಿವಲಾಲನ ಮನಸ್ಸು ಇದ್ದಿದ್ದೂ ಹಗುರವಾಯಿತು.

ಮುಂದುವರಿದು ಜ್ವಾಲಾಪ್ರಸಾದ ಹೇಳಿದ, "ನಾಳೆ ಪ್ರಾಯಶಃ ಲಕ್ಷ್ಮೀಚಂದನೂ ಬರಬಹುದು. ಅವನು ಇಲ್ಲಿ ಮರದ ಗುತ್ತಿಗೆ ತೊಗೊಂಡಿದಾನೆ. ಮರ ಕೊಯ್ಯೋ ಮೆಷೀನ್ ಹಾಕೋನಿದಾನೆ. ಫರ್ನಿಚರ್ ಅಂಗಡೀನೂ ತೆಗೀತಾನೆ. ಕಾನಪುರದಲ್ಲೇ ಅವನಿಗೆ ಬೇಕಾದಷ್ಟು ಉದ್ಯೋಗವಿದೆ. ಆದರೆ ಬಟ್ಟೆ ವ್ಯಾಪಾರದ ಜೊತೆಗೆ ಇನ್ನೂ ಏನಾದರೂ ಮಾಡಬೇಕು ಅಂತ ಅವನ ಆಸೆ."

ಮುನಿಷಿ ಶಿವಲಾಲ ಚಕಿತನಾದವನಂತೆ ಜ್ವಾಲಾಪ್ರಸಾದನ ಕಡೆ ನೋಡಿದ, "ಜ್ವಾಲಾ, ಮರಗೆಲಸ ಮಾಡಬೇಕು ಅಂತ ಅವನಿಗೆ ಯಾಕೆ ಬುದ್ಧಿ ಬಂತು? ಅದರಲ್ಲಿ ಗೌರವವಿಲ್ಲ, ಮರ್ಯಾದೆಯಿಲ್ಲ. ವ್ಯಾಪಾರ ಬಡಾಯಿಸಬೇಕು ಅಂತಿದ್ದರೆ ಇಲ್ಲೂ ಬಟ್ಟೆದಳ್ಳಾಳಿ ವ್ಯಾಪಾರಾನೇ ಶುರುಮಾಡಬಹುದಾಗಿತ್ತಲ್ಲ."

ಜೈದೇಯಿ ಮುಖದ ಮೇಲಿನ ಮುಸುಕನ್ನು ಕೊಂಚ ಸರಿಸುತ್ತ ಹೇಳಿದಳು, "ನಾನೂ ಅದನ್ನೇ ಹೇಳಿದೆ, ಅಪ್ಪಾ! ಮನೆತನದ ಮರ್ಯಾದೆಗೆ ಒಂದಿಷ್ಟಾದರೂ ಗಮನ ಕೊಡಬೇಕು. ಆದರೆ ದೇವರ್‌ಜಿ ಅವನಿಗೆ ಬುದ್ಧಿ ಹೇಳಿ ಬೇಡ ಅನ್ನೋದರ ಬದಲು ಅವನ ಪಕ್ಷಾನೇ ವಹಿಸೋಕ್ಕೆ ಶುರುಮಾಡಿದರು. ಘಾಟಮಪುರದಲ್ಲಿ ದೇವರ ದಯದಿಂದ ಒಳ್ಳೇ ಜಮೀನುದಾರಿ ಇದೆ. ಆರಾಮವಾಗಿದ್ದುಕೊಂಡು ರಾಜ್ಯಭಾರ ಮಾಡಬಹುದು. ಅದು ಬಿಟ್ಟು ಊರೂರ ಧೂಳು ಮುಕ್ಕಿಕೊಂಡು ಅಲೀತಿದಾನೆ ಈ ಲಕ್ಷ್ಮೀ. ನಾಗಪುರಕ್ಕೆ ಹೋಗಿದ್ದ, ಅಲ್ಲಿಂದ ಅಲಹಾಬಾದಿಗೆ ಬಂದ. ಮರದ ಕಾರಖಾನೆ ಗೀಳು ಹಚ್ಚಿಸಿಕೊಂಡಿದಾನೆ."

ಜ್ವಾಲಾಪ್ರಸಾದ ನಗತೊಡಗಿದ, "ಈಗ ಕಾಲ ಬದಲಾಗಿದೆ, ಅಪ್ಪ. ಅವನೇನು ಸುತ್ತಿಗೆ–ಉಳಿ ಹಿಡಕೊಂಡು ಸ್ವತಃ ಮರಗೆಲಸ ಮಾಡಬೇಕೆ! ಅವನು ತೆಗೀತಿರೋದು ಮರಗೆಲಸದ ಕಾರಖಾನೆ. ಅಲ್ಲಿ ಸಾವಿರಾರು ಬಡಗಿಗಳು ಕೆಲಸಕ್ಕೆ ಇರ್ತಾರೆ. ಮೆಷಿನ್ನಿನ ಸಹಾಯದಿಂದ ಕೆಲಸ ನಡೆಯುತ್ತೆ. ಒಳ್ಳೇ ಫ್ಯಾಷನ್ನಿನ ಸಾಮಾನುಗಳನ್ನ ತಯಾರಿಸ್ತಾರೆ. ಲಕ್ಷಾಂತರ ಜನರ ಕೆಲಸ ಅಲ್ಲಿ ನಡೆಯುತ್ತೆ. ಹೊಸ ಪ್ರಪಂಚದ ಹೊಸ ರೂಪ ಅಲ್ಲಿ ನೋಡೋಕ್ಕೆ ಸಿಗುತ್ತೆ."

ಈ ಹೊಸ ಪ್ರಪಂಚದ ಹೊಸ ರೂಪ ಅಂದರೆ ಏನು ಅನ್ನುವುದು ಶಿವಲಾಲನ ತಲೆಗೆ ಹತ್ತಲಿಲ್ಲ. ಆದರೂ ಮಗ, ಹೊಸ ಯುಗದ ಹೊಸ ಮನುಷ್ಯ, ಹೇಳಿದ್ದಾನೆ ಅಂದಮೇಲೆ ಅದು ತಪ್ಪಾಗುವುದು ಹೇಗೆ? ಮುನಿಷಿ ಶಿವಲಾಲ ಹೇಳಿದ, "ಹೌದು, ಅಲಹಾಬಾದ್ ದೊಡ್ಡ ಪಟ್ಟಣ. ನಮ್ಮ ಪ್ರಾಂತದ ರಾಜಧಾನಿ. ಚಿಕ್ಕ ಗೌವರ್ನರ್ ಸಾಹೇಬರು ಅಲ್ಲಿ ಇರ್ತಾರೆ. ರೂಪಾಯಿ ಇರೋದು ಅಂದರೆ ಅಲ್ಲಿ, ವ್ಯಾಪಾರದಲ್ಲಿ, ವ್ಯವಹಾರದಲ್ಲಿ."

ಮುನಿಷಿ ರಾಧೇಲಾಲ ಈ ಮಾತುಕತೆಯ ನಡುವೆ ಅನೇಕ ಸಲ ಕ್ಯಾಕರಿಸಿ ಗಂಟಲು ಸರಿಪಡಿಸಿಕೊಂಡ, ತನಗೂ ಏನೋ ಮಹತ್ವಪೂರ್ಣವಾದದ್ದು ಹೇಳುವುದಿದೆ ಅನ್ನು ವಂತೆ. ಅವನಿಗೆ ಇನ್ನು ತಡೆಯುವುದಾಗಲಿಲ್ಲ; ಬಾಯಿಹಾಕಿದ, "ಹೌದು, ರೂಪಾಯಿ ವ್ಯವಹಾರದಲ್ಲಿದೆ, ವ್ಯಾಪಾರದಲ್ಲಿದೆ — ವ್ಯವಹಾರ, ವ್ಯಾಪಾರಾನ ಇಂಗ್ಲಿಷಿನೋರ ಕೈಯಿಂದ ತಪ್ಪಿಸಿ ನಮ್ಮ ಕೈಗೆ ತೊಗೊಳ್ಳೋಕ್ಕಾದರೆ ಮಾತ್ರ! ಅಲಹಾಬಾದಿನಲ್ಲಿ ಸರಕಾರ ಸಾಮಾನು ಖರೀದಿ ಮಾಡೋ ಎಷ್ಟು ದೊಡ್ಡ ದೊಡ್ಡ ಅಂಗಡಿಗಳಿವೆಯೋ ಅವೆಲ್ಲಾ ಇಂಗ್ಲಿಷಿನೋರದ್ದೇ. ಅಂದರೆ ನೋಡು, ಜ್ವಾಲಾ, ಲಕ್ಷ್ಮೀಚಂದ ಇಂಗ್ಲಿಷಿ ನೋರನ್ನ ಎದುರಿಸಬೇಕಾಗುತ್ತೆ. ಇದು ಚೆನ್ನಾಗಿ ನೆನಪಿರಲಿ. ಇಂಗ್ಲಿಷಿನೋರನ್ನ ಎದುರಿಸೋದು ಅಂದರೆ ಹುಡುಗಾಟದ ಮಾತಲ್ಲ. ಏನು ಜ್ವಾಲಾ, ನಾನು ಹೇಳ್ತಿರೋದು ಸರಿ ತಾನೆ?"

ಜ್ವಾಲಾಪ್ರಸಾದ ಬೆಚ್ಚಿದ. ಮುನಿಷಿ ರಾಧೇಲಾಲ ಹೇಳಿದ ಮಾತಿನಲ್ಲಿ ಸತ್ಯವಿತ್ತು, ಒಂದು ವಾಸ್ತವಿಕ ಸಮಸ್ಯೆಯಿತ್ತು. ಜ್ವಾಲಾಪ್ರಸಾದ ಈ ಕಡೆ ಗಮನಕೊಟ್ಟಿರಲಿಲ್ಲ. ಕೊಂಚ ಹೊತ್ತು ಅದನ್ನೇ ಯೋಚಿಸುತ್ತಿದ್ದು ಆಮೇಲೆ ಹೇಳಿದ, "ಹೌದು, ಮಿಲ್ಲು ಕಾರಖಾನೆಗಳೆಲ್ಲಾ ಇಂಗ್ಲಿಷಿನೋರ ಕೈಲಿದೆ. ಈ ಮರದ ಕಾರಖಾನೇಲೂ ಕಷ್ಟವಾಗ ಬಹುದು. ನಾನು ಲಕ್ಷ್ಮೀಚಂದನ ಜೊತೆ ಮಾತಾಡ್ತೀನಿ. ಈ ಸಂಬಂಧವಾಗಿ ನಾನು ಯೋಚಿಸಿರಲಿಲ್ಲ. ಲಕ್ಷ್ಮೀಚಂದ ಕಲಕತ್ತೆ, ಬೊಂಬಾಯಿಗಳನ್ನೆಲ್ಲಾ ಸುತ್ತಿ ಬಂದಿ ರೋನು. ಅವನು ಯೋಚಿಸಿರೋದು ಖಂಡಿತ."

ಮುನಿಷಿ ರಾಧೇಲಾಲನಿಗೆ ತಾನು ಕೊಟ್ಟ ಸೂಚನೆಗೆ ಮನಸ್ಸಿನಲ್ಲೇ ಸಂತೋಷ ವಾಯಿತು. ಅವನು ಮತ್ತೆ ಹೇಳಿದ, "ವಿಲಾಯಿತಿ ಮರದ ಮುಂದೆ ನಮ್ಮ ದೇಸೀ ಮರ ಏನು ತಾನೇ ಮಾಡಬಲ್ಲದು! ವಿಲಾಯಿತಿಯಿಂದ ಮರದ ಸಾಮಾನು ಮಾಡಿ ಮಾಡಿ ಕಳಿಸ್ತಿದಾರೆ. ನೋಡಿ, ಲಂಬರ್‌ದಾರಿಣಿ, ಲಕ್ಷ್ಮೀಚಂದನಿಗೆ ನೀವು ತಿಳಿಸಿ ಹೇಳ ಬೇಕು. ಇಲ್ಲದೇ ಹೋದರೆ ನಿಮ್ಮ ಸೊಸೆ ಮುಖಾಂತರ ಒತ್ತಾಯ ಹಾಕಿಸಿ. ಈ ಮಿಲ್ಲು–ಕಾರಖಾನೆಗಳ ಸುಳಿಲಿ ಲಕ್ಷ್ಮೀಚಂದ ಸಿಕ್ಕಿಬೀಳೋದು ಬೇಡ."

ಜೈದೇಯಿ ಜ್ವಾಲಾಪ್ರಸಾದನಿಗೆ ಹೇಳಿದಳು, "ನೋಡಪ್ಪ, ದೇವರ್‌ಜಿ. ನಾಡಿದ್ದು ಲಕ್ಷ್ಮೀ ಬಂದಾಗ ನೀನೇ ಅವನಿಗೆ ಹೇಳಬೇಕು. ನಮ್ಮಗಳ ಮಾತನ್ನ ಅವನು ಈಗ ಚುಟುಕೀಲಿ ಹಾರಿಸಿಬಿಡ್ತಾನೆ. ಅವನು ಕೇಳೋದಿದ್ದರೆ ನಿನ್ನ ಮಾತು ಒಂದನ್ನೇ."

ಲಕ್ಷ್ಮೀಚಂದನ ಹೆಂಡತಿ ರಾಧಾ ಒಂದು ಮೂಲೆಯಲ್ಲಿ ಕುಳಿತು ಈ ಮಾತುಕತೆ ಯೆಲ್ಲವನ್ನೂ ಕೇಳುತ್ತಿದ್ದಳು. ಅದರಲ್ಲಿ ಅವಳಿಗೆ ಒಂದು ಸ್ವಲ್ಪ ಅರ್ಥವಾಗುತ್ತಿತ್ತು; ಬಹಳಷ್ಟು ಅರ್ಥವಾಗುತ್ತಿರಲಿಲ್ಲ. ಏನೇ ಇರಲಿ, ತನ್ನ ಗಂಡನ ಬಗ್ಗೆ ನಡೆಯುತ್ತಿದ್ದ ಈ ಟೀಕೆಟಿಪ್ಪಣಿ ಅವಳಿಗೆ ಖಂಡಿತ ರುಚಿಸುತ್ತಿರಲಿಲ್ಲ, ಮೆಲ್ಲನೆ ಅವಳು ಅತ್ತೆಯ ಕಿವಿ

ಯಲ್ಲಿ ಉಸುರಿದಳು, "ಅಮ್ಮಾಜಿ, ರಾತ್ರಿ ಬಹಳ ಹೊತ್ತಾಯಿತು. ಊಟತಿಂಡಿ ವ್ಯವಸ್ಥೆ ಏನಾದರೂ ಮಾಡಲೆ?"

ಜೈದೇಯಿಗೆ ಇನ್ನೂ ಊಟವಾಗಬೇಕಾಗಿದೆಯೆಂಬುದು ಈಗ ನೆನಪಾಯಿತು. ಅವಳು ಸೊಸೆಗೆ ಹೇಳಿದಳು, "ಹ್ಞಾ, ಹ್ಞಾ, ಪೂರಿಸಾಗು ಮಾಡಿಬಿಡು. ಛಿನಕಿ ಸಹಾಯ ಮಾಡ್ತಾಳೆ." ಆಮೇಲೆ ಜ್ವಾಲಾಪ್ರಸಾದನ ಕಡೆ ತಿರುಗಿ, "ದೇವರ್‌ಜೀ, ನೀನು ಊಟ ಮಾಡಿಕೊಂಡೇ ಸೋರಾವಿಗೆ ಹೊರಡಬೇಕು. ಇಲ್ಲವೇ ನಾಳೆ ಬೆಳಗ್ಗೆ ಹೊರಡುವಿಯಂತೆ. ಈಗ ಹೊರಟರೆ ನಡುರಾತ್ರಿಗೆ ತಲಪ್ತಿ. ಚಳಿಯೂ ಜೋರಾಗಿದೆ. ದಾರೀಲಿ ಬಲು ಕಷ್ಟವಾಗುತ್ತೆ."

ಮುನಿಷಿ ರಾಧೇಲಾಲ ಹೇಳಿದ, "ಅಯ್ಯೋ, ಕಷ್ಟವೇನು ಬಂತು? ನಾವು ಮೂರು ಜನ ಇದೀವಿ. ಜ್ವಾಲನ ಕುದುರೆಗಾಡಿ ಇದೆ. ಅಂಗಡಿಯಿಂದ ಪೂರಿ-ಮಿಠಾಯಿ ತರಿಸಿದರಾಯಿತು. ಸುಮ್ಮನೆ ಸೊಸೇಗೆ ಯಾಕೆ ಕಷ್ಟಕೊಡ್ತೀರಿ?"

ಮುನಿಷಿ ಶಿವಲಾಲ ಛಿನಕಿಯ ಕಡೆ ನೋಡಿದ. ಅವಳು ಮತ್ತೊಮ್ಮೆ ಒಲೆ ಹಚ್ಚಿಸುತ್ತಿದ್ದಳು. "ಹೋಗಿ ಎರಡು ಸೇರು ಪೂರಿ, ಎರಡು ಸೇರು ಒಳ್ಳೇ ಮಿಠಾಯಿ ತೊಗೊಂಬಾ. ಜ್ವಾಲಾ ಬೇಗ ಹೊರಡಬೇಕು."

ಛಿನಕಿ ಸ್ವಲ್ಪ ಜೋರಾಗಿಯೇ ಉತ್ತರಕೊಟ್ಟಳು, "ಯಾವಾಗ ನೋಡಿದರೂ ಪೂರಿ–ಮಿಠಾಯಿ ತೊಗೊಂಬಾ ಅನ್ನೋಕೆ ಏನು ರೂಪಾಯಿಯ ಹೊಳೆ ಹರೀತಿದೆಯೆ! ನಾನು ಒಲೆ ಹಚ್ಚಿಸಿ ಆಯ್ತು, ಸೊಸೆಮಗಳು ಅಡಿಗೆ ಮಾಡ್ತಾಳೆ. ನಾನು ಈ ಸರಿರಾತ್ರೀಲಿ ಜ್ವಾಲನಿಗೆ ಹೋಗೋಕ್ಕೆ ಬಿಡೋಲ್ಲ, ಚೆನ್ನಾಗಿ ತಿಳಕೊಂಡಿರಿ. ಏಳು, ಸೊಸೆಮಗಳೆ!"

## ಒಂಬತ್ತು

"ಒಬ್ಬ ರಾಜ ಇದ್ದ. ಅವನಿಗೆ ಏಳು ಜನ ರಾಣೀರು. ಆ ಏಳು ರಾಣೀರಿಗೆ ಏಳು ಮಹಲು. ಒಬ್ಬೊಬ್ಬ ರಾಣೀಗೂ ಒಬ್ಬೊಬ್ಬ ರಾಜಕುಮಾರ..." ಛಿನಕಿ ಗಂಗನಿಗೆ ಕತೆ ಹೇಳುತ್ತಿದ್ದಳು.

ಇದೇ ಹೊತ್ತಿಗೆ ರಾಧೇಲಾಲನ ಹೆಂಡತಿಯ ಧ್ವನಿ ಕೇಳಿಸಿತು, "ಛಿನಕೀ, ಸ್ವಲ್ಪ ಉಗ್ರಾಣದ ಬೀಗದಕೈ ಕೊಡೇ!"

ಗಂಗನನ್ನು ತೊಡೆಯ ಮೇಲೆ ಕೂರಿಸಿಕೊಂಡೇ ಛಿನಕಿ ಉತ್ತರಕೊಟ್ಟಳು, "ಬೀಗದಕೈ ಏಕೆ? ಇನ್ನೊಂದು ಸ್ವಲ್ಪ ಹೊತ್ನಲ್ಲಿ ನಾನೇ ಬಂದು ಸಾಮಾನು ತೆಕ್ಕೊಡ್ತೀನಿ."

"ನಾನು ಬೀಗದಕ್ಕೆ ಕೊಡು ಅಂದೆ. ನಾನೇ ಸಾಮಾನು ತೊಗೋತೀನಿ," ರಾಧೇಲಾಲನ ಹೆಂಡತಿ ಜೋರಾಗಿಯೇ ಹೇಳಿದಳು.

"ನಿಮಗೆ ಅಲ್ಲಿ ಸಾಮಾನು ಸುಲಭವಾಗಿ ಸಿಗೋದಿಲ್ಲ. ನಾನು ಎಲ್ಲಾನ್ನೂ ಅಚ್ಚು ಕಟ್ಟಾಗಿ ಜೋಡಿಸಿಟ್ಟಿದೀನಿ. ನೀವು ಹೇಗೆ ಹೇಗೋ ಇಟ್ಟುಬಿಡ್ತೀರಿ. ಏಳು, ಮಗು. ಈಗಲೇ ಹೋಗಿ ತೆಕ್ಕೊಟ್ಟು ಬರ್‍ತೀನಿ," ಛಿನಕಿ ಗಂಗಾಪ್ರಸಾದನಿಗೆ ಹೇಳಿದಳು.

ಆದರೆ ಹತ್ತು ವರ್ಷ ವಯಸ್ಸಿನ ಗಂಗಾಪ್ರಸಾದನ ಮನಸ್ಸು ಕತೆಯಲ್ಲಿ ಮುಳುಗಿತ್ತು. ಅವನಂದ, "ಇಲ್ಲ, ಛಿನಕೀದಾದಿ. ಪೂರ್ತಿ ಕತೆ ಹೇಳೋ ತನಕ ನಾನು ನಿನಗೆ ಹೋಗೋಕ್ಕೆ ಬಿಡೋಲ್ಲ. ಅಜ್ಜಿಗೆ ಬೀಗದಕ್ಕೆ ಕೊಟ್ಟುಬಿಡು." ಗಂಗಾಪ್ರಸಾದ ಛಿನಕಿಯ ಸೆರಗಿಗೆ ಕಟ್ಟಿದ್ದ ಉಗ್ರಾಣದ ಬೀಗದಕ್ಕೆಯನ್ನು ಬಿಚ್ಚಿ ರಾಧೇಲಾಲನ ಹೆಂಡತಿಗೆ ಕೊಟ್ಟುಬಿಟ್ಟ. "ಹ್ಞಾ, ಛಿನಕೀದಾದಿ, ಒಬ್ಬೊಬ್ಬ ರಾಣೀಗೆ ಒಬ್ಬೊಬ್ಬ ರಾಜಕುಮಾರ ಇದ್ದ. ಆಮೇಲೆ?"

ಛಿನಕಿಯ ಮನಸ್ಸು ಈಗ ಕತೆಯ ಮೇಲಿರಲಿಲ್ಲ. ಅವಳಿಗೆ ಗಂಗಾಪ್ರಸಾದನ ಮಾತೂ ಕೇಳಿಸುತ್ತಿರಲಿಲ್ಲ. ಅವಳ ದೃಷ್ಟಿ ಉಗ್ರಾಣದ ಕಡೆ ಬೇಗಬೇಗನೆ ಕಾಲುಹಾಕಿದ್ದ ರಾಧೇಲಾಲನ ಹೆಂಡತಿಯ ಕಡೆ ಹರಿದಿತ್ತು. ಛಿನಕಿ ಗಂಗಾಪ್ರಸಾದನನ್ನು ತೊಡೆಯ ಮೇಲಿಂದ ಇಳಿಸುತ್ತ ಹೇಳಿದಳು, "ಈಗ ಬಂದೆ, ಮಗು. ಅಲ್ಲೀವರೆಗೆ ಭೀಖೂ ಜೊತೆ ಆಡ್ತಿರು, ಹೋಗು." ಛಿನಕಿಯೂ ಉಗ್ರಾಣದ ಕಡೆ ಹೊರಟಳು.

ಆದರೆ ಛಿನಕಿ ಉಗ್ರಾಣ ತಲಪಲಾಗಲಿಲ್ಲ. ಮುನಿಷಿ ಶಿವಲಾಲನ ಕೋಣೆ ಯಿಂದ ನರಳಿಕೆಯ ಶಬ್ದ ಕೇಳಿಬರುತ್ತಿತ್ತು. ಅದನ್ನು ಕೇಳಿ ಛಿನಕಿ ಆ ಕಡೆ ತಿರುಗಿದಳು.

ಮುನಿಷಿ ಶಿವಲಾಲನ ತಲೆನೋವು ಅವತ್ತು ತುಂಬಾ ಹೆಚ್ಚಾಗಿತ್ತು. ಅಲಹಾ ಬಾದಿನಲ್ಲಿ ಕಲ್ಪವಾಸ ಮಾಡುತ್ತಿದ್ದಾಗ ಅವನಿಗೆ ಅಂಟಿದ್ದ ಕೆಮ್ಮು ನೆಗಡಿ ಇದುವರೆಗೂ ಬಿಟ್ಟಿರಲಿಲ್ಲ. ಮೊದಲು ಹಕೀಮ ಸಾಹೇಬರ ಔಷಧಿಯಾಯಿತು. ಅದರಿಂದ ಗುಣ ಕಾಣಲಿಲ್ಲ. ಹಕೀಮ ಸಾಹೇಬರ ಅಭಿಪ್ರಾಯದ ಪ್ರಕಾರ ಔಷಧಿ ಹಾಗೂ ಮದ್ಯ ಒಂದಕ್ಕೊಂದು ಜನ್ಮತಃ ವೈರಿಗಳು! ಹಕೀಮರನ್ನು ಬಿಟ್ಟು ವೈದ್ಯರ ಬಳಿಗೆ ಹೋದಾಗ ಅವರು ಉಪವಾಸ ಮಾಡಬೇಕೆಂಬ ತೀರ್ಮಾನಕ್ಕೆ ಬಂದರು. ಆದರೆ ಇದು ಮುನಿಷಿ ಶಿವಲಾಲನಿಗೆ ಹಿಡಿಸಲಿಲ್ಲ. ಕೊನೆಗೆ ಶಿವಲಾಲ ಸೋತು ಡಾಕ್ಟರಿಂದ ಚಿಕಿತ್ಸೆ ಮಾಡಿಸಿ ಕೊಳ್ಳಲಾರಂಭಿಸಿದ. ಎರಡು ದಿನದಿಂದ ಅವರು ಕೊಟ್ಟ ಔಷಧಿ ಕುಡಿಯುತ್ತಿದ್ದ.

ಛಿನಕಿ ಕೋಣೆಯೊಳಗೆ ಕಾಲಿಡುತ್ತ ಹೇಳಿದಳು, "ಏನು ನೋವು ಹೆಚ್ಚಾಗಿದೆಯೆ?"

ಶಿವಲಾಲ ಛಿನಕಿಯ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಹಾಗೆಯೇ ನರಳುತ್ತಿದ್ದ.

ಛಿನಕಿ ಶಿವಲಾಲನ ತಲೆದಸಿಯಲ್ಲಿ ಕುಳಿತು ಅವನ ತಲೆ ಒತ್ತತೊಡಗಿದಳು. ಇದರಿಂದ ಶಿವಲಾಲನಿಗೆ ನಿಸ್ಸಂದೇಹವಾಗಿ ಸ್ವಲ್ಪ ಆರಾಮವಾಯಿತು. ಅವನ ನರಳಿಕೆ ಕೊಂಚಕೊಂಚವಾಗಿ ಕಡಿಮೆಯಾಗುತ್ತ ಬಂದು ಕೊನೆಗೆ ನಿಂತುಹೋಯಿತು.

ಆಮೇಲೆ ಅವನು ಕಣ್ಣು ತೆರೆದು ಛಿನಕಿಯತ್ತ ನೋಡಿದ, "ಏನೇ, ನೀನು ಎಲ್ಲಿ ಹೋಗಿದ್ದೆಯೆ?"

"ಗಂಗನ್ನ ಆಡಿಸ್ತಾ ಇದ್ದೆ. ನೀವು ನನ್ನನ್ನ ಯಾಕೆ ಕರೀಬಾರದಾಗಿತ್ತು? ಈ ಕಡೆ ಉಗ್ರಾಣಕ್ಕೆ ಚಿಕ್ಕ ಯಜಮಾನಿತಿ ಹಿಂದೆ ಬರ್‍ತಿದ್ದಾಗ, ನೀವು ನರಳಿದ್ದು ಕೇಳಿಸಿತು. ಹಾಗೇ ಇಲ್ಲಿಗೆ ಬಂದೆ."

"ಭೋಟಿ ಹಿಂದೆ ಯಾಕೆ ಹೋಗ್ತಿದ್ದೆ, ಉಗ್ರಾಣಕ್ಕೆ?" ಶಿವಲಾಲ ಕೇಳಿದ.

"ನನ್ನಿಂದ ಉಗ್ರಾಣದ ಬೀಗದಕೈ ಇಸಕೊಂಡು ಹೋದರು. ನಾನಂದೆ, ಸಾಮಾನ ನ್ನೆಲ್ಲಾ ಅಣಿಯಾಗಿಟ್ಟಿದ್ದೀನಿ. ಅದಲುಬದಲಾಗಿ ಹೋಗುತ್ತೆ. ಏನಾದರೂ ಬೇಕಾದರೆ ನಾನೇ ತೆಕ್ಕೊಡೋಣ ಅಂದುಕೊಂಡು ಹೋಗ್ತಿದ್ದೆ."

ಮುನಿಷಿ ಶಿವಲಾಲ ಮೌನವಾಗಿ ಯೋಚಿಸಲಾರಂಭಿಸಿದ. ಅಧಿಕಾರ ಹಾಗೂ ಬಲ ಸ್ಥಳಾಂತರವಾಗುತ್ತಿದ್ದವು, ಕೈಯಿಂದ ಕೈಗೆ ಹೋಗುತ್ತಿದ್ದವು. ಮನೆತನದ ಪರಂಪರೆ ಮುರಿದುಬೀಳುತ್ತಿತ್ತು. "ನೀನು ಭೋಟೀ ಕೈಗೇ ಯಾಕೆ ಬೀಗದಕೈ ಕೊಟ್ಟು ಬಿಡಬಾರದು? ಮನೆಯ ಯಜಮಾನಿ ಅವಳು. ಅವಳಿಗೆ ಎಷ್ಟು ಕೆಟ್ಟನಿಸುತ್ತಿರ ಬೇಡ!" ಶಿವಲಾಲ ಮೆಲುದನಿಯಲ್ಲಿ ಹೇಳಿದ.

ಛಿನಕಿಗೆ ಕೋಪ ಬಂತು. "ಜ್ವಾಲನ ಹೆಂಡತಿ ಮನೆಯ ಯಜಮಾನಿ. ಈ ದೊರೆಮಕ್ಕಳೆಲ್ಲರೂ ಬಂದು ಜ್ವಾಲನ ಸಂಪತ್ತನ್ನ ಕೊಳ್ಳೆ ಹೊಡೀತಿದಾರೆ. ಅಂದರೆ ಜ್ವಾಲನ ಹೆಂಡತಿ ಕೆಲಸದೋಳಾದಳು, ಭೋಟಿ ಯಜಮಾನಿ ಆಗಿಬಿಟ್ಟಳು."

ಛಿನಕಿಯ ಈ ಮಾತಿಗೆ ಏನು ಉತ್ತರ ಕೊಡಬೇಕೆಂದು ಮುನಿಷಿ ಶಿವಲಾಲನಿಗೆ ಹೊಳೆಯಲಿಲ್ಲ. ಆದರೂ ಆ ಮಾತು ವಿಕಟವಾಗಿ ಕಂಡಿತು. ಅವನು ಕಣ್ಣುಮುಚ್ಚಿ ಮನಸ್ಸಿನಲ್ಲಿಯೇ ಉತ್ತರ ಯೋಚಿಸುತ್ತಿದ್ದ. ಆಮೇಲೆ ಏಕಾಏಕಿ ಬಿರುಸಾದ ಧ್ವನಿಯಲ್ಲಿ ಹೇಳಿದ, "ಇಲ್ಲ, ಏನೇ ಆಗಲಿ, ಭೋಟಿ ಮನೆಯ ಯಜಮಾನಿ. ಗೊತ್ತಾಯ್ತೇನು? ರಾಧೇ ಹೆಂಡತಿ ಬದುಕಿರೋವರೆಗೂ ಈ ಮನೇಲಿರೋವರೆಗೂ ಅವಳೇ ಈ ಮನೆಗೆ ಯಜಮಾನಿಯಾಗಿರ್‍ತಾಳೆ, ಚೆನ್ನಾಗಿ ತಿಳಕೋ. ಈ ಸಂಸಾರದ ವಿಷಯದಲ್ಲಿ ತಲೆ ಹಾಕ್ಕೊಂಡು ಬರೋಕ್ಕೆ ನೀನು ಯಾರು?"

ಈ ಉತ್ತರ ಕೇಳಿ ಛಿನಕಿಯ ಕಣ್ಣಲ್ಲಿ ನೀರು ತುಂಬಿಬಂತು. ಆದರೆ ಅವಳು ಮೊದಲಿನಂತೆಯೇ ಶಿವಲಾಲನ ತಲೆ ಒತ್ತುತ್ತಿದ್ದಳು. ಈ ಬೆದರಿಕೆ, ಈ ಅನ್ಯಾಯ ಗಳೊಂದೂ ಅವಳಿಗೆ ಹೊಸದಾಗಿರಲಿಲ್ಲ. ಅವಳು ಪ್ರಾಯಶಃ ಜೀವನಪೂರ್ತಿ ಪ್ರತಿ ದಿನವೂ ಈ ಬಗೆಯ ಅನ್ಯಾಯ ದಂಡನೆಗಳನ್ನು ಎದುರಿಸಬೇಕಾಗಿ ಬಂದಿತ್ತು. ಇವೆಲ್ಲವೂ ಅವಳ ಜೀವನದ ಒಂದು ಭಾಗವಾಗಿದ್ದವು. ಅವಳು ಕುಳಿತುಕೊಂಡು ಅಳುತ್ತಿದ್ದಳು, ಅಳುತ್ತಳುತ್ತಲೇ ಶಿವಲಾಲನ ತಲೆ ಒತ್ತುತ್ತಿದ್ದಳು. ಛಿನಕಿಯ ಭಾವನೆಗಳ, ಅಷ್ಟೇಕೆ ಕೊನೆಗೆ ಅವಳ ಅಸ್ತಿತ್ವದ ಪರಿವೆಯೂ ಇಲ್ಲದವನಂತೆ ಮುನಿಷಿ ಶಿವಲಾಲ ಶಾಂತವಾಗಿ

ಮಲಗಿದ್ದ. ಅವನಿಗೆ ಆರಾಮ ಸಿಗುತ್ತಿತ್ತು, ಅವನ ಮನಸ್ಸು ಶಾಂತವಾಗಿತ್ತು. ಹಾಗೆಯೇ ನಿಧಾನವಾಗಿ ನಿದ್ದೆ ಹತ್ತಿತು. ಅವನು ನಿದ್ದೆ ಹೋದ ಮೇಲೆ ಛಿನಕಿ ಕೋಣೆ ಯಿಂದ ಹೊರಬಿದ್ದಳು.

ಮಧ್ಯಾಹ್ನ ಕಳೆಯುತ್ತ ಬಂದಿತ್ತು. ಅಡಿಗೆಮನೆಯಲ್ಲಿ ರಾಧೇಲಾಲನ ಹೆಂಡತಿ ಕಿಶನುವನ್ನು ಎದುರಿಗೆ ಕೂರಿಸಿಕೊಂಡು ಪೂರಿ ಕರಿದು ಬಡಿಸುತ್ತಿದ್ದಳು; ಅವನು ತಿನ್ನು ತ್ತಿದ್ದ. ಕಿಶನೂ ಬೆಳಗಿನಿಂದಲೂ ನಾಪತ್ತೆಯಾಗಿದ್ದ. ಅವನಿಗೆಂದು ರೊಟ್ಟಿ-ತೊವ್ವೆ ಯನ್ನು ಮುಚ್ಚಿ ತೆಗೆದಿಟ್ಟಿದ್ದಳು. ಅದು ಹಾಗೆಯೇ ಒಂದು ಮೂಲೆಯಲ್ಲಿ ಕೊಳೆಯುತ್ತ ಬಿದ್ದಿತ್ತು. ಛಿನಕಿಗೆ ತಡೆಯಲಾಗಲಿಲ್ಲ. ಅವಳು ಅಡಿಗೆಮನೆಯ ಹೊಸಿಲ ಬಳಿ ನಿಂತು ಕಿಶನೂ ಊಟ ಮಾಡುವುದನ್ನೇ ನೋಡತೊಡಗಿದಳು. ರಾಧೇಲಾಲನ ಹೆಂಡತಿ ಹಾಗೂ ಕಿಶನೂ ತಮ್ಮ ಪಾಲಿಗೆ ಛಿನಕಿ ಅಸ್ತಿತ್ವದಲ್ಲೇ ಇಲ್ಲವೆಂಬಂತೆ ಅವಳ ಕಡೆ ನೋಡಲೂ ಇಲ್ಲ, ಏನನ್ನೂ ಹೇಳಲೂ ಇಲ್ಲ. ಛಿನಕಿ ಮರ್ಮಾಘಾತವಾದವಳಂತೆ ಅಲ್ಲಿಂದ ಹೊರಟು ಯಮುನಳ ಕೋಣೆಗೆ ಬಂದಳು. ಅವಳು ಬಂದದ್ದನ್ನು ನೋಡಿ ಯಮುನಾ ಕೇಳಿದಳು, "ಎಲ್ಲಿ ಹೋಗಿದ್ದೆ, ಛಿನಕೀಚಾಚಿ? ಗಂಗಾ ಎಷ್ಟೊಂದು ಅಳ್ತಿದಾನೆ, ನೋಡು. ಛಿನಕೀದಾದಿ ನನ್ನೊಬ್ಬನನ್ನೇ ಬಿಟ್ಟು ಚಿಕ್ಕಜ್ಜಿಯ ಹಿಂದೆಹಿಂದೆ ಹೋದಳು ಅಂತಿದಾನೆ."

ಛಿನಕಿ ಯಮುನಳ ಮಾತಿಗೆ ಏನೊಂದೂ ಉತ್ತರ ಕೊಡಲಿಲ್ಲ. ಗಂಗನನ್ನು ತೊಡೆಯ ಮೇಲೆತ್ತಿಕೊಂಡು ಯಮುನಳ ಚಾರಪಾಯಿಯ ಬದಿ ತೆಪ್ಪಗೆ ಕುಳಿತು ಕೊಂಡಳು. ಅವಳ ಕಣ್ಣಿಂದ ಒಂದೇ ಸಮನೆ ನೀರು ಸುರಿಯುತ್ತಿತ್ತು.

ಯಮುನಾ ಕೊಂಚ ಹೊತ್ತು ಎಡೆಬಿಡದೆ ನೋಡುತ್ತಿದ್ದು ಆಮೇಲೆ ಇದ್ದಕ್ಕಿದ್ದಂತೆ ಭಯಗೊಂಡವಳಂತೆ ಮುಖಮಾಡಿ ಕೇಳಿದಳು, "ಏನು ವಿಷಯ, ಛಿನಕೀಚಾಚಿ. ಹೀಗೇಕೆ ಅಳ್ತಿದಿ? ಅಪ್ಪ ಆರೋಗ್ಯವಾಗಿದಾರೆ, ತಾನೆ?"

ಛಿನಕಿ ಕಣ್ಣೀರು ಒರಸಿಕೊಳ್ಳುತ್ತ ನಿಧಾನವಾಗಿ ಹೇಳಿದಳು, "ಅವರೇನೋ ನೆಟ್ಟ ಗಿದಾರೆ. ಆದರೆ ಇದನ್ನೆಲ್ಲಾ ನನ್ನಿಂದ ನೋಡೋಕ್ಕಾಗೋಲ್ಲ."

"ಏನನ್ನ ನೋಡೋಕ್ಕಾಗೋಲ್ಲ? ಬಾಯಿಬಿಟ್ಟು ಹೇಳು," ಯಮುನಾ ಕೇಳಿದಳು.

"ಅಡಿಗೆಮನೆಗೆ ಹೋಗಿ ನೀನೇ ನೋಡು. ಬಿಸಿಬಿಸಿ ಪೂರಿ ಕರೀತಾ ಇದೆ, ಕಿಸನೂ ತಿಂತಿದಾನೆ. ಮಧ್ಯಾಹ್ನದ ಊಟ ಹಾಗೇ ಮುಚ್ಚಿಯೇ ಇದೆ. ಅದೇನು ಹಾಗೇ ಹಾಳಾಗಬೇಕೆ?"

ಈಗ ಯಮುನಳ ಮೂಗಿಗೆ ತುಪ್ಪದ ಘಮ ತಟ್ಟಿತು. ಅವಳಿಗೆ ಸ್ಥಿತಿ ಪೂರ್ಣವಾಗಿ ಅರಿವಾಯಿತು. ಅವಳೆಂದಳು, "ಉಗ್ರಾಣದ ಬೀಗದಕೈ ನಿನ್ನ ಹತ್ತಿರ ಇತ್ತಲ್ಲ, ಹಿಟ್ಟೂತುಪ್ಪಾನ ಚಿಕ್ಕಮ್ಮ ಅಂಗಡಿಯಿಂದ ತರಿಸಿದರೆ?"

"ಛೋಟಿ ಅಂಗಡಿಯಿಂದ ಏನು ತರಿಸಿಯಾಳು? ಅವಳ ಮುಖ ನೋಡು!

ನನ್ನ ಹತ್ತಿರ ಬಂದು ಬಲವಂತವಾಗಿ ಉಗ್ರಾಣದ ಬೀಗದಕೈ ಕಿತ್ತುಕೊಂಡು ಹೋದಳು, ಫತಹಪುರದಲ್ಲಿ ಮಾಡಿದ್ದಾಯ್ತು ಅಂತ ಇಲ್ಲೂ ಬಂದಳು, ಯಜಮಾನಿಕೆ ಮಾಡೋಕ್ಕೆ! ನಿರ್ದಯವಾಗಿ ಹಣ ಖರ್ಚಾಗ್ತಿದೆ. ಪಾಪ, ಜ್ವಾಲ ಮೈಮುರಿದು ಸಂಪಾದಿಸ್ತಾನೆ. ಈ ಮೂಷಂಡಿ ಚಿಕ್ಕಪ್ಪನ ಮಕ್ಕಳು ಕುಣಕೊಂಡು ತಿಂತಾರೆ!"

ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಹತಾಶೆಯನ್ನು ಅದುಮಿಕೊಳ್ಳಲು ಪ್ರಯತ್ನಿಸು ವವಳಂತೆ ಯಮುನಾ ಹೇಳಿದಳು, "ಅಯ್ಯೋ ಬಿಡು, ಛಿನಕೀಚಾಚೀ. ಅವರ ಭಾಗ್ಯದಲ್ಲಿ ಬರೆದಿದೆ ಅಂತ ತಿಂತಾರೆ. ಹೋಗಿ ಗಂಗನ್ನ ಹೊರಗಡೆ ಸುತ್ತಾಡಿಸಿಕೊಂಡು ಬಾ."

"ತಮ್ಮ ಭಾಗ್ಯದ್ದನ್ನಲ್ಲ, ಗಂಗನ ಭಾಗ್ಯದ್ದನ್ನ ತಿಂತಾ ಇದಾರೆ ಈ ಜನ. ನಮ್ಮ ಗಂಗ ರಾಜನ ಮಗ. ಅವನು ಮುಂದೆ ದೊಡ್ಡೋನಾಗಿ, ಓದಿಬರೆದು ಮಾಡಿ, ಆಸ್ತಿಪಾಸ್ತಿ ಕೂಡಿಸಬೇಕು, ದೊಡ್ಡ ಮನುಷ್ಯ ಆಗಬೇಕು. ಅವನ ಆ ಭಾಗ್ಯಾನೆಲ್ಲಾ ಈ ಮೈಗಳ್ಳರು ತಿಂದುಹಾಕ್ತಿದಾರೆ." ಹೀಗನ್ನುತ್ತ ಛಿನಕಿ ಗಂಗಾಪ್ರಸಾದನನ್ನ ಕರೆದುಕೊಂಡು ಹೊರಟಳು.

ಛಿನಕಿ ಈ ಪ್ರಸಂಗವನ್ನು ಮುಕ್ತಾಯಮಾಡಿದ ರೀತಿ ಅದನ್ನು ಬಹಳ ಕಾಲದವರೆಗೆ ಜೀವಂತವಾಗಿಡುವ ಪ್ರಯತ್ನವೇ ಆಗಿತ್ತು. ಈ ಜನ ಗಂಗನ ಭಾಗವನ್ನು, ಗಂಗನ ಭಾಗ್ಯವನ್ನು ತಿಂದುಹಾಕುತ್ತಿದ್ದರು. ಯಮುನಾ ಸನ್ನಿ ಬಡಿದವಳಂತಾದಳು. ಛಿನಕಿ ಹೇಳಿದುದು ಒಂದು ವಿಕೃತ, ಭಯಾನಕ ಸತ್ಯವಾಗಿತ್ತು. ಆ ಸತ್ಯವನ್ನು ಅಲ್ಲಗಳೆಯು ವಂತಿರಲಿಲ್ಲ, ಅದನ್ನು ಕಂಡೂ ಕಂಡೂ ಕಣ್ಣುಮುಚ್ಚಿ ಕೂಡುವಂತಿರಲಿಲ್ಲ. ಅದೇ ಹೊತ್ತಿಗೆ ರಾಧೇಲಾಲನ ಹೆಂಡತಿ ತಟ್ಟೆಬಟ್ಟಲಿನಲ್ಲಿ ಪೂರಿಸಾಗು ಇಟ್ಟುಕೊಂಡು ಯಮುನಳ ಕೋಣೆಗೆ ಬಂದಳು. "ಸಂಜೆಯ ತಿಂಡಿ ಮಾಡಿಬಿಟ್ಟಿದೀನಿ. ಕಿಶನೂಗೆ ತುಂಬ ಹೊಟ್ಟೆ ಹಸಿದಿತ್ತು. ಬೆಳಗಿನ ಊಟ ಈ ಹೊತ್ತಿನ ತನಕ ಇಟ್ಟು ಕೆಟ್ಟಿದ್ದನ್ನ ನೋಡಿ 'ಸರಿ, ಈಗ ತಿಂಡಿ ತಿನ್ನು. ರಾತ್ರೀಗೆ ಊಟ ಮಾಡುವೆಯಂತೆ' ಅಂತ ಅಂದೆ. ನಿನಗೆ, ಜ್ವಾಲನಿಗೆ, ಗಂಗನಿಗೆ ಅಂತ ಇದನ್ನ ತಂದಿದೀನಿ, ತೊಗೋ" ಅಂದಳು.

ಯಮುನಾ ಚಿಕ್ಕಮ್ಮನ ಕಡೆ ನೋಡಿದಳು. ಅವಳಿಗೆ ಏನನ್ನೂ ಹೇಳುವ ಧೈರ್ಯ ವಾಗಲಿಲ್ಲ. ರಾಧೇಲಾಲನ ಹೆಂಡತಿ ಯಮುನಳ ನೋಟದ ಹಿಂದಿದ್ದ ಭಾವನೆಯನ್ನು ಸ್ಪಷ್ಟವಾಗಿ ಗ್ರಹಿಸಿದಳು. ಅದನ್ನು ನಿರಾಕರಿಸುವವಳಂತೆ, "ಉಗ್ರಾಣದ ಬೀಗದ ಕೈಯನ್ನ ನಾನು ಛಿನಕಿಯಿಂದ ಇಸಕೊಂಡಿದೀನಿ. ಈಗ ನಾವು ಇಲ್ಲಿ ಬಂದ ಮೇಲೆ ಗೃಹಕೃತ್ಯಾನ ಆಳಿನ ಮೇಲೆ ಯಾಕೆ ಬಿಡಬೇಕು? ಈ ಮನೆಯ ಊಟ-ತಿಂಡಿ ಜವಾಬ್ದಾರಿ ನನ್ನದು!"

ಯಮುನಳ ಬಾಯಿಂದ ಅನಾಯಾಸವಾಗಿ ಹೊರಟಿತು, "ಹ್ಞಾ ಚಾಚೀಜೀ, ಒಳ್ಳೇ ದಾಯಿತು! ನಾನೂ ಯೋಚಿಸ್ತಿದ್ದೆ, ಆದರೆ ನಿಮಗೆ ಯಾಕೆ ತೊಂದರೆ, ನೀವು ತಾನೇ ಎಷ್ಟು ದಿನ ಇಲ್ಲಿರ್ತೀರಿ, ಕೊನೇಆಖೈರಿಗೆ ಫತಹಪುರದ ಮನೇನೂ ನೀವು ನೋಡಿಕೋ ಬೇಕಲ್ಲವೆ ಅಂತ ಅಂದುಕೊಂಡು ಸುಮ್ಮನಾದೆ. ಹೇಗೂ ಛಿನಕೀಚಾಚಿ ನಮಗೆಲ್ಲಾ

ತುಂಬ ಆಸರೆಯಾಗಿದಾಳೆ. ಅವಳಿಗೆ ಯಾವ ಕೆಲಸ ಬೇಕಾದರೂ ಹೇಳಬಹುದು ಅಂತ ನಿಮಗೆ ಗೊತ್ತಿದೆ. ಎಂತಲೇ ಉಗ್ರಾಣದ ಬೀಗದಕೈಯನ್ನ ಅವಳಿಗೆ ಒಪ್ಪಿಸಿದ್ದೆ. ನೀವು ಹೋದ ಮೇಲಾದರೂ ಗೃಹಕೃತ್ಯಾನ ಅವಳು ನೋಡಿಕೋಬೇಕಲ್ಲವೇ! ಅದಕ್ಕೋಸ್ಕರವೇ ಛಿನಕಿಯಿಂದ ಬೀಗದಕೈ ಇಸಕೊಂಡು ನಿಮಗೆ ಕೊಟ್ಟಿರಲಿಲ್ಲ. ನೀವು ಬೀಗದಕೈ ಇಸಕೊಂಡದ್ದು ಒಳ್ಳೇದಾಯಿತು!"

ಯಮುನಳ ಧ್ವನಿ ಮೃದುವಾಗಿತ್ತು, ಶಾಂತವಾಗಿತ್ತು. ಅವಳ ಮಾತಿನಲ್ಲೆಲ್ಲೂ ವಿರೋಧ ಇಲ್ಲವೇ ಸಂಘರ್ಷದ ಭಾವನೆಯಿರಲಿಲ್ಲ. ಆದರೂ ಅವಳು ಒಂದಲ್ಲ ಎರಡು ಸಲ ತಾನು ಫತಹಪುರಕ್ಕೆ ಹೋಗುವ ಸೂಚನೆ ಕೊಟ್ಟದ್ದು ರಾಧೇಲಾಲನ ಹೆಂಡತಿಗೆ ಇಷ್ಟವಾಗಲಿಲ್ಲ. ಆ ಸೂಚನೆ ತನ್ನ ಸ್ಥಿತಿ ಹಾಗೂ ಅಧಿಕಾರಕ್ಕೆ ಸ್ಪಷ್ಟವಾಗಿ ಸವಾಲು ಹಾಕಿದಂತಿತ್ತು. ಆ ಸವಾಲಿಗೆ ಉತ್ತರ ಕೊಡುತ್ತ ರಾಧೇಲಾಲನ ಹೆಂಡತಿ ಹೇಳಿದಳು, "ನಿನಗೆ ಆ ಚಿಂತೆಯೆಲ್ಲಾ ಬೇಡ. ನಾನಿರೋವರೆಗೆ ನೀನು ಅದನ್ನೆಲ್ಲಾ ಯೋಚಿಸೋ ಅಗತ್ಯ ಏನಿದೆ? ಮನೆಯ ವ್ಯವಸ್ಥೆ ಮಾಡಿಬರೋಕ್ಕೆ ಅಂತಾನೇ ಇವರು ಫತಹಪುರಕ್ಕೆ ಹೋಗಿದಾರೆ. ನಾವೆಲ್ಲರೂ ಫತಹಪುರ ಬಿಟ್ಟು ಇಲ್ಲೇ ಬಂದುಬಿಡ್ತೀವಿ. ಇಲ್ಲವೇ ರಾಮು, ಶ್ಯಾಮೂರ ಹೆಂಡತೀರು ಅಲ್ಲಿ ಗೃಹಕೃತ್ಯ ನೋಡಿಕೋತಾರೆ." ಹೀಗಂದು ರಾಧೇಲಾಲನ ಹೆಂಡತಿ ಅಲ್ಲಿಂದ ಹೊರಬಿದ್ದಳು.

ತನ್ನ ಮಾತಿಗೆ ರಾಧೇಲಾಲನ ಹೆಂಡತಿ ಮುಖ ಮುರಿಯುವ ಹಾಗೆ ಉತ್ತರ ಕೊಟ್ಟದ್ದನ್ನು ಕೇಳಿ ಯಮುನಾ ವಿಲಿವಿಲಿ ಒದ್ದಾಡಿದಳು. ಅಂದರೆ ಛಿನಕಿ ಹೇಳಿದ್ದು ಸರಿಯಾಗಿಯೇ ಇತ್ತು. ಗಂಗನ ಭಾಗ್ಯವನ್ನು ಅಪಹರಿಸಲು ಚಾಚಾಜಿಯ ಇಡೀ ಪರಿವಾರವೇ ಇಲ್ಲಿ, ಜ್ವಾಲಾಪ್ರಸಾದನ ಎದೆಯ ಮೇಲೆ, ಬಂದಿಳಿಯುವುದಿತ್ತು.

ಯಮುನಾ ಕೊಂಚ ಹೊತ್ತು ಬುದ್ಧಿ ಕಳೆದವಳಂತೆ ಕುಳಿತಿದ್ದು ಆಮೇಲೆ ಕೋಣೆಯಿಂದ ಹೊರಬಿದ್ದಳು. ಸ್ವಲ್ಪ ಹಿಂದೆಮುಂದೆ ನೋಡುತ್ತ ಮುನಿಷಿ ಶಿವಲಾಲನ ಕೋಣೆಯ ಕಡೆ ನಡೆದಳು. ಮುನಿಷಿ ಶಿವಲಾಲ ಈಗ ಎಚ್ಚರವಾಗಿದ್ದ. ಯಮುನಾ ಕೋಣೆಯ ಬಾಗಿಲಲ್ಲಿ ನಿಂತು ಕೇಳಿದಳು, "ದೇಹಸ್ಥಿತಿ ಹೇಗಿದೆ, ಅಪ್ಪಾ? ಈ ಔಷಧಿಯಿಂದ ಏನಾದರೂ ಲಾಭವಾಯಿತೆ?"

ಮುನಿಷಿ ಶಿವಲಾಲ ಹೇಳಿದ, "ಈಗ ನೋವು ಸ್ವಲ್ಪ ಕಡಿಮೆಯಾಗಿದೆ. ದೇವರ ದಯೆ!"

ಯಮುನಾ ಮುಂದೆ ಏನೂ ಮಾತಾಡಲಿಲ್ಲ. ಬಾಗಿಲಿಗೆ ಅಂಟಿಕೊಂಡು ನಿಂತಿದ್ದಳು. ಮುನಿಷಿ ಶಿವಲಾಲ ಕೇಳಿದ, "ಯಾಕೆ, ಏನಾದರೂ ಮಾತಾಡೋದಿತ್ತೆ?" ಇದ್ದಕ್ಕಿದ್ದಂತೆ ಅವನಿಗೆ ಕೊಂಚ ಹೊತ್ತಿಗೆ ಮುಂಚೆ ಛಿನಕಿ ಆಡಿದ್ದ ಮಾತುಕತೆ ನೆನಪಾಯಿತು.

"ಏನೂ ಇಲ್ಲ, ಚಾಚಾಜಿಯ ಇಡೀ ಪರಿವಾರ ಫತಹಪುರದಿಂದ ಇಲ್ಲಿಗೆ ಬರುತ್ತೆ

ಅಂತ ಕೇಳಿದೆ. ಈಗ ತಾನೇ ಚಾಚೀಜಿ ಹೇಳ್ತಾ ಇದ್ದರು. ನಿಮ್ಮ ಹತ್ತಿರ ಏನಾದರೂ ಮಾತಾಗಿತ್ತೆ ? "

ಇದನ್ನು ಕೇಳಿ ಮುನಿಷಿ ಶಿವಲಾಲ ಬೆಚ್ಚಿದ, " ಏನಂದೆ ? ರಾಧೆಯ ಪರಿವಾರ ಇಲ್ಲಿ ಬರ್‍ತಿದೆಯೆ ? ನನ್ನ ಹತ್ತಿರ ಈ ಮಾತು ಯಾವುದೂ ಆಗಿಲ್ಲವಲ್ಲ. ಫತಹಪುರ ದಲ್ಲಿ ಮನೆಯಿದೆ, ಜಮೀನಿದೆ, ಎಲ್ಲಾ ಇದೆ. ಅದನ್ನ ಬಿಟ್ಟು ಇಲ್ಲಿ ಬರೋ ಅಗತ್ಯ ಏನಿದೆ ? "

ರಾಧೇಲಾಲನ ಹೆಂಡತಿ ಯಮುನಳ ಹಿಂದೆ ನಿಂತಿದ್ದಳು. ಅವಳು ಯಾವಾಗ ಅಲ್ಲಿ ಬಂದಳೆಂದು ಯಮುನಳಿಗೆ ತಿಳಿಯದು. ಹಾಗೆ ತಿಳಿದಿದ್ದರೆ ಯಮುನಾ ಆ ಮಾತನ್ನು ಎತ್ತುತ್ತಲೇ ಇರಲಿಲ್ಲ. ರಾಧೇಲಾಲನ ಹೆಂಡತಿ ಮುಂದೆ ಬಂದು ಹೇಳಿದಳು, " ದಾದಾಜಿ, ನಿಮ್ಮ ಕಾಹಿಲೆಯಿಂದಾಗಿ ನಾವು ಯೋಚಿಸಿದೆವು, ನಿಮ್ಮ ಆರೋಗ್ಯ ನೆಟ್ಟಗಾಗೋವರೆಗೆ ನಾವುಗಳು ನಿಮ್ಮ ಸೇವೆ ಮಾಡೋದು ಅಂತ. ರಾಮು, ಶ್ಯಾಮು ಫತಹಪುರದಲ್ಲಿ ರ್‍ತಾರೆ. ಅವರ ಹೆಂಡತೀರು ಗೃಹಕೃತ್ಯ ನೋಡಿಕೋತಾರೆ. ಕಿಶನೂ ಇಲ್ಲೇ ಇದಾನೆ. ಇವರು ಫತಹಪುರದಿಂದ ಬಿಶನೂ ಜತೆ ಬರ್‍ತಾರೆ. ಬಿಶನೂಗೂ ಏನಾದರೂ ಒಂದು ಕೆಲಸವಾಗಬೇಕಾಗಿದೆ. ಈ ಕೆಲಸಕಾರ್ಯದ ಏರ್ಪಾಡನ್ನೆಲ್ಲಾ ಜ್ವಾಲಾ ಮಾಡ ಬಲ್ಲ."

ರಾಧೇಲಾಲನ ಹೆಂಡತಿಯ ಬಿರುಸಿನ ಧ್ವನಿ ಕೇಳಿ ಮುನಿಷಿ ಶಿವಲಾಲ ಪೆಚ್ಚಾದ. " ಹ್ಞಾ, ಅದೇನೋ ಸರಿ," ಅವನಂದ ," ರಾಧೇ ತಿಳಿವಳಿಕಸ್ಥ. ಅವನು ಮಾಡೋದೆಲ್ಲಾ ಸರಿಯಾಗೇ ಮಾಡ್ತಾನೆ."

ಯಮುನಾ ಸೋಲು ತಿಂದವಳಂತೆ ಖಿನ್ನಳಾಗಿ ತನ್ನ ಕೋಣೆಗೆ ಹಿಂದಿರುಗಿದಳು.

ಸಂಜೆ ಜ್ವಾಲಾಪ್ರಸಾದ ವಾಪಸು ಬಂದಾಗ ಯಮುನಳ ಮುಖ ಸಪ್ಪಗಾಗಿದ್ದು ದನ್ನು ಕಂಡ. ಜ್ವಾಲಾಪ್ರಸಾದನಿಗೆ ತಿಂಡಿ ತಂದುಕೊಡುತ್ತ ಯಮುನಾ ಹೇಳಿದಳು, " ಕೇಳಿದಿರಾ, ಚಾಚಾಜೀ ಹಾಗೂ ಚಾಚೀಜಿ ಕಿಶನೂ ಬಿಶನೂರ ಜತೆ ಇಲ್ಲೇ ಬಂದಿರ್‍ತಾ ರಂತೆ. ಇವತ್ತು ಚಾಚೀಜಿ ಅಪ್ಪನಿಗೆ ಹೇಳ್ತಿದ್ದರು. "

ಜ್ವಾಲಾಪ್ರಸಾದ ಈ ಸುದ್ದಿ ತನ್ನ ಮೇಲೆ ಯಾವ ಪರಿಣಾಮವನ್ನೂ ಮಾಡದವನಂತೆ ಇದ್ದ. ಅವನಂದ, " ಇದರಲ್ಲಿ ಆಗಬಾರದ್ದೇನಿದೆ ? ಇಲ್ಲಿದ್ದರೆ ಇಬ್ಬರು ಹುಡುಗರೂ ದಾರೀಗೆ ಬರ್‍ತಾರೆ. ಅಪ್ಪನ ಮನಸ್ಸಿಗೂ ಸಂತೋಷವಾಗುತ್ತೆ."

ಯಮುನಳಿಗೆ ಇಲ್ಲಿಯೂ ಸೋಲೇ ಆಯಿತು. ಆದರೆ ಅವಳಿಗೆ ಇಲ್ಲಿ ಸೋಲಿನ ಹೊರತು ಬೇರೇನೂ ಸಿಗದೆಂದು ಗೊತ್ತಿತ್ತು. ಬದಲು ಜಯ ಸಿಕ್ಕಿದ್ದರೆ ಅವಳಿಗೆ ಆಶ್ಚರ್ಯವಾಗುತ್ತಿತ್ತು. ಅವಳು ಮಾತು ಮುಂದುವರಿಸಲಿಲ್ಲ.

ಸಂಜೆ ಸಮಯ ಕಾದು ಯಮುನಾ ಛಿನಕಿಗೆ ಚಾಚೀಜಿಯ ಯೋಜನೆಯೆಲ್ಲವನ್ನೂ ತಿಳಿಸಿದಳು. ಛಿನಕಿಯ ಮುಖದ ಮೇಲೆ ಒಂದು ನಗೆ ಮೂಡಿಬಂತು, " ಇಲ್ಲ, ಇದ

ನಡೆಯೋದಿಲ್ಲ. ನಾನಿನ್ನು ಚಿಕ್ಕಯಜಮಾನಿತಿ ಜೊತೆ ಯುದ್ಧ ಹೂಡಬೇಕಾಗುತ್ತೆ. ಇವತ್ತಿನಿಂದ ಸುಮ್ಮನೆ ಕೂತುಕೊಂಡು ನೀನು ತಮಾಷೆ ನೋಡ್ತಾ ಇರು."

ಸ್ವಲ್ಪ ಹೊತ್ತು ಬಿಟ್ಟು ಛಿನಕಿ ಮುನಿಷಿ ಶಿವಲಾಲನ ಕೋಣೆಗೆ ಬಂದಳು, ಒಂದು ಸಂಕಲ್ಪದೊಂದಿಗೆ. ಆ ಹೊತ್ತಿಗೆ ರಾತ್ರಿಯಾಗುತ್ತಿತ್ತು. ಮುನಿಷಿ ಶಿವಲಾಲ ಛಿನಕಿಯ ದಾರಿ ನೋಡುತ್ತಿದ್ದ. ಭೀಖೂ ನಿತ್ಯದಂತೆ ಅವನ ತಲೆದಸಿಯಲ್ಲಿ ಮದ್ಯದ ಬಾಟಲಿ ಇಟ್ಟು ಹೋಗಿದ್ದ. ಆದರೆ ಶಿವಲಾಲನ ಮೈಯಲ್ಲಿ ತಾನೇ ಕೈಯಾರೆ ಗ್ಲಾಸಿಗೆ ಮದ್ಯ ಬಗ್ಗಿಸಿಕೊಂಡು ಕುಡಿಯುವಷ್ಟು ಶಕ್ತಿ ಉಳಿದಿರಲಿಲ್ಲ. ಛಿನಕಿಯ ಮುಖ ಕಂಡೊಡನೆಯೇ ಬಿರುಸಿನ ಧ್ವನಿಯಲ್ಲಿ ಗದರಿಸಿಕೊಂಡ, "ಏನೇ, ಎಲ್ಲಿ ಸತ್ತುಹೋಗಿದ್ಯೆ ಇಷ್ಟು ಹೊತ್ತು? ತಾ, ಸಾರಾಯಿ ಕೊಡು."

"ನಿಮ್ಮ ಮನೇಲಿ ನಡೆಯೋದಿದೆಯಲ್ಲ ಮಹಾಭಾರತ, ಅದನ್ನ ಕುರಿತು ಯೋಚಿಸ್ತಿದ್ದೆ, ಮನಸ್ಸಿಗೆ ಬಹಳ ಬೇಜಾರಾಯಿತು. ಗಂಗನಿಗೆ ಆಟ ಆಡಿಸೋಕ್ಕೆ ಅಂತ ಮಾವಿನ ತೋಪಿನ ಕಡೆ ಕರಕೊಂಡು ಹೋಗಿದ್ದೆ," ಹೀಗಂದು ಛಿನಕಿ ಬೆಳ್ಳಿಯ ಬಟ್ಟಲಿಗೆ ಮದ್ಯ ಬಗ್ಗಿಸಿ ಶಿವಲಾಲನ ಕೈಗೆ ಕೊಟ್ಟಳು.

ಶಿವಲಾಲ ಒಂದು ಗುಟುಕು ಮದ್ಯ ಕುಡಿದ. ಆಮೇಲೆ ಛಿನಕಿಯ ಕಡೆ ಎವೆಯಿಕ್ಕದೆ ನೋಡತೊಡಗಿದ. ಛಿನಕಿ ಆಡಿದ್ದುದು ಕಲಹದ ಮಾತು. "ಯಾವ ಮಹಾಭಾರತ?" ಶಿವಲಾಲ ಜೋರಿನ ಧ್ವನಿಯಲ್ಲಿ ಕೇಳಿದ.

ಛಿನಕಿ ಈ ಬಾರಿ ಟೊಂಕಕಟ್ಟಿ ಬಂದಿದ್ದಳು. ಮುನಿಷಿ ಶಿವಲಾಲನ ಜೋರಿಗೆ ಅವಳು ಹೆದರಲಿಲ್ಲ. "ಜ್ವಾಲನ ಚಿಕ್ಕಪ್ಪನ ಸಂಸಾರ ಜ್ವಾಲನ ಸಂಪಾದನೆಯ ಮೇಲೆ ಮಜ ಹೊಡೆಯೋಕ್ಕೆ ಬರ್‍ತಿರೋದು ದುರ್ಯೋಧನನ ಸಂಸಾರ ಒಟ್ಟುಗೂಡಿದ ಹಾಗಿದೆ," ಛಿನಕಿಯ ಧ್ವನಿ ನಿಧಾನವಾದರೂ ದೃಢವಾಗಿತ್ತು.

"ದುರ್ಯೋಧನನ ಸಂಸಾರ! ಏನು ಹರಟ್ತಿದಿ?" ಮುನಿಷಿ ಶಿವಲಾಲ ಛಿನಕಿಯನ್ನು ಗದರಿಸಿಕೊಳ್ಳಲೆಂದು ಬಾಯಿ ತೆರೆದವನು ಅರ್ಧಕ್ಕೇ ನಿಲ್ಲಿಸಿದ. ಛಿನಕಿ ಹೇಳಿದ್ದರಲ್ಲಿ ಸತ್ಯವಿರಬೇಕೆಂದು ಅವನಿಗೆ ಅನ್ನಿಸಿತು. ತಾನು ಪಾಂಡುವಿದ್ದ ಹಾಗೆ. ಪಾಂಡುವನ್ನು ನುಂಗಿಹಾಕಲು ಮೃತ್ಯು ಹೊಂಚುಹಾಕಿ ಕುಳಿತಿದೆ. ರಾಧೇಲಾಲ ಧೃತರಾಷ್ಟ್ರ. ತಾನು ಸತ್ತ ಮೇಲೆ ಮನೆಯ ಅಧಿಕಾರ ಅವನ ಕೈಗೆ ಬರಲಿದೆ—ಇದು ಪೂರ್ತಿಯಾಗಿ ಮಹಾಭಾರತದ ರೂಪಕವೇ. ಛಿನಕಿ ಹೇಳುತ್ತಿರುವುದು ತಪ್ಪಲ್ಲ. ಈ ಭಾವನೆಯಿಂದ ರಕ್ಷಣೆ ಪಡೆಯಲೋ ಎಂಬಂತೆ ಮುನಿಷಿ ಶಿವಲಾಲ ಎರಡನೆಯ ಗುಟುಕಿಗೆ ಗ್ಲಾಸಿನಲ್ಲಿದ್ದ ಮದ್ಯವೆಲ್ಲವನ್ನೂ ಕುಡಿದು ಮುಗಿಸಿದ. ಅದರಿಂದಾಗಿ ಪ್ರಪಂಚ ಇದ್ದಿದ್ದೂ ಹೆಚ್ಚು ಮಸುಕಾಗಿ, ಮಹಾಭಾರತದ ಚಿತ್ರ ಇನ್ನೂ ಹೆಚ್ಚು ಸ್ಪಷ್ಟವಾಗಿ ಎದ್ದುಕಂಡಿತು. ಮತ್ತೆ ಗ್ಲಾಸನ್ನು ತುಂಬೆಂದು ಛಿನಕಿಯ ಕಡೆ ಕೈ ಚಾಚುತ್ತ ಶಿವಲಾಲ ದುರ್ಬಲವಾದ ಧ್ವನಿಯಲ್ಲಿ ಹೇಳಿದ, "ಹೌದು, ಲಕ್ಷಣ ಚೆನ್ನಾಗಿರೋ ಹಾಗೆ ಕಾಣ್ತಿಲ್ಲ. ಹತ್ತು ವರ್ಷ

ವಾದಮೇಲೆ ಇವರೆಲ್ಲರೂ ಮತ್ತೆ ಒಟ್ಟಾಗಿ ಸೇರ್ತಿದಾರೆ. ಏನು ಮಾಡೋದು ಅಂತಾನೇ ಹೊಳೀತಿಲ್ಲ."

"ಏನಂ ಮಾಡೋದು ! ಕಿಸನೂಗೆ ಎಲ್ಲಾದರೂ ಕೆಲಸ ಮಾಡಿಸಿಕೊಡು ಅಂತ ಜ್ವಾಲನಿಗೆ ಒತ್ತಾಯಮಾಡಿ—ಎಲ್ಲಾದರೂ ಸೋರಾವಿನಿಂದ ದೂರವಾಗಿ. ಜ್ವಾಲಾ ದೊಡ್ಡ ಆಫೀಸರು. ಅವನು ಏನು ಬೇಕಾದರೂ ಮಾಡಬಲ್ಲ. ಚಿಕ್ಕಯಜಮಾನರು, ಚಿಕ್ಕಯಜಮಾನಿತಿ ಮಗನ ಜೊತೆ ಹೋಗಿರಲಿ. ಬಿಸನೂನೂ ಅವರ ಜೊತೆ ಹೋಗಿ ಅಣ್ಣ, ಅಪ್ಪಅಮ್ಮಂದಿರನ್ನ ನೋಡಿಕೊಳ್ತಾ ಏನಾದರೂ ಕೆಲಸ ಕಲೀಲಿ."

ಮುನಿಷಿ ಶಿವಲಾಲ ಛಿನಕಿಯನ್ನು ದೃಷ್ಟಿಸಿ ನೋಡಿದ. ಅವಳು ಆಡಿದ್ದ ಮಾತು ಸ್ವಲ್ಪಸ್ವಲ್ಪವಾಗಿ ತಲೆಗೆ ಹತ್ತತೊಡಗಿತ್ತು. "ಏನಂದೆ ನೀನು ? ರಾಧೇ, ಛೋಟೀ, ಬಿಶನೂ ಈ ಮೂವರೂ ಹೋಗಿ ಕಿಸನೂ ಜೊತೆ ಇರಲಿ, ಸೋರಾವಿನಿಂದ ಎಲ್ಲಾದರೂ ದೂರದಲ್ಲಿ. ಕಿಸನೂಗೆ ಜ್ವಾಲಾ ಎಲ್ಲಾದರೂ ಕೆಲಸ ಕೊಡಿಸಿಕೊಡಲಿ, ಅಂದರೆ ಸೋರಾವಿನಿಂದ ದೂರದಲ್ಲಿ ! ಇದೇ ತಾನೇ ನೀನು ಹೇಳಿದ್ದು ! ಕೊಡು, ಏನು ನೋಡ್ತಿದಿ, ಗ್ಲಾಸು ತುಂಬಿಕೊಡು !"

ಛಿನಕಿ ಗ್ಲಾಸನ್ನು ಶಿವಲಾಲನ ಕೈಯಲ್ಲಿ ಭದ್ರವಾಗಿ ಹಿಡಿಸುತ್ತ ಹೇಳಿದಳು, "ಹೌದು, ಅದನ್ನೇ ಹೇಳಿದ್ದು."

ಮುನಿಷಿ ಶಿವಲಾಲ ಇನ್ನೊಂದು ಗುಟುಕು ಕುಡಿದ, "ನೀ ಹೇಳೋದೇನೋ ಸರಿ, ಆದರೆ ಈ ಕಿಸನೂ ಶುದ್ಧ ಪೋಲಿ. ಮೇಲೆ ಮೈಗಳ್ಳ. ಅವನ ಕೈಲಿ ಏನು ಕೆಲಸ ಹರಿಯುತ್ತೆ ?"

"ಅದಕ್ಕೇ ಅಲ್ಲವೇ ಚಿಕ್ಕಯಜಮಾನರನ್ನ ಕಿಸನೂ ಜತೆ ಕಳಿಸಿ ಅಂದದ್ದು. ಸುಪುತ್ರನ್ನ ಹುಟ್ಟಿಸಿದಾರೆ ಅಂದಮೇಲೆ ಅವನನ್ನ ದಾರಿಗೆ ತರಲಿ. ಜ್ವಾಲನ ಜೊತೆ ಮಾತಾಡೋಕ್ಕೆ ನನಗೆ ಧೈರ್ಯವಾಗೋಲ್ಲ. ನೀವು ಹೇಳಿ. ಕೊನೆಗೆ ಘಾಟಮಪುರದ ಲಂಬರ್‌ದಾರಿಣೆ ಹತ್ತಿರ ಕಿಸನೂಗೆ ಕೆಲಸ ಕೊಡಿಸಿಕೊಡಲಿ. ಅವರ ವ್ಯವಹಾರ ದೊಡ್ಡದು; ಐವತ್ತೆಂಟು ಆಳುಕಾಳು ಇದಾರೆ."

ಮಾರನೆಯ ಬೆಳಗ್ಗೆ ಮುನಿಷಿ ಶಿವಲಾಲ ಜ್ವಾಲಾಪ್ರಸಾದನ ಬೈಠಕ್‌ಖಾನೆಗೆ ಬಂದ. ಜ್ವಾಲಾಪ್ರಸಾದ ಆಫೀಸಿನ ಕಾಗದಪತ್ರ ನೋಡುತ್ತಿದ್ದ. ಶಿವಲಾಲ ಸ್ವಲ್ಪ ದೂರದಲ್ಲಿ ಕುಳಿತುಕೊಂಡ. ಜ್ವಾಲಾಪ್ರಸಾದ ತಂದೆ ಬಂದದ್ದನ್ನು ನೋಡಿ ಹೇಳಿದ, "ಏನಪ್ಪಾ, ಏನಾದರೂ ಮಾತಾಡೋದಿತ್ತೆ ? ನೀವೇ ಏಕೆ ಬಂದಿರಿ ? ನನಗೆ ಹೇಳಿಕಳಿಸಿದ್ದರೆ ಆಗಿತ್ತು."

"ಅರೇ, ನಾನೇ ಬಂದರೆ ಏನು ತಪ್ಪಾಯ್ತು ! ಹ್ಞಾ, ಇದನ್ನ ಹೇಳೋಕ್ಕೆ ಬಂದೆ, ಕಿಸನೂಗೆ ಎಲ್ಲಾದರೂ ಏನಾದರೂ ವ್ಯವಸ್ಥೆ ಮಾಡಬೇಕಾಗಿದೆ. ನೀನಂತೂ ಈ ವಿಷಯ ದಲ್ಲಿ ಕೈಕಟ್ಟಿಕೊಂಡು ಕುಳಿತಿದಿ."

"ಕಿಸನೂಗೆ ನಾನೇನು ವ್ಯವಸ್ಥೆ ಮಾಡೋಕ್ಕಾಗುತ್ತೆ, ಚಾಚಾಜಿ ಮಾಡ್ತಾರೆ."

"ರಾಧೇ ಕೈಯಲ್ಲಿ ಏನೂ ಆಗೋಲ್ಲ. ನೀನೇ ಏನಾದರೂ ಮಾಡಬೇಕು, ಅದೂ ಆದಷ್ಟು ಬೇಗ!"

ಜ್ವಾಲಾಪ್ರಸಾದನಿಗೆ ಕಷ್ಟಕ್ಕಿಟ್ಟುಕೊಂಡಿತು, "ಆ ವಿದ್ಯೆಬುದ್ಧಿಯಿಲ್ಲದ ಪೋಲೀಗೆ ಏನು ವ್ಯವಸ್ಥೆ ಮಾಡೋಕ್ಕಾಗುತ್ತೆ, ಹೇಳಿ."

"ಹೌದು, ಆಫೀಸು ಕಚೇರೀಲಿ ಕೆಲಸ ಮಾಡೋ ಅಷ್ಟು ಓದುಬರಹ ಇಲ್ಲ, ನಿಜ. ಆದರೆ ಯಾರಾದರೂ ಜಮೀನುದಾರರ ಹತ್ತಿರ ಗುಮಾಸ್ತಗಿರಿ ಮಾಡಬಲ್ಲ, ಕೋರ್ಟು ಕಚೇರಿಗೆ ಓಡಾಡಬಲ್ಲ."

"ಹೌದು, ಆ ತರಹದ ಕೆಲಸ ಮಾಡಬಲ್ಲನೇನೋ. ಆದರೆ ಇಲ್ಲಿ ಈ ತಹಸೀಲಿನಲ್ಲಿ ಅಂಥ ದೊಡ್ಡ ಜಮೀನುದಾರರು ಯಾರೂ ಇಲ್ಲ."

ಮುನಿಷಿ ಶಿವಲಾಲ ಕ್ಯಾಕರಿಸಿ ಗಂಟಲು ಸರಿಪಡಿಸಿಕೊಳ್ಳುತ್ತ ಹೇಳಿದ, "ನೀನು ತಪ್ಪು ತಿಳಿದುಕೊಳ್ಳದೇ ಇದ್ದರೆ ಒಂದು ಮಾತು ಹೇಳಲೆ? ಮನೆತನದ ಏಳಿಗೆ ಪ್ರಶ್ನೆ ಯಾದ್ದರಿಂದ ಹೇಳ್ತಿದೀನಿ."

"ನನಗೆ ಗೊತ್ತು. ನಿಮ್ಮ ಮಾತನ್ನ ತಪ್ಪು ತಿಳಿಯೋದಾದರೂ ಹೇಗೆ ಸಾಧ್ಯ, ಹೇಳಿ."

ಮುನಿಷಿ ಶಿವಲಾಲ ಮಗನ ಕಡೆಯಿಂದ ಬೇರೆಡೆಗೆ ದೃಷ್ಟಿ ಹೊರಳಿಸಿ ಹೇಳಿದ, "ಘಾಟಮಪುರದ ಲಂಬರ್‌ದಾರಿಣಿ ಜೈದೇಯಿಗೆ, ವಕೀಲರ ಮನೆಗೆ ಓಡಾಡಿಕೊಂಡು ಕೋರ್ಟುಕಟ್ಟಳೆ ಕೆಲಸ ನೋಡಿಕೋಬಹುದಾದ ಒಬ್ಬ ನಂಬಿಕಸ್ಥ ಗುಮಾಸ್ತನ ಅಗತ್ಯ ಇದೆ ಅಂತ ಅನ್ನಿಸುತ್ತೆ. ಅವಳು ನಿನ್ನ ಮಾತಿಗೆ ಇಲ್ಲ ಅನ್ನೋಲ್ಲ. ಕಿಸನೂಗೆ ಅಲ್ಲಿ ಕೆಲಸ ಕೊಡಿಸಿಕೊಡು. ರಾಧೇ, ಭೋಟೀ ಇಬ್ಬರೂ ಅಲ್ಲಿರಲಿ. ಹೆಸರು ಕಿಸನೂ ದಾದರೂ ಕೆಲಸಕಾರ್ಯಾನ ರಾಧೇ ನೋಡ್ಕೋತಾನೆ."

ಈ ಸೂಚನೆಯನ್ನು ಕೇಳಿ ಜ್ವಾಲಾ ಕೊಂಚಹೊತ್ತು ಬುದ್ಧಿ ಕಳೆದವನಂತೆ ತಂದೆ ಯನ್ನೇ ನೋಡುತ್ತ ಕುಳಿತ.

"ಯಾಕೆ? ಏನು ಯೋಚಿಸ್ತಿದಿ?"

"ಅ್ಹ... ಇದನ್ನ ಕೊಂಚ ಹುಷಾರಾಗಿ ಯೋಚಿಸಬೇಕು. ವಿಷಯ ಬಹಳ ಸೂಕ್ಷ್ಮವಾದದ್ದು. ಕಿಸನೂನಂತೂ ನೀವು ಕಂಡೇ ಇದೀರಿ. ಅಲ್ಲಿ ಮನೆಯಲ್ಲಿ ಬರೀ ಹೆಂಗಹೆಂಗಸರೇ ಇರ್ತಾರೆ. ಯಾಕೆ ಅಂದರೆ ಲಕ್ಷ್ಮೀಚಂದ ವರ್ಷದಲ್ಲಿ ತಿಂಗಳು ಎರಡು ತಿಂಗಳು ಮಾತ್ರ ಘಾಟಮಪುರದಲ್ಲಿರೋದು. ಕಿಸನೂನ ಅಲ್ಲಿ ಕಳಿಸೋದು ಸರಿ ಅಂತ ನನಗೆ ತೋರೋಲ್ಲ."

"ಅದಕ್ಕೇ ತಾನೇ ರಾಧೇನೂ ಕಿಸನೂ ಜೊತೆ ಕಳಿಸ್ತಿರೋದು. ರಾಧೇ ಜೊತೆ ಭೋಟಿಯೂ ಇರ್ತಾಳೆ, ಕಿಸನೂ ಮೇಲೆ ತಂದೆತಾಯಿಗಳ ಹತೋಟಿ ಇರುತ್ತೆ. ಈ

ನಡಂವೆ ಅವನ ಮದುವೆಯೂ ಆಗುತ್ತೆ. ಮದಂವೆಯಾದ ಮೇಲೆ ಅವನ ನಡತೆಯೂ ಸುಧಾರಿಸುತ್ತೆ," ಶಿವಲಾಲ ಮೇಲುದನಿಯಲ್ಲಿ ಹೇಳಿದ, "ಹೀಗೆ ಮಾಡೋದು ನಿನ್ನ ಒಳ್ಳೇದಕ್ಕೇಯೇ. ಅದು ನಿನಗೆ ಗೊತ್ತೇ ಇದೆ."

"ಹೌದು, ಗೊತ್ತು," ಜ್ವಾಲಾಪ್ರಸಾದ ತನ್ನ ಪ್ರಾಣ ಉಳಿಸಿಕೊಳ್ಳಲೆಂಬಂತೆ ಉತ್ತರ ಕೊಟ್ಟು ಕಾಗದಪತ್ರಗಳನ್ನು ತಿರುವಿಹಾಕುವುದರಲ್ಲಿ ಮಗ್ನನಾದ. ಮುನಿಷಿ ಶಿವಲಾಲ ಎದ್ದು ಹೊರಬಂದ.

ತಂದೆಯು ಸೂಚನೆಯನ್ನು ಜ್ವಾಲಾಪ್ರಸಾದ ತನ್ನೊಳಗೆ ಅದೆಷ್ಟೋ ತರ್ಕ ಮಾಡಿ ನೋಡಿದ. ಒಂದೊಂದು ದೃಷ್ಟಿಕೋನದಿಂದಲೂ ಅದನ್ನು ಪರೀಕ್ಷಿಸಿದ. ಆದರೆ ಅವನಿಗೆ ಅದಕ್ಕೆ ಯಾವ ಕಡೆಯಿಂದಲೂ ಸಮರ್ಥನೆ ಸಿಗಲಿಲ್ಲ. ಕೊನೆಗೆ ಮುನಿಷಿ ರಾಧೇಲಾಲನಿಗೆ ತಿಳಿಯಹೇಳಿ, ಅವನಿಂದಲೇ ಈ ಸೂಚನೆಯನ್ನು ತಳ್ಳಿಹಾಕಿಸುವುದರಲ್ಲಿ ತನ್ನ ಹಿತವಿದೆಯೆಂದು ಅವನು ನಿರ್ಧರಿಸಿದ. ಈಗ ಅವನು ರಾಧೇಲಾಲ ವಾಪಸು ಬರಂವುದನ್ನೇ ಉತ್ಸುಕತೆಯಿಂದ ಎದುರುನೋಡುತ್ತ ಕುಳಿತ.

ಮೂರು ದಿನಗಳ ಮೇಲೆ ಮುನಿಷಿ ರಾಧೇಲಾಲ ಕಿರಿಯ ಮಗ ಬಿಶನಲಾಲನನ್ನೂ ಕರೆದುಕೊಂಡು ಫತಹಪುರದಿಂದ ವಾಪಸು ಬಂದ. ರಾಧೇಲಾಲ ಸೋರಾವ್ ತಲಪಿದ ದಿನ ಜ್ವಾಲಾಪ್ರಸಾದ ಪ್ರವಾಸದ ಮೇಲೆ ಹೋಗಿದ್ದ. ರಾಧೇಲಾಲ ತುಂಬ ವಿಧೇಯತೆ ಯಿಂದ ಅಣ್ಣನಿಗೆ ನಮಸ್ಕಾರ ಮಾಡಿ, ತಾನು ಫತಹಪುರದ ಮನೆಯಲ್ಲಿ ಮಾಡಿಬಂದಿದ್ದ ವ್ಯವಸ್ಥೆಯೆಲ್ಲವನ್ನೂ ಅವನಿಗೆ ವರದಿಮಾಡಿದ. ಅದರ ಸಾರಾಂಶ ಇಷ್ಟು: "ರಾಮ ಲಾಲ ಉಪಾಧ್ಯಾಯ ವೃತ್ತಿಯಲ್ಲಿ ಭದ್ರವಾಗಿ ಖಾಯಂ ಆಗಿದಾನೆ. ಆದರೆ ಶ್ಯಾಮಲಾಲ ತನ್ನ ಕೈಯಲ್ಲಿ ಆರಂಬ ಮಾಡೋಕೆ ಆಗ್ತಿರಲಿಲ್ಲವಾದ ಕಾರಣ ಎಲ್ಲ ಜಮೀನನ್ನೂ ಗುತ್ತಿಗೆಗೆ ಕೊಟ್ಟುಬಿಟ್ಟಿದಾನೆ. ಈಗ ಒಂದು ಹಳ್ಳಿಯ ಅರ್ಧ ಹಿಸ್ಸೆ ಅನಾಯಾಸವಾಗಿ ಅವನ ಪಾಲಿಗೆ ಬಂದಿದೆ. ಅದರ ಕಥೆ ಹೀಗೆ. ಎರಡು ವರ್ಷದ ಹಿಂದೆ ಶ್ಯಾಮಲಾಲ ಗಫೂರ್‌ಮಿಯ್ನಾನ ವಿಧವೆ ಸಲೀಮಾಳ ಸೇವೆ ಮಾಡಿ ಅವಳ ಒಡೆತನದಲ್ಲಿದ್ದ ರಹೀಮಪುರ ಗ್ರಾಮದ ಎಂಟಾಣೆ ಹಿಸ್ಸೇನ ತನ್ನ ಹೆಸರಿಗೆ ಬರಸಿಕೊಂಡಿದ್ದ; ಅವಳ ಖರ್ಚುವೆಚ್ಚಾನೆಲ್ಲಾ ತಾನೇ ನೋಡಿಕೊಂಡು ಹೋಗ್ತಿದ್ದ. ಸ್ವಲ್ಪ ದಿನದ ಹಿಂದೆ ಗಫೂರ್‌ಮಿಯ್ನಾನ ಅಳಿಯ ರಹಮತ್‌ಖಾನ್ ಶ್ಯಾಮಲಾಲನ ಮೇಲೆ ದಾವಾ ಹಾಕಿದಾನೆ. ಕೇಸು ಡಿಪ್ಟಿ ಸಾಹೇಬರ ಕೋರ್ಟಿನಿಂದ ಸಿವಿಲ್ ಕೋರ್ಟಿಗೆ ಹೋಗಿದೆ. ಅಲ್ಲಿ ಪಂಡಿತ ಗಿರಿಜಾಶಂಕರ ಮಿಶ್ರರು ಸಬ್ ಜಡ್ಜಿ. ಜ್ವಾಲಾಪ್ರಸಾದನಿಗೆ ಅವರು ಚೆನ್ನಾಗಿ ಗುರುತು. ಅವನು ಈ ವಿಷಯದಲ್ಲಿ ಅವರನ್ನ ಕಂಡು ಮಾತಾಡಿ ದರೆ ಕೇಸು ಗೆದ್ದ ಹಾಗೇನೇ. ಹೀಗೆ ರಹೀಮಪುರ ಗ್ರಾಮದ ಎಂಟಾಣೆ ಹಿಸ್ಸೆ ಮನೆತನಕ್ಕೆ ಸೇರುತ್ತೆ. ಉಳಿದ ಎಂಟಾಣೆ ಹಿಸ್ಸೆ ಕಯೂಮ್‌ಮಿಯ್ನಾನ ಪಾಲಿಗೆ ಸೇರಿದ್ದು, ಅದನ್ನ ಅಗ್ಗದಲ್ಲಿ ಕೊಂಡುಕೊಳ್ಳಬಹುದು. ಯಾಕೆ ಅಂದರೆ ಅವನಿಗೆ

ಮಕ್ಕಳು ಮರಿ ಇಲ್ಲ. ಅವನು ಜಮೀನು ಮಾರಿ ಹಜ್ ಯಾತ್ರೆಗೆ ಹೋಗಬೇಕು ಅಂತಿದಾನೆ."

ಮುನಿಷಿ ಶಿವಲಾಲ ನಡುವೆ ಬಾಯಿಹಾಕಿದ, "ಆದರೆ ಹಣ ಎಲ್ಲಿದೆ? ಕಯಾಮ್ ಮಿಯ್ಯಾ ತನ್ನ ಹಿಸ್ಸೇಗೆ ಎಷ್ಟು ಕೇಳ್ತಿದಾನೆ?"

"ಎಂಟು ಸಾವಿರಕ್ಕೆ ಕ್ರಯಪತ್ರ ಮಾಡಿಕೊಡ್ತಾನೆ. ಕ್ರಯವಾದಾಗ ನಾಲ್ಕು ಸಾವಿರ ಬೇಕಂತೆ. ಉಳಿದ ನಾಲ್ಕು ಸಾವಿರಾನ ಮೂರು ವರ್ಷದಲ್ಲಿ ತೀರಿಸಬಹುದಂ. ಅವನು ಇದಕ್ಕೆ ಒಪ್ಪಿಕೊಂಡಿದಾನೆ."

"ಆ ನಾಲ್ಕು ಸಾವಿರ ರೂಪಾಯಿ ಎಲ್ಲಿಂದ ಬರುತ್ತೆ?" ಶಿವಲಾಲ ಕೇಳಿದ.

ಉತ್ತರ ಬಾರದುದನ್ನು ನೋಡಿ ಶಿವಲಾಲ ಮತ್ತೆ ಅದೇ ಪ್ರಶ್ನೆ ಕೇಳಿದ, "ಆ ನಾಲ್ಕು ಸಾವಿರ ರೂಪಾಯಿ . . . ಎಲ್ಲಿಂದ ಬರುತ್ತೆ ಅಂದೆ?"

"ಅ್ಣ . . . ಅ್ಣ," ರಾಧೇಲಾಲ ಹಿಂಜರಿಯುತ್ತ ಹೇಳಿದ, "ಒಂದು ಸಾವಿರ ರೂಪಾಯಿಯನ್ನ ನಾನು ಜತೆಮಾಡ್ತೀನಿ; ಒಂದು ಸಾವಿರ ರೂಪಾಯಿನಷ್ಟು ಫತಹಪುರ ದಲ್ಲಿ ನಮಗೆ ಸಾಲ ಸಿಕ್ಕೇ ಸಿಗುತ್ತೆ. ಉಳಿದ ಎರಡು ಸಾವಿರ ರೂಪಾಯಿ ಜ್ವಾಲಾ ವ್ಯವಸ್ಥೆ ಮಾಡಬೇಕಾಗುತ್ತೆ. ಬರಿಯ ಎರಡು ಸಾವಿರ ರೂಪಾಯಿನ ಮಾತಂ. ಜಮೀನು ಜ್ವಾಲನ ಹೆಸರಿನಲ್ಲಿರುತ್ತೆ."

"ಆಮೇಲೆ ಗಫೂರ್‌ಮಿಯ್ಯನ ಹಿಸ್ಸೆ! ಅದರ ಕಟ್ಟಳೆ ಖರ್ಚು, ವಗೈರೆ?"

"ಶ್ಯಾಮು ಆ ಹಿಸ್ಸೇನೂ ಜ್ವಾಲನ ಹೆಸರಿಗೇ ಬರೀತಾನೆ. ಇಡೀ ರಹೀಮಪುರ ಗ್ರಾಮದ ಕಾಗದಪತ್ರ ಜ್ವಾಲನ ಹೆಸರಿಗೆ ಆಗುತ್ತೆ. ಜ್ವಾಲನ ಜಮೀನಿನ ವಿಷಯ ಅಂದಮೇಲೆ ಜಡ್ಜಿ ಪಡಿಂತ ಗಿರಿಜಾಶಂಕರರು ತಮ್ಮ ತೀರ್ಪನ್ನ ನಮ್ಮ ಪರವಾಗಿಯೇ ಕೊಡ್ತಾರೆ."

ಮುನಿಷಿ ಶಿವಲಾಲನಿಗೆ ಈ ಸೂಚನೆ ಹಿಡಿಸಿತು. "ಜ್ವಾಲಾ ಬರಲಿ. ಅವನ ಜೊತೆ ಮಾತಾಡ್ತೀನಿ. ಅವನ ಹತ್ತಿರ ಹಣ ಇಲ್ಲದೆ ಹೋದರೆ ಎಲ್ಲಿಂದಾದರೂ ಸಾಲ ತರ್‍ತಾನೆ. ಆದರೆ ಎರಡು ಸಾವಿರ ರೂಪಾಯಿಗೆ ನೀನು ವ್ಯವಸ್ಥೆ ಮಾಡಬೇಕು. ಆಗುತ್ತೆ ತಾನೆ?"

"ಒಂದು ಸಾವಿರ ರೂಪಾಯಿನ ಜವಾಬ್ದಾರಿ ನನ್ನದು. ಅದನ್ನ ಒಂದು ವಾರದಲ್ಲಿ ಜೊತೆ ಮಾಡ್ತೀನಿ. ಇನ್ನೊಂದು ಸಾವಿರಕ್ಕೆ ಲಾಲಾ ರಾಮಕಿಶೋರನ ಹತ್ತಿರ ಮಾತಾಡಿ ದೀನಿ. ಅವನು ಒಪ್ಪಿಕೊಂಡಿದಾನೆ. ತಹಸೀಲದಾರರ ಮನೆತನದ್ದು ಒಂದು ಮರ್ಯಾದೆ ಇರುತ್ತೆ, ಅಣ್ಣ!"

"ಹೌದು, ತಹಸೀಲದಾರರ ಮನೆತನದ್ದು ಒಂದು ಮರ್ಯಾದೆ ಇರುತ್ತೆ!" ಮುನಿಷಿ ಶಿವಲಾಲ ಸಂತೋಷದಿಂದ ರಾಧೇಲಾಲ ಆಡಿದ ಮಾತನ್ನೇ ಮತ್ತೆ ಹೇಳಿದ. "ತಹಸೀಲ ದಾರರ ಮನೆತನಕ್ಕೆ ಆಸ್ತಿಪಾಸ್ತಿ ಇರಬೇಕು. ನೀನು ಹೇಳೋದು ಸರಿ, ರಾಧೆ! ನಾನು ಒಂದಲ್ಲ ಒಂದು ರೀತೀಲಿ ಈ ಎರಡು ಸಾವಿರಕ್ಕೆ ವ್ಯವಸ್ಥೆ ಮಾಡ್ತೀನಿ."

# ಹತ್ತು

"ಮುಂದೆ ಏನು ಮಾಡಬೇಕು ಅಂತ ಇಷ್ಟ ಇದೆ?" ಜ್ವಾಲಾಪ್ರಸಾದ ಬಿಶನಲಾಲ ನನ್ನು ಕೇಳಿದ.

"ನನ್ನ ಇಷ್ಟ ಏನು ಬಂತು? ನೀನು ಹೇಳಿದ ಹಾಗೆ ಮಾಡ್ತೀನಿ. ಆದರೆ ಒಂದು ಮಾತು ಹೇಳಿಬಿಡೋದು ಒಳ್ಳೇದು. ನನ್ನಿಂದ ನೌಕರಿ ಮಾಡೋದಾಗೋದಿಲ್ಲ."

"ಹಾಗಾದರೆ ಬೇಸಾಯ ಏಕೆ ಮಾಡಬಾರದು?" ಜ್ವಾಲಾಪ್ರಸಾದ ಕೇಳಿದ.

ಜ್ವಾಲಾಪ್ರಸಾದನ ಈ ಪ್ರಶ್ನೆಗೆ ಬಿಶನಲಾಲ ಏನೂ ಉತ್ತರ ಕೊಡಲಿಲ್ಲ. ಬಿಶನ ಲಾಲ ಕಿಶನಲಾಲನಿಗಿಂತ ಎರಡು ವರ್ಷ ಕಿರಿಯವನು. ಬಿಶನಲಾಲನಲ್ಲಿ ಯಾವ ದುರ್ಗುಣಗಳೂ ಇರಲಿಲ್ಲ. ಓದುಬರೆಹದಲ್ಲಿ ಸಹ ಅವನು ಅಷ್ಟೇನೂ ಹಾಳಿರಲಿಲ್ಲ. ವರ್ಷದ ಹಿಂದೆ ಅವನು ಮಿಡಲ್ ಪರೀಕ್ಷೆ ಪಾಸುಮಾಡಿದ್ದ. ಆದರೆ ಅವನದು ಕೊಂಚ ಹಟದ ಸ್ವಭಾವ. ಇನ್ನೊಬ್ಬರಿಗೆ ಬಗ್ಗುವುದು, ಕುಗ್ಗುವುದೆಂದರೆ ಅವನಿಂದಾಗುತ್ತಿರಲಿಲ್ಲ. ಆದ್ದರಿಂದ ತಾನು ನೌಕರಿ ಮಾಡಲು ಯೋಗ್ಯನಲ್ಲವೆಂದು ಅವನು ತಿಳಿದಿದ್ದ. ಕಸರತ್ತು ಮಾಡಿದ ಕಟ್ಟುಮಸ್ತು ದೇಹದ, ಸುಮಾರು ಎತ್ತರದ ಯುವಕ ಅವನು; ಭಾವಹೀನ ವಾದ ಮುಖ, ಬೂದುಬಣ್ಣದ ಕಣ್ಣುಗಳು—ಬಿಶನಲಾಲನನ್ನು ಸುಂದರನೆನ್ನಲಾಗ ದಿದ್ದರೂ ಕುರೂಪಿಯೆನ್ನುವಂತಿರಲಿಲ್ಲ. ಅವನು ಒಂದೇಸಮನೆ ನೆಟ್ಟನೋಟದಿಂದ ಜ್ವಾಲಾಪ್ರಸಾದನನ್ನೇ ನೋಡುತ್ತಿದ್ದ.

ಜ್ವಾಲಾಪ್ರಸಾದ ಸಿಟ್ಟಿನಿಂದ ಮತ್ತೆ ಕೇಳಿದ, "ನೀನು ಬೇಸಾಯ ಯಾಕೆ ಮಾಡ ಬಾರದು ಅಂತ ಕೇಳ್ತಿದೀನಿ?"

"ಬೇಸಾಯ ಮಾಡ್ತಿದ್ದೆ, ಆದರೆ ಶ್ಯಾಮೂ ಅಣ್ಣ ಬೇಡ ಅಂದುಬಿಟ್ಟ. ಆಣೆ ಇಟ್ಟು ಹೇಳ್ತೀನಿ, ಅದರಲ್ಲಿ ನನ್ನದೇನೂ ತಪ್ಪಿಲ್ಲ. ಅವನು ಎರಡು ಎಮ್ಮೆ ಸಾಕಿದ್ದ, ಹದಿನಾರು ಸೇರು ಹಾಲು ಕರೀತಿತ್ತು. ಅಲ್ಲಿ ಹಳ್ಳೀಲಿ ಹಾಲು ಎಲ್ಲಿ ಖರ್ಚಾಗಬೇಕು! ನಾನು ಹಾಲನ್ನ ಎಲ್ಲರಿಗೂ ಹಂಚಿಬಿಡ್ತಿದ್ದೆ. ಅದಕ್ಕೆ ಶ್ಯಾಮೂ ಅಣ್ಣ ಕೋಪಿಸಿಕೊಂಡ. ಹಾಲು ಕೂಡಿಹಾಕಿ ಮೊಸರು ಮಾಡು, ಮೊಸರು ಕಡೆದು ಬೆಣ್ಣೆ ತೆಗಿ, ಬೆಣ್ಣೆ ಕರಗಿಸಿ ತುಪ್ಪ ಮಾಡು ಅಂತ ಅಂದ."

"ಅಂದರೆ ಶ್ಯಾಮೂ ಹೇಳಬಾರದ್ದನ್ನ ಏನಾದರೂ ಹೇಳಿದನೆ?" ಜ್ವಾಲಾಪ್ರಸಾದ ಕೇಳಿದ.

"ಹೇಳಬಾರದ್ದು ಏನನ್ನೂ ಹೇಳಲಿಲ್ಲ. ಆದರೆ ನಾನು ತೋಟದ ಹತ್ತಿರ ಒಂದು ಗರಡಿಮನೆ ಮಾಡಿಸಿದ್ದೆ. ಜಗ್ಗೂ ಪೈಲ್ವಾನನನ್ನ ನಮ್ಮ ಉಸ್ತಾದು ಅಂತ ಮಾಡಿ ಬಲು ಕಷ್ಟದಿಂದ ಅವನನ್ನ ಒಪ್ಪಿಸಿ ಅಲ್ಲಿಗೆ ಕರಸಿದ್ದೆ. ಅವನ ಷಾಗಿರ್ದಿನವರೂ ಎಲ್ಲಾ ಅಲ್ಲಿ

ಸೇರೋರು. ಹಾಲುತುಪ್ಪವೆಲ್ಲಾ ಅಲ್ಲೇ ಖರ್ಚಾಗಿ ಹೋಗ್ತಿತ್ತು. ಶ್ಯಾಮೂ ಅಣ್ಣ ರೇಗಿ ಗರಡಿಮನೇನ ಕೆಡವಿ ನೆಲಸಮ ಮಾಡಿದ. ಜಗ್ಗೂ ಪೈಲ್ವಾನನನ್ನೂ ಅವನ ಷಾಗಿರ್ದಿನವರನ್ನೂ ಅಲ್ಲಿಂದ ಓಡಿಸಿಬಿಟ್ಟ, ನನ್ನನ್ನೂ ಹೊರಗೆ ಹಾಕಿದ. ನಾನು ಇನ್ನು ಮೇಲೆ ಬೇಸಾಯ ಮಾಡೋಲ್ಲ ಅಂತ ಪ್ರಮಾಣ ಮಾಡಿದೀನಿ, ಅದರಲ್ಲೂ ಶ್ಯಾಮೂ ಅಣ್ಣನ ಕೈಕೆಳಗೆ. ಎಲ್ಲರೂ ನನ್ನನ್ನ ಗೇಲಿಮಾಡ್ತಾರೆ. ತಾನು ಹೇಳಿಕೊಟ್ಟ ಪಟ್ಟೆಲ್ಲಾ ಮರೆತುಹೋಗಲಿ ಅಂತ ಜಗ್ಗೂ ಉಸ್ತಾದ ಶಾಪ ಹಾಕಿದಾನೆ."

ಬಿಶನಲಾಲನ ಮಾತನ್ನು ಕೇಳಿ ಜ್ವಾಲಾಪ್ರಸಾದನಿಗೆ ಒಂದು ಕಡೆ ನಗು, ಇನ್ನೊಂದು ಕಡೆ ಕೋಪ. ಅಷ್ಟರಲ್ಲಿ ಮುನಿಷಿ ಶಿವಲಾಲ ಜ್ವಾಲಾಪ್ರಸಾದನ ಬೈಠಕ್‌ಖಾನೆ ಯೊಳಗೆ ಬಂದ. ಶಿವಲಾಲನ ಹಿಂದೆ ರಾಧೇಲಾಲನೂ ಇದ್ದ, ತನ್ನ ಸ್ವಾಭಾವಿಕವಾದ ಕುಟಿಲನಗೆಯೊಂದಿಗೆ.

ಜ್ವಾಲಾಪ್ರಸಾದ ಎದ್ದು ತಂದೆಯನ್ನೂ ಚಿಕ್ಕಪ್ಪನನ್ನೂ ಸ್ವಾಗತಿಸಿದ. "ಕೇಳಿದೆಯಾ, ಜ್ವಾಲಾ," ಮುನಿಷಿ ಶಿವಲಾಲ ಮಾತಿಗೆ ಆರಂಭಿಸಿದ, "ರಾಧೇ ಒಂದು ಯೋಜನೆ ಹಾಕಿಕೊಂಡು ಬಂದಿದಾನೆ. ನೀನೂ ಅದನ್ನ ಕೇಳು. ನನಗೆ ಅದರಲ್ಲಿ ತಪ್ಪೇನೂ ಕಾಣಲಿಲ್ಲ. ಅಷ್ಟೇ ಅಲ್ಲ, ಅದು ಆಯಿತು ಅಂದರೆ ತುಂಬಾ ಒಳ್ಳೇದೇ ಅಂತ ಹೇಳೋಕ್ಕೂ ನಾನು ತಯಾರು!"

ಎಲ್ಲರೂ ಕುಳಿತುಕೊಂಡರು. ಜ್ವಾಲಾಪ್ರಸಾದ ರಾಧೇಲಾಲನ ಕಡೆ ಪ್ರಶ್ನಾರ್ಥಕ ದೃಷ್ಟಿ ಬೀರಿದ.

ರಾಧೇಲಾಲ ಗಂಟಲು ಸರಿಪಡಿಸಿಕೊಳ್ಳುತ್ತ ಹೇಳಿದ, "ವಿಷಯ ಏನು ಅಂದರೆ ಫತಹಪುರದ ಹತ್ತಿರ ರಹೀಮಪುರ ಗ್ರಾಮವಿದೆಯಲ್ಲ, ಅದರ ಎಂಟಾಣೆ ಹಿಸ್ಸೇನ, ಅರ್ಥಾತ್ ಅರ್ಧ ಗ್ರಾಮಾನ, ಗಫೂರ್‌ಮಿಯ್ಯನ ವಿಧವೆ ಹೆಂಡತಿಯಿಂದ ಶ್ಯಾಮೂ ಕೊಂಡುಕೊಂಡಿದಾನೆ. ಶ್ಯಾಮೂ ಹೆಸರಿನಲ್ಲಿ ಕ್ರಯಪತ್ರವಾಗಿದೆ. ಅವನು ಅದನ್ನ ತನ್ನ ವಶಕ್ಕೂ ತೊಗೊಂಡುಬಿಟ್ಟಿದ್ದಾನೆ."

ಬಿಶನಲಾಲ ನಡುವೆ ಬಾಯಿಹಾಕಿದ, "ಜ್ವಾಲಣ್ಣ, ಇದೆಲ್ಲಾ ಬರೀ ಮೋಸ. ಸಲೀಮಾಚಾಚಿಗೆ ಅಫೀಮು ತಿನ್ನಿಸಿ ತಿನ್ನಿಸಿ, ಶ್ಯಾಮೂ ಅಣ್ಣ ಅವಳ ಹೆಬ್ಬೆಟ್ಟಿನ ಗುರುತನ್ನ ಖಾಲಿ ಸ್ಟಾಂಪು ಕಾಗದದ ಮೇಲೆ ಒತ್ತಿಸಿಕೊಂಡು, ಅವಳು ಆಸ್ತೀನ ತನ್ನ ಹೆಸರಿಗೆ ದಾನ ಮಾಡಿದ ಹಾಗೆ ಬರಕೊಂಡು ಬಿಟ್ಟ. ಅದಕ್ಕೆ ರಹಮತ್‌ಖಾನ್ ಶ್ಯಾಮೂ ಅಣ್ಣನ ಮೇಲೆ ದಾವಾ ಹಾಕಿದಾನೆ. ಕೇಸು ನಡೀತಿದೆ."

"ಏನು ತಲಾತರಟಿ ಹರಟ್ತೀಯೋ?" ಮುನಿಷಿ ರಾಧೇಲಾಲ ಮಗನನ್ನು ಗದರಿಸಿ ಕೊಂಡು ಜ್ವಾಲಾಪ್ರಸಾದನಿಗೆ ಹೇಳಿದ, "ಈ ಬಿಶನುವಂತೂ ಶ್ಯಾಮೂಗೆ ಬದ್ಧವೈರಿ ಯಾಗಿದಾನೆ. ಅದಕ್ಕೋಸ್ಕರವೇ ಇವನನ್ನ ನನ್ನ ಜೊತೆ ಕರಕೊಂಡು ಬಂದದ್ದು. ಇವನು ಪೂರ್ತಿ ಜಗ್ಗೂ ಪೈಲ್ವಾನ್ ಹೇಳಿದ ಹಾಗೆ ಕುಣೀತಾನೆ. ಜಗ್ಗೂ ಪೈಲ್ವಾನ್

ರಹಮತ್‌ಖಾನನ ಸೋದರತ್ತೆಯ ಗಂಡ." ಮತ್ತೆ ಬಿಶನಲಾಲನ ಕಡೆ ತಿರುಗಿ, "ಈ ವಿಷಯದಲ್ಲಿ ನಿನ್ನ ಬಾಯಿಂದ ಇನ್ನೊಂದು ಮಾತು ಬಂದರೆ ನೋಡು, ಹುಷಾರ್!" ಅಂದ.

"ಬಿಶನೂ, ಹಾಗೆಲ್ಲಾ ಇನ್ನೊಬ್ಬರ ಮಾತಿನ ಮಧ್ಯೆ ಬರಬಾರದು," ಜ್ವಾಲಾಪ್ರಸಾದ ತಮ್ಮನಿಗೆ ಬುದ್ಧಿ ಹೇಳಿ, ಮತ್ತೆ ಚಿಕ್ಕಪ್ಪನ ಕಡೆ ತಿರುಗಿ, "ಹ್ಞಾ, ಚಾಚಾಜಿ, ಮುಂದೆ ಹೇಳಿ. ರಹಮತ್‌ಖಾನ್ ಶ್ಯಾಮೂನ ಮೇಲೆ ದಾವಾ ಹಾಕಿದಾನೆ! ಅದು ಏನಾಯ್ತು?" ಎಂದು ಕೇಳಿದ.

"ಅರೇ, ಆ ದಾವದಿಂದ ಏನಾಗುತ್ತೆ? ಸಿವಿಲ್ ಕೇಸು, ಹುಡುಗಾಟವಲ್ಲ! ಆಸ್ತಿ ಶ್ಯಾಮೂನ ವಶದಲ್ಲಿದೆ, ಕೇಸು ನಡೀಲಿ! ವರ್ಷಗಟ್ಟಳೆ ನಡೆಯುತ್ತೆ, ಹೈಕೋರ್ಟು, ಪ್ರೀವಿ ಕೌನ್ಸಿಲ್ಲು ಅಂತ. ಆ ಪಟವಾರಿ ಝುಮ್ಮನಲಾಲ ಇದಾನಲ್ಲ, ಅವನು ನಮ್ಮ ದೂರದ ನಂಟ. ಅವನು ನಮ್ಮ ಪರವಾಗಿದಾನೆ. ನಮ್ಮ ಕಾಗದಪತ್ರಗಳೆಲ್ಲಾ ಪಕ್ಕಾಗಿವೆ. ರಹಮತ್‌ಖಾನ್ ಇರೋದು ಅಲಹಾಬಾದ್ ಜಿಲ್ಲೆಯ ಮವೂಆಯಿಮಾ ದಲ್ಲಿ. ಕಾಳುಕಾಳಿಗೆ ಬಡತನ. ಏನು ಸಾಮರ್ಥ್ಯ ಇದೆ ಅಂತ ಮೊಕದ್ದಮೆ ಕಾಯ್ತಾನೆ, ಹೇಳು!"

"ಮೊಕದ್ದಮೆ ಸಬ್ ಜಡ್ಜಿ ಪಂಡಿತ ಗಿರಿಜಾಶಂಕರರ ಕೋರ್ಟಿನಲ್ಲಿದೆ!" ಮುನಿಷಿ ಶಿವಲಾಲ ಹೇಳಿದ.

ಮುನಿಷಿ ಶಿವಲಾಲನ ಸಂಕೇತ ಜ್ವಾಲಾಪ್ರಸಾದನಿಗೆ ಅರ್ಥವಾಗದೇ ಇರಲಿಲ್ಲ. ಆದರೆ ಅವನು ಆ ಮಾತನ್ನು ತನ್ನ ಮೌನದಿಂದಲೇ ತಳ್ಳಿಹಾಕಿ ಚಿಕ್ಕಪ್ಪನಿಗೆ ಹೇಳಿದ, "ಹ್ಞಾ, ಚಾಚಾ, ಮುಂದಿನ ಕಥೆ ಏನು?"

"ಅದೇ ಹೇಳ್ತಿದೀನಿ. ರಹೀಮಪುರದ ಗ್ರಾಮದ ಅರ್ಧ ಹಿಸ್ಸೆ ನಮ್ಮ ಹೆಸರಿಗಾಯಿತು. ಇನ್ನು ಉಳಿದಿರೋದು ಅರ್ಧ. ಕಯೂಮ್‌ಮಿಯ್ಞಾ ಹಜ್ ಯಾತ್ರೇಗೆ ಹೊರಟಿ ದಾನೆ. ತನ್ನ ಹಿಸ್ಸೇನ ಮಾರಬೇಕು ಅಂತಿದಾನೆ. ಬಲು ಅಗ್ಗದಲ್ಲಿ ಕೊಡೋಕೆ ಸಿದ್ಧ ನಿದಾನೆ—ಅಂದರೆ ನಾಲ್ಕು ಸಾವಿರ ರೂಪಾಯಿ ನಗದು, ಉಳಿದ ನಾಲ್ಕು ಸಾವಿರ ರೂಪಾಯಿ ಮೂರು ವರ್ಷದಲ್ಲಿ ಕೊಡೋ ಹಾಗೆ. ಅದರಲ್ಲಿ ಎರಡು ಸಾವಿರ ರೂಪಾಯಿ ನಾನು ಫತಹಪುರದಲ್ಲಿ ವ್ಯವಸ್ಥೆ ಮಾಡ್ತೀನಿ. ಉಳಿದ ಎರಡು ಸಾವಿರ ರೂಪಾಯಿಯನ್ನ ನೀನು ಹೊಂದಿಸು. ಈ ಅರ್ಧ ಹಿಸ್ಸೇನ ನಿನ್ನ ಹೆಸರಿನಲ್ಲಿ ಕೊಂಡುಕೊಳ್ಳೋಣ. ಶ್ಯಾಮೂ ತನ್ನ ಅರ್ಧ ಹಿಸ್ಸೇನೂ ನಿನ್ನ ಹೆಸರಿಗೇ ಬರೀತಾನೆ. ಇಡೀ ರಹೀಮಪುರ ಗ್ರಾಮ ನಿನ್ನ ಹೆಸರಿಗಾಗುತ್ತೆ."

ಬಿಶನುವಿಗೆ ಈಗ ತಡೆಯಲಾಗಲಿಲ್ಲ. ಅವನು ನಗಲಾರಂಭಿಸಿದ, "ಹ್ಞಾ, ಜ್ವಾಲಣ್ಣ. ಶ್ಯಾಮೂಅಣ್ಣನ ಈ ವಂಚನೇಲಿ ನೀನೂ ಸೇರಿಕೊಂಡರೆ ತುಂಬ ಮಜ

ವಾಗಿರುತ್ತೆ. ನಿನಗೆ ಹೆಸರಿದೆ, ಪ್ರಭಾವ ಇದೆ. ನಿನ್ನ ವಿರುದ್ಧ ಮಾತಾಡೋಕ್ಕೆ ಯಾರಿಗೆ ತಾನೇ ಧೈರ್ಯ ಬರುತ್ತೆ!"

ರಾಧೇಲಾಲ ಎದ್ದು ಮಗನ ಕಿವಿ ಹಿಂಡುತ್ತ ಹೇಳಿದ, "ಯಾಕೋ ಸೂಳೇಮಗನೇ, ಮತ್ತೆ ಬಾಯಿ ತೆಗೆದೆ! ಇವನಂತೂ ಶ್ಯಾಮೂಗೆ ಪ್ರಾಣಶತ್ರು ಆಗಿದಾನೆ. ಪೋಕರಿ, ಮೈಗಳ್ಳ, ಹರಾಮಖೋರ, ನಡೀ ಇಲ್ಲಿಂದ!"

ಬಿಶನಲಾಲ ಮಾತನಾಡದೆ ಕೋಣೆಯಿಂದ ಕಾಲ್ತೆಗೆದ.

ಜ್ವಾಲಾಪ್ರಸಾದ ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಆಮೇಲೆ ನಿರ್ಧಾರಕ್ಕೆ ಬಂದವನಂತೆ ಹೇಳಿದ, "ನನ್ನ ಕೈಲಿ ಈ ಎರಡು ಸಾವಿರ ರೂಪಾಯಿ ಹೊಂದಿಸೋಕ್ಕೆ ಆಗೋಲ್ಲ. ಬೇರೆ ಯಾರಿಗಾದರೂ ಮಾರಿಬಿಡು ಅಂತ ಕಯಾಮ್‌ಮಿಯ್ಯಾಗೆ ಹೇಳಿ."

ಮುನಿಷಿ ಶಿವಲಾಲ ಜ್ವಾಲಾಪ್ರಸಾದನನ್ನು ಬಿರುಸಾಗಿ ನೋಡಿದ, "ಇಲ್ಲ, ಬರ್‍ತಿರೋ ಆಸ್ತೀನ ಬೇಡ ಅನ್ನಬಾರದು. ನಿಮ್ಮ ಮಾವ ಮುನಿಷಿ ರಾಮಸಹಾಯನಿಗೆ ನಾನು ಕಾಗದ ಬರೀತೀನಿ. ಅವನು ಸುಲಭವಾಗಿ ಎರಡು ಸಾವಿರ ರೂಪಾಯಿ ಕೊಡ್ತಾನೆ," ಎಂದವನೇ ರಾಧೇಲಾಲನ ಕಡೆ ತಿರುಗಿ. "ನೀನು ಶ್ಯಾಮೂ ಹಿಸ್ಸೆಯ ಕಾಗದಪತ್ರಾನ ಜ್ವಾಲನ ಹೆಸರಿಗೆ ಮಾಡಿಸಿಬಿಡು" ಎಂದು ಹೇಳಿದ.

ಜ್ವಾಲಾಪ್ರಸಾದ ಈಗ ಕಟ್ಟುನಿಟ್ಟಾಗಿ ಹೇಳಬೇಕಾಯಿತು, "ಅಪ್ಪಾ, ನನಗೆ ಈ ಶ್ಯಾಮೂನ ಆಸ್ತಿ ಬೇಕಾಗಿಲ್ಲ. ಏನೇ ಆಗಲಿ, ಬೇಕಾಗಿಲ್ಲ. ಸಲೀಮಾಚಾಚಿ ಅದನ್ನ ಶ್ಯಾಮೂಗೆ ಕೊಟ್ಟಿರೋದಾದರೆ ಅದು ಶ್ಯಾಮೂದು."

"ನಿನ್ನ ಹೆಸರೂ ಒಂದೇ, ಶ್ಯಾಮೂ ಹೆಸರೂ ಒಂದೇ," ರಾಧೇಲಾಲ ಹೇಳಿದ. ಅವಿಭಕ್ತ ಕುಟುಂಬದಲ್ಲಿ ಯಾವದೇ ಆಸ್ತಿಯಾಗಲಿ, ಅದರಲ್ಲಿ ಅಣ್ಣತಮ್ಮಂದಿರಿಗೆಲ್ಲಾ ಸಮನಾದ ಪಾಲಿದೆ."

"ಅದು ನನಗೂ ಗೊತ್ತು. ಆದರೆ ರಹೀಮಪುರ ಗ್ರಾಮದ ಅರ್ಧ ಹಿಸ್ಸೆ ಶ್ಯಾಮೂನ ಹೆಸರಿನಲ್ಲಿದ್ದರೇ ಒಳ್ಳೇದು. ಹೇಗಿದ್ದರೂ ಫತಹಪುರದ ಜಮೀನೆಲ್ಲಾ ಅವನ ಹೆಸರಿನಲ್ಲೇ ಇದೆ ಅಲ್ಲವೇ. ಇದರಲ್ಲಿ ನೀವು ನನ್ನನ್ನ ಯಾಕೆ ಎಳೀತೀರಿ?" ಜ್ವಾಲಾಪ್ರಸಾದ ಕೇಳಿದ.

ರಾಧೇಲಾಲ ಅಳುಕುತ್ತ ಅಳುಕುತ್ತ ಹೇಳಿದ, "ವಿಷಯ ಹೀಗಿದೆ, ಜ್ವಾಲಾ. ನೀನು ಸ್ವಲ್ಪ ಅರ್ಥಮಾಡಿಕೊ... ಸಲೀಮಾಳೂ ಈಗ ತನ್ನ ಅಳಿಯನ ಜೊತೆ ಒಂದಾಗಿದಾಳೆ. ತಾನು ಅಫೀಮಿನ ಅಮಲಿನಲ್ಲಿದ್ದಾಗ ಮೋಸದಿಂದ ಆ ಹಿಸ್ಸೇನ ಶ್ಯಾಮೂನ ಹೆಸರಿಗೆ ಬರಸಿಕೊಂಡರು ಅಂತ ಹೇಳ್ತಿದಾಳೆ."

"ಅಂದರೆ ಬಿಶನು ಹೇಳ್ತಿದ್ದದ್ದು ತಪ್ಪಲ್ಲ ತಾನೇ! ಈ ಮೋಸದಲ್ಲಿ ನೀವುಗಳು ನನ್ನನ್ನೂ ಸಾಮಿಲ್ ಮಾಡಿಕೋಬೇಕು ಅಂತ ಬಯಸಿದೀರಿ. ಹಾಗಂತ ಸ್ಪಷ್ಟವಾಗಿ ಯಾಕೆ ಹೇಳಲಿಲ್ಲ?" ಈಗ ಜ್ವಾಲಾಪ್ರಸಾದನ ಪೌರುಷ ಜಾಗ್ರತವಾಯಿತು. "ಇಷ್ಟನ್ನ

ಚೆನ್ನಾಗಿ ತಿಳಕೊಳ್ಳಿ. ಏನೇ ಆಗಲಿ, ಈ ವಿಷಯದಲ್ಲಿ ನನ್ನ ಹೆಸರು ಬರೋದಕ್ಕೆ ಆಸ್ಪದ ಕೊಡೋಲ್ಲ. ಇದು ನನ್ನ ಮರ್ಯಾದೆಯ ಪ್ರಶ್ನೆ."

ಜ್ವಾಲಾಪ್ರಸಾದನ ಈ ದೃಢತೆಯನ್ನು ಕಂಡು ಮುನಿಷಿ ಶಿವಲಾಲನಿಗೆ ಮಗ ಹೇಳುತ್ತಿರುವುದು ಸರಿ ಅನ್ನಿಸಿತು. ಅವನು ಹೆಮ್ಮೆಯಿಂದ ಜ್ವಾಲಾಪ್ರಸಾದನನ್ನು ನೋಡಿದ, "ಹೌದು, ರಾಧೇ. ಜ್ವಾಲಾ ಹೇಳೋದು ಸರಿ. ಅವನು ದೊಡ್ಡ ಆಫೀಸರು, ಮರ್ಯಾದಸ್ಥ. ಅವನ ಹೆಸರಿಗೆ ಕಳಂಕ ಹಚ್ಚಬಾರದು. ಮೊಕದ್ದಮೇಲಿ ಶ್ಯಾಮೂ ಗೆದ್ದ ಮೇಲೆ ಆ ಆಸ್ತೀನ ಜ್ವಾಲನ ಹೆಸರಿಗೆ ಬರೆದರಾಯಿತು. ಈಗಲೇ ಬರೆಯೋದು ತಪ್ಪಾಗುತ್ತೆ. ಈಗ ನೀನು ಪಟ್ಟುಹಿಡಿದು ಮೊಕದ್ದಮೆ ಕಾದಬೇಕು."

"ವಿಷಯ ಹೀಗಿದೆ. ಮೊಕದ್ದಮೇಲಿ ಕೊಂಚ ದೋಷ ಇದೆ ಅಂತ ವಕೀಲರು ಹೇಳ್ತಾರೆ. ಆ ಪತ್ರದ ರಿಜಿಸ್ಟ್ರಿ ಮಾಡಿಸೋಕ್ಕಾಗಿಲ್ಲ. ಆದರೆ ಪತ್ರವೇನೋ ಇದೆ. ಶ್ಯಾಮೂ ಆಸ್ತೀನ ವಶಪಡಿಸಿಕೊಂಡದ್ದೂ ಆಗಿದೆ. ಜಡ್ಜಿಸಾಹೇಬರಿಗೆ ಸ್ವಲ್ಪ ಒತ್ತಿ ಹೇಳಿದರೆ ಮೊಕದ್ದಮೆ ಸುಲಭವಾಗುತ್ತೆ." ರಾಧೇಲಾಲ ಈಗ ಜ್ವಾಲಾಪ್ರಸಾದನ ಕಡೆ ತಿರುಗಿ ಹೇಳಿದ, "ಪಂಡಿತ ಗಿರಿಜಾಶಂಕರ್ ನಿನಗೆ ಗುರುತಿದಾರೆ. ಅವರ ಕಚೇರೀಲೇ ಈ ಮೊಕದ್ದಮೆ ನಡೀತಾ ಇರೋದು."

"ಗುರುತಿರಲಿ, ಬಿಡಲಿ, ಈ ಮೊಕದ್ದಮೆ ವಿಷಯವಾಗಿ ಅವರ ಜೊತೆ ಏನು ಮಾತಾಡೋಕ್ಕೂ ನಾನು ಸಿದ್ಧನಿಲ್ಲ" ಎಂದು ಖಡಾಖಂಡಿತವಾಗಿ ಹೇಳಿ ಈ ಅಪ್ರಿಯ ಪ್ರಸಂಗವನ್ನು ಕೊನೆಗಾಣಿಸಲೆಂಬಂತೆ ಜ್ವಾಲಾಪ್ರಸಾದ ಎದ್ದುನಿಂತ, "ಡಿಪ್ಟಿ ಸಾಹೇಬರು ಸರ್ಕೀಟಿನ ಮೇಲೆ ಬಂದಿದಾರೆ. ಬರಹೇಳಿದಾರೆ, ಹೋಗಬೇಕು, ಹೊತ್ತಾಗ್ತಾ ಬಂತು."

ಜ್ವಾಲಾಪ್ರಸಾದನ ಈ ಖಡಾಖಂಡಿತವಾದ ಉತ್ತರ ಮುನಿಷಿ ರಾಧೇಲಾಲನಿಗೆ ಸರಿಕಾಣಲಿಲ್ಲ. ಜ್ವಾಲಾಪ್ರಸಾದ ಹೋದಮೇಲೆ ಶಿವಲಾಲನಿಗೆ ಹೇಳಿದ, "ಅಣ್ಣಾ, ಮನೆತನಕ್ಕೆ ಒಂದಿಷ್ಟು ಆಸ್ತಿಯಾಗಲಿ ಅಂತ ಶ್ಯಾಮೂ ಇಷ್ಟೆಲ್ಲಾ ಮಾಡಿದ. ನೀನು ಜ್ವಾಲನಿಗೆ ತಿಳಿಸಿ ಹೇಳು. ಈ ಅವಕಾಶಾನ ಕಳಕೊಂಡರೆ ಹೋಯಿತು. ಜ್ವಾಲನ ತರಹ ನೋಡಿದರೆ ಅವನು ಆಸ್ತಿಪಾಸ್ತಿ ಮಾಡಿಕೋತಾನೆ, ಹಣ ಕೂಡಿಸಿಕೋತಾನೆ ಅನ್ನೋ ಭರವಸೆಯಿಲ್ಲ. ಅವನೇನೂ ಮಾಡಬೇಕಾಗಿಲ್ಲ, ಮಾಡೋಕೆ ಅವನ ತಮ್ಮ ಇದಾನೆ. ಸಮಯ ಬಂದಾಗ ಇವನು ಮೇಲಿನಿಂದ ಸ್ವಲ್ಪ ಒತ್ತಿದರೆ ಸಾಕು."

ಮುನಿಷಿ ಶಿವಲಾಲ ಸೋತ ಧ್ವನಿಯಲ್ಲಿ ಹೇಳಿದ, "ನೀನು ಹೇಳೋದೇನೋ ಸರಿ, ಆದರೆ ಏನು ಮಾಡೋಕ್ಕಾಗುತ್ತೆ? ಬೆಳೆದ ಮಗ, ಮೇಲೆ ಮನೇಗೆ ಬೆಳಕಾಗಿದಾನೆ. ಅವನಿಗೆ ಗದರಿಸಿ ಹೇಳೋಕ್ಕಂತೂ ಆಗೋಲ್ಲ. ಹ್ಞಾ, ಒಂದು ಮಾತು ನೆನಪಿರಲಿ. ಅವನಿಂದ ಏನಿದ್ದರೂ ಹುಷಾರಾಗಿ ಕೆಲಸ ತೊಗೋಬೇಕು."

"ಓಹೋ, ನನ್ನ ಕಡೆಯಿಂದ ಪೂರ್ತಿ ಹುಷಾರೇ ಅಂತ ತಿಳಿ."

"ನಾನು ಕಿಶನೂ ವಿಷಯ ಯೋಚನೆ ಮಾಡ್ತಿದ್ದೆ. ಎಲ್ಲಾದರೂ ಅವನನ್ನ ಕೆಲಸಕ್ಕೆ

ಸೇರಿಸಿದರೆ ಅವನ ಚಾಳಿ ಸುಧಾರಿಸುತ್ತೆ ಅಂತ ಜ್ವಾಲನಿಗೆ ಹೇಳಿದೀನಿ. ಕೊನೇಆಖೈರಿಗೆ ಅವನಿಗೊಂದು ಮದುವೇನೂ ಮಾಡಬೇಕು ತಾನೆ? "

ರಾಧೇಲಾಲ ಗೋಳುಧ್ವನಿಯಲ್ಲಿ ಹೇಳಿದ, "ಕಿಶನೂ ಹೀಗೆ ಪೋಕರಿ, ಮೈಗಳ್ಳ ಆಗ್ತಾನೆ ಅಂತ ನನಗೇನು ಗೊತ್ತಿತ್ತು. ಒಂದು ಮಿಡಲ್ ಪರೀಕ್ಷೇನೂ ಪಾಸು ಮಾಡಲಿಲ್ಲ. ಅವನಿಗೆ ಜ್ವಾಲಾ ಏನು ತಾನೆ ಅಂತ ಕೆಲಸ ಕೊಡಿಸ್ತಾನೆ? "

"ಅದನ್ನೇ ಹೇಳ್ತಿದೀನಿ. ಘಾಟಮಪುರದ ಲಂಬರ್‌ದಾರಿಣೀನ ನೀನು ಬಲ್ಲೆ ಅಲ್ಲವೆ? ಮಾಘಮೇಳದಲ್ಲಿ ನೋಡಿದ್ದೆಯಲ್ಲ, ಅವಳು. ಅವಳಿಗೆ ತುಂಬ ಜಮೀನು ದಾರಿ ಇದೆ. ಒಂದು ಇಡೀ ತಾಲೂಕಿನಷ್ಟೇ ಇದೆ ಅಂತ ಇಟ್ಟುಕೋ. ಜ್ವಾಲನ್ನ ಕಂಡರೆ ಅವಳಿಗೆ ತುಂಬ ಗೌರವ. ಅವರ ವ್ಯವಹಾರವೆಲ್ಲಾ ಮನೆಮನೆಯುವರೊಳಗೆ ಹೇಗೋ ಹಾಗೇ. ಅವಳ ಹತ್ತಿರ ಕಿಶನೂಗೆ ಗುಮಾಸ್ತೆ ಕೆಲಸ ಸಿಕ್ಕಿದರೆ ಹೇಗೆ? "

ಮುನಿಷಿ ರಾಧೇಲಾಲನ ಬಾಡಿದ ಮುಖ ಒಮ್ಮಿಂದೊಮ್ಮೆಗೇ ಬೆಳಗತೊಡಗಿತು. "ನಿಜವೇ, ಅಣ್ಣಾ. ಇದು ಆಯಿತು ಅಂದರೆ ಕಿಶನೂ ಭಾಗ್ಯ ತೆರೀತು ಅಂತ ಅಂದುಕೋ."

"ಬರೀ ಕಿಶನೂದಷ್ಟೇ ಅಲ್ಲ, ಇಡೀ ಮನೆತನದ್ದೇಯೇ ಅನ್ನು. ಆದರೆ ಒಂದು ಶರತ್ತು, ಕಿಶನೂ ಜೊತೆ ನೀನೂ ಹೋಗಬೇಕಾಗುತ್ತೆ. ಕಿಶನೂ ಒಬ್ಬನೇ ಆದರೆ ಕೆಲಸಕಾರ್ಯಾನೆಲ್ಲಾ ಹಾಳುಗೆಡಿಸಿಬಿಡ್ತಾನೆ. ಹೆಸರು ಕಿಶನೂದಿರುತ್ತೆ, ಕೆಲಸಕಾರ್ಯಾನೆಲ್ಲಾ ನೀನು ನೋಡಿಕೋಬೇಕಾಗುತ್ತೆ, ತಿಳೀತೆ. ನಿನಗೆ ಇದು ಒಪ್ಪಿಗೆಯಾದರೆ ಲಂಬರ್ ದಾರಿಣೀಗೆ ಕಾಗದ ಬರೆದು ಹಾಕಿ, ನಿಮ್ಮಿಬ್ಬರನ್ನೂ ಅಲ್ಲಿಗೆ ಕಳಿಸ್ತೀನಿ."

"ಓಹ್, ಈ ಬಂಗಾರದಂಥ ಅವಕಾಶ ಕೈಬಿಟ್ಟು ಹೋಗೋಕ್ಕೆ ಕೊಡ್ತೀವೆಯೆ? ನಿನ್ನ ಅಪ್ಪಣೆ ಅಂದರೆ ಶಿರಸಾವಹಿಸಿ ನಡಸ್ತೀವಿ. ಆದರೆ ಜ್ವಾಲನಿಗೆ ನಾವು ಘಾಟಮ ಪುರಕ್ಕೆ ಹೋಗೋದು ಪ್ರಾಯಶಃ ಇಷ್ಟವಾಗದೇ ಇರಬಹುದು."

"ಹೌದು, ಅದು ನಿಜ. ಅದಕ್ಕೇ, ನಾನೇ ಕಾಗದ ಬರೆದು ಹಾಕ್ತೀನಿ ಅಂದದ್ದು. ನೀನಾಗಿಯೇ ಜ್ವಾಲನ ಹತ್ತಿರ ಈ ವಿಷಯ ಎತ್ತೋಕ್ಕೆ ಹೋಗಬೇಡ."

ಮೂರು ದಿನಗಳೊಳಗಾಗಿಯೇ, ಕಿಶನುವನ್ನು ನೌಕರಿಗಿಟ್ಟುಕೊಳ್ಳುವಂತೆ ಹೇಳಿ ಜೈದೇಯಿಗೆ ಕಾಗದ ಬರೆಯುವಂತೆ ಮುನಿಷಿ ಶಿವಲಾಲ ಜ್ವಾಲಾಪ್ರಸಾದನನ್ನೇ ಒಪ್ಪಿಸಿದ. ಹದಿನೈದು ದಿನಗಳೊಳಗೆ ರಾಧೇಲಾಲ, ರಾಧೇಲಾಲನ ಹೆಂಡತಿ ಛೋಟೀ ಹಾಗೂ ಕಿಶನಲಾಲರು ಘಾಟಮಪುರಕ್ಕೆ ಹೊರಟರು.

ಜ್ವಾಲಾಪ್ರಸಾದನ ಮನೆಯಲ್ಲಿ ಮತ್ತೆ ಶಾಂತಿ ನೆಲಸಿತು. ಬಿಶನಲಾಲ ಸ್ವಭಾವದಿಂದ ಶಾಂತನೂ ಸೌಮ್ಯನೂ ಆಗಿದ್ದ. ಅವನಿಗೆ ಜ್ವಾಲಾಪ್ರಸಾದ ಹಾಗೂ ಯಮುನಳನ್ನು ಕಂಡರೆ ಗೌರವವಿತ್ತು. ತನ್ನ ಮಟ್ಟಿಗೆ ಮಾತ್ರ ಅವನು ಮೈಮರೆತು ಮತ್ತನಂತೆ ಓಡಾಡುತ್ತಿದ್ದ. ಅವನ ಹಾಗೂ ಅವನ ಮೂವರು ಅಣ್ಣಂದಿರ ನಡುವೆ ಭೂಮ್ಯಾಕಾಶ

ಗಳಷ್ಟು ಅಂತರವಿತ್ತು. ಜ್ವಾಲಾಪ್ರಸಾದನ ಮಗ ಗಂಗಾಪ್ರಸಾದ ಬಿಶನಲಾಲನಿಗೆ ಚೆನ್ನಾಗಿ ಹೊಂದಿಕೊಂಡಿದ್ದ. ಬಿಶನಲಾಲನದು ಮನೆಯ ನಾಲ್ಕುಗೋಡೆಗಳ ನಡುವೆ ಅಗಳಿ ಹಾಕಿಕೊಂಡು ಕೂಡುವ ಜೀವವಲ್ಲ. ಅವನ ಹೆಚ್ಚು ಸಮಯ ಮನೆಯ ಹೊರಗಡೆ ಓಡಾಟ–ಸುತ್ತಾಟಗಳಲ್ಲಿ ಕಳೆಯುತ್ತಿತ್ತು.

ಸೋರಾವಿನಲ್ಲಿ ಪ್ರತಿ ಮಂಗಳವಾರವೂ ಸಂತೆ ಸೇರುತ್ತಿತ್ತು. ಸುತ್ತಮುತ್ತಿನ ಹಳ್ಳಿಯವರಷ್ಟೇ ಅಲ್ಲದೆ ದೂರದೂರದಿಂದ ಸಹ ಜನ ಅಲ್ಲಿ ಸಾಮಾನುಗಳ ಖರೀದಿ–ಮಾರಾಟಕ್ಕೆ ಬರುತ್ತಿದ್ದರು. ಸಂತೆಯ ಮಾಳದಿಂದ ಸುಮಾರು ಆರು ಫರ್ಲಾಂಗು ದೂರದಲ್ಲಿ, ಸೋರಾವಿನಿಂದ ಸ್ವಲ್ಪ ಹೊರಗೆ, ವಾರಸುದಾರರಿಲ್ಲದ ಒಂದು ಮಾವಿನ ತೋಪಿತ್ತು. ಆ ಮಾವಿನ ತೋಪಿನಲ್ಲಿ ಒಂದು ಪಾಳುಬಿದ್ದ ಹನುಮಂತನ ಗುಡಿ. ಒಂದು ದಿನ ಬಿಶನಲಾಲ ಆ ಕಡೆ ಸುತ್ತಾಡಲು ಹೋಗಿದ್ದಾಗ ಅವನ ದೃಷ್ಟಿ ಮಾವಿನ ತೋಪಿನ ಮೇಲೆ ಬಿತ್ತು. ಆ ತೋಪಿನಲ್ಲಿ ಒಂದು ಒಳ್ಳೆಯ ಗರಡಿಮನೆ ಮಾಡಿಸ ಬಹುದೆಂದು ಅವನಿಗೆ ತೋರಿತು. ಅದೇ ಹೊತ್ತಿಗೆ ಘುಮರೂ ಮಿಸಿರನೂ ಗೊತ್ತು ಗುರಿಯಿಲ್ಲದೆ ಅಲೆದಾಡುತ್ತ ಆ ಕಡೆ ಬಂದ. ಅವನ ಮನಸ್ಸಿನಲ್ಲಿ ತಾನು ಹನುಮಂತ ದೇವರ ಉದ್ಧಾರ ಮಾಡಬೇಕೆಂಬ ವಿಚಾರ ಹುಟ್ಟಿತು. ಬಿಶನಲಾಲ ಮತ್ತು ಘುಮರೂ ಮಿಸಿರರು ಜೊತೆಜೊತೆಯಾಗಿ ತೋಪಿನಿಂದ ಊರಿಗೆ ಹಿಂದಿರುಗಿದರು. ಇಬ್ಬರಿಗೂ ಪರಿಚಯವಾಯಿತು.

ಘುಮರೂ ಮಿಸಿರ ಬೇಚೂ ಮಿಸಿರನ ತಮ್ಮ. ಸಂಸ್ಕೃತ ಕಲಿಯಲೆಂದು ಅವನನ್ನು ಕಾಶಿಗೆ ಕಳಿಸಿಕೊಟ್ಟಿದ್ದರು. ಎರಡು ತಿಂಗಳ ಹಿಂದೆ ತಾನೇ ಅವನು ಅಲ್ಲಿಂದ ಓಡಿಬಂದಿದ್ದ. ತನಗೂ ಸಂಸ್ಕೃತಕ್ಕೂ ಆಜನ್ಮ ಶತ್ರುತ್ವವಿದೆಯೆಂದು ಘುಮರೂ ಮಿಸಿರನಿಗೆ ಅನಿಸು ತ್ತಿತ್ತು. ಸಂಸ್ಕೃತ ವ್ಯಾಕರಣದ ಆಳ ಕಾಣದ ಸಾಗರದಲ್ಲಿ ಘುಮರೂ ಮುಳುಗಿದಾಗ ತಾನು ಉಸಿರುಗಟ್ಟಿ ಸಾಯುವುದು ಖಂಡಿತ ಎಂದು ಅವನಿಗೆ ಅನಿಸಿತು.

ಘುಮರೂ ಮಿಸಿರನಿಗೆ ಸುಮಾರು ಇಪ್ಪತ್ತು ಇಪ್ಪತ್ತೊಂದರ ವಯಸ್ಸು. ಬಿಶನ ಲಾಲನಿಗಿಂತ ಎತ್ತರವಾದ ನಿಲುವು, ಒಂದು ಸುತ್ತು ಸಣ್ಣದಾದ ಮೈಕಟ್ಟು. ಹಣೆಯ ಮೇಲೆ ನಾಮ. ಅವನಿಗೆ ವ್ಯಾಕರಣ ನೆನಪಿಗೆ ಬಾರದಿದ್ದರೂ ಅದೆಷ್ಟೋ ಸಂಸ್ಕೃತ ಶ್ಲೋಕಗಳು ನೆನಪಿದ್ದವು; ಅವನ್ನು ರಾಗವಾಗಿ ಹೇಳುತ್ತಿದ್ದ. ಕಾಶಿ ಬಿಟ್ಟು ಓಡಿಬಂದು ದಕ್ಕೆ ಬೇಚೂ ಮಿಸಿರ ಘುಮರುವಿಗೆ ಚೆನ್ನಾಗಿ ಛೀಮಾರಿ ಹಾಕಿದ್ದ. ಆದರೆ ವಯಸ್ಸಿಗೆ ಬಂದ ಹುಡುಗ, ಅವನಿಂದ ಬಲಾತ್ಕಾರವಾಗಿ ಏನೂ ಕೆಲಸ ತೆಗೆಯುವಂತಿರಲಿಲ್ಲ.

ಬೇಚೂ ಮಿಸಿರ ಸೋರಾವಿನಲ್ಲಿ ನಾಯಬ್-ತಹಸೀಲದಾರನಾಗಿದ್ದ, ಮೇಲಾಗಿ ಅವನು ಸ್ಥಳವಂದಿಗ. ಅವನಿಗೆ ಅಲ್ಲಿಂದ ಯಾವಾಗಲೂ ವರ್ಗವಾಗಿರಲಿಲ್ಲ; ವರ್ಗ ವಾಗುವ ಸಂಭವವೂ ಇರಲಿಲ್ಲ. ಇದು ಜನರಿಗೆ ತುಂಬ ಆಶ್ಚರ್ಯವನ್ನುಂಟುಮಾಡಿತ್ತು.

ಆದರೆ ಬೇಚೂ ಮಾತ್ರ ಸೋರಾವಿನಲ್ಲಿ ಭದ್ರವಾಗಿ ತಳವೂರಿದ್ದ. ವರ್ಗವಾಡಿಸಿ ಕೊಳ್ಳಲು ಒಪ್ಪಿದ್ದಿದ್ದರೆ ಅವನು ಈ ಹೊತ್ತಿಗೆ ಡಿಪ್ಟಿ ಕಲೆಕ್ಟರ್ ಆಗಬಹುದಿತ್ತು.

ಘುಮರೂ ಬಿಶನಲಾಲರಿಬ್ಬರೂ ಪರಸ್ಪರ ಮೆಚ್ಚಿಕೊಂಡಿದ್ದರು. ಇಬ್ಬರದೂ ಹರೆಯದ ವಯಸ್ಸು, ದಷ್ಟಪುಷ್ಟವಾದ ದೇಹ, ಹಟದ ಸ್ವಭಾವ. ಊರಿಗೆ ಹಿಂದಿರುಗು ವಾಗ ದಾರಿಯಲ್ಲಿ ಅವರ ಯೋಜನೆ ಸಿದ್ಧವಾಯಿತು. ಅದೇನೆಂದರೆ ಆ ಮಾವಿನ ತೋಪಿನಲ್ಲಿ ಒಂದು ಗರಡಿಮನೆ ತೆಗೆಯುವುದು, ಬಿಶನಲಾಲ ಗುರುವಾಗಿ ಕುಸ್ತಿಕಸರತ್ತು ಮಾಡಿಸು ವುದು; ಘುಮರೂ ಮಹಾವೀರ ಹನುಮಂತನ ಗುಡಿಯಲ್ಲಿ ಪೂಜಾರಿಯಾಗಿ ತಳವೂರು ವುದು.

ಒಂದು ವಾರದೊಳಗೆ ಹತ್ತು ಹನ್ನೆರಡು ಯುವಕರು ಗರಡಿಗೆ ಸೇರಿದರು; ಕುಸ್ತಿಯ ಜೋಡಿ ಕೂಡಲು ಶುರುವಾಯಿತು. ಆ ಕಡೆ ಹನುಮಂತನ ಗುಡಿ ಅಚ್ಚುಕಟ್ಟಾಗಿ ದೇವರಿಗೆ ನೈವೇದ್ಯ ಅರ್ಪಣೆಯಾಗತೊಡಗಿತು.

ಹೋಳಿಹಬ್ಬ ಮುಗಿದು ಎಲ್ಲೆಲ್ಲೂ ಫಸಲು ಪಕ್ಕಾಗಿ ನಿಂತಿತ್ತು. ಕೊಯಿಲು ಸಹ ಶುರುವಾಗಿತ್ತು. ಮಂಗಳವಾರದ ಸಂತೆಗೆ ಕಳೆಕಟ್ಟಿತ್ತು. ಸುತ್ತಮುತ್ತಿನ ಹಳ್ಳಿಯ ಜನ ಬೆಲ್ಲ, ಆಹಾರಧಾನ್ಯ ಹಾಗೂ ಇತರ ಸಾಮಾನುಗಳನ್ನು ತೆಗೆದುಕೊಂಡು ಸಂತೆಗೆ ಬರುತ್ತಿದ್ದರು. ಸಂತೆಯಲ್ಲಿ ಗಡಿಬಿಡಿ ಜೋರಾಗಿತ್ತು. ಮಹಾವೀರಜಿಯ ನೈವೇದ್ಯ ಅರ್ಪಣೆಗಳಿಗೆ ಈಗ ನಿಜವಾಗಿಯೂ ಕಳೆ ಕಟ್ಟಿತ್ತು. ಗರಡಿಮನೆಯ ಖರ್ಚುವೆಚ್ಚ ಗಳೆಲ್ಲವೂ ನೈವೇದ್ಯ ಅರ್ಪಣೆಗಳಿಂದಲೇ ಏಳುತ್ತಿದ್ದವು. ಘುಮರೂ ಮಿಸಿರ ಈಗ ಘುಮರೂ ಪಂಡಿತನೆಂದು ಕರಸಿಕೊಳ್ಳಲಾರಂಭಿಸಿದ್ದ, ಹಾಗೆಯೇ ಬಿಶನಲಾಲ 'ಬಿಶನಗುರು' ವಾದ.

ಅವತ್ತು ಮಂಗಳವಾರದ ಸಂತೆಗೆ ಪೈಲ್ವಾನ ಬುದ್ಧೂಸಿಂಹ ಏಕೆ ಬಂದ, ಹೇಗೆ ಬಂದ ಎಂಬ ಬಗ್ಗೆ ಜನರಲ್ಲಿ ಒಮ್ಮತವಿರಲಿಲ್ಲ. ಸೋರಾವಿನಲ್ಲಿದ್ದದ್ದು ಪೈಲ್ವಾನ್ ಬುದ್ಧೂ ಸಿಂಹನ ಗರಡಿಮನೆಯೊಂದೇ. ಹತ್ತು ವರ್ಷಗಳ ಹಿಂದೆ ಪೈಲ್ವಾನ್ ಬುದ್ಧೂಸಿಂಹ ಆ ಕಡೆಯ ಮೂಡಲ ನಾಡಿನ ಸರ್ವಶ್ರೇಷ್ಠ ಪೈಲ್ವಾನನೆಂದು ಮನ್ನಣೆ ಪಡೆದಿದ್ದ. ಆದರೆ ಈಗ ಅವನಿಗೆ ವಯಸ್ಸಾಗುತ್ತ ಬಂದಿತ್ತು. ಎಂತಲೇ ಸೋರಾವಿನ ಠಾಕೂರ್ ವೀರ ಭಾನಸಿಂಹ ಅವನಿಗೊಂದು ಗರಡಿಮನೆ ಮಾಡಿಸಿಕೊಟ್ಟಿದ್ದ.

ಸೋರಾವಿನಲ್ಲಿ ಇನ್ನೊಂದು ಗರಡಿಮನೆ ಸ್ಥಾಪನೆಯಾದದ್ದು ಅವನ ಸ್ವಾಭಿಮಾನಕ್ಕೆ ಧಕ್ಕೆ ತಂದಿತ್ತೆಂದು ಕೆಲವರು ಹೇಳುತ್ತಿದ್ದರೆ ಇನ್ನು ಕೆಲವರು ಅದರಿಂದ ಅವನಿಗೆ ಸಂತೋಷವೇ ಆಗಿದೆ ಎನ್ನುತ್ತಿದ್ದರು. ಏನೇ ಇರಲಿ, ಪೈಲ್ವಾನ್ ಬುದ್ಧೂಸಿಂಹ ತನ್ನ ಪಟ್ಟಶಿಷ್ಯ ಮೈಕೂಸಿಂಹನೊಂದಿಗೆ ಅವತ್ತು ಮಂಗಳವಾರದ ಸಂತೆಗೆ ಬಂದಿದ್ದುದರ ಉದ್ದೇಶ ಸಂತೆಯಲ್ಲಿ ಸುಮ್ಮನೆ ಓಡಾಡುವುದಷ್ಟೇ ಆಗಿರಲಿಲ್ಲ; ಜೊತೆಗೆ, ಊರ ಹೊರಗೆ

ಕೊಂಚ ದೂರದಲ್ಲಿ ಹೊಸದಾಗಿ ಶುರುವಾಗಿದ್ದ ಗರಡಿಮನೆಯನ್ನು ನೋಡಿಬರುವುದೂ ಆಗಿತ್ತು.

ಪೈಲ್ವಾನ್ ಬುದ್ಧೂಸಿಂಹ ಬಿಶನಗುರುವಿನ ಗರಡಿಮನೆ ತಲಪಿದಾಗ ಬಿಶನಗುರು ಕೆಂಪು ಲಂಗೋಟಿ ಕಟ್ಟಿ ಮಹಾವೀರನ ಮೂರ್ತಿಯ ಮುಂದೆ ಬೈಠಕ್ ಹೊಡೆಯುತ್ತಿದ್ದ. ದಿನವೂ ಸಂಜೆ ನೂರು ದಂಡೆ, ಐನೂರು ಬೈಠಕ್ ಹೊಡೆದು ಬಜರಂಗಬಲಿಯ ಆಶೀರ್ವಾದ ಬೇಡುವುದು, ಆಮೇಲೆ ಅಖಾಡಾಕ್ಕಿಳಿದು ಶಿಷ್ಯರಿಗೆ ಕಸರತ್ತು ಕಲಿಸುವುದು—ಇದು ಬಿಶನಲಾಲನ ನಿತ್ಯದ ಕಾರ್ಯಕ್ರಮ. ಪೈಲ್ವಾನ್ ಬುದ್ಧೂಸಿಂಹ ಗರಡಿಮನೆ ತಲಪಿದಾಗ ಬಿಶನಗುರು ಅದೇತಾನೇ ದಂಡೆಹೊಡೆದು ಮುಗಿಸಿ, ಬೈಠಕ್‌ಗೆ ಶುರುಮಾಡಿದ್ದ. ಅಷ್ಟು ನೀಟಾಗಿ ಹೊಡೆದ ಪೂರಾ ಐನೂರು ದಂಡೆಯನ್ನು ನೋಡಿ ಬುದ್ಧೂಸಿಂಹನ ಮೈನವಿರೆದ್ದಿತು. ಅವನು ನಿಂತಲ್ಲಿಂದಲೇ 'ವಾಹ್, ಮಗು. ಶಾಭಾಷ್!' ಎಂದು ಕೂಗಿದ.

ಬಿಶನಗುರುವಿಗೆ ಪೈಲ್ವಾನ್ ಬುದ್ಧೂಸಿಂಹನ ದರ್ಶನವಾದದ್ದು ಅದೇ ಮೊದಲು. ಬುದ್ಧೂಸಿಂಹನ ಮೈಕಟ್ಟು, ಠೀವಿಗಳನ್ನು ನೋಡಿ, ಯಾವನೋ ಕುಸ್ತಿವಿದ್ಯೆಯ ಉಸ್ತಾದ ತನ್ನ ಮುಂದೆ ನಿಂತಿದ್ದಾನೆಂಬುದು ಸ್ಪಷ್ಟವಾಯಿತು. ಬುದ್ಧೂಸಿಂಹನ ಬಗಲಿನಲ್ಲಿಯೇ ಅವನ ಶಿಷ್ಯ ಮೈಕೂಸಿಂಹ ನಿಂತಿದ್ದ. ಮೈಕೂಲಾಲನ ವಯಸ್ಸು ಬಿಶನಲಾಲನದಷ್ಟೇ. ಆದರೆ ಮೈಕಟ್ಟಿನಲ್ಲಿ ಮೈಕೂಸಿಂಹ ಒಂದು ಕೈ ಮೇಲಾಗಿ ಕಾಣುತ್ತಿದ್ದ. ಪೈಲ್ವಾನ ಬುದ್ಧೂಸಿಂಹ ಮೈಕೂಸಿಂಹನತ್ತ ನೋಡುತ್ತ ಹೇಳಿದ, "ನೋಡೋ ಮೈಕೂ, ನಿನಗೆ ಕುಸ್ತೀಗೆ ಇನ್ನೂ ಒಂದು ಜೋಡಿ ಸಿಕ್ಕಿದ ಹಾಗಾಯ್ತು!"

ಮೈಕೂಸಿಂಹ ಆ ಕ್ಷಣ ಬುದ್ಧೂಸಿಂಹನ ಕಾಲುಮುಟ್ಟಿ ನಮಸ್ಕಾರ ಮಾಡಿ ಹೇಳಿದ, "ಗುರು, ಎರಡು ನಿಮಿಷದಲ್ಲಿ ಕೆಳಕ್ಕೆ ಕೆಡವಿ ಇವನಿಗೆ ಆಕಾಶ ತೋರಿಸಲೇ ಹೇಳಿ. ಉಸ್ತಾದ್ ಬುದ್ಧೂಸಿಂಹರ ಶಿಷ್ಯ ನಾನು!"

ಬುದ್ಧೂಸಿಂಹ ನಗತೊಡಗಿದ, "ಅರೆ, ನೀನಾದರೋ ಶಿಷ್ಯ ಕಣೋ. ಇವನು ಗುರುವಾಗಿದಾನೆ. ಏನು ಮಗು, ನಿನ್ನ ಹೆಸರು ಬಿಶನಗುರು ಅಲ್ಲವೆ? ಯಾವನೋ ಇನ್ನೊಬ್ಬ ಗುರು ಈ ಸೋರಾವಿನಲ್ಲಿ ಗರಡಿಮನೆ ತೆಗೆದಿದಾನೆ ಅಂತ ಕೇಳಿದಾಗ ನಂಬಿಕೆಯಾಗಲಿಲ್ಲ. ನೋಡಿಕೊಂಡೇ ಹೋಗೋಣ ಅಂತ ಬಂದೆ. ನೀನಿನ್ನೂ ಬೆಳೀತಿರೋ ಹುಡುಗ. ಈಗಾಗಲೇ ಗುರುವಾಗಿಬಿಟ್ಟೆಯಾ!"

ಬಿಶನಗುರು ಸುಪ್ರಸಿದ್ಧ ಪೈಲ್ವಾನ್ ಬುದ್ಧೂಸಿಂಹನ ಮುಂದೆ ಕಕ್ಕಾಬಿಕ್ಕಿಯಾಗಿ ನಿಂತಿದ್ದ. ಇದುವರೆಗೂ ಗುಡಿಯಲ್ಲೇ ಕುಳಿತುಕೊಂಡು ಈ ತಮಾಷೆ ನೋಡುತ್ತಿದ್ದ ಘುಮರೂ ಪಂಡಿತನಿಗೆ ಇನ್ನು ತಾನು ಕಣಕ್ಕೆ ಇಳಿಯಬೇಕೆನಿಸಿತು. ಬಿಶನಗುರುವನ್ನು ಪಕ್ಕಕ್ಕೆ ಸರಿಸಿ ಅವನು ಮುಂದೆ ಬಂದ. ಬುದ್ಧೂ ಪೈಲ್ವಾನನ ಮುಂದೆ ನಿಂತು ಹೇಳಿದ, "ಬುದ್ಧೂಗುರು, ಭಂಗಿ ಅರೆದು ಸೋಸ್ತಿದೀನಿ, ಒಂದು ಲೋಟ ಏರಿಸು, ಬಾ.

ಈ ಗರಡಿ ವಿಷಯ ಹಾಗಿರಲಿ ಬಿಡು. ಇದನ್ನ ನಾವು ಹೊಸದಾಗಿ ಕಲೀತಿರೋರು ನಮ್ಮ ಷೋಕಿಗೆ ಅಂತ ಶುರುಮಾಡಿದೀವಿ. ಇದರಲ್ಲಿ ಕೋಪಿಸಿಕೊಳ್ಳೋಕೆ ಏನಿದೆ!"

ಪೈಲ್ವಾನ್ ಬುದ್ಧೂಸಿಂಹ ಗೊಳ್ಳನೆ ನಕ್ಕ, "ನೀವು ಗಾಂಜಾ, ಭಂಗಿ ಕುಡಿಯೋ ಹುಡುಗರು ಏನು ಪೈಲ್ವಾನಿಕೆ ಮಾಡ್ತೀರಿ ಅಂತ ನನಗೆ ಚೆನ್ನಾಗಿ ಗೊತ್ತಿದೆ. ಈ ಸೋರಾವಿನಲ್ಲಿ ಒಬ್ಬನೇ ಒಬ್ಬ ಗುರು ಇರೋದು ಸಾಧ್ಯ. ಅವನೂ ಅಂದರೆ ಪೈಲ್ವಾನ್ ಬುದ್ಧೂಸಿಂಹ!" ಎಂದು ಬಿಶನಲಾಲನ ಕಡೆ ತಿರುಗಿ ಹೇಳಿದ, "ನಾವು 'ಗಂಡಾ' ತೊಗೊಂಡು ಬಂದಿದೀವಿ, ಗಂಡಾ ಕಟ್ಟಿಸಿಕೊ!"

ಈಗ ಬಿಶನಲಾಲನಿಗೆ ಬಾಯಿ ತೆರೆಯದೇ ವಿಧಿಯಿರಲಿಲ್ಲ, "ಗಂಡಾ ಕಟ್ಟಿಸಿಕೊಳ್ಳೋದು ಒಬ್ಬನೇ ಉಸ್ತಾದನಿಂದ. ನಾನಾಗಲೇ ಜಗ್ಗೂಪೈಲ್ವಾನನಿಂದ ಗಂಡಾ ಕಟ್ಟಿಸಿಕೊಂಡಾಗಿದೆ. ಈಗಂತೂ ನಾನೇ ಸ್ವತಃ ಗಂಡಾ ಕಟ್ಟೋಕೆ ಇಲ್ಲಿ ಬಂದಿದೀನಿ."

ಬುದ್ಧೂಸಿಂಹ ಮೈಕೂಸಿಂಹನ ಕಡೆ ನೋಡಿದ, "ಏನಲೋ ಮೈಕೂ, ಕೇಳಿದೆಯಾ ಈ ಹೈದನ ಮಾತನ್ನ, ಗುರುವಾಗಿ ಬಂದಿದಾನಂತೆ, ಗಂಡಾ ಕಟ್ತಾನಂತೆ! ಇವನ ಜೊತೆ ಒಂದು ಕೈ ನೋಡ್ತೀಯಾ?"

ಇಷ್ಟು ಹೊತ್ತಿಗೆ ಇವರ ಸುತ್ತ ಒಂದು ದೊಡ್ಡ ಗುಂಪೇ ನೆರೆದಿತ್ತು. ಜನ ತರತರದ ಟೀಕೆ ಮಾಡುತ್ತಿದ್ದರು, ಕೂಗು ಹಾಕುತ್ತಿದ್ದರು. ಅಲ್ಲಿ ನಿಂತಿದ್ದ ಪ್ರತಿಯೊಬ್ಬರೂ ಬುದ್ಧೂಸಿಂಹನ ಮಾತನ್ನು ಸಮರ್ಥಿಸುವವರಂತೆ, "ನಡೀಲಿ! ನಡೀಲಿ! ಯಾರು ಗಟ್ಟಿಗರು ಅಂತ ನೋಡೇಬಿಡೋಣ!" ಅನ್ನುತ್ತಿದ್ದರು. ಗದ್ದಲ ಹೆಚ್ಚತೊಡಗಿತು.

ಘುಮರೂ ಪಂಡಿತನೇ ಮತ್ತೊಮ್ಮೆ ಪರಿಸ್ಥಿತಿಯನ್ನು ಹತೋಟಿಗೆ ತರಬೇಕಾಯಿತು. ಗುಂಪಿನ ಕಡೆ ತಿರುಗಿ ಅವನು ಹೇಳಿದ; "ಅಧರ್ಮದ ಕುಸ್ತೀನ ನೋಡೋಕ್ಕೆ ಬಂದಿದೀರಾ ನೀವೆಲ್ಲಾ? ಉಹ್ಞೂ, ಅದು ಸಾಧ್ಯವಿಲ್ಲ. ಹಾಗೆ ಬೇಕಾದರೆ ನಮ್ಮ ಬಿಶನಗುರು, ಮೈಕೂಸಿಂಹರ ಜೋಡಿ ನಿಶ್ಚಯವಾಯಿತು ಅನ್ನೋಣ, ಇನ್ನು ಎರಡು ವಾರದಮೇಲೆ, ಮಂಗಳವಾರದ ದಿನ. ಬುದ್ಧೂಪೈಲ್ವಾನ್ ಬೇಕಾದರೆ ಕುಸ್ತೀನ ತನ್ನ ಅಖಾಡಾದಲ್ಲಿ ಇಟ್ಟುಕೊಳ್ಳಲಿ, ಅಥವಾ ಇಲ್ಲಿ ಇಟ್ಟುಕೊಳ್ಳೋಕೆ ಒಪ್ಪಲಿ—ಬಿಶನಗುರು ಹೆದರೋನಲ್ಲ. ಬಿಶನಗುರು ಮೈಕೂ ಪೈಲ್ವಾನನಿಗೆ ಸೋತರೆ ಅವನು ಬುದ್ಧೂಗುರುವಿನಿಂದ ಗಂಡಾ ಕಟ್ಟಿಸಿಕೊಳ್ತಾನೆ. ಅವನು ಮೈಕೂನ ನೆಲಕ್ಕೆ ಕೆಡವಿದನೋ, ಆಗ ಬಿಶನಗುರೂನ ಗರಡಿ ಈಗಿನ ಹಾಗೆ ಖಾಯಂ ಆಗಿರುತ್ತೆ; ಮತ್ತೆ ಬುದ್ಧೂಪೈಲ್ವಾನ ಈ ಕಡೆ ಮುಖ ಹಾಕೋ ಹಾಗಿಲ್ಲ."

"ನಮಗೆ ಒಪ್ಪಿಗೆ!" ಮೈಕೂಸಿಂಹ ಬಿಶನಲಾಲನನ್ನು ತಿರಸ್ಕಾರದಿಂದ ನೋಡುತ್ತ ಹೇಳಿದ.

ಅವತ್ತು ರಾತ್ರಿ ಮಹಾವೀರಜಿಯ ಪ್ರಸಾದ ಹೇರಿಕೊಂಡು ಘುಮರೂ ಪಂಡಿತ ಮನೆಗೆ ಬಂದಾಗ ಬೇಚೂ ಮಿಸಿರನ ದರ್ಬಾರು ಪೂರ್ಣರೂಪದಲ್ಲಿ ಸೇರಿತ್ತು. ಘುಮರು

ವನ್ನು ನೋಡಿ ಬೇಚೂ ಮಿಸಿರ ಜೋರಾಗಿ ನಕ್ಕ. "ಏನೋ ಘುಮರೂ, ನೋಡಿದರೆ ಗುಡಿ ಚಿಗಿತುಕೊಂಡಿತು, ಹನುಮಂತ ಫಲ ಬಿಡ್ತಿದಾನೆ ಅಂತ ಕಾಣುತ್ತೆ!"

ಅಲ್ಲಿ ಕುಳಿತಿದ್ದವರೆಲ್ಲರಿಗೂ ಮಿಠಾಯಿ ಪ್ರಸಾದ ಹಂಚುತ್ತ ಘುಮರೂ ಪಂಡಿತ ಹೇಳಿದ, "ತೊಗೊಳ್ಳಿ, ಹನುಮಂತದೇವರ ಪ್ರಸಾದ ತಿನ್ನಿ. ಈಗ ಮತ್ತೆ ಅವನ ಪ್ರತಾಪ ಜಾಗ್ರತವಾಗ್ತಾ ಇದೆ. ನೋಡಣ್ಣ, ಇವತ್ತು ನಿಜವಾಗಿ ಮಜ ಬಂತು. ಪೈಲ್ವಾನ್ ಬುದ್ಧೂಸಿಂಹನ ಶಿಷ್ಯ ಮೈಕೂಸಿಂಹನಿಗೂ ಬಿಶನಗುರೂಗೂ ಜೋಡಿ ಬಿದ್ದಿದೆ, ಇನ್ನು ಎರಡು ವಾರ ಬಿಟ್ಟು ಮಂಗಳವಾರದ ದಿನ ಕುಸ್ತಿ!"

ಬೇಚೂ ಮಿಸಿರ ಹುರುಪುಗೊಂಡು ಕೇಳಿದ, "ಈ ಬಿಶನಗುರು ಅಂದರೆ ಯಾರು?"

"ಅರೆ, ನಿಮಗೆ ಗೊತ್ತಿಲ್ಲವೆ? ಅವನೇ, ಬಿಶನಲಾಲ, ತಹಸೀಲದಾರ ಸಾಹೇಬರ ಚಿಕ್ಕಪ್ಪನ ಮಗ. ಅವನೂ ನಾನೂ ಸೇರಿಯೇ ಈ ಗುಡೀನೂ ಗರಡೀನೂ ತೆಗೆದಿರೋದು. ಗುಡೀನ ನಾನು ನೋಡ್ಕೋತೀನಿ, ಗರಡೀನ ಅವನು ನೋಡ್ಕೋತಾನೆ."

ಬೇಚೂ ಮಿಸಿರನಿಗೆ ನಲವತ್ತೈದು ಐವತ್ತರ ನಡುವಣ ವಯಸ್ಸು. ಜನ ಅವನನ್ನು ಸೋರಾವಿನ ಸಾಮಾಜಿಕ ಜೀವನದ ಮುಖಂಡನೆಂದು ತಿಳಿದಿದ್ದರು. ಬೇಚೂ ಮಿಸಿರ ನಾಯಬ್-ತಹಸೀಲದಾರಿಕೆ ಮಾಡುತ್ತಿದ್ದ, ಜೊತೆಗೆ ಊರಿನ ಪಂಚಾಯಿತಿ, ಪೌರೋಹಿತ್ಯಗಳನ್ನೂ ನಡಸುತ್ತಿದ್ದ. ಜವಾಬ್ದಾರಿಯುಳ್ಳ ಒಬ್ಬ ಸರಕಾರೀ ನೌಕರನಿಗೆ ಇವೆಲ್ಲಾ ಶೋಭೆ ತರುವಂತಹದಲ್ಲ ಎಂದು ಡಿಪ್ಟೀ ಸಾಹೇಬರು ನಾಲ್ಕಾರು ಸಲ ಸೂಚ್ಯವಾಗಿ ತಿಳಿಸಿದ್ದರು. ಆದರೆ ಅದಕ್ಕೆ ಬೇಚೂ ಮಿಸಿರ, "ಏನು ಮಾಡೋದು ಹೇಳಿ, ಕಲಿತ ಚಾಳೀನ ಬಿಡೋಕ್ಕಾಗುತ್ತೆಯೇ? ಇಲ್ಲದೆ ಹೋಗಿದ್ದರೆ ಈ ಹೊತ್ತಿಗೆ ನಾನೂ ಡಿಪ್ಟಿ ಕಲೆಕ್ಟರ್ ಆಗ್ತಿರಲಿಲ್ಲವೆ?" ಅನ್ನುತ್ತಿದ್ದ. ಹಾಗೆ ನೋಡಿದರೆ, ಬೇಚೂ ಮಿಸಿರ ಭಯ ಭೀತಿಯಿಲ್ಲದ ದರ್ಪದ ವ್ಯಕ್ತಿ; ತಕ್ಕಮಟ್ಟಿಗೆ ಕೋಪಿಷ್ಠ ಹಾಗೂ ಜಗಳಗಂಟನೂ ಹೌದು. ಜನ ಅವನಿಗೆ ತುಂಬ ಮರ್ಯಾದೆ ಕೊಡುತ್ತಿದ್ದರು. ಯಾಕೆಂದರೆ ಅವನು ಪ್ರಾಮಾಣಿಕನಾಗಿದ್ದುದಲ್ಲದೆ ಎಲ್ಲರೊಡನೆಯೂ ಸರಿಸಮಾನವಾಗಿ ಬೆರೆಯುತ್ತಿದ್ದ, ಜನರ ಸುಖದುಃಖದಲ್ಲಿ ಒಂದಾಗುತ್ತಿದ್ದ.

ಬೇಚೂವನ್ನು ಕಂಡರೆ ಜ್ವಾಲಾಪ್ರಸಾದನಿಗೆ ಸಾಕಷ್ಟು ಕನಿಕರವಿತ್ತು. ಒಂದು ರೀತಿಯಲ್ಲಿ ಜ್ವಾಲಾಪ್ರಸಾದ ಅವನಿಗೆ ಮರ್ಯಾದೆ ತೋರುತ್ತಿದ್ದ. ಸರಕಾರೀ ವಿಷಯಗಳಲ್ಲಿ ಅವನು ಯಾವಾಗಲೂ ಬೇಚೂ ಮಿಸಿರನ ಸಲಹೆಯಂತೆ ನಡೆಯುತ್ತಿದ್ದ. ಬೇಚೂ ಮಿಸಿರನಿಗೂ ಜ್ವಾಲನ ಬಗ್ಗೆ ಮಮತೆಯ ಭಾವನೆಯಿತ್ತು. ಅವನ ನಡತೆ, ಪ್ರಾಮಾಣಿಕತೆಗಳನ್ನು ಕಂಡು ಬೇಚೂ ಮುಗ್ಧನಾಗಿದ್ದ.

ಮೈಕೂಸಿಂಹ, ಬಿಶನಗುರು ಇವರ ನಡುವೆ ಜೋಡಿ ಬಿದ್ದ ಸುದ್ದಿ ಬೇಚೂ ಮಿಸಿರನಿಗೆ ಸಾಕಷ್ಟು ಮಹತ್ವದ್ದಾಗಿತ್ತು. ಇದಕ್ಕೆ ಮುಖ್ಯಕಾರಣವೆಂದರೆ ಕೆಲವು ದಿನಗಳ ಹಿಂದೆ

ಠಾಕೂರ್ ವೀರಭಾನಸಿಂಹ ಇದೇ ಸಾಮಾಜಿಕ ಮುಖಂಡತ್ವ, ಮರ್ಯಾದೆಗಳ ವಿಷಯ ದಲ್ಲಿ ಬೇಚೂ ಮಿಸಿರನಿಗೆ ಅಪಮಾನ ಮಾಡಿದ್ದ.

ತಮ್ಮನಿಂದ ಈ ಎಲ್ಲ ಸುದ್ದಿಯನ್ನೂ ಕೇಳಿ ಬೇಚೂ ಮಿಸಿರ ಎದ್ದುನಿಂತ, ಬಟ್ಟೆ ತೊಟ್ಟುಕೊಂಡು ಜ್ವಾಲಾಪ್ರಸಾದನ ಮನೆಯ ಕಡೆ ಹೊರಟ. ದಾರಿಯಲ್ಲಿ ಅವನಿಗೆ ಇನ್‌ಸ್ಪೆಕ್ಟರ್ ಶಹಾಬುದ್ದೀನ್ ಭೆಟ್ಟಿಯಾದ. ಬೇಚೂ ಮಿಸಿರ ನಗುತ್ತ ಇನ್‌ಸ್ಪೆಕ್ಟರ್ ಶಹಾಬುದ್ದೀನನಿಗೆ ಹೇಳಿದ, "ಕೇಳಿದಿಯಾ ಸಾಹೇಬ್‌ಮಿಯ್ಯಾ, ತಹಸೀಲದಾರ ಸಾಹೇಬರ ಚಿಕ್ಕಪ್ಪನ ಮಗ ಇಲ್ಲಿ ಬಂದಿದಾನಂತೆ, ಒಳ್ಳೇ ಪೈಲ್ವಾನನಂತೆ."

"ಹೌದು, ಮಿಸಿರ್‌ಜೀ, ನಾನೂ ನೋಡಿದೀನಿ ಅವನನ್ನ. ಬುದ್ಧೂಪೈಲ್ವಾನ್ ಅವನ ಮೇಲೆ ಬಲು ಕಿಡಿಕಿಡಿಯಾಗಿದಾನೆ, ಯಾವತ್ತಾದರೂ ಒಂದು ದಿನ ಅವನ ಗರಡಿಗೆ ದಾಳಿ ಇಡೋನಿದಾನೆ ಅಂತ ಕೇಳಿದೀನಿ. ಈ ಬುದ್ಧೂಸಿಂಹನಿಗೆ ದಿಮಾಕು ನೆತ್ತಿಗೇರಿದೆ. ಹೋಗಲಿ ಬಿಡಿ, ಅವನ ಮುಂದೆ ತೊಡೆ ತಟ್ಟೋನು ಒಬ್ಬನಾದರೂ ಸಿಕ್ಕಿದನಲ್ಲ!"

"ಅರೆ, ಆ ಬುದ್ಧೂ ಇವತ್ತಾಗಲೇ ಅವನ ಗರಡಿಗೆ ಹೋಗಿ ಬಂದಿದಾನೆ. ತಹಸೀಲ ದಾರ ಸಾಹೇಬರ ಚಿಕ್ಕಪ್ಪನ ಮಗನಿಗೂ ಬುದ್ಧೂಸಿಂಹನ ಶಾಗಿರ್ದ ಮೈಕೂಸಿಂಹನಿಗೂ ಜೋಡಿ ಬಿದ್ದಿದೆ, ಇನ್ನು ಹದಿನೈದು ದಿನಕ್ಕೆ ಕುಸ್ತಿ. ಠಾಣೆಯ ಕಡೆಯಿಂದಲೇ ಕುಸ್ತೀಗೆ ಏರ್ಪಾಡಾಗಬಹುದಲ್ಲ!"

"ಆಹಾ! ಏನು ಸುದ್ದಿ ಹೇಳಿದಿರಿ, ನಾಯಬ್ ಸಾಹೇಬ್! ಈಚೆಗೆ ಇಲ್ಲಿ ಬಹಳ ಬೆಕೋ ಅಂತಿತ್ತು. ಇವತ್ತಿನಿಂದಲೇ ವ್ಯವಸ್ಥೆಗೆ ಶುರುಮಾಡ್ತೀನಿ. ಠಾಕೂರ್ ವೀರಭಾನಸಿಂಹನ ಜೊತೆ ಮಾತನಾಡಿ, ಕುಸ್ತಿಯ ಸುದ್ದೀನ ತಮಟೆ ಸಾರಸ್ತೀನಿ. ಆದರೆ ಇವರಿಬ್ಬರೂ ಇನ್ನೂ ಹುಡುಗರು. ಒಂದು ದೊಡ್ಡ ಜೋಡಿಯೂ ಇರಬೇಕು. ಆಗಲೇ ಟಿಕೆಟ್ ಖರ್ಚಾಗೋದು."

ಬೇಚೂ ಮಿಸಿರ ನಕ್ಕ, "ಈ ಬುದ್ಧೂಸಿಂಹನಿಗೆ ತಕ್ಕ ಒಬ್ಬ ಪೈಲ್ವಾನನ್ನ ಹುಡುಕ ಬೇಕು. ಅದನ್ನ ಮಾಡು, ಮತ್ತೆ. ಅದಕ್ಕೋಸ್ಕರವೇ ನಿನ್ನ ಜೊತೆ ಮಾತೆತ್ತಿದ್ದು. ನಡಿ, ತಹಸೀಲದಾರ ಸಾಹೇಬರ ಸಲಹೇನೂ ಕೇಳಿಬರೋಣ!"

# ಹನ್ನೊಂದು

ರಾತ್ರಿಯ ಒಂಬತ್ತು ಗಂಟೆಯ ಸಮಯ. ಕುದುರೆ ಗಾಡಿಯಲ್ಲಿ ಕುಳಿತು ಬರುತ್ತಿದ್ದ ಇಬ್ಬರು ದಷ್ಟಪುಷ್ಟರಾದ ಅಪರಿಚಿತ ವ್ಯಕ್ತಿಗಳನ್ನು ಕಂಡು ಠಾಣೇದಾರ್ ಶಹಾಬುದ್ದೀನ್ ಗಾಡಿ ನಿಲ್ಲಿಸಿ ಕೇಳಿದ, "ಯಾರು ನೀವು? ಏನೋ ಗಾಡಿಯೋನೇ, ಎಲ್ಲಿಂದ ಕೂರಿಸಿ ಕೊಂಡು ಬರ್‍ತಿದೀಯೋ ಈ ಸವಾರೀನ?"

ಗಾಡಿಯವನ ಪರವಾಗಿ ಗಾಡಿಯೊಳಗಿದ್ದ ಸುಮಾರು ಇಪ್ಪತ್ತೈದು ವರ್ಷ ಪ್ರಾಯದ ತೆಳ್ಳನೆಯ ದೇಹದ ಯುವಕ ಉತ್ತರ ಕೊಟ್ಟ, "ಹುಜೂರ್, ನಾವು ಅಲಹಾಬಾದಿನಿಂದ ಗಾಡಿ ಮಾಡಿಕೊಂಡು ಬರ್‍ತಿದೀವಿ. ವಾಸ್ತವವಾಗಿ ನಾವು ಫತಹಪುರದವರು. ತಹಸೀಲ ದಾರ ಸಾಹೇಬರಲ್ಲಿ ಕೊಂಚ ಕೆಲಸವಿತ್ತು."

"ಬಂದಿದೀರಿ ಅಂದಮೇಲೆ ಏನೋ ಕೆಲಸವಿದ್ದೇ ಬಂದಿರಬೇಕು. ಆದರೆ ನೀವು ಯಾರು ಅನ್ನೋದನ್ನ ಹೇಳಲಿಲ್ಲವಲ್ಲ?"

ಗಾಡಿಯೊಳಗೆ ಕುಳಿತಿದ್ದ ಇನ್ನೊಬ್ಬ, ಎತ್ತರದ ದೃಢಕಾಯ ವ್ಯಕ್ತಿ, ಹೇಳಿದ, "ಹುಜೂರ್, ಈ ಹುಡುಗ ರಹಮತ್‌ಖಾನ್. ಫತಹಪುರದ ಜಮೀನುದಾರ. ಸದ್ಯ ಇರೋದು ಮವೂಆಯಿಮಾದಲ್ಲಿ. ನನ್ನನ್ನ ಜನ ಜಗ್ಗೂಪೈಲ್ವಾನ್ ಅಂತ ಕರೀತಾರೆ. ಇವನು ನನ್ನ ಭಾವ್ಮೈದನ ಮಗ. ಇವನಿಗೆ ಜೊತೆ ಕೊಡೋಕ್ಕೆ ಅಂತ ನಾನೂ ಬಂದಿದೀನಿ. ತಹಸೀಲದಾರ ಸಾಹೇಬರ ತಮ್ಮ ಬಿಶನಲಾಲ ನನ್ನ ಶಾಗಿರ್ದ್ ಇದಾನೆ. ಹುಜೂರರು ತಹಸೀಲದಾರ ಸಾಹೇಬರ ಮನೆ ತೋರಿಸಿದರೆ ತುಂಬ ಉಪಕಾರವಾಗುತ್ತೆ."

ಬೇಚೂ ಮಿಸಿರ ಶಹಾಬುದ್ದೀನನನ್ನು ಮೊಣಕೈಯಿಂದ ತಿವಿಯುತ್ತ, ಗಾಡಿಯವನಿಗೆ ಹೇಳಿದ, "ಅಲ್ಲಿ ಎದುರಿಗೆ ಹುಣಿಸೇಮರವಿದೆಯಲ್ಲ, ಅಲ್ಲಿಂದಾಚೆಗೆ ಸುಮಾರು ನೂರು ಹೆಜ್ಜೆ ದೂರದಲ್ಲಿ ಎಡಕ್ಕೆ ಒಂದು ತಿರುವಿದೆ. ಅಲ್ಲಿ ಗಾಡಿ ತಿರುಗಿಸು. ಅಲ್ಲಿಂದ ಒಂದು ಫರ್ಲಾಂಗು ದೂರದಲ್ಲಿ ತಹಸೀಲಿನ ಕಚೇರಿಯಿದೆ. ಅದರ ಎದುರಿಗೇ ತಹಸೀಲದಾರರ ಮನೆ."

ಗಾಡಿ ಮುಂದೆ ಹೋದ ಮೇಲೆ ಬೇಚೂ ಮಿಸಿರ ಹೇಳಿದ, "ಸಾಹೇಬ್‌ಮಿಯ್ಯಾ, ಕುಸ್ತಿಯ ವ್ಯವಸ್ಥೆ ಆದಹಾಗಾಯಿತು!" ಇಬ್ಬರೂ ನಡಿಗೆಯನ್ನು ಜೋರುಮಾಡಿ ಹೊರಟರು.

ಬೇಚೂ ಮಿಸಿರ, ಶಹಾಬುದ್ದೀನರು ಜ್ವಾಲಾಪ್ರಸಾದನ ಮನೆ ತಲುಪಿದಾಗ ಅವನು ಜಗ್ಗೂಮಿಯ್ಯಾ, ರಹಮತ್‌ಖಾನರೊಡನೆ ಮಾತಾಡುತ್ತ ಕುಳಿತಿದ್ದ. ಬಿಶನಲಾಲ ಹೊರಗಿನ ಬಂಗಲೆಯಲ್ಲಿ ಅವರಿಗೆ ತಂಗುವ ವ್ಯವಸ್ಥೆ ಮಾಡುತ್ತಿದ್ದ. ಶಹಾಬುದ್ದೀನ, ಬೇಚೂ ಮಿಸಿರರು ಬಂದೊಡನೆಯೇ ಮಾತು ನಿಂತಿತು. ಜ್ವಾಲಾಪ್ರಸಾದ ಎದ್ದು ಬಂದು

ಇವರಿಬ್ಬರನ್ನೂ ಸ್ವಾಗತಿಸಿದ, "ಬನ್ನಿ ಮಿಸರ್‌ಜೀ, ಬನ್ನಿ ಶಹಾಬುದ್ದೀನ್ ಸಾಹೇಬ್. ಈ ಸರಿರಾತ್ರೀಲಿ ಯಾಕೆ ಬರೋ ತೊಂದರೆ ತೊಗೊಂಡಿರಿ. ಎಲ್ಲ ಕ್ಷೇಮ ತಾನೆ? ಏನಾದರೂ ವಿಶೇಷವಿತ್ತೆ?"

ಬೇಚೂ ಮಿಸಿರ ಕುಳಿತುಕೊಳ್ಳುತ್ತ ಹೇಳಿದ, "ಅಂಥ ವಿಶೇಷವೇನೂ ಇಲ್ಲ, ಯಾಕೋ ಮನೇಲಿ ಬೇಜಾರಾಯಿತು. ಬಹಳ ದಿನದಿಂದ ಹುಜೂರರ ಮನೇ ಕಡೆ ಹೋಗಿಲ್ಲ ಅಂತ ಯೋಚಿಸಿ ಹೊರಟುಬಂದೆ. ಈ ಕಡೆ ಬರ್‍ತಿದ್ದಾಗ ದಾರೀಲಿ ಸಾಹೇಬ್‌ಮಿಯ್ಯಾ ಸಿಕ್ಕಿದ. ಇವತ್ತು ತಹಸೀಲದಾರರಲ್ಲೇ ಕಾಡುಹರಟೆ ಅಂತ ಅಂದಾಗ ಇವನೂ ಜೊತೇಲಿ ಬಂದ." ಮಿಸಿರ್‌ಜೀ ಜಗ್ಗೂಪೈಲ್ವಾನನನ್ನು ಲಾಟೀನಿನ ಬೆಳಕಿನಲ್ಲಿ ದೃಷ್ಟಿಸಿ ನೋಡುತ್ತ ಮುಂದು ವರಿಸಿದ, "ಈಚೆಗೆ ಸೋರಾವಿನಲ್ಲಿ ಎಲ್ಲಿ ನೋಡಿದರೂ ಗರಡಿ ಕುಸ್ತಿಗಳದ್ದೇ ಮಾತು. ಠಾಕೂರ್ ವೀರಭಾನನ ಆಶ್ರಯದಲ್ಲಿ ಬುದ್ಧೂಸಿಂಹನ ಗರಡಿ ನಡೀತಿರೋದಂತೂ ಸರಿಯೇ ಸರಿ. ನಿಮ್ಮ ಆಶ್ರಯದಲ್ಲಿ ನಿಮ್ಮ ತಮ್ಮ ಬಿಶನಲಾಲ ಉರೂಫ್ ಬಿಶನ ಗುರು ಹುಣಿಸೇ ಹನುಮಂತನ ಗುಡಿಯ ತೋಟದಲ್ಲಿ ಒಂದು ಗರಡಿಮನೆ ತೆಗೆದಿದಾರೆ ಅಂತ ಕೇಳಿದೆ."

ಜ್ವಾಲಾಪ್ರಸಾದ ಸವರಿಸಿ ಕುಳಿತುಕೊಳ್ಳುತ್ತ ಹೇಳಿದ, "ಸುದ್ದಿ ಹಾರಾಡಿಕೊಂಡು ಬಂದು ನನ್ನ ಕಿವಿಗೂ ಬಿತ್ತು. ಆದರೆ ನಾನು ಆ ಕಡೆ ಅಷ್ಟಾಗಿ ಗಮನ ಕೊಡಲಿಲ್ಲ." ಜ್ವಾಲಾಪ್ರಸಾದ ತಮ್ಮನನ್ನು ಕೂಗಿದ, "ಬಿಶನೂ, ಸ್ವಲ್ಪ ಇಲ್ಲಿ ಬಾ."

ಬಿಶನಲಾಲ ಓಡೋಡುತ್ತ ಬಂದು "ಏನು?" ಅಂದ.

"ಹುಣಿಸೇ ಹನುಮಂತನ ತೋಟದಲ್ಲಿ ನೀನು ಗರಡಿಮನೆ ಶುರುಮಾಡಿದಿ ಅಂತ ನಾಯಬ್ ಸಾಹೇಬರು ಹೇಳ್ತಿದಾರೆ, ನಿಜವೇ?"

ಇದಕ್ಕೆ ಬಿಶನಲಾಲ ಏನೊಂದೂ ಉತ್ತರ ಕೊಡಲಿಲ್ಲ. ಸುಮ್ಮನೆ ತಲೆತಗ್ಗಿಸಿಕೊಂಡು ಮೌನವಾಗಿ ನಿಂತಿದ್ದ.

ಇದೇ ಹೊತ್ತಿಗೆ ಜಗ್ಗೂಪೈಲ್ವಾನ ಜೋರಾಗಿ ನಕ್ಕ, "ವಾಹ್ವಾ, ಮೇರೇ ಶೇರ್! ಸೋರಾವಿಗೆ ಬಂದ ತಕ್ಷಣ ಗುರುವಾಗಿಬಿಟ್ಟೆ, ಜಗ್ಗೂಪೈಲ್ವಾನನ ಶಾಗಿರ್ದ್ ಉಳೀತು ನೋಡು! ಹುಜೂರ್, ಹುಡುಗ ತುಂಬ ಶಕ್ತಿವಂತ, ಯೋಗ್ಯ, ಒಳ್ಳೆಯವನು. ಸ್ವಲ್ಪ ಸರಿಯಾಗಿ ಸಾಧನೆ ಮಾಡಿದರೆ ಈ ನೆರೆಹೊರೇಲಿ ಇವನನ್ನ ಎದುರಿಸೋ ಗಂಡು ಯಾರೂ ಇಲ್ಲ."

ಬೇಚೂ ಮಿಸಿರನಿಗೆ ಈಗ ಸಮಯ ಸಿಕ್ಕಿತು. "ಸ್ವಾಮಿ, ಈಚೆಗೆ ಬಹಳ ದಿನದಿಂದ ಸೋರಾವಿನಲ್ಲಿ ಏನೂ ಚಟುವಟಿಕೆಯೇ ಇಲ್ಲದೆ ಹೋಗಿದೆ ಅಂತ ಸಾಹೇಬ್‌ಮಿಯ್ಯಾ ಹೇಳ್ತಾನೆ. ಪೋಲೀಸರ ಕಡೆಯಿಂದ ಒಂದು ಕುಸ್ತಿ ಏರ್ಪಾಡಾದರೆ ಹೇಗಿರುತ್ತೆ? ಪುಣ್ಯಕ್ಕೆ ಜಗ್ಗೂಪೈಲ್ವಾನರು ಇಲ್ಲಿ ಬಂದಿದಾರೆ. ಬುದ್ಧೂಸಿಂಹ—ಜಗ್ಗೂಪೈಲ್ವಾನರ

ಒಂದು ಜೋಡಿ ಬಿದ್ದರೆ ಜನ ತುಂಬ್ತಾರೆ. ಇನ್ನೊಂದು ಜೋಡಿ ಬಿಶನ್–ಮೈಕೂಸಿಂಹ ರದ್ದು; ಉಳಿದ ನಾಲ್ಕೈದು ಜೋಡೀನ ಪೋಲೀಸ್ ಪ್ಯಾದೆಗಳಲ್ಲಿ ಕೂಡಿಸೋಣವಂತೆ."

ಜ್ವಾಲಾಪ್ರಸಾದ ಸ್ವಲ್ಪ ಯೋಚಿಸಿ ಹೇಳಿದ, "ಹ್ಞಾ, ವಿಚಾರ ಕೆಟ್ಟದೇನಲ್ಲಾ !"

ಬೇಚೂ ಮಿಸಿರ, ಶಹಾಬುದ್ದೀನರು ಹೋದಮೇಲೆ ಜ್ವಾಲಾಪ್ರಸಾದ ಬಿಶನಲಾಲ ನಿಗೆ ಜಗ್ಗೂಪೈಲ್ವಾನ, ರಹಮತ್‌ಖಾನರ ಊಟದ ವ್ಯವಸ್ಥೆ ಮಾಡಲು ಹೇಳಿದ. ಬಿಶನ ಲಾಲನನ್ನು ಕಳಿಸಿ ಜ್ವಾಲಾಪ್ರಸಾದ ಮಾತಿನ ಸರಣಿಯನ್ನು ಮತ್ತೆ ಎತ್ತಿಕೊಂಡ, "ರಹಮತ್‌ಖಾನ್, ಶ್ಯಾಮೂನ ಜೊತೆ ಮಾತನಾಡಿದ ಮೇಲೆಯೇ ಯಾವುದು ನಿಜ, ಯಾವುದು ಸುಳ್ಳು ಅನ್ನೋದನ್ನ ಗೊತ್ತುಮಾಡಿಕೋಬಲ್ಲೆ. ಆದರೆ ಇಷ್ಟು ಭರವಸೆ ಕೊಡ್ತೀನಿ. ಇದು ಯಾವುದರಲ್ಲೇ ಆಗಲಿ, ನನ್ನ ಕೈವಾಡ ಇಲ್ಲ, ಇವುಗಳ ವಿಷಯಂ ನನಗೆ ಗೊತ್ತೂ ಇಲ್ಲ. ನನಗೆ ಸಲೀಮಾಳ ಆಸ್ತಿ ಸುತರಾಂ ಬೇಕಾಗಿಲ್ಲ."

ರಹಮತ್‌ಖಾನ್ ಬಾಯಿ ತೆರೆಯುವ ಮೊದಲೇ ಜಗ್ಗೂಪೈಲ್ವಾನ್ ಹೇಳಿದ, "ಹುಜೂರರ ಕೀರ್ತಿ ಎಲ್ಲೆಲ್ಲೂ ಬೆಳಗ್ತಾ ಇದೆ. ಹುಜೂರರು ಎಷ್ಟು ಧರ್ಮಿಷ್ಠರು, ಎಂಥ ಉದಾರಹೃದಯಿಗಳು, ಸತ್ಯವಂತರು, ಪ್ರಾಮಾಣಿಕರು ಅನ್ನೋದನ್ನ ಪ್ರಪಂಚವೇ ಡಂಗುರ ಸಾರ್‍ತಿದೆ. ಸಲೀಮಾಳ ಹಿಸ್ಸೇನ ಹುಜೂರರ ಹೆಸರಿಗೆ ಮಾಡಿಬಿಟ್ಟಿದೀನಿ ಅಂತ ಶ್ಯಾಮಲಾಲ ಹೇಳಿದಾಗ ನನಗಂತೂ ನಂಬಿಕೆಯಾಗಲಿಲ್ಲ. ಹುಜೂರ್, ಈ ರಹಮತ್ ಖಾನ್ ಬಲು ಬಡವ. ವ್ಯಾಜ್ಯ ಕಾಯೋದಕ್ಕೆ ಅವನಿಗೆ ಸಾಮರ್ಥ್ಯ ಎಲ್ಲಿ ಬಂತು ! ಮವೂನಲ್ಲಿ ಬಳೆಅಂಗಡಿ ಇಟ್ಟುಕೊಂಡು ಹೊಟ್ಟೆ ಹೊರಕೋತಾನೆ. ಗಂಡಹೆಂಡತಿ ಇಬ್ಬರೂ ಹಗಲೂ ರಾತ್ರಿ ದುಡೀಬೇಕು, ಆಗಲೇ ಎರಡು ಹೊತ್ತಿನ ರೊಟ್ಟಿ ಗಿಟ್ಟೋದು. ಆ ಕೆಲಸಬಿಟ್ಟು ವ್ಯಾಜ್ಯಕ್ಕಿಳಿದರೆ ಹೊಟ್ಟೆಗಿಲ್ಲದೆ ಸಾಯೋ ಗತಿ ಬರುತ್ತೆ !"

ಜ್ವಾಲಾಪ್ರಸಾದನಿಗೆ ಈಗ ಈ ಪ್ರಸಂಗ ಬೇಸರ ತಂದಿತ್ತು, "ಜಗ್ಗೂಪೈಲ್ವಾನ್, ದಾವಾ ಹಾಕಿದೀರಿ ಅಂದಮೇಲೆ ಅದನ್ನ ಕೊನೆಮುಟ್ಟೋವರೆಗೆ ನಡಸಲೇಬೇಕಾಗುತ್ತೆ, ತೀರ್ಪಿಗೆ ಕಾಯಬೇಕಾಗುತ್ತೆ. ಆದರೆ ನಾನು ಇಷ್ಟು ಮಾತುಕೊಡ್ತೀನಿ, ನನ್ನ ಕಡೆಯಿಂದ ಅಧಿಕಾರಿಗಳಮೇಲೆ ಯಾವ ತರಹದ ಬೀಳಬಾರದ ಒತ್ತಾಯವೂ ಬೀಳೋಲ್ಲ. ಈ ಮೊಕದ್ದಮೇಲಿ ಯಾವ ಮುತುವರ್ಜೀನೂ ನಾನು ವಹಿಸೋಲ್ಲ, ಜಡ್ಜಿ ಪಂಡಿತ ಗಿರಿಜಾ ಶಂಕರರು ತುಂಬ ನ್ಯಾಯಿಷ್ಠರು. ಅವರ ಮೇಲೆ ಭರವಸೆ ಇಟ್ಟು ಮೊಕದ್ದಮೇನ ಸರಿಯಾಗಿ ನಡಸು."

ಜಗ್ಗೂಪೈಲ್ವಾನ್ ಮತ್ತು ರಹಮತ್‌ಖಾನರು ಯಾವ ಆಶೆಯಿಟ್ಟುಕೊಂಡು ಬಂದಿದ್ದರೋ ಅದು ಪೂರೈಸಿತು. ಜ್ವಾಲಾಪ್ರಸಾದನ ಬಗ್ಗೆ ಅವರು ಕೇಳಿದ್ದುದೆಲ್ಲವೂ ಹದಿನಾರಾಣೆ ನಿಜವಾಗಿತ್ತು. ಮಾರನೆಯ ದಿನ ಬೆಳಗ್ಗೆ ರಹಮತ್‌ಖಾನ್ ಊರಿಗೆ ಹಿಂದಿರುಗಿದ. ಆದರೆ ಜಗ್ಗೂಪೈಲ್ವಾನನನ್ನು ಬಿಶನಲಾಲ, ಬೇಚೂ ಮಿಸಿರ, ಶಹಾ ಬುದ್ದೀನ್‌ಖಾನ್ ಮೂವರೂ ಸೇರಿ ಉಳಿಸಿಕೊಂಡರು.

ಅವತ್ತು ಸಂಜೆಯೇ ಪಂಡಿತ ಬೇಜೂ ಮಿಸಿರ ಶಹಾಬುದ್ದೀನ್‌ಖಾನನನ್ನೂ ಕರೆದುಕೊಂಡು ಠಾಕೂರ್ ವೀರಭಾನಸಿಂಹನಲ್ಲಿಗೆ ಕುಸ್ತಿಯ ಪ್ರಸ್ತಾಪಮಾಡಿಬರಲು ಹೋದರು. ಕುಸ್ತಿಯ ಏರ್ಪಾಡಾಗಿದ್ದುದು ಠಾಣೆಯ ಕಡೆಯಿಂದ. ಕುಸ್ತಿಯ ಪ್ರಮುಖ ಜೋಡಿಯೆಂದರೆ ಫತಹಪುರದ ಜಗ್ಗೂ ಪೈಲ್ವಾನ್ ಹಾಗೂ ಸೋರಾವಿನ ಬುದ್ಧೂ ಪೈಲ್ವಾನರದ್ದು. ಎರಡನೆಯ ಜೋಡಿ ಪೈಲ್ವಾನ್ ಮೈಕೂಸಿಂಹ-ಪೈಲ್ವಾನ್ ಬಿಶನರದ್ದು. ಇದಲ್ಲದೆ ಠಾಣೆಯ ಪ್ಯಾದೆಗಳ ಐದು ಬೇರೆ ಬೇರೆ ಜೋಡಿಗಳಿದ್ದವು. ಠಾಕೂರ್ ವೀರಭಾನಸಿಂಹ ಬುದ್ಧೂಸಿಂಹನನ್ನು ಕರಸಿ, ಅವನ ಮುಂದೆ ಪ್ರಸ್ತಾಪವಿಟ್ಟ. ಬುದ್ಧೂಸಿಂಹ ಸಾಕಷ್ಟು ಹಿಂದೇಟು ಹೊಡೆದ. ಆದರೆ ಕೊನೆಗೆ ಅವನು ಪ್ರಸ್ತಾಪವನ್ನು ಒಪ್ಪಿಕೊಳ್ಳಲೇ ಬೇಕಾಯಿತು.

ಕುಸ್ತಿಯ ತಯಾರಿ ತುಂಬ ಸಂಭ್ರಮದಿಂದ ಶುರುವಾಯಿತು. ಅಲಹಾಬಾದ್ ಪಟ್ಟಣದಲ್ಲೂ ಇತರ ತಹಸೀಲುಗಳಲ್ಲೂ ನೋಟೀಸ್ ಹಂಚಲಾಯಿತು. ಎರಡೂ ಗರಡಿಗಳಲ್ಲಿ ಜೋರಾಗಿ ಸಿದ್ಧತೆಗಳಾಗತೊಡಗಿದವು.

ಕುಸ್ತಿಗೆ ಎರಡು ದಿನವಿದೆಯೆನ್ನುವಾಗ ಬುದ್ಧೂಪೈಲ್ವಾನ್ ಬಿಶನಗುರುವಿನ ಗರಡಿಗೆ ಬಂದ. ಆಗ ಜಗ್ಗೂ ಉಸ್ತಾದ್ ಬಿಶನಗುರುವಿಗೆ ಸಾಧನೆ ಮಾಡಿಸುತ್ತಿದ್ದ. ಸಾಧನೆ ಮುಗಿದ ಮೇಲೆ ಬುದ್ಧೂಪೈಲ್ವಾನ್ ಜಗ್ಗೂಪೈಲ್ವಾನನನ್ನು ಏಕಾಂತದಲ್ಲಿ ಕರೆದು ಹೇಳಿದ, "ಜಗ್ಗೂ ಉಸ್ತಾದ್, ನಿನಗೆ ಶರಣಾಗಿದೀನಿ ! ಈಗನನ್ನ ಮಾನ ನಿನ್ನ ಕೈಯಲ್ಲಿದೆ. ನೋಡು."

ಬುದ್ಧೂಪೈಲ್ವಾನನ ದೈನ್ಯ ತುಂಬಿದ ಮುಖಮುದ್ರೆಯನ್ನು ನೋಡಿ ಜಗ್ಗೂ ಪೈಲ್ವಾನನಿಗೆ ನಗು ಬಂತು, "ಏನಾಗಬೇಕು ಅಂತಿ ?"

"ಏನು ಹೇಳಲಿ, ಠಾಕೂರ್ ವೀರಭಾನಸಿಂಹನ ಆಶ್ರಯದಲ್ಲಿ ಬೆಳೀತಿದೀನಿ. ಈ ಕುಸ್ತೀಲಿ ಸೋತರೆ ಅವನ ರಕ್ಷಣೆ ತಪ್ಪಿಹೋಗುತ್ತೆ."

ಈಚೀಚೆಗೆ ಜಗ್ಗುವಿಗೂ ತನ್ನ ಮೇಲೆ ಭರವಸೆ ಹೋಗುತ್ತ ಬಂದಿತ್ತು. ಬುದ್ಧೂಸಿಂಹನ ಮಾತು ಕೇಳಿ ಅವನೊಳಗೆ ಸಾಹಸ ಜಾಗ್ರತವಾಯಿತು. "ಹೌದು. ಹಾಗಾಗಕೂಡದು. ಆದರೆ ಏನು ಮಾಡೋದು ?"

ಬುದ್ಧೂಸಿಂಹ ಕೊಂಚ ಯೋಚಿಸಿ ಹೇಳಿದ, "ನಿನ್ನನ್ನ ಕುಸ್ತೀಲಿ ಸೋತುಬಿಡು ಅಂತ ಹೇಳೋದು ತಪ್ಪಾಗುತ್ತೆ. ಆದರೆ ಇಬ್ಬರಿಗೂ ಸಮವಾದರೆ ಹೇಗಿರುತ್ತೆ? ಅದರಿಂದ ಇಬ್ಬರ ಮರ್ಯಾದೆಯೂ ಉಳಿಯುತ್ತೆ."

ಜಗ್ಗು ಈಗ ತನ್ನ ತುರಫನ್ನು ಬಿಟ್ಟ, "ಆದರೆ ಒಂದು ಶರತ್ತು. ಬಿಶನ್ ಮೈಕೂನ ಚಿತ್ತುಮಾಡೋಕೆ ಒಪ್ಪಿಕೋಬೇಕು."

ಬುದ್ಧೂಸಿಂಹ ಸಂಕಟದಲ್ಲಿ ಸಿಕ್ಕಿಬಿದ್ದ. ಮೈಕೂಸಿಂಹ ಪ್ರಾಬಲ್ಯಕ್ಕೆ ಬರುತ್ತಿದ್ದಂತಹ ಉದ್ಭಟ ಯುವಕ. ಅವನನ್ನು ಬಿಶನಲಾಲನಿಗೆ ಸೋಲುವಂತೆ ಒಪ್ಪಿಸುವುದು ಕಷ್ಟವಷ್ಟೇ ಅಲ್ಲ, ಅಸಾಧ್ಯದ ಮಾತಾಗಿತ್ತು.

ಬುದ್ಧೂಸಿಂಹ ದೈನ್ಯದಿಂದ ಹೇಳಿದ, "ಉಸ್ತಾದ್, ಈ ಮೈಕೂಸಿಂಹ ನನ್ನ ಕೈವಾರಿದವನು. ಬೇರೆ ಏನಾದರೂ ದಾರಿ ಹುಡುಕು."

ಜಗ್ಗೂ ಉಸ್ತಾದ್ ಹೇಳಿದ, "ನಿನಗೆ ಠಾಕೂರ್ ವೀರಭಾನಸಿಂಹ ಆಶ್ರಯಕೊಟ್ಟಿದ್ದರೆ ಬಿಶನಲಾಲ ತಹಸೀಲದಾರರ ತಮ್ಮ. ತಮ್ಮ ಸೋತರೆ ತಹಸೀಲದಾರರಿಗೆ ಅವಮಾನವಾಗುತ್ತೆ."

ಬುದ್ಧೂಸಿಂಹ ಸ್ವಲ್ಪ ಯೋಚಿಸಿದ, "ನೀನು ಹೇಳೋದು ಸರಿ, ಪೈಲ್ವಾನ್. ನನಗೇನು ಕೆಟ್ಟಬುದ್ಧಿ ಬಂತೋ, ಇರಲಾರದೆ ಈ ಆಫೀಸರ ಹುಡುಗನ್ನ ಮೇಲೆ ಎತ್ತಿ ಹಾಕ್ಕೊಂಡೆ. ಇದೆಲ್ಲಾ ಆ ಮೈಕೂನ ಚಿತಾವಣೆಯಿಂದ. ಒಳ್ಳೇದು, ಮೈಕೂ ಬಿಶನನಿಗೆ ಸೋಲೋಕ್ಕೆ ಒಪ್ಪದೇ ಹೋದರೆ ನಾಡಿದ್ದು ಅವನು ಅಖಾಡಾಕ್ಕೇ ಬರೋಲ್ಲ. ಒಪ್ಪಿಗೆಯೋ ? "

" ಓಹೋ, ಒಪ್ಪಿದೆ."

ಕುಸ್ತಿಯ ದಿನ ದೂರದೂರದಿಂದೆಲ್ಲಾ ಜನ ಟಿಕೆಟ್ ಕೊಂಡು ಆಟ ನೋಡಲು ಬಂದಿದ್ದರು. ಸೋರಾವಿನಲ್ಲಿ ಒಂದು ಜಾತ್ರೆಯೇ ಸೇರಿತ್ತು. ಸಣ್ಣಪುಟ್ಟ ಜೋಡಿಗಳಾದಮೇಲೆ ಬಿಶನಗುರು–ಪೈಲ್ವಾನ್ ಮೈಕೂಸಿಂಹರ ಹೆಸರನ್ನು ಕೂಗಲಾಯಿತು. ಲಂಗೋಟಿ ಕಟ್ಟಿ ತಯಾರಾಗಿ ನಿಂತಿದ್ದ ಬಿಶನಲಾಲ ಅಖಾಡಾಕ್ಕೆ ಧುಮುಕಿದ. ಆದರೆ ಎಲ್ಲಿ ನೋಡಿದರೂ ಮೈಕೂಸಿಂಹನ ಪತ್ತೆಯೇ ಇರಲಿಲ್ಲ. ಸ್ವಲ್ಪ ಹೊತ್ತು ಮೈಕೂಸಿಂಹನಿಗಾಗಿ ಕಾದು ಅವನು ಮೈದಾನ ಬಿಟ್ಟು ಹೋದನೆಂದು ಸಾರಲಾಯಿತು. ಜನ ಪಿಸುಮಾತಿಗೆ ಶುರುಮಾಡಿದರು. ಕೊಂಚ ಗದ್ದಲವೂ ಎದ್ದಿತು. ಆದರೆ ಅಷ್ಟು ಹೊತ್ತಿಗಾಗಲೇ ಪೈಲ್ವಾನ್ ಬುದ್ಧೂಸಿಂಹ – ಪೈಲ್ವಾನ್ ಜಗ್ಗೂಸಿಂಹರ ಜೋಡಿ ಕೂಗಲಾಯಿತು.

ಬುದ್ಧೂಸಿಂಹ–ಜಗ್ಗೂಸಿಂಹರ ಕುಸ್ತಿ ಇನ್ನೂ ಅದೇ ಆಗ ಶುರುವಾಗಿತ್ತು. ಮೈಕೂಸಿಂಹ ಓಡೋಡುತ್ತ ಕುಸ್ತಿಯ ಚಪ್ಪರಕ್ಕೆ ಬಂದು, ನೇರವಾಗಿ ಜ್ವಾಲಾಪ್ರಸಾದನ ಮುಂದೆ ಹೋಗಿ, "ಹುಜೂರ್, ನಾನೇನೂ ಅಖಾಡಾಕ್ಕೆ ಬೆನ್ನು ತೋರಿಸಿ ಓಡಿಹೋಗಿರಲಿಲ್ಲ. ಈ ನನ್ನ ಗುರು ಪೈಲ್ವಾನ್ ಬುದ್ಧೂಸಿಂಹ ಇದಾನಲ್ಲ, ಅವನು ನನ್ನನ್ನ ಬಲವಂತದಿಂದ ಕೋಣೇಲಿ ಕೂಡಿಹಾಕಿ ಬಂದಿದ್ದ. ಜಗ್ಗೂಪೈಲ್ವಾನನ ಜೊತೆ ಒಂದಾಗಿ ಜೋಡಿ ಸಮಮಾಡಿಕೊಳ್ಳೋಕೆ ಒಪ್ಪಿಕೊಂಡಿದಾನೆ" ಎಂದು ಅಲ್ಲಿದ್ದವರೆಲ್ಲರಿಗೂ ಕೇಳಿಸುವಂತೆ ಮೈಕೂಸಿಂಹ ಜೋರಾಗಿ ಹೇಳಿದ.

ಮೈಕೂಸಿಂಹನ ಈ ದೋಷಾರೋಪಣೆಯಿಂದ ಜನರಲ್ಲಿ ಕೋಲಾಹಲವೆದ್ದಿತು. ಕೆಲವರು ಎದ್ದು, "ಈ ಮೋಸ ನಡೆಯೋಲ್ಲ, ನಮ್ಮ ದುಡ್ಡು ವಾಪಸು ಮಾಡಿ !" ಎಂದು ಕಿರಚಲು ಶುರುಮಾಡಿದರು.

ಹೀಗೆ ಬಿಕ್ಕಟ್ಟು ಉಂಟಾದುದನ್ನು ಕಂಡು ಜಗ್ಗೂ ಪೈಲ್ವಾನ್, ಬುದ್ಧೂಸಿಂಹರು ಅವಾಕ್ಕಾದರು. ಜಗ್ಗೂ ಬುದ್ಧೂಸಿಂಹನ ಕಡೆ ಪ್ರಶ್ನಾರ್ಥಕವಾಗಿ ನೋಡಿದ. ಬುದ್ಧೂಸಿಂಹ ಜಗ್ಗುವಿನ ಕಿವಿಯಲ್ಲಿ ಉಸುರಿದ, "ಈ ಸೂಳೇಮಗ ಮೈಕೂ ಏನು ಮಾಡಿಬಿಟ್ಟ, ನೋಡಿದೆಯಾ? ನಾನು ಇವನನ್ನ ಕೂಡಿಹಾಕಿ ಬಂದಿದ್ದೆ. ಹೇಗೆ ಬಾಗಿಲು ಒಡಕೊಂಡು ಬಂದನೋ ದೇವರೇ ಬಲ್ಲ. ಏನು ಹೇಳಲಿ, ಇಷ್ಟು ಗುಂಪಿದೆ ಇಲ್ಲಿ. ಇಲ್ಲದೆ ಹೋಗಿದ್ದರೆ ಈಗಲೇ ಇವನ ಕತ್ತು ತಿರಚಿಹಾಕ್ತಿದ್ದೆ!"

ಬುದ್ಧೂಸಿಂಹ ಸುಳ್ಳಾಡುತ್ತಿಲ್ಲವೆಂದು ಜಗ್ಗುವಿಗೆ ಸ್ಪಷ್ಟವಾಯಿತು. ಅವನ ಮುಖಮುದ್ರೆಯನ್ನು ಕಂಡು ಕನಿಕರ ಹುಟ್ಟಿತು. ಅವನು ಬುದ್ಧೂಸಿಂಹನ ಕಿವಿಯಲ್ಲಿ ಹೇಳಿದ, "ಯೋಚನೆ ಮಾಡಬೇಡ, ಪೈಲ್ವಾನ್. ಕೊಟ್ಟ ಮಾತು ಉಳಿಸಿಕೊಂಡೆ, ದೇವರು ನಿನಗೆ ಒಳ್ಳೇದು ಮಾಡ್ತಾನೆ." ಇಬ್ಬರೂ ಒಬ್ಬರನ್ನೊಬ್ಬರು ಕೊಂಚ ಹೊತ್ತು ನೋಡುತ್ತಿದ್ದರು.

ಜಗ್ಗು ಅಖಾಡಾದಿಂದ ಮುನ್ನುಗ್ಗಿ ಕುಸ್ತಿಯ ವ್ಯವಸ್ಥಾಪಕರ ಮುಂದೆ ನಿಂತು ಅಬ್ಬರಿಸಿದ, "ಇದೇನು ಗದ್ದಲ ಎಬ್ಬಿಸಿದಾರೆ ಜನ? ಕುಸ್ತಿ ಆಗೋದಿಲ್ಲ ಅನ್ನೋದಾದರೆ ನಾವು ಹೋಗೋಣವೇನು?"

ಜಗ್ಗೂ ಪೈಲ್ವಾನನ ಈ ಆರ್ಭಟದಿಂದ ಜನ ಕಕ್ಕಾಬಿಕ್ಕಿಯಾದರು. ಗದ್ದಲ ಕಡಿಮೆಯಾಗತೊಡಗಿತು. ಬೇಚೂ ಮಿಸಿರ ಎದ್ದುನಿಂತು ಕುಸ್ತಿ ಶುರುವಾಗಲಿದೆಯೆಂದೂ ಮೈಕೂಸಿಂಹ ಹೇಳಲಿರುವುದನ್ನು ಆಮೇಲೆ ಕೇಳಲಾಗುವುದೆಂದೂ ಘೋಷಿಸಿದ.

ಜಗ್ಗೂ ಪೈಲ್ವಾನ, ಬುದ್ಧೂಸಿಂಹರು ಮುಂದೆ ಬಂದು ಕೈಕುಲುಕಿದರು. ಮತ್ತೆ ಕುಸ್ತಿ ಆರಂಭವಾಯಿತು. ಜಗ್ಗೂ ಪೈಲ್ವಾನ ಬುದ್ಧೂಸಿಂಹನಿಗಿಂತ ಒಂದು ಕೈ ಮೇಲಾಗಿದ್ದನೆಂಬುದು ಸ್ಪಷ್ಟವಾಗಿತ್ತು. ಇಬ್ಬರು ಪೈಲ್ವಾನರೂ ಒಬ್ಬರನ್ನೊಬ್ಬರು ಪಟ್ಟಿಗೆ ಸಿಕ್ಕಿಸುತ್ತಿದ್ದರು, ಪಟ್ಟುಬಿಡುತ್ತಿದ್ದರು. ಸುಮಾರು ಐದು ನಿಮಿಷಕಾಲ ಇದೇ ವರಸೆ ನಡೆಯುತ್ತಿತ್ತು. ಆಮೇಲೆ ಜಗ್ಗೂ ಬುದ್ಧೂಸಿಂಹನನ್ನು ನೆಲಕ್ಕೆ ಕೆಡವಿ ಹಿಂದೆ ಮುಂದೆ ನೋಡದೆ ಗುದ್ದತೊಡಗಿದ. ಆದರೆ ಬುದ್ಧೂಸಿಂಹ ಮಾತ್ರ ಚಿತ್ತಾಗಲಿಲ್ಲ.

ಜನ ತುಂಬ ಉತ್ಸುಕತೆಯಿಂದ ಈ ಕುಸ್ತಿಯನ್ನು ನೋಡುತ್ತಿದ್ದರು. ಅವರಿಗೆ ಮಜವೆನಿಸಿತ್ತು. ಆದರೆ ಇದ್ದಕ್ಕಿದ್ದಂತೆ ಅವರು ಧೈರ್ಯಗೆಡಲಾರಂಭಿಸಿದರು. ಮೈಕೂಸಿಂಹ ಹೇಳಿದ್ದು ನಿಜ ಅಂತ ಕಾಣುತ್ತೆ ಎಂದು ಅವರವರಲ್ಲೇ ಕಿವಿಮಾತು ಶುರುವಾಯಿತು. ಅದೇ ಹೊತ್ತಿಗೆ ಏಕಾಏಕಿ ಜಗ್ಗೂ ಪೈಲ್ವಾನ ಬುದ್ಧೂಸಿಂಹ ನೆಲಕ್ಕೆ ಬೀಳುವಂತೆ ಪಟ್ಟುಹಾಕಿದಾಗ ಸ್ವತಃ ತಾನೇ ಚಿತ್ತಾದುದೇ ಅಲ್ಲದೇ ಬುದ್ಧೂಸಿಂಹ ಅವನ ಮೇಲೆ ಸವಾರಿ ಮಾಡುತ್ತಿದ್ದ!

ಬುದ್ಧೂಸಿಂಹ ಎದ್ದು ಅಖಾಡಾದಿಂದ ಹೊರಬಂದು ಜ್ವಾಲಾಪ್ರಸಾದನಿಗೆ ಸಲಾಮು ಮಾಡಿದ. ಆಮೇಲೆ ಠಾಕೂರ್ ವೀರಭಾನಸಿಂಹನಿಗೆ ಕಾಲುಮುಟ್ಟಿ ನಮಸ್ಕಾರ

ಮಾಡಿದ. ಬುದ್ಧೂಸಿಂಹ ಜಗ್ಗೂಪೈಲ್ವಾನನನ್ನು ಅಪ್ಪಳಿಸಿ ನೆಲಕ್ಕೆ ಕೆಡವಿದನೆಂದು ಗುಲ್ಲೆದ್ದಿತು. ಜಗ್ಗೂಪೈಲ್ವಾನ ತಲೆ ತಗ್ಗಿಸಿಕೊಂಡು ಅಖಾಡಾದಿಂದ ಹೊರಬಿದ್ದ.

ಈಗ ಮೈಕೂಸಿಂಹನನ್ನು ಅವನೇನು ಹೇಳುವುದಿದೆಯೆಂದು ಕೇಳಿದರು. ಬುದ್ಧೂಸಿಂಹ ಜಗ್ಗೂಪೈಲ್ವಾನನ ಜೊತೆ ಒಂದಾಗಿದ್ದನೆಂಬುದು ಸುಳ್ಳೆಂದು ಪ್ರಮಾಣವಾಗಿತ್ತು. ಮೈಕೂಸಿಂಹ ತಬ್ಬಿಬ್ಬಾದ. ಅದೇ ಹೊತ್ತಿಗೆ ಜಗ್ಗೂಪೈಲ್ವಾನ ಮುಂದೆ ಬಂದು ಹೇಳಿದ, "ಈ ಹುಡುಗ ತಪ್ಪು ತಿಳಕೊಂಡಿದಾನೆ, ಹುಜೂರ್. ಏನೇ ಆಗಲಿ, ಬಿಶನಲಾಲ ಇಲ್ಲಿ ಹಾಜರಿದಾನೆ. ಇವರಿಬ್ಬರ ಜೋಡಿಯಾಗಲಿ."

ಜನ ಚಪ್ಪಾಳೆ ತಟ್ಟಿದರು. ಆದರೆ ಬಿಶನಲಾಲನಿಗೆ ಪ್ರಜ್ಞೆಯೇ ತಪ್ಪಿದಂತಾಯಿತು. ಜಗ್ಗೂ ಮೆಲುದನಿಯಲ್ಲಿ ಬಿಶನಲಾಲನನ್ನು ಗದರಿಸಿಕೊಂಡ, "ಅರೆ, ಏನು ನೋಡ್ತಿ, ಮುನ್ನುಗ್ಗೋ. ದೇವರ ಇಚ್ಛೆ ಇದ್ದರೆ ನೀನೇ ಗೆಲ್ತಿ!" ಆಮೇಲೆ ಬುದ್ಧೂಸಿಂಹನ ಕಡೆ ತಿರುಗಿ ಹೇಳಿದ, "ಉಸ್ತಾದ್, ಇಬ್ಬರೂ ಪಡ್ಡೇ ಹುಡುಗರು, ತಿಳಿವಳಿಕಸ್ತರಲ್ಲ! ಆವೇಶದಲ್ಲಿ ಎಲ್ಲಾದರೂ ತಪ್ಪು ಪಟ್ಟು ಹಾಕಿಯಾರು. ಆದ್ದರಿಂದ ಈ ಕುಸ್ತಿಯ ಉಸ್ತುವಾರಿ ನಿನಗೆ ಬಿಟ್ಟದ್ದು."

ಅಖಾಡಾದಲ್ಲಿ ಜೋಡಿ ಕೂಡಿತು, ಬುದ್ಧೂಸಿಂಹ ಮಧ್ಯಸ್ಥನಾಗಿ ನಿಂತ. ಮೈಕೂಸಿಂಹ ಬಿಶನಲಾಲನೊಡನೆ ಕೈಕುಲುಕುವುದಕ್ಕಿಲ್ಲ, ಒಂದು ಪಟ್ಟು ಹಾಕಿದ. ಬಿಶನಲಾಲ ನೆಲದಿಂದ ಒಂದು ಗಜ ಮೇಲೆ ಹಾರಿ ಕೆಳಗೆ ಬಿದ್ದ. ಆದರೆ, ಅದು ಹೇಗೋ, ಬುದ್ಧೂಸಿಂಹ ಮೈಕೂಸಿಂಹ–ಬಿಶನಲಾಲರ ನಡುವೆ ಬಂದ. ಬಿಶನಲಾಲ ಮುಖಕೆಳಗಾಗಿ ಬಿದ್ದ. ಬುದ್ಧೂಸಿಂಹ ನಡುವೆ ಬಂದದ್ದರಿಂದ ಮೈಕೂಸಿಂಹನಿಗೆ ಬಿಶನಲಾಲನ ಮೇಲೆ ಸವಾರಿ ಮಾಡುವ ಅವಕಾಶವಾಗಲಿಲ್ಲ. ಬಿದ್ದೊಡನೆಯೇ ಬಿಶನಲಾಲ ಮತ್ತೆ ಎದ್ದುನಿಂತ. ಅಷ್ಟರಲ್ಲಿ ಬುದ್ಧೂಸಿಂಹ ಇವರಿಬ್ಬರ ಮಧ್ಯದಿಂದ ಅಖಾಡಾದ ಅಂಚಿಗೆ ಬಂದಿದ್ದ.

ಬಿಶನಲಾಲ–ಮೈಕೂಸಿಂಹರ ನಿಜವಾದ ಕುಸ್ತಿ ಈಗ ಶುರುವಾಯಿತು. ಬಿಶನಲಾಲ ಮೈಕೂಸಿಂಹರಿಬ್ಬರೂ ಅಖಾಡಾದ ಸುತ್ತುಹಾಕುತ್ತಿದ್ದರು—ಬಿಶನಲಾಲ ಮುಂದೆ ಮುಂದೆ, ಮೈಕೂಸಿಂಹ ಹಿಂದೆ ಹಿಂದೆ. ಆದರೆ ಇಬ್ಬರಲ್ಲಿ ಯಾರೂ ಇನ್ನೊಬ್ಬರ ಹಿಡಿತಕ್ಕೆ ಸಿಗುತ್ತಿರಲಿಲ್ಲ. ಜನ ನಗುತ್ತಿದ್ದರು, ಕೂಗುತ್ತಿದ್ದರು, ಗದ್ದಲವೆಬ್ಬಿಸುತ್ತಿದ್ದರು. ಸುಮಾರು ಐದು ನಿಮಿಷ ಹೀಗೇ ನಡೆಯುತ್ತಿತ್ತು. ಕೊನೆಗೆ ಜನರ ಕೂಗಿಗೆ ಕೆರಳಿ ಮೈಕೂಸಿಂಹ ಬಿಶನಲಾಲನನ್ನು ಹಿಡಿದೇಬಿಟ್ಟ. ಇಬ್ಬರೂ ಗಂಟುಬಿದ್ದರು. ಹೀಗೆ ಒಬ್ಬರಿಗೊಬ್ಬರು ಗಂಟುಹಾಕಿಕೊಂಡೇ ಅಖಾಡಾದ ಸುತ್ತ ಸುತ್ತುಹಾಕತೊಡಗಿದ್ದರು. ಬುದ್ಧೂಸಿಂಹನಿಗೂ ಇವರ ಪಟ್ಟನ್ನು ನೋಡುತ್ತ ಇವರ ಜೊತೆಜೊತೆಗೇ ಓಡಬೇಕಾಗುತ್ತಿತ್ತು.

ಮೈಕೂಸಿಂಹನಿಗೆ ಇದ್ದಕ್ಕಿದ್ದಂತೆ ಏನೋ ಕಾಲಿಗೆ ಸಿಕ್ಕಿ ಎಡವಿದಂತಾಯಿತು. ಅವನು ಜೋರಾಗಿ ಬಿದ್ದ. ಬೀಳಬೀಳುತ್ತ ಅವನು ಹೊಟ್ಟೆ ಕೆಳಗಾಗಿ ಬೀಳಲು ಪ್ರಯತ್ನಿಸಿದರೂ ಬಿದ್ದದ್ದು ಮಾತ್ರ ಬಲಮಗ್ಗುಲು ಕೆಳಗಾಗಿ. ತಕ್ಷಣ ಬುದ್ಧೂಸಿಂಹನ ಧ್ವನಿ ಕೇಳಿಸಿತು,

"ಬಿಶನಲಾಲ ಕುಸ್ತೀಲಿ ಗೆದ್ದ! ಶಾಭಾಷ್ ಮಗು!" ಅವನು ಬಿಶನಲಾಲನನ್ನು ಮೈಕೂಸಿಂಹನ ಹಿಡಿತದಿಂದ ಬಿಡಿಸಿದ. ಬಿಶನಲಾಲ ಅಖಾಡಾದಿಂದ ನೇರವಾಗಿ ಜಗ್ಗೂಪೈಲ್ವಾನನ ಹತ್ತಿರ ಓಡಿಬಂದು, ಗುರುವಿಗೆ ಬಗ್ಗಿ ಸಲಾಮು ಮಾಡಿದ. ಆಮೇಲೆ ತಹಸೀಲುದಾರ ಸಾಹೇಬರಿಗೂ ಸಲಾಮು ಮಾಡಿದ.

ನೋಡುತ್ತಿದ್ದ ಜನರಿಗೆ ಈ ಎರಡೂ ಕುಸ್ತಿಗಳಲ್ಲೂ ಎಲ್ಲೋ ಏನೋ ಕ್ರಮ ತಪ್ಪಿತೆಂದೆನಿಸಿತು. ಆದರೆ ಎಲ್ಲಿ, ಹೇಗೆಂಬುದು ಮಾತ್ರ ಯಾರಿಗೂ ತಿಳಿಯಲಿಲ್ಲ. ಸ್ವತಃ ಮೈಕೂಸಿಂಹನಿಗೆ ಸಹ ಅದು ತಿಳಿಯಲಿಲ್ಲ. ಆದರೆ ಕಣ್ಣಮುಂದೆ ನಡೆದುದರ ಬಗ್ಗೆ ಅವಿಶ್ವಾಸ ತಳೆಯುವುದಾದರೂ ಹೇಗೆ!

ಕುಸ್ತಿಯಾದ ಮಾರನೆಯ ದಿನ ಪೈಲ್ವಾನ್ ಬುದ್ಧೂಸಿಂಹ ಜಗ್ಗೂಪೈಲ್ವಾನನನ್ನು ಕಂಡುಹೋಗಲು ಬಂದ. ಹಿಂದಿನ ದಿನ ಸಂಜೆಯ ಕುಸ್ತಿಯ ಇನಾಮು ಐವತ್ತು ರೂಪಾಯಿ ಸೊಂಟದಲ್ಲಿತ್ತು. ಅವನು ಆ ಐವತ್ತು ರೂಪಾಯಿಗಳನ್ನು ಜಗ್ಗೂ ಪೈಲ್ವಾನನ ಮುಂದಿಡುತ್ತ ಹೇಳಿದ, "ಉಸ್ತಾದ್, ಈ ರೂಪಾಯಿ ನಿನ್ನದು. ನೀನು ನನ್ನ ಮಾನ ಉಳಿಸಿದೆಯಲ್ಲ, ಆ ಉಪಕಾರದ ಭಾರಕ್ಕೆ ಕುಸಿದುಹೋಗಿದೀನಿ. ಆ ಸೂಳೇಮಗ ಮೈಕೂಸಿಂಹನನ್ನ ಇವತ್ತು ಬೆಳಗ್ಗೆಯೇ ಗರಡಿಯಿಂದ ಹೊರಹಾಕಿದೆ."

ಜಗ್ಗೂಪೈಲ್ವಾನ್ ಹಣವನ್ನು ಸೊಂಟಕ್ಕೆ ಸಿಕ್ಕಿಸುತ್ತ ಬಿಶನಲಾಲನ ಕಡೆ ನೋಡಿದ, "ಲೋ ಮಗು, ಪೈಲ್ವಾನ್ ಬುದ್ಧೂಸಿಂಹನ ಕೈಲಿ ಗಂಡಾ ಕಟ್ಟಿಸಿಕೊ. ನೀನಿನ್ನೂ ಗುರುವಾಗೋಕ್ಕೆ ತುಂಬ ದಿನ ಬೇಕು. ಇವನು ನಿನ್ನ ಮರ್ಯಾದೆ ಉಳಿಸಿದ."

ಅವತ್ತು ಮಧ್ಯಾಹ್ನವೇ ಜಗ್ಗೂಪೈಲ್ವಾನ ಫತಹಪುರಕ್ಕೆ ಹಿಂದಿರುಗಿದ.

ಆ ಕುಸ್ತಿಯಲ್ಲಿ ನಡೆದದ್ದೊಂದೂ ಪಂಡಿತ ಬೇಚೂ ಮಿಸಿರನಿಗೆ ಹಿಡಿಸಲಿಲ್ಲ. ತಹಸೀಲದಾರರ ತಮ್ಮ ಬಿಶನಲಾಲ ಮೈಕೂಸಿಂಹನನ್ನು ಸೋಲಿಸಿಯೂ ಬುದ್ಧೂ ಸಿಂಹನ ಶಿಷ್ಯನಾಗಿದ್ದ. ಅವನ ಖ್ಯಾತಿಯ ಜೊತೆಜೊತೆಗೇ ಬುದ್ಧೂಸಿಂಹನ ಖ್ಯಾತಿಯೂ ಹೆಚ್ಚಿತ್ತು. ತನ್ನ ತಮ್ಮ ಘುಮರುವಾದರೋ ಕೇವಲ ಹನುಮಂತನ ಗುಡಿಯ ಪೂಜಾರಿಯಾಗಿಯೇ ಉಳಿದಿದ್ದ.

ಬೇಚೂ ಮಿಸಿರನಿಗೆ ವೈಯಕ್ತಿಕವಾಗಿ ಕೆಡುಕೆನಿಸುವಂತಹ ಇನ್ನೂ ಒಂದು ಸಂಗತಿ ನಡೆಯಿತು. ಹನುಮಂತನ ಗುಡಿ, ಗರಡಿಗಳಿದ್ದ ಮಾವಿನತೋಪು ಠಾಕೂರ್ ವೀರಭಾನ ಸಿಂಹನ ಜಮೀನುದಾರಿಗೆ ಒಳಪಟ್ಟಿತ್ತು. ಠಾಕೂರ್ ವೀರಭಾನಸಿಂಹ ಆ ತೋಪಿನ ಗುತ್ತಿಗೆಯ ಹಕ್ಕನ್ನು ಬಿಶನಲಾಲ ಪಾರಂಪರಿಕವಾಗಿ ಅನುಭವಿಸಬಹುದೆಂದು ಅವನ ಹೆಸರಿಗೆ ಇನಾಮಿನ ರೂಪದಲ್ಲಿ ಬರೆದುಬಿಟ್ಟ. ಆ ಗುತ್ತಿಗೆಯ ಪಟ್ಟೆಯಿಂದಾಗಿ ತೋಪಿನ ನಾಲ್ಕು ಬೀಘಾ ಜಮೀನಿನ ಜತೆಗೆ ಒಂದು ಸಿಹಿನೀರಿನ ಭಾವಿ, ಹನುಮಂತನ ಗುಡಿಗಳೆಲ್ಲವೂ ಬಿಶನಲಾಲನ ಸೊತ್ತಾದವು. ಘುಮರೂ ಆ ಗುಡಿಯಲ್ಲಿ ಬಿಶನಲಾಲನ ಪಾಲುದಾರನಾಗಿರುವುದರ ಬದಲು ಅವನ ದಯೆಯ ಮೇಲೆ ಜೀವಿಸುವಂತಾಯಿತು.

ಸೆಕೆ ಸಾಕಷ್ಟು ಹೆಚ್ಚಿತ್ತು. ಜ್ವಾಲಾಪ್ರಸಾದನ ಮನೆಯ ವಾತಾವರಣ ಶಾಂತವಾಗಿತ್ತು. ಬೇಸಿಗೆಯಲ್ಲಿ ಸಿವಿಲ್ ಕೋರ್ಟಿಗೆ ಒಂದು ತಿಂಗಳು ರಜ. ರಜ ಶುರುವಾದೊಡನೆಯೇ ಜಡ್ಜಿ ಗಿರಿಜಾಶಂಕರ ಮಿಶ್ರ ತನ್ನ ಊರಾದ ಸೋರಾವಿಗೆ ಬಂದ.

ಶಿವ ಗಿರಿಜಾಶಂಕರ ಹಾಗೂ ಬೇಚೂ ಇಬ್ಬರೂ ಒಂದೇ ಮನೆತನಕ್ಕೆ ಸೇರಿದವರು. ಇಬ್ಬರ ಮನೆಯೂ ಒಂದಕ್ಕೊಂದು ಹತ್ತಿಕೊಂಡಿದ್ದವು. ಐವತ್ತು ವರ್ಷಗಳ ಹಿಂದೆ ಇವರಿಬ್ಬರ ಪೂರ್ವಜರ ನಡುವೆ ಜಗಳ ಕದನಗಳಾಗಿ ಆಸ್ತಿ ಪಾಲಾಗಿತ್ತು. ಆಗಿನಿಂದ ಎರಡೂ ಮನೆಯವರೂ ಪರಸ್ಪರ ಶತ್ರುಗಳಂತೆ ನಡೆದುಕೊಂಡು ಬಂದಿದ್ದರು. ಬ್ರಿಟಿಷರ ಆಡಳಿತದಲ್ಲಿ ಗಿರಿಜಾಶಂಕರ, ಬೇಚೂ ಇಬ್ಬರಿಗೂ ಸರಕಾರೀ ನೌಕರಿ ಸಿಕ್ಕಿದಾಗ ಎರಡೂ ಮನೆತನಗಳ ನಡುವಣ ವೈರವೂ ಕೊನೆಗೊಂಡಿತು. ಬೇಚೂ ಮಿಸಿರ ಗಿರಿಜಾಶಂಕರನನ್ನು ತನ್ನ ಹಿರಿಯಣ್ಣನಂತೆ ಗೌರವಿಸಿ ಅವನ ಮಮತೆಯನ್ನು ಸಂಪಾದಿಸಿದ್ದ. ಜ್ವಾಲಾ ಪ್ರಸಾದನಿಗೆ ಗಿರಿಜಾಶಂಕರನ ಪರಿಚಯವಾಗಿದ್ದುದು ಬೇಚೂ ಮಿಸಿರನ ಮುಖಾಂತರವೇ. ಈ ಪರಿಚಯ ಬರಬರುತ್ತಾ ಗಾಢವಾದ ಸ್ನೇಹವಾಗಿ ಮಾರ್ಪಟ್ಟಿತ್ತು.

ಗಿರಿಜಾಶಂಕರ ಊರಿಗೆ ಬಂದಿರುವ ಸುದ್ದಿಯನ್ನು ಕೇಳಿದ ಮೂರು ದಿನಕ್ಕೆ ಮುನಿಷಿ ಶಿವಲಾಲ ಬೇಚೂ ಮಿಸಿರನಲ್ಲಿಗೆ ಹೋದ. ಅಲ್ಲಿ ಕುಳಿತಿದ್ದವರೆಲ್ಲರೂ ಎದ್ದು ಶಿವಲಾಲ ನನ್ನು ಸ್ವಾಗತಿಸಿದರು. ಮುನಿಷಿ ಶಿವಲಾಲನಿಗೆ ಗಿರಿಜಾಶಂಕರನ ಪಕ್ಕದಲ್ಲಿ ಕೂರಲು ಸ್ಥಳ ಕೊಡುತ್ತ ಬೇಚೂ ಮಿಸಿರ ಹೇಳಿದ, "ಮುನಿಷೀಜಿ, ಸೆಕೆ ಹೇಳತೀರದಷ್ಟು ಜಾಸ್ತಿ ಯಾಗಿದೆ. ಇನ್ನೂ ಬಿಸಿಗಾಳಿ ಬೀಸ್ತಿದೆ. ಆದ್ದರಿಂದ ಭಂಗಿ ಅರೆದುಹಾಕಿ ಮಾವಿನ ಮಿಡಿ ಪಾನಕ ತಯಾರಿಸ್ತಿದೀವಿ. ಕುಡಿದ ತಕ್ಷಣ ಮೈ ತಂಪಾಗುತ್ತೆ."

ಮುನಿಷಿ ಶಿವಲಾಲ ಹೇಳಿದ, "ಕ್ಷಮಿಸಬೇಕು, ಮಹಾಸ್ವಾಮಿ! ಇಲ್ಲಿ ನನಗೆ ಅಂಟಿಬಂದಿರೋದು ಅಂದರೆ ಒಂದೇ ಒಂದು ವಸ್ತು!"

"ಆಗಾಗ ಬಾಯಿರುಚಿ ಬದಲಾಯಿಸೋಕ್ಕೆ ಇನ್ನೊಂದು ವಸ್ತುವೂ ಆಗಬಹುದಲ್ಲ," ಗಿರಿಜಾಶಂಕರ ಹೇಳಿದ.

"ಜಡ್ಜ್ ಸಾಹೇಬರೇ, ಬಾಯಿರುಚಿ ಬದಲಾಯಿಸೋ ವಯಸ್ಸು ಇನ್ನು ಮುಂಗೀತು. ಈಗ ಸಾವು ಯಾವಾಗ ಬರುತ್ತೆ ಅಂತ ನಿರೀಕ್ಷಿಸೋದಾಗಿದೆ. ಗಡಿಗೆಗಟ್ಟಲೆ ಕುಡೀತಿದ್ದ ಕಾಲವಿತ್ತು, ಈಗ ಅರ್ಧಪಾವು ಸಹ ಆಗೋಲ್ಲ ಅಂದರೆ ನೀವು ನಂಬೋಲ್ಲ! ಸಾರಾಯಿ ಅನ್ನೋದು ಔಷಧಿಯಾಗಿ ಬಿಟ್ಟಿದೆ."

ಭಂಗಿ ತಯಾರಾಗಿ ಬಂದಿತು. ಮುನಿಷಿ ಶಿವಲಾಲ ಜನರ ಆಗ್ರಹಕ್ಕೆ ಇಲ್ಲವೆನ್ನಲಾಗದೇ ಅರ್ಧಕಂಡಿಕೆ ಮಾವಿನಮಿಡಿ–ಭಂಗಿಸೊಪ್ಪಿನ ಪಾನಕವನ್ನು ಕುಡಿಯಲೇಬೇಕಾಯಿತು.

ಭಂಗಿಯ ಸೇವನೆಯಾದ ಸ್ವಲ್ಪ ಹೊತ್ತಿನಲ್ಲಿ ಬೇಚೂ, ಗಿರಿಜಾಶಂಕರರ ನಂಟರಿಷ್ಟರು ಹೊರಟುಹೋದರು. ಅವರೆಲ್ಲರೂ ಹೋದ ಮೇಲೆ ಬೇಚೂ ಮಿಸಿರ ಕೇಳಿದ, "ಹೇಳಿ ಮುನಿಷೀಜಿ, ಈಗ ನಿಮ್ಮ ಆರೋಗ್ಯ ನೆಟ್ಟಗಿದೆ ಅಲ್ಲವೆ? ಏನು ದಯಮಾಡಿಸಿದಿರಿ?"

"ಎಲ್ಲಾ ರಾಮನ ಕೃಪೆ," ಮುನಿಷಿ ಶಿವಲಾಲ ಉತ್ತರಿಸಿದ. "ಜಡ್ಜ್ ಸಾಹೇಬರು ಬಂದಿರೋ ಸುದ್ದಿ ಕೇಳಿ, ನೋಡಿಕೊಂಡು ಹೋಗೋಣ ಅಂತ ಬಂದೆ. ಜ್ವಾಲನಿಗಂತೂ ಉಸಿರಾಡೋಕ್ಕೆ ಪುರಸೊತ್ತಿಲ್ಲ."

"ಅರೆ, ನೀವೇಕೆ ತೊಂದರೆ ತೊಗೋಳ್ಳೋಕೆ ಹೋದಿರಿ. ಒಂದೆರಡು ದಿನದಲ್ಲಿ ನಾವೇ ಆ ಕಡೆ ಬರೋರಿದ್ದೆವು."

"ನಾನೇ ಬಂದದ್ದರಿಂದ ಏನು ನಷ್ಟವಾಯಿತು ! ಅಲ್ಲದೆ ಗಾದೆ ಸಹ ಉಂಟಲ್ಲವೆ—ಬಾಯಾರಿದವನು ಬಾವಿಗೆ ಹೋಗ್ತಾನೆ ಅಂತ ! ಸ್ವಂತದ್ದು ಸ್ವಲ್ಪ ಕೆಲಸವೂ ಇತ್ತು. ಜಡ್ಜ್ ಸಾಹೇಬರು ನಮ್ಮೋರೆ ತಾನೆ, ಅವರು ಸಹಾಯ ಮಾಡದೆ ಮತ್ತೆ ಯಾರು ಮಾಡಬೇಕು ಅಂತ ಅಂದುಕೊಂಡು ಬಂದೆ."

"ಹ್ಞಾ ಹ್ಞಾ, ಹೇಳಿ," ಗಿರಿಜಾಶಂಕರ ಹೀಗಂದನಾದರೂ ಅವನ ಧ್ವನಿಯಲ್ಲಿ ಸ್ವಲ್ಪ ಹಿಂಜರಿಕೆಯಿತ್ತು.

ಮುನಿಷಿ ಶಿವಲಾಲ ಗಂಟಲು ಸರಿಪಡಿಸಿಕೊಳ್ಳುತ್ತ ಹೇಳಿದ, "ಫತಹಪುರದ ನಮ್ಮ ಜಮೀನಿನ ವಿಷಯದಲ್ಲಿ ಸ್ವಲ್ಪ ತಂಟೆ ಎದ್ದಿದೆ. ತಮ್ಮ ಕೋರ್ಟಿನಲ್ಲಿ ಒಂದು ವ್ಯಾಜ್ಯ ನಡೀತಿದೆ—ರಹಮತ್‌ಖಾನ್, ಪ್ರತಿಕಕ್ಷಿ ಶ್ಯಾಮಲಾಲ ಹಾಗೂ ಸಲೀಮಾ."

"ಹ್ಞಾ, ಹೌದು. ಅದೇ, ಶ್ಯಾಮಲಾಲನ ಹೆಸರಿಗೆ ಸಲೀಮಾ ಅನ್ನೋಳು ತನ್ನ ಗ್ರಾಮಾನ ಕ್ರಯ ಮಾಡಿಕೊಟ್ಟಿದಾಳೊ, ದಾನ ಮಾಡಿದಾಳೊ, ಅಥವಾ ಬರೆದು ಕೊಟ್ಟಿದಾಳೊ ಯಾವುದೂ ಸ್ಪಷ್ಟವಾಗಿ ಗೊತ್ತಾಗೋಲ್ಲ. ಆದರೆ ಸಲೀಮಾ ಅನ್ನೋಳ ಹೇಳಿಕೆ ಏನೂ ಅಂದರೆ ಆಸ್ತೀನ ತಾನು ಮಾರಿಯೂ ಇಲ್ಲ, ದಾನವೂ ಮಾಡಿಲ್ಲ; ತನಗೆ ಅಫೀಮು ತಿನ್ನಿಸಿ ತನ್ನ ಹೆಬ್ಬೆಟ್ಟಿನ ಗುರುತು ಒತ್ತಿಸಿಕೊಂಡರು ಅಂತ."

"ಅವಳು ಸುಳ್ಳು ಬೊಗಳತಾಳೆ," ಮುನಿಷಿ ಶಿವಲಾಲ ಕೆರಳಿ ಹೇಳಿದ. "ಜ್ವಾಲನಿಂದ ಅವಳು ಸಾವಿರಾರು ರೂಪಾಯಿ ತೊಗೊಂಡಿದಾಳೆ, ಈಗ ಹಬ್ಬ, ಆಗ ಔತಣ ಅಂತ. ಅವಳಿಗೂ ಮಗಳೂ ಅಳಿಯನಿಗೂ ಆಗೋಲ್ಲ."

ಗಿರಿಜಾಶಂಕರ ಇದಕ್ಕೆ ಉತ್ತರಕೊಡುವ ಮೊದಲೇ ಬೇಚೂ ಮಿಸಿರ ಬಾಯಿಹಾಕಿದ, "ತಹಸೀಲದಾರ ಸಾಹೇಬರು ಹಣ ಕೊಟ್ಟಿದ್ದರೆ ಅವರು ಸುಳ್ಳು ಹೇಳೋದಿಲ್ಲ. ಅವರು ತಾವು ಹಣ ಕೊಟ್ಟಿರೋದು ಉಂಟು ಅಂತ ಒಂದು ಮಾತು ಹೇಳಿದರೆ ಸಾಕು, ಮೊಕದ್ದಮೇಲಿ ನಿಮಗೆ ಜಯವಾಯಿತು, ಅಂದುಕೊಳ್ಳಿ. ಇದರಲ್ಲಿ ಯೋಚನೆ ಮಾಡೋ ಅಗತ್ಯ ಏನಿದೆ ? "

"ಆದರೆ ವಿಷಯ ಹೀಗಿದೆ. ಹಣಾನ ಜ್ವಾಲಾ ಶ್ಯಾಮಲಾಲನಿಗೆ ಕೊಟ್ಟದ್ದು; ನೇರವಾಗಿ ಸಲೀಮಾಳ ಕೈಗಲ್ಲ. ಆದ್ದರಿಂದ ಅವನು ಸಲೀಮಾಗೆ ಹಣ ಕೊಟ್ಟೆ ಅಂತ ಹೇಳೋಲ್ಲ" ಮುನಿಷಿ ಶಿವಲಾಲ ಹೇಳಿದ.

ಬೇಚೂ ಮಿಂಸಿರ ಕಡಿಮೆಂಯು ಆಟಗಾರನೇನಲ್ಲ, " ಏನೂ ಪರವಾಗಿಲ್ಲ, ತಹಸೀಲ ದಾರ ಸಾಹೇಬರು ಹಾಗಂತ ಹೇಳಿದರೂ ಸಾಕು."

ಮುನಿಷಿ ಶಿವಲಾಲ ತಬ್ಬಿಬ್ಬಾದ, " ನಾನು ಹೇಳಿದರೆ ಸಾಲದೆ? ನಾನು ಜ್ವಾಲನ ತಂದೆ ತಾನೇ? "

ಈ ಸಲ ಗಿರಿಜಾಶಂಕರ ಉತ್ತರ ಕೊಟ್ಟ, "ಶ್ಯಾಮಲಾಲ ಜ್ವಾಲಾಪ್ರಸಾದರ ಚಿಕ್ಕಪ್ಪನ ಮಗ; ರಾಧೇಲಾಲ ಚಿಕ್ಕಪ್ಪ. ನಾನು ಅವರಿಬ್ಬರ ಮಾತನ್ನ ನಂಬೋಕ್ಕೆ ಸಿದ್ಧನಿಲ್ಲ ಅಂದಮೇಲೆ ನಿಮ್ಮ ಮಾತಿನ ಮೇಲೆ ಹೇಗೆ ವಿಶ್ವಾಸವಿಡಲಿ? ಜ್ವಾಲಾ ದೊಡ್ಡ ಸರಕಾರೀ ಅಧಿಕಾರಿ; ಮರ್ಯಾದಸ್ಥರು. ಅವರು ಸುಳ್ಳು ಹೇಳೋಲ್ಲ. ಅವರ ಮಾತನ್ನ ನಂಬಬಲ್ಲೆ."

ಮುನಿಷಿ ಶಿವಲಾಲ ಹೊರಡಲು ಎದ್ದುನಿಂತ, " ಒಳ್ಳೇದು, ಜ್ವಾಲನಿಗೆ ನಿಮ್ಮ ಜೊತೆ ಮಾತಾಡು ಅಂತ ಹೇಳ್ತೀನಿ. ಈ ಆಸ್ತೀನ ಶ್ಯಾಮಲಾಲ ಜ್ವಾಲನ ಹೆಸರಿಗೆ ಬರೆದಿದಾನೆ. ಜ್ವಾಲಾ ಸಂಕೋಚದಿಂದಾಗಿ ಈ ವಿಷಯದಲ್ಲಿ ತಾನು ಏನೂ ಹೇಳೋಕ್ಕೆ ಇಷ್ಟಪಡದಿದ್ದರೆ ಈಗಿರೋ ರುಜುವಾತು ಸಾಲದೇ? "

" ಖಂಡಿತಾ ಸಾಲದು. ಅವಿಭಕ್ತ ಕುಟುಂಬದಲ್ಲಿ ಆಸ್ತಿ ಯಾರ ಹೆಸರಿಗೇ ಇರಲಿ, ಅದರಲ್ಲಿ ಏನೂ ವ್ಯತ್ಯಾಸವಾಗೋಲ್ಲ. ಮುನಿಷಿಯಾಗಿ ಇದು ನಿಮಗೆ ಗೊತ್ತೇ ಇದೆ. ನಂಬಿಕೆ, ವಿಶ್ವಾಸದ ಮಾತು. ಜ್ವಾಲಾಬಾಬು ಕೋರ್ಟಿಗೆ ಬರಬೇಕಾದ ಅಗತ್ಯವೇನಿಲ್ಲ. ಅವರು ನನ್ನ ಮುಂದೆ ಅಷ್ಟು ಹೇಳಿದರೆ ಸಾಕು. ಕೋರ್ಟಿಗೆ ರಜ ಮುಗಿದಮೇಲೇನೇ ವಾದ–ವಿವಾದ. ಅದಾದಮೇಲೆ ತೀರ್ಪು ಕೊಡ್ತೀನಿ."

ಮನೆಗೆ ಬಂದ ಮೇಲೆ ಮುನಿಷಿ ಶಿವಲಾಲ ಜ್ವಾಲಾಪ್ರಸಾದನಿಗೆ ಹೇಳಿದ, "ಜಡ್ಜಿ ಗಿರಿಜಾಶಂಕರರು ಬಂದಿದಾರೆ. ಇವತ್ತು ಅವರನ್ನ ನೋಡೋಕ್ಕೆ ಹೋಗಿದ್ದೆ. ಇನ್ನೂ ಜ್ವಾಲಾಬಾಬೂದು ಭೇಟಿ ಆಗಲಿಲ್ಲ ಅಂತ ಹೇಳ್ತಿದ್ದರು."

" ಹೌದು, ಕೈತುಂಬ ಕೆಲಸ ಇತ್ತು. ಇವತ್ತು ನಾಳೇಲಿ ಹೋಗಿನೋಡ್ತೀನಿ."

ಮುನಿಷಿ ಶಿವಲಾಲ ಜ್ವಾಲಾಪ್ರಸಾದನ ಕಡೆಯಿಂದ ಬೇರೆಡೆಗೆ ದೃಷ್ಟಿ ಹೊರಳಿಸುತ್ತ ಹೇಳಿದ, " ಅವರ ಹತ್ತಿರ ಶ್ಯಾಮೂ ಮೊಕದ್ದಮೆ ವಿಷಯ ಮಾತನಾಡಿದೆ. ಅವರಂದರು, ಸಲೀಮಾಗೆ ಹಣ ಕೊಟ್ಟಿದೀನಿ ಅಂತ ಜ್ವಾಲಾಪ್ರಸಾದ ಹೇಳೋದಾದರೆ ರಹಮತ್ ಖಾನನ ಮೊಕದ್ದಮೆ ಡಿಸ್‌ಮಿಸ್ ಮಾಡ್ತೀನಿ ಅಂತ."

" ಆದರೆ ... ಆದರೆ ಅಪ್ಪಾ, ನಾನು ಸಲೀಮಾಗೆ ಹಣ ಎಲ್ಲಿ ಕೊಟ್ಟಿದೀನಿ! ಅವಳು ನನಗೆ ಗೊತ್ತು ಸಹ ಇಲ್ಲ, ಇಷ್ಟೆಲ್ಲಾ ಸುಳ್ಳು ಹೇಳೋಕ್ಕೆ ನನ್ನ ಕೈಲಾಗೋಲ್ಲ! "

" ಅದು ಸರಿ. ಆದರೆ ನೀನು ಶ್ಯಾಮಲಾಲನಿಗೆ ಜಮೀನು ಕೊಳ್ಳೋದಕ್ಕೆ ಹಣ ಕೊಟ್ಟಿದ್ದೆ ಅಂತ ಅಷ್ಟು ಹೇಳಬಹುದಲ್ಲ. ಶ್ಯಾಮಲಾಲ ಜಮೀನು ಕೊಳ್ಳೋದಕ್ಕೆ ನಾನು ಕೊಟ್ಟಿದ್ದದ್ದು ನಿನ್ನ ಹಣವನ್ನೇ. ಇದು ಸುಳ್ಳೂ ಅಲ್ಲ. ಹಣ ಸಲೀಮಾಳ

ಜಮೀನಂ ಕೊಳ್ಳೋದಕ್ಕೆ ಕೊಟ್ಟಿದ್ದೋ, ಇನ್ನೊಂದು ಜಮೀನಿಗೋ ಅನ್ನೋ ಪ್ರಶ್ನೆ ಏಳೋಲ್ಲ."

ಜ್ವಾಲಾಪ್ರಸಾದನ ಮುಖದ ಮೇಲೆ ಒಂದು ವ್ಯಂಗ್ಯ ನಗೆ ಮೂಡಿತು, "ಹೌದು, ಅಶ್ವತ್ಥಾಮನ ಕೊಲೆಯಾಯಿತು ಅಂತ ಯುಧಿಷ್ಠಿರ ಹೇಳಿದ ಹಾಗಾಯಿತು. ಅಶ್ವತ್ಥಾಮ ವ್ಯಕ್ತಿಯೋ ಆನೆಯೋ ಅನ್ನೋದು ಪ್ರಶ್ನೆಯಲ್ಲ!"

ಮುನಿಷಿ ಶಿವಲಾಲ ಹರಿತವಾದ ಧ್ವನಿಯಲ್ಲಿ ಹೇಳಿದ, "ಮಹಾಭಾರತದ ಕಥೆ ಇಲ್ಲಿ ಅನ್ವಯಿಸೋಲ್ಲ."

"ಹೌದು, ಇದು ಕಲಿಯುಗ. ಅಲ್ಲದೆ ನನ್ನ ರಥದ ಗಾಲಿ ಎಲ್ಲಿ ನೆಲ ಮುಟ್ಟುತ್ತೋ ಅಂತ ಭಯಪಡೋಕ್ಕೆ ಅದು ನೆಲದ ಮೇಲಿಂದೆದ್ದು ನಡೆಯೋ ಅಂಥಾದ್ದೂ ಅಲ್ಲ! ನನಗೆಲ್ಲಾ ಗೊತ್ತಿದೆ. ಆದರೆ ಸರಕಾರದ ಮೇಲಧಿಕಾರಿಯಾಗಿ ನಾನು ಸುಳ್ಳು ಹೇಳೋದು ಸಾಧ್ಯವಿಲ್ಲ. ಇನ್ನು ಅರ್ಧಸತ್ಯದ ಬಗ್ಗೆ ಹೇಳೋದಾದರೆ ಪಂಡಿತ ಗಿರಿಜಾಶಂಕರರು ದ್ರೋಣಾಚಾರ್ಯರೇನೂ ಅಲ್ಲ, ಬಾಣ ಬಿಸಾಡಿ ಕೈಕಟ್ಟಿಕೊಂಡು ಕೂತುಕೊಳ್ಳೋಕೆ. ಅವರು ನ್ಯಾಯಾಧೀಶರು, ಪಾಟೀ ಸವಾಲು ಮಾಡ್ತಾರೆ. ಅದರಲ್ಲಿ ಅರ್ಧಸತ್ಯವಿದ್ದದ್ದು ಪೂರ್ಣಸತ್ಯವಾಗಿ ಹೊರಬರುತ್ತೆ. ಯಾಕೆ ಅಂದರೆ ನಾನು ಸುಳ್ಳು ಹೇಳೋನಲ್ಲ."

ಬೇಚೂ ಮಿಸಿರ ಕೊಟ್ಟಿದ್ದ ಮಾವಿನಮಿಂಡಿ–ಭಂಗಿಸೊಪ್ಪಿನ ಪಾನಕವನ್ನು ಮುನಿಷಿ ಶಿವಲಾಲ ಕುಡಿದಿದ್ದುದಂ ಎರಡೇ ಬೊಗಸೆಯಷ್ಟಾದರೂ ಅದು ಸಾಕಷ್ಟು ತೀಕ್ಷ್ಣ ವಾಗಿತ್ತು. ಮಗ ಈ ಸತ್ಯ ಪ್ರಾಮಾಣಿಕತೆಗಳ ಪಟ್ಟು ಹಿಡಿದು ತನ್ನ ಬುಡಕ್ಕೆ ಕೊಡಲಿ ಪೆಟ್ಟನ್ನಷ್ಟೇ ಹಾಕುತ್ತಿಲ್ಲ, ಮೇಲೆ ತನ್ನನ್ನು ಗೇಲಿ ಸಹ ಮಾಡುತ್ತಿದ್ದಾನೆ ಎಂದು ಮುನಿಷಿ ಶಿವಲಾಲನಿಗೆ ಅನ್ನಿಸಿತು. ಜ್ವಾಲಾಪ್ರಸಾದನ ಒಂದೊಂದು ಮಾತೂ ಅವನಿಗೆ ಅತ್ಯಂತ ಕಠೋರವಾದ ಬೈಗಳಂತೆ ಅಪಮಾನಕರವಾಗಿ ಕೇಳಿಸತೊಡಗಿತು. ಅವನ ಕೋಪ ಇದ್ದಕ್ಕಿದ್ದಂತೆ ಕೆರಳಿತಂ. "ಧರ್ಮರಾಯನ ಅಪ್ಪ ನೀನಂ! ಒಳ್ಳೇ ಜಮೀನು ಕೈಗೆ ಬರ್ತಿರೋವಾಗ ಬೇಡ ಅಂತಿದಿ! ನನ್ನ ಮಗ ಹೀಗೆ ಮನೆಹಾಳ ಆಗ್ತಾನೆ ಅಂತ ನನಗೇನು ಗೊತ್ತಿತ್ತು!"

ಮುನಿಷಿ ಶಿವಲಾಲನ ಧ್ವನಿ ಸಾಕಷ್ಟು ಎತ್ತರಕ್ಕೆ ಏರಿತ್ತು. ಛಿನಕಿ, ಭೀಖು, ಯಮುನಾ, ಬಿಶನಲಾಲ ಎಲ್ಲರೂ ಅಂಗಳಕ್ಕೆ ಓಡಿಬಂದರು.

ಕೋಪ ಹುಚ್ಚಿನ ಇನ್ನೊಂದು ರೂಪವೆನಿಸಿಕೊಂಡಿದೆ. ಹುಚ್ಚು ಕೆರಳುವಂತೆ ಕೋಪವೂ ಕೆರಳುತ್ತದೆ. ಆ ಹೊತ್ತಿನಲ್ಲಿ ಮನುಷ್ಯ ತನ್ನ ಮೇಲಿನ ಹತೋಟಿ ಕಳೆದು ಕೊಳ್ಳುತ್ತಾನೆ. ಮುನಿಷಿ ಶಿವಲಾಲ ಜ್ವಾಲಾಪ್ರಸಾದನ ಉತ್ತರಕ್ಕೆ ಸ್ವಲ್ಪ ಹೊತ್ತು ಕಾದ. ಆದರೆ ಜ್ವಾಲಾಪ್ರಸಾದ ಏನೊಂದೂ ಉತ್ತರ ಕೊಡಲಿಲ್ಲ. ಬದಲು ಅಲ್ಲೊಂದು ಗುಂಪು ಕೂಡಿತ್ತು. ಮುನಿಷಿ ಶಿವಲಾಲ ಗರ್ಜಿಸಿದ, "ಯಾಕೆ ಮಾತಾಡೊಲ್ಲವೋ

ಕತ್ತೆ! ನಿನ್ನನ್ನ ಹುಟ್ಟಿಸಿದೆ, ಬೆಳಸಿದೆ, ಓದಿಸಿದೆ. ಇವೆಲ್ಲಾ ಮಾಡಿದ್ದು ನೀನು ನನ್ನ ಮಾತಂ ಕೇಳೋದು ಬಿಟ್ಟು ಧರ್ಮರಾಯನ ಅಪ್ಪ ಆಗಲಿ ಅಂತಾನೆ!"

ಅಪ್ಪನ ಈ ಕೋಪದ ಪ್ರದರ್ಶನವನ್ನು ಕಂಡು, ಜ್ವಾಲಾಪ್ರಸಾದನ ಅಂತರಂಗದಲ್ಲಿನ ಸತ್ಯ ಪ್ರಾಮಾಣಿಕತೆಗಳ ಸಂಸ್ಕಾರ ಇದ್ದಿದ್ದೂ ಪಟ್ಟು ಹಿಡಿಯಿತು. "ನೀವೇಕೆ, ದೇವರು ಬಂದು ಕೇಳಿದರೂ ನನ್ನ ಸತ್ಯ, ಪ್ರಾಮಾಣಿಕತೆಗಳನ್ನ ತೊರೆಯೋಕ್ಕೆ ನಾನು ಸಿದ್ಧನಿಲ್ಲ" ಎಂದು ಅವನು ದೃಢವಾಗಿ ಹೇಳಿದ.

ಮುನಿಷಿ ಶಿವಲಾಲ ಇದ್ದಕ್ಕಿದ್ದಂತೆ ಎದ್ದುನಿಂತ. ಅಲ್ಲಿ ಹತ್ತಿರದಲ್ಲೇ ಇದ್ದ ನೀರು ತುಂಬಿದ ಹೂಜಿಯನ್ನೆತ್ತಿಕೊಂಡು ಅರಚಿದ, "ನಿನ್ನ ಸತ್ಯ, ಪ್ರಾಮಾಣಿಕತೆಗಳಿಗೆ ನಾನೇ ಬಲಿಯಾಗ್ತೀನಿ, ತೊಗೋ" ಎಂದವನೇ ಎರಡೂ ಕೈಯಿಂದ ತುಂಬಿದ ಹೂಜಿಯನ್ನೆತ್ತಿ ತಲೆಯ ಮೇಲೆ ಕುಕ್ಕಿಕೊಂಡ.

ಮುನಿಷಿ ಶಿವಲಾಲ ಏಟಿಗೆ ತತ್ತರಿಸಿ ನೆಲಕ್ಕುರುಳಿದ. ನಿಂತು ನೋಡುತ್ತಿದ್ದವರೆಲ್ಲರೂ ಹತ್ತಿರಕ್ಕೆ ಓಡಿಬಂದರು. ಬಿದ್ದೊಡನೆಯೇ ಮುನಿಷಿ ಶಿವಲಾಲ ಪ್ರಜ್ಞೆ ತಪ್ಪಿದ. ಅವನ ತಲೆಯೊಡೆದು ರಕ್ತ ಹರಿಯತೊಡಗಿತು.

ಅವತ್ತು ರಾತ್ರಿಯೇ ಅಲಹಾಬಾದಿನಿಂದ ಡಾಕ್ಟರು ಬಂದರು. ಔಷಧೋಪಚಾರವಾಯಿತು. ಆದರೆ ಮುನಿಷಿ ಶಿವಲಾಲನಿಗೆ ಹೋದ ಪ್ರಜ್ಞೆ ಬರಲಿಲ್ಲ. ಒಂದು ವಾರ ಕಾಲ ಬದುಕು ಸಾವುಗಳ ನಡುವೆ ಹೋರಾಟ ನಡೆಯಿತು. ಏಳನೆಯ ದಿನ ಮುನಿಷಿ ಶಿವಲಾಲ ಕಣ್ಣು ತೆರೆದ. ಛಿನಕಿಗೆ ಹೇಳಿ ಜ್ವಾಲಾಪ್ರಸಾದನನ್ನು ಕರಸಿದ. ಜ್ವಾಲಾಪ್ರಸಾದನ ಮುಖ ಕಂಡೊಡನೆಯೇ ಶಿವಲಾಲನ ಕಣ್ಣಲ್ಲಿ ನೀರು ತುಂಬಿತು. "ಹೋಗ್ತೀನಿ, ಮಗೂ. ನನ್ನನ್ನ ಕ್ಷಮಿಸಿಬಿಡು. ತಪ್ಪು ನಿನ್ನದಲ್ಲ. ಹೋಗಲಿ, ಈ ವೃದ್ಧಾಪ್ಯದಿಂದಾದರೂ ಬಿಡುಗಡೆಯಾಯಿತಲ್ಲ!" ಜ್ವಾಲಾಪ್ರಸಾದ ಅಳುತ್ತ ಹೇಳಿದ, "ಇಲ್ಲ, ಅಪ್ಪ. ಹಾಗನ್ನಬೇಡಿ! ನೀವು ಹುಷಾರಾಗ್ತೀರಿ."

ಮುನಿಷಿ ಶಿವಲಾಲ ಕೈಸನ್ನೆಯಿಂದ ಛಿನಕಿಯುನ್ನು ಹತ್ತಿರ ಕರೆದು, ಸೋತು ಇಳಿಮುಖವಾಗುತ್ತ ಬಂದಿದ್ದ ಧ್ವನಿಯಲ್ಲಿ ಹೇಳಿದ, "ಈ ಛಿನಕಿ—ಇವಳನ್ನ ತಾಯಿಯಂತೆ ನೋಡಿಕೋ. ಇವಳನ್ನ ನಿನ್ನ ಕರುಣೇಗೆ ಒಪ್ಪಿಸಿ ಹೋಗ್ತಿದೀನಿ." ಹೀಗನ್ನುತ್ತ ಮುನಿಷಿ ಶಿವಲಾಲ ಕೊನೆಯ ಬಾರಿಗೆ ಕಣ್ಣುಮುಚ್ಚಿದ.

## ಹನ್ನೆರಡು

ಮನೆಯ ಮುಂದಿನ ಮೈದಾನದಲ್ಲಿ ಮುನಿಷಿ ರಾಧೇಲಾಲ ಜ್ವಾಲಾಪ್ರಸಾದನ ಜತೆ ಕೂತು, ಮುನಿಷಿ ಶಿವಲಾಲನ ವಾರ್ಷಿಕ ಶ್ರಾದ್ಧದ ಯೋಜನೆ ಹಾಕುತ್ತಿದ್ದ. "ಮಗು

ಜ್ವಾಲಾ, ಅಣ್ಣ ಮಹಾನುಭಾವ! ನಮ್ಮ ಮನೆತನ ಕಟ್ಟಿದೋನು ಅವನು. ಹಾಗೆ ನೋಡಿದರೆ ಐನೂರು ಜನ ಬ್ರಾಹ್ಮಣರಿಗೆ ಬ್ರಹ್ಮಭೋಜನ ಮಾಡಿಸಬೇಕು. ಪ್ರಾಯಶಃ ಈ ಸುತ್ತುಮುತ್ತಿನಲ್ಲಿ ಐನೂರು ಜನ ಬ್ರಾಹ್ಮಣರು ಸಿಗೋದೂ ಇಲ್ಲ. ಆದ್ದರಿಂದ ನೂರೈವತ್ತು ಜನ ಬ್ರಾಹ್ಮಣರ ಬ್ರಹ್ಮಭೋಜನಕ್ಕೆ ಏರ್ಪಾಡು ಮಾಡು. ಇನ್ನು ನಮ್ಮ ನಂಟರಿಷ್ಟರು, ಸೋರಾವ್, ಅಲಹಾಬಾದ್, ಫತಹಪುರ ಎಲ್ಲಾ ಕಡೆಯುವರೂ ಸೇರಿ, ಇನ್ನೂರು ಮುನ್ನೂರು ಜನ ಆಗಬಹುದು."

"ಅಂದರೆ ಇದರ ಅರ್ಥ ಐನೂರು ಆರುನೂರು ಜನಕ್ಕೆ ಸಂತರ್ಪಣೆ ಅಂತ ಅನ್ನಿ!"

"ಹೌದು ಮಗು! ಪರಲೋಕದಲ್ಲಿ ಅಣ್ಣನ ಸದ್ಗತೀಗೆ ಸಂಬಂಧಪಟ್ಟ ವಿಷಯ ಇದು. ಇದರಲ್ಲಿ ಕೈಹಿಡಿದರೆ ಆಗೋಲ್ಲ. ಮಿತವ್ಯಯ ಮಾಡೋರು ಮಾಡಿಕೊಂಡು ಹೋಗಲಿ. ನೀನು ತಹಸೀಲದಾರ, ಸೋರಾವಿನ ರಾಜ! ನೀನು ಅಪ್ಪಣೆ ಮಾಡಿದರೆ ಸಾಕು, ಒಂದು ನಿಮಿಷದಲ್ಲಿ ಸಾಮಾನೆಲ್ಲಾ ಬಂದು ಬೀಳುತ್ತೆ!"

ಜ್ವಾಲಾಪ್ರಸಾದ ಮೆಲುದನಿಯಲ್ಲಿ ಹೇಳಿದ, "ಆದರೆ ನಾನೆಂದೂ ಹೀಗೆಲ್ಲಾ ಮಾಡಿಲ್ಲ; ಯಾಕೆ ಅಂದರೆ ಅದು ಮಾಡೋದು ತಪ್ಪಾಗುತ್ತೆ. ಅಲ್ಲದೆ ವಾರ್ಷಿಕ ಶ್ರಾದ್ಧಕ್ಕೆ ಇಷ್ಟೆಲ್ಲಾ ಸಾಮಾನು ಒದಗಿಸೋ ಅವಶ್ಯಕತೆ ಇದೆಯೇ?"

"ಅವಶ್ಯಕತೆ ಇಲ್ಲದೇ ಇದ್ದರೆ ನಾನು ನಿನ್ನ ಹತ್ತಿರ ಹೇಳ್ತಿದ್ದೆನೆ?" ರಾಧೇಲಾಲ ಒತ್ತಿಹೇಳಿದ. "ಅಣ್ಣ ಪುಣ್ಯಾತ್ಮ, ಮಹಾನುಭಾವ. ಅವನಿಗೆ ಸದ್ಗತಿ ಸಿಗಬೇಡವೆ? ಬ್ರಾಹ್ಮಣರಿಗೆ, ನಂಟರಿಷ್ಟರಿಗೆ ಊಟ ಹಾಕಿದರೆ ಅವನ ಆತ್ಮಕ್ಕೆ ಸಂತೋಷವಾಗುತ್ತೆ, ಸದ್ಗತಿ ಸಿಗಂತ್ತೆ. ನಾನು ಈಗಲೇ ಕಾನುಂಗೊ ಅಮಜದ್‌ಆಲೀನ ಕರಸಿ ಹೇಳಿಬಿಡ್ತೀನಿ. ಹದಿನೈದು ದಿನದೊಳಗೆ ಕೂತಕೂತಲ್ಲೇ ಸಾಮಾನೆಲ್ಲಾ ಬಂದುಬೀಳುತ್ತೆ?"

ಛಿನಕಿ ಹತ್ತಿರ ನಿಂತು ಈ ಮಾತುಕತೆಯನ್ನು ಕೇಳುತ್ತಿದ್ದಳು. ಅವಳ ಕಣ್ಣಿಂದ ಟಪಟಪನೆ ನೀರು ಸುರಿಯುತ್ತಿತ್ತು. ಇನ್ನು ಅವಳಿಗೆ ತಡೆಯಲಾಗಲಿಲ್ಲ, "ಹೀಗೆ ಜುಲುಮೆಯಿಂದ ಸಾಮಾನು ಜಮಾ ಮಾಡಿ ಶ್ರಾದ್ಧ ಮಾಡಿದರೆ, ಪರಲೋಕದಲ್ಲಿ ಅವರಿಗೆ ಸಿಕ್ಕಿರೋ ಜಾಗವೂ ಹಾಳಾಗಿಹೋಗುತ್ತೆ. ಅದೆಲ್ಲಾ ಬೇಡ. ಇಪ್ಪತ್ತೊಂದು ಜನ ಬ್ರಾಹ್ಮಣರಿಗೆ ಊಟ ಹಾಕಿಬಿಡಿ. ಬರೋ ಐವತ್ತು ಅರವತ್ತು ಜನ ಹತ್ತಿರದ ನಂಟರಿಷ್ಟರಿಗೆ ಆತಿಥ್ಯ ಮಾಡಿಬಿಡಿ. ಅಷ್ಟಕ್ಕೆ ಬೇಕಾಗೋ ದಿನಸಿಯ ಏರ್ಪಾಡು ನಾನು ಮಾಡ್ತೀನಿ. ನಿಮಗೆ ಅದರ ಯೋಚನೆ ಬೇಡ."

ಛಿನಕಿ ನಡುವೆ ತಲೆಹಾಕಿದ್ದು ಮುನಿಷಿ ರಾಧೇಲಾಲನಿಗೆ ಸರಿಬೀಳಲಿಲ್ಲ. "ಮತ್ತೆ ಮಾತಿಗೆ ಅಡ್ಡಬಂದಳು ಇವಳು, ಮಹಾ ಏರ್ಪಾಡು ಮಾಡಿಬಿಡೋಳು! ನಮ್ಮ ಮರ್ಯಾದೆ ಕಳೆಯೋಕ್ಕೆ ಸದಾ ಸಿದ್ಧವಾಗಿರ್ತಾಳೆ!" ಅವನಂದ.

ದಡದಡನೆ ಅಲ್ಲಿಂದ ಹೊರಡುತ್ತ ಛಿನಕಿ ಜ್ವಾಲಾಪ್ರಸಾದನಿಗೆ ಹೇಳಿದಳು, "ನಾನು ಇನ್ನು ಈ ಮನೇಲೂ ಇರೋಲ್ಲ, ಬಾಯೂ ತೆಗೆಯೋಲ್ಲ! ಇವರ ಅಧರ್ಮದ ಬಲೆಗೆ

ಬಿದ್ದು ಅವರು ಪ್ರಾಣ ತೆತ್ತಿದ್ದಾಯ್ತು, ಈಗ ಜ್ವಾಲನ್ನ ಅಧರ್ಮದಲ್ಲಿ ಸಿಕ್ಕಿಸೋಕ್ಕೆ ನೋಡ್ತಿದಾರೆ. ನನ್ನಿಂದ ಇದನ್ನೆಲ್ಲಾ ನೋಡೋಕ್ಕೆ ಆಗೋಲ್ಲ." ಹೀಗಂದು ಅವಳು ಅಳುತ್ತ ಅಲ್ಲಿಂದ ಹೊರಟಳು.

ಛಿನಕಿ ಹೋದ ಮೇಲೆ ಜ್ವಾಲಾಪ್ರಸಾದ ಹೇಳಿದ, "ಚಾಚಾ, ಛಿನಕಿ ಹೇಳಿದ್ದು ಸರಿ ಅಂತ ನನಗೆ ತೋರುತ್ತೆ. ನಮ್ಮನ್ನ ನೆಚ್ಚಿರೋ ಜನರಿಂದ ಬಲವಂತವಾಗಿ ವಸೂಲಿಗೆ ಶುರುಮಾಡಿದರೆ ಅವರ ಮನಸ್ಸು ನೋಯುತ್ತೆ. ನನ್ನ ಹತ್ತಿರವಂತೂ ಹಣವಿಲ್ಲ. ಸ್ವಲ್ಪ ಶಾಂತವಾಗಿ ಇದನ್ನ ಯೋಚಿಸಿ."

ಅದೇ ಹೊತ್ತಿಗೆ ಶ್ಯಾಮಲಾಲ ಗಂಗಾಪ್ರಸಾದನನ್ನು ಎಳೆದುಕೊಂಡು ಜ್ವಾಲಾ ಪ್ರಸಾದನ ಬಳಿ ಬಂದ, "ಅಣ್ಣಾ, ಈ ಗಂಗನ ಚಾಳಿ ನೋಡು. ಬಿಶನೂ, ಅವನ ಪೋಲಿ ಸ್ನೇಹಿತರ ಜೊತೆ ಸೇರಿಕೊಂಡು ಇವನು ಭಂಗಿ ಕುಡಿದು ಬಂದಿದಾನೆ. ಭೀಖೂ ಈ ಹುಡುಗನಿಗೆ ಬೇಡ ಅನ್ನೋದು ಬಿಟ್ಟು ತಾನೂ ಒಂದು ಲೋಟ ಏರಿಸಿದಾನೆ."

ಜ್ವಾಲಾಪ್ರಸಾದ, ರಾಧೇಲಾಲರು ಏನನ್ನಾದರೂ ಹೇಳುವ ಮೊದಲೇ ಭೀಖೂ ಮಿಠಾಯಿಯ ಬುಟ್ಟಿಯನ್ನು ಅವರ ಮುಂದೊಡ್ಡುತ್ತ ಹೇಳಿದ, "ಇದು ಕೊಳ್ಳಿ, ಮಹಾವೀರಜಿಯ ಪ್ರಸಾದ! ಗಂಗನಿಗೆ ಪಾಸಾಯಿತಲ್ಲವೆ, ಅದಕ್ಕೆ! ಅವರು ಭಂಗಿ ಸೋಸ್ತಿದ್ದರು, ಪ್ರಸಾದ ಅಂತ ಸ್ವಲ್ಪಸ್ವಲ್ಪ ತೊಗೊಂಡೆವು; ಗಂಗನೂ ತೊಗೊಂಡ. ಆಗ ಈ ಶ್ಯಾಮು ಅಲ್ಲಿ ಬಂದ, ಶಿವಪೂಜೇಲಿ ಕರಡಿ ಬಿಟ್ಟಹಾಗೆ. ಆಗಿನಿಂದ ಗಂಗನ್ನ ಅಳಸ್ತಿದಾನೆ, ಸುಮ್ಮಸುಮ್ಮನೆ. ನಾಚಿಕೆ ಅನ್ನೋದೇ ಇಲ್ಲ. ಅಲ್ಲಿ ಬಿಶನೂನ ಬೇರೆ ಬೈದು ಬಂದಿದಾನೆ."

ಭೀಖುವಿನ ಮಾತಿನ ಆಸರೆ ಪಡೆದು ಗಂಗಾಪ್ರಸಾದ ಇದ್ದಿದ್ದೂ ಜೋರಾಗಿ ಅಳ ತೊಡಗಿದ. ಅವನ ಅಳು ಕೇಳಿ ಛಿನಕಿ ಮನೆಯಿಂದ ದಡದಡನೆ ಹೊರಬಂದು ತುಂಬ ಪ್ರೀತಿಯಿಂದ ಗಂಗಾಪ್ರಸಾದನ ಕೈಹಿಡಿದುಕೊಳ್ಳುತ್ತ ಹೇಳಿದಳು, "ಹೂವಿನಂಥ ಎಳೇ ಹುಡುಗ, ಇವನನ್ನ ಹಾಗೆ ಗದರಿಸಿಕೊಳ್ಳೋದೆ! ನಡೀ ಮಗು, ನಗನಗ್ತಾ ಸಂತೋಷ ವಾಗಿರೋ ದಿನ ಇದು, ನಿನ್ನನ್ನ ಯಾಕೆ ಅಳಿಸ್ತಾರೆ ಇವರು!" ಛಿನಕಿ ಗಂಗಾಪ್ರಸಾದ ನನ್ನು ಸಮಾಧಾನಗೊಳಿಸುತ್ತ ಮನೆಯೊಳಕ್ಕೆ ಕರೆದುಕೊಂಡು ಹೋದಳು. ಛಿನಕಿಯ ಹಿಂದೆಯೇ ಭೀಖುವೂ ಮಿಠಾಯಿಯ ಬುಟ್ಟಿಯನ್ನೆತ್ತಿಕೊಂಡು ಹೋದ.

ಛಿನಕಿ, ಭೀಖೂ ಒಳಹೋದ ಮೇಲೆ ಶ್ಯಾಮಲಾಲ ಹೇಳಿದ, "ಅಣ್ಣಾ, ಈ ಕೆಲಸಕ್ಕೆ ಬಾರದ ಅಯೋಗ್ಯರನ್ನೆಲ್ಲಾ ಎತ್ತಿ ತಲೆ ಮೇಲೆ ಕೂರಿಸಿಕೊಂಡಿದೀ ನೀನು! ನಮಗೇ ಎದುರುಮಾತಾಡ್ತಾರೆ."

ರಾಧೇಲಾಲ ಮಗನಿಗೆ ಸಮಾಧಾನ ಹೇಳಿದ, "ಪರವಾಗಿಲ್ಲ, ಬಿಡು, ಜ್ವಾಲಾ ಸಾಧು, ಅವನದ್ದು ಒಳ್ಳೇ ಹೃದಯ. ಈಗ ನಾನು ಬಂದಿದೀನಿ, ಮನೆಯ ಯಜಮಾನ. ಸ್ವಲ್ಪ ತಾಳು, ಇವರಿಗೆಲ್ಲಾ ಸರಿಯಾಗಿ ಬುದ್ಧಿ ಕಲಿಸಿತೀನಿ."

ಜ್ವಾಲಾಪ್ರಸಾದ ತಂದೆಮಕ್ಕಳ ಮಾತನ್ನು ಕೇಳಿಸಿಕೊಳ್ಳದವನಂತೆ ಶ್ಯಾಮಲಾಲನ ಕಡೆ ತಿರುಗಿ ಕೇಳಿದ, "ಹೌದು ಶ್ಯಾಮೂ, ನೀನು ಫತಹಪುರದ ಜಮೀನಿನದು ಏನು ವ್ಯವಸ್ಥೆ ಮಾಡಿದೆ? ಈ ಸಲ ಚೆನ್ನಾಗಿ ಫಸಲು ಬಂದಿತ್ತು, ಅಲ್ಲವೇ?"

"ಹೌದು, ಎಷ್ಟು ಹೊಗಳಿದರೂ ಸಾಲದು, ಅಂಥ ಫಸಲು. ಆದರೆ, ಏನು ಹೇಳಲಿ ಅಣ್ಣ, ಪ್ರಪಂಚ ಇದ್ದಕ್ಕಿದ್ದಹಾಗೆ ಮೋಸಕ್ಕೆ ಇಳಿದಿದೆ. ನಾನು ಜಮೀನನ್ನ ಗುತ್ತಿಗೆಗೆ ಕೊಟ್ಟಿದ್ದೆನಲ್ಲ, ಆ ರೈತರು ವಂಚನೆಗೆ ಷುರುಮಾಡಿದಾರೆ. ಕಂದಾಯ ಸರಿಯಾಗಿ ಕೊಡ್ತಾ ಇಲ್ಲ. ಅವರ ಮೇಲೆ ದಾವಾ ಹಾಕಬೇಕಾಗುತ್ತೆ ಅಂತ ಕಾಣುತ್ತೆ."

"ಆ ಎಪ್ಪತ್ತು ಬೀಘಾ ಹಿಡುವಳಿ ಜಮೀನಿತ್ತಲ್ಲ, ಅದರ ಫಸಲು ಏನಾಯ್ತು?"

"ಅದರ ಕೊಯಿಲನ್ನ ಪಾಲಿನ ಲೆಕ್ಕದ ಮೇಲೆ ಗೊತ್ತುಮಾಡಿದ್ದೆ. ಆದರೆ ಆ ಕೇಶೋಸಿಂಹ ಇದಾನಲ್ಲ, ಅವನು ಇಷ್ಟು ಕಳ್ಳ ಅಂತ ನಾನು ಅಂದುಕೊಂಡಿರಲಿಲ್ಲ. ಫಸಲು ಕೊಯಿದು ರಾತ್ರಿಂರಾತ್ರಿ ಧಾನ್ಯಾನ ಎಲ್ಲಿ ಮಾಯ ಮಾಡಿದನೋ ಗೊತ್ತಿಲ್ಲ. ಫಸಲು ಹಾಳಾಯಿತು ಅಂತ ನನ್ನ ಹತ್ತಿರ ಹೇಳ್ತಾನೆ. ಒಟ್ಟು ನೂರೈವತ್ತು ಮಣ ಗೋದಿ, ನೂರು ಮಣ ಕಡಲೆ ಮಾತ್ರ ಕೈಗೆ ದಕ್ಕಿತು. ಅದರಲ್ಲಿ ಸುಮಾರು ಎಪ್ಪತ್ತು ಮಣ ಗೋದಿ, ಇಪ್ಪತ್ತು ಮಣ ಕಡಲೇನ, ಒಂದಕ್ಕೆ ಒಂದೂಕಾಲರ ಲೆಕ್ಕದಲ್ಲಿ ಕೊಟ್ಟು, ಬೀಜದ ಸಾಲ ತೀರಿಸಿದ್ದಾಯಿತು. ಎಲ್ಲಾ ಕಳೆದು ಕೈಗೆ ಹತ್ತಿದ್ದು ಅಂದರೆ ಒಟ್ಟು ಮೂವತ್ತು ಮಣ ಗೋದಿ, ಮೂವತ್ತು ಮಣ ಕಡಲೆ. ಅದನ್ನ ಮಾರಿ ಕಂದಾಯ ಕಟ್ಟಿದೆ. ಒಂದು ಹದಿನೈದು ರೂಪಾಯಿ ಕೈಯಿಂದಲೇ ಕೊಡಬೇಕಾಯಿತು."

ಜ್ವಾಲಾಪ್ರಸಾದನ ಮುಖದ ಮೇಲೆ ಒಂದು ಮುಗುಳುನಗೆ ಮೂಡಿತು. ಅವನಂದ, "ಬೇಸಾಯ ಅಂದರೆ ಭಾಷಣ ಮಾಡೋದಲ್ಲ, ಶ್ಯಾಮೂ, ಮೈಬಗ್ಗಿಸಿ ದುಡೀಬೇಕಾಗುತ್ತೆ!"

"ಹ್ಹಾ... ಹೌದು, ನೀನು ಹೇಳೋದು ಸರಿ. ಆದರೆ ನನ್ನ ಕೈಲಿ ನೇಗಿಲು ಹಿಡಿಯೋಕ್ಕಾಗೋಲ್ಲ, ಅಣ್ಣ. ಮನೆತನದ ಮರ್ಯಾದೆ ಪ್ರಶ್ನೆ ಅದು. ಅಲ್ಲದೆ ಫತಹಪುರದಲ್ಲಿದ್ದುಕೊಂಡು ಇಷ್ಟು ಸಣ್ಣ ಜಮೀನನ್ನ ಸಂಭಾಳಿಸೋದರಿಂದ ಏನೂ ಲಾಭ ವಿಲ್ಲ. ರಹೀಮಪುರದ ಗ್ರಾಮ ಕೈಗೆ ಹತ್ತಿದ್ದಿದ್ದರೆ ಆಗ ಬೇರೆ ಮಾತಾಗ್ತಿತ್ತು. ಆದರೆ ಈಗಿರೋ ಸ್ವಲ್ಪ ಹಿಡುವಳಿ ಜಮೀನು ಹಾಗೂ ಗುತ್ತಿಗೆಯ ಮೇಲೆ ಜೀವನ ನಡಸೋಕ್ಕೆ ಆಗೋಲ್ಲ."

"ಹಾಗಾದರೆ ಆ ಜಮೀನನ್ನ ಯಾಕೆ ಮಾರಿಬಿಡಬಾರದು?" ಜ್ವಾಲಾಪ್ರಸಾದ ಕೇಳಿದ.

ಈಗ ರಾಧೇಲಾಲನ ಮಾತಿನ ಸರದಿ: "ಮಗೂ ಜ್ವಾಲಾ, ಜಮೀನು ಮಾರೋ ಮಾತಾಡಬೇಡ. ಆಡಿದರೆ ಇದ್ದಿದ್ದೂ ಹೆಚ್ಚು ಜಮೀನು ಕೊಂಡುಕೊಳ್ಳೋ ಮಾತಾಡಬೇಕು. ಅಣ್ಣನ ಶ್ರಾದ್ಧ ಮುಗಿದ ಮೇಲೆ ಶ್ಯಾಮೂನ ಕರಕೊಂಡು ನಾನು ಫತಹಪುರಕ್ಕೆ

ಹೋಗಿಬರ್ತೀನಿ. ನನ್ನ ಹತ್ತಿರ ಒಂದಿಷ್ಟು ದುಡ್ಡಿದೆ. ಇಲ್ಲವೇ ಬೀರಪುರ ಗ್ರಾಮದ ಮೂರಾಣೆ ಹಿಸ್ಸೆ ಮಾರಾಟಕ್ಕಿದೆಯಲ್ಲ, ಅದನ್ನ ಕೊಂಡುಕೊಳ್ಳೋಣ. ಏನೇ ಆಗಲಿ, ನಮ್ಮ ಅಂತಸ್ತನ್ನ ನಾವು ಕಾಪಾಡಿಕೊಳ್ಳಲೇಬೇಕು, ಅಲ್ಲವೆ !"

ಆ ಹೊತ್ತಿಗೆ ಒಂದು ಜಟಕಾ ಗಾಡಿ ಮನೆಯ ಕಡೆ ಬರುತ್ತಿರುವುದು ಕಂಡಿತು. "ಇಷ್ಟು ಹೊತ್ತಿನಲ್ಲಿ ಅದು ಯಾರೋ !" ರಾಧೇಲಾಲ ಹೇಳಿದ. ಮತ್ತೆ ಕುಳಿತಲ್ಲಿಂದಲೇ 'ಯಾರದು ?' ಎಂದು ಕೂಗು ಹಾಕಿದ.

ಮನೆಯ ಮುಂದೆ ಗಾಡಿ ನಿಂತಿತು. ಗಾಡಿಗೆ ಪರದೆ ಕಟ್ಟಿತ್ತು. ರಾಧೇಲಾಲನ ಹಿರಿಯ ಮಗ ರಾಮಲಾಲ ಪರದೆಯ ಹೊರಗೆ ಕುಳಿತಿದ್ದ. ಗಾಡಿಯಿಂದ ಇಳಿಯುತ್ತ ಅವನಂದ, "ನಾನು ಕಣಪ್ಪಾ ! ಸ್ಕೂಲಿಗೆ ಬೇಸಿಗೆ ರಜ ಬಂತು ಅಂತ ಎಲ್ಲಾರನ್ನೂ ಕರಕೊಂಡು ಬಂದೆ." ಗಾಡಿಯಿಂದ ರಾಮಲಾಲನ ಹೆಂಡತಿ, ಶ್ಯಾಮಲಾಲನ ಹೆಂಡತಿ ಮತ್ತು ಮೂವರು ಮಕ್ಕಳು ಇಳಿಯುತ್ತಿರುವುದನ್ನು ಜ್ವಾಲಾಪ್ರಸಾದ ಕಂಡ.

ಓಡಿಹೋಗಿ ಶ್ಯಾಮಲಾಲ ಗಾಡಿಯಿಂದ ಸಾಮಾನು ಇಳಿಸಿದ. ಮನೆ ಚಟುವಟಿಕೆಯಿಂದ ತುಂಬಿತು. ಇಬ್ಬರು ಸೊಸೆಯರೂ ಅತ್ತೆಗೆ ಕಾಲುಮುಟ್ಟಿ ನಮಸ್ಕಾರ ಮಾಡಿದರು; ಯಮುನಳನ್ನು ಅಪ್ಪಿಕೊಂಡರು. ಒಳಗೆ ಅಂಗಳದಲ್ಲಿ ಎರಡು ಚಾರಪಾಯಿಗಳನ್ನು ಹಾಕಿದರು. ಹೆಂಗಸರು ಪರಸ್ಪರ ಯೋಗಕ್ಷೇಮ ವಿಚಾರಿಸುತ್ತ ಹರಟೆಗೆ ತೊಡಗಿದರು. ರಾಮಲಾಲ ಹೊರಗಡೆ ಎಲ್ಲರ ಜತೆ ಕುಳಿತುಕೊಂಡು ಮಾತಿಗೆ ಷುರುಮಾಡಿದ.

"ಏನು ಜ್ವಾಲಾ, ಚೆನ್ನಾಗಿದೀಯ ? ಹೇಗಿದ್ದರೂ ದೊಡ್ಡಪ್ಪನ ವಾರ್ಷಿಕ ಹತ್ತಿರವಾಯ್ತು. ಅಲ್ಲಿ ಸ್ಕೂಲಿಗೂ ರಜ ಬಂತು—ಸರಿ, ಎಲ್ಲರನ್ನೂ ಕರಕೊಂಡು ಸೋರಾವಿಗೆ ಬಂದೆ." ಮತ್ತೆ ಶ್ಯಾಮಲಾಲನ ಕಡೆ ತಿರುಗಿ, "ಏನು ಶ್ಯಾಮೂ, ಆಸ್ತಿಪಾಸ್ತೀನ ನೋಡಿಕೊಳ್ಳೋದು ಅಂದರೆ ಹೀಗೇನೇ ? ನೀನು ಇಲ್ಲಿ ಕೂತಿದಿ, ಅಲ್ಲಿ ಹಿಡುವಳಿ ಜಮೀನಿನ ಬಗ್ಗೆ ಕ್ರಿಮಿನಲ್ ಕೇಸ್ ಆಗೋ ಗತಿ ಬಂದಿದೆ. ಅಪ್ಪಾ, ಶ್ಯಾಮು ಒಂದಿಷ್ಟು ಕಷ್ಟಪಟ್ಟರೆ ತುಂಬ ಒಳ್ಳೇ ಸಂಪಾದನೆಯಾಗುತ್ತೆ. ಇವನಿಗಂತೂ ಅಲ್ಲಿ ಮನಸ್ಸೇ ನಿಲ್ಲೋಲ್ಲ. ಇವತ್ತು ಸೋರಾವ್, ನಾಳೆ ಅಲಹಾಬಾದ್, ನಾಡಿದ್ದು ಫತಹಪುರ ಅಂತ ಅಲೀತಿರ್ತಾನೆ. ಅವಕಾಶ ಬಂದಾಗ ನಾವು ಅಲ್ಲಿಲ್ಲದೆ ಹೋದರೆ ಅದು ನಮಗೆ ಕಾಯ್ತಾ ಕುಳಿತುಕೊಳ್ಳುತ್ತ್ಯೆ ? "

ರಾಮಲಾಲ ಬಂದಿಳಿದವನೇ ಈ ಎಲ್ಲ ಪಂಚಾಯಿತಿಗೆ ಷುರುಮಾಡಿದ. ಶ್ಯಾಮಲಾಲ ಕೋಪಿಸಿಕೊಂಡು, "ನೀನು ಅಲ್ಲಿದೀಯಲ್ಲ, ನೀನೇ ಆ ಜಮೀನನ್ನ ನೋಡಿಕೊ !" ಅಂದ.

ರಾಮಲಾಲ ಜಂಬದಿಂದ ತಲೆಯೆತ್ತಿ ಹೇಳಿದ, "ನೀನು ಏನಂದುಕೊಂಡಿದಿ ? ನಾನು ರೈತರಿಂದ ಪೂರಾ ಕಂದಾಯ ವಸೂಲು ಮಾಡಿಬಿಟ್ಟಿದೀನಿ. ಅಷ್ಟೇ ಅಲ್ಲ, ಠಾಕೂರ್

ಬಚ್ಚೂಸಿಂಹನಿಂದ ನಮ್ಮ ಜಮೀನಿಗೆ ಹತ್ತಿಕೊಂಡ ಎಂಟು ಬೀಘಾ ಜಮೀನನ್ನೂ ಕೊಂಡುಕೊಂಡಿದೀನಿ. ಅರ್ಧ ಹಣ ಕೊಟ್ಟಿದೀನಿ. ಇನ್ನು ಸುಮಾರು ಮುನ್ನೂರು ರೂಪಾಯಿ ವ್ಯವಸ್ಥೆ ಮಾಡಬೇಕಾಗಿದೆ. ಜ್ವಾಲಾ, ಅದು ನಿನಗೆ ಬಿಟ್ಟದ್ದು."

"ಅದನ್ನು ಚಾಚಾ ಮಾಡ್ತಾರೆ. ಜಮೀನು ಕೊಂಡುಕೊಳ್ಳೋಕೆ ಅಂತ ಒಂದಿಷ್ಟು ಹಣ ಉಳಿಸಿಟ್ಟಿದಾರೆ," ಜ್ವಾಲಾಪ್ರಸಾದ ಹೇಳಿದ. ಈ ಎಲ್ಲ ಮಾತುಕತೆಯಿಂದ ಅವನ ಮನಸ್ಸಿನಲ್ಲಿ ವಿಚಿತ್ರವಾದ ಕರಕರೆಯುಂಟಾಗುತ್ತಿತ್ತು. ಈ ಪ್ರಸಂಗವನ್ನು ಮುಕ್ತಾಯ ಗೊಳಿಸಲೆಂಬಂತೆ ಅವನು 'ಭೀಖೂ' ಎಂದು ಕೂಗುಹಾಕಿದ.

ಭೀಖೂ ಹೊರಬಂದು "ಏನಣ್ಣಾ, ಏನು ಕರೆದೆ?" ಎಂದು ಕೇಳಿದ.

"ಚಾಚೀನ ಕೇಳು, ಅಡಿಗೆಯಾಗಿದೆಯೆ ಅಂತ. ರಾತ್ರಿ ಸಾಕಷ್ಟು ಹೊತ್ತಾಗಿದೆ. ನನಗೆ ಹೊಟ್ಟೆ ಹಸೀತಿದೆ. ಅಲ್ಲದೆ ಇವರೆಲ್ಲಾ ಬಂದಿದಾರೆ. ತುಂಬ ಸುಸ್ತಾಗಿದೆ. ಬೇಗ ಊಟಮಾಡಿ ನಾನು ಮಲಕ್ಕೊತೀನಿ."

"ಅಡಿಗೆ ಯಾವಾಗಲೋ ಆಯ್ತು. ಅಡಿಗೆಯೋಳು ಹೊರಟೂಹೋದಳು. ಚಾಚೀಜಿ ಒಂದಿಷ್ಟು ಪೂರಿ ಕರೀತಿದಾರೆ. ರಾಮುಲಾಲಣ್ಣ ಸ್ನಾನ ಮಾಡಿಬರಲಿ. ನೀನು ನಡಿ, ಊಟ ಮಾಡೋವಿಯಂತೆ. ನಾಳೆ ಬೆಳಗ್ಗೆ ಮತ್ತೆ ಸರ್ಕೀಟಿನ ಮೇಲೆ ಹೋಗ ಬೇಕಲ್ಲ!"

"ಹೌದು, ಸರಿಯಾಗಿ ಜ್ಞಾಪಿಸಿದೆ," ಜ್ವಾಲಾಪ್ರಸಾದ ಎದ್ದುನಿಂತ.

ಮುನಿಷಿ ಶಿವಲಾಲನ ಶ್ರಾದ್ಧದ ದಿನ ಬೆಳಕು ಹರಿಯುವ ಮೊದಲೇ ಇಡೀ ಪರಿವಾರ ದವರೆಲ್ಲರೂ ಸೋರಾವಿನಿಂದ ಘಾಘಾಮಊಗೆ ಹೊರಟರು. ಮಧ್ಯಾಹ್ನದ ಸುಮಾ ರಿಗೆ ಎಲ್ಲರೂ ಗಂಗಾಸ್ನಾನ ಮುಗಿಸಿ ಹಿಂದಿರುಗಿದರು. ಮನೆಗೆ ಬಂದು ನೋಡುವಾಗ ಕಿಶನಲಾಲ ತಹಸೀಲನ ಕಚೇರಿಯಲ್ಲಿ ಕುಳಿತು ಅವರ ದಾರಿಕಾಯುತ್ತಿದ್ದ. ಕಿಶನಲಾಲ ನನ್ನು ಕಂಡು ಅಪ್ಪ ರಾಧೇಲಾಲ ಗಾಬರಿಯಾದ. ಭಯ ತುಂಬಿದ ಧ್ವನಿಯಲ್ಲಿ ಅವನನ್ನು ಕೇಳಿದ, "ಅರೆ ಕಿಶನೂ, ನೀನು! ಬರೋ ಸುದ್ದಿನೇ ನಮಗೆ ತಿಳಿಸಿರಲಿಲ್ಲವಲ್ಲ ನೀನು? ಘಾಘಾಮಊ ಮುಖಾಂತರವೇ ಬಂದಿರಬೇಕು. ಅಲ್ಲೇ ನಮ್ಮನ್ನು ಕಾಣಬಹುದಾಗಿ ತ್ತಲ್ಲ. ಹೀಗೆ ಇದ್ದಕ್ಕಿದ್ದ ಹಾಗೆ ಯಾಕೆ ಬಂದೆ? ಅರೆ, ಇದೇನು ನಿನ್ನ ಅವಸ್ಥೆ? ಎಲ್ಲಾ ದರೂ ಬಿದ್ದೆಯೋ ಹೇಗೆ?"

"ದೊಡ್ಡಪ್ಪನ ಶ್ರಾದ್ಧ ತಾನೆ! ಲಂಬರ್‌ದಾರಿಣಿ ಇಲ್ಲಿಗೆ ಬರೋಕ್ಕೆ ಬಿಡ್ತಿರಲಿಲ್ಲ, ಆದ್ದರಿಂದ ಮೊದಲೇ ನಿಮಗೆ ಸುದ್ದಿ ತಿಳಿಸೋಕ್ಕೆ ಆಗಲಿಲ್ಲ. ಆದರೆ ಐದಾರು ದಿನಗಳ ಕೆಳಗೆ ಏನಾಯ್ತು ಅಂದರೆ ದೊಡ್ಡಪ್ಪ ಕನಸಿನಲ್ಲಿ ಬಂದು ಕಾಣಿಸಿಕೊಂಡು ತುಂಬ ದುಃಖ ದಿಂದ 'ಮಗೂ ಕಿಶನೂ, ನನ್ನ ಶ್ರಾದ್ಧದಲ್ಲಿ ಎಲ್ಲರೂ ಇರ್ತಾರೆ, ನೀನಿಲ್ಲದೆ ಹೋದರೆ ನನಗೆ ಬಹಳ ದುಃಖವಾಗುತ್ತೆ ನೋಡು' ಅಂದರು. ಈ ಕನಸು ಬಿದ್ದ

ಮೇಲೆ ನನ್ನ ಪೇಚಾಟ ಇದ್ದಿದ್ದೂ ಹೆಚ್ಚಾಯಿತು. ನನಗೆ ಒಂದು ತರಹ ಹುಚ್ಚು ಹಿಡಿದ ಹಾಗಾಯಿತು. ನೇರವಾಗಿ ಲಂಬರ್‌ದಾರಿಣಿ ಹತ್ತಿರ ಹೋದೆ. ಅವತ್ತೇ ಕಾನಪುರದಿಂದ ಲಛ್ಮೀಚಂದನೂ ಬಂದಿದ್ದ. ಈ ಕನಸಿನ ವಿಷಯ ಹೇಳಿದಾಗ ಲಂಬರ್‌ದಾರಿಣಿ ಸುಮ್ಮನಿದ್ದರು. ಆದರೆ ಆ ಲಛ್ಮೀಚಂದ ಇದಾನಲ್ಲ, ಅವನು ದೊಡ್ಡಪ್ಪನಿಗೂ ಜ್ವಾಲಣ್ಣನಿಗೂ ಐವತ್ತೆಂಟು ಬೈಗಳ ಬೈದ. ಅದನ್ನ ಕೇಳಿ ನನಗೆ ತಡೀಲಾರದೆ ಹೋಯಿತು. ನಾನೂ ಮುಖಮೋರೆ ನೋಡದೆ ಜವಾಬು ಕೊಟ್ಟೆ. ಹಾಗೆ ಜವಾಬು ಕೊಟ್ಟದ್ದೇ ತಡ ಲಛ್ಮೀಚಂದ ನಾಲ್ಕು ಜನ ಆಳುಗಳನ್ನು ಕರಸಿ ನನಗೆ ಬಲು ಕೆಟ್ಟದಾಗಿ ಹೊಡಿಸಿದ. ಮೂರು ದಿನ ಓಡಾಡೋಕ್ಕೆ ಆಗಲಿಲ್ಲ. ಮೊನ್ನೆ ರಾತ್ರಿ ಘಾಟಮಪುರ ಬಿಟ್ಟು ಬಂದೆ."

ಕಿಶನಲಾಲನ ಮೈಮೇಲೆ ಅಲ್ಲಲ್ಲಿ ಪಟ್ಟಿ ಬಿಗಿದಿತ್ತು; ಗಾಯದ ಗುರುತಿತ್ತು. "ಕೇಳಿದೆಯಾ, ಜ್ವಾಲಾ?" ರಾಧೇಲಾಲ ಜ್ವಾಲಾಪ್ರಸಾದನಿಗೆ ಹೇಳಿದ.

ಜ್ವಾಲಾಪ್ರಸಾದ ತಲೆ ತುರಿಸಿಕೊಳ್ಳುತ್ತ ಉತ್ತರಿಸಿದ, "ಹ್ಞಾ, ಎಲ್ಲಾನ್ನೂ ಕೇಳಿದೆ. ಆದರೆ ಯಾಕೋ ನಂಬಿಕೆಯಾಗೋಲ್ಲ! ಲಛ್ಮೀಚಂದ ಎಂದೂ ಹಾಗೆ ಮಾಡೋನಲ್ಲ. ಇಷ್ಟಂತೂ ಖಂಡಿತ, ಕಿಶನೂ ನಿಜ ಹೇಳ್ತಿಲ್ಲ."

ಬಿಶನಲಾಲನೂ ಅಲ್ಲೇ ನಿಂತು ಈ ಮಾತುಕತೆಯನ್ನು ಕೇಳುತ್ತಿದ್ದ. ಅವನಿಗೆ ತಡೆಯಲಾಗಲಿಲ್ಲ. ಜೋರಾಗಿ ನಗುತ್ತ ಹೇಳಿದ, "ಕಿಶನೂಅಣ್ಣನಿಗೂ ನಿಜಕ್ಕೂ ಬಹಳ ಹಳೇ ವೈರ. ಇನ್ನೆಲ್ಲೋ ತನ್ನ ಕೆಟ್ಟ ಚಾಳಿಯಿಂದಾಗಿ ಏಟು ತಿಂದು ಲಛ್ಮೀಚಂದನ ಹೆಸರು ಕೆಡಸ್ತಿದಾನೆ!"

ರಾಧೇಲಾಲ ಬಿಶನಲಾಲನ ಕಪಾಳಕ್ಕೆ ಒಂದು ಬಿಗಿದ, "ಇದೆಲ್ಲೋ ಮೃಗ! ಸುಮ್ಮನಿರೋಕ್ಕೆ ಏನು ಬಂದಿದೆ? ನಿನಗಂತೂ ಅಣ್ಣಂದಿರನ್ನ ಕಂಡರೆ ಬದ್ಧದ್ವೇಷ. ಯಾವಾಗ ನೋಡಲಿ, ಅವರ ಮೇಲೆ ತಪ್ಪು ಹೊರಸ್ತಾ ಇರ್ತಿ."

ರಾಮಲಾಲ, ಶ್ಯಾಮಲಾಲರೂ ಬಿಶನಲಾಲನಿಗೆ ಬುದ್ಧಿ ಕಲಿಸಲು ಹೊರಟಿದ್ದರು. ಅಷ್ಟರಲ್ಲಿ ಜ್ವಾಲಾಪ್ರಸಾದ ಹೇಳಿದ, "ಬಿಶನ್, ನೀನು ಇಲ್ಲಿಂದ ನಡಿ! ನಿನಗೆಷ್ಟು ಸಲ ಹೇಳಿದೀನಿ, ಇನ್ನೊಬ್ಬರ ಮಾತಿನಲ್ಲಿ ತಲೆ ಹಾಕಬೇಡ ಅಂತ. ಇದು ಕೆಟ್ಟ ಅಭ್ಯಾಸ, ನೋಡು." ಆಮೇಲೆ ಕಿಶನಲಾಲನನ್ನು ಕುರಿತು ಹೇಳಿದ, "ಒಳ್ಳೇದು, ಈಗ ನೀನು ಸ್ನಾನ ಮಾಡಿ, ಬಟ್ಟೆ-ಗಿಟ್ಟೆ ಬದಲಾಯಿಸಿಕೊ. ಏನು ಮಾಡೋದು ಅಂತ ಆಮೇಲೆ ಯೋಚಿಸ್ತೀನಿ."

ಜ್ವಾಲಾಪ್ರಸಾದ ಅವತ್ತು ರಜದ ಮೇಲಿದ್ದ. ಮಾರನೆ ದಿನ ಕಚೇರಿ ತಲಪಿದಾಗ ಜೈದೇಯಿಯಿಂದ ಅವನಿಗೊಂದು ಕಾಗದ ಬಂದಿತ್ತು. ಅದರ ಒಕ್ಕಣೆ ಇಷ್ಟೇ. "ಕಾಗದದಲ್ಲಿ ಬರೆದು ತಿಳಿಸಲಾಗದ ಕೆಲವು ಕಾರಣಗಳಿಂದಾಗಿ ಕಿಶನಲಾಲನನ್ನು ಕೆಲಸದಿಂದ ತೆಗೆದುಹಾಕಿದೆ. ಅವನು ಹೇಳುವುದನ್ನು ಸ್ವಲ್ಪವೂ ನಂಬಕೂಡದು. ಶ್ರಾವಣದಲ್ಲಿ ಅಲಹಾಬಾದಿಗೆ ಬರಲಿದ್ದೇನೆ. ಆಗ ಸೋರಾವಿಗೂ ಬಂದು ಕಾಣುತ್ತೇನೆ."

ಶಿವಲಾಲನ ವಾರ್ಷಿಕ ಶ್ರಾದ್ಧದ ನಂತರ ಜ್ವಾಲಾಪ್ರಸಾದ ಕಣ್ಣು ತೆರೆದು ತನ್ನ ಸುತ್ತಲೂ ನೋಡಿದ. ಆ ವಾತಾವರಣ ಅವನು ಗುರುತಿಸಲಾರದಷ್ಟು ಬೇರೆಯಾಗಿತ್ತು. ಅವನ ಚಿಕ್ಕಪ್ಪ ರಾಧೇಲಾಲನ ಇಡೀ ಸಂಸಾರ ಅಲ್ಲಿ ಜಮಾಯಿಸಿತ್ತು. ತಹಸೀಲದಾರನ ಆ ವಿಶಾಲವಾದ ಬಂಗಲೆ ಅವನಿಗೆ ಚಿಕ್ಕದಾಗಿ, ಇಕ್ಕಟ್ಟಾಗಿ ಕಾಣಿಸುತ್ತಿತ್ತು. ತನ್ನ ಮನೆಯಲ್ಲಿಯೇ ಅವನಿಗೆ ಅಸ್ತಿತ್ವವಿಲ್ಲದಂತಾಗಿತ್ತು.

ಒಂದು ದಿನ ಜ್ವಾಲಾಪ್ರಸಾದ ಕೆಲಸ ಮುಗಿಸಿ ಆಫೀಸು ಬಿಡುವ ಹೊತ್ತಿಗೆ ಪಂಡಿತ ಬೇಚೂಮಿಸಿರ ಅವನನ್ನು ಕಾಣಲು ಬಂದ. "ಮಳೆಗಾಲಕ್ಕೆ ಸ್ವಲ್ಪ ಮುಂಚೆಯೇ ಮಳೆ ಬರೋ ಹಾಗೆ ಕಾಣುತ್ತೆ. ಇನ್ನೂ ಆಷಾಢದ ಮೊದಲ ಪಕ್ಷ ಸಹ ಕಳೆದಿಲ್ಲ. ಇವತ್ತು ಮಧ್ಯಾಹ್ನದಿಂದಲೇ ಮೋಡ ಕವಿದುಕೊಂಡಿದೆ. ಬಿಸಿಗಾಳಿ ನಿಂತು, ಮೂಡಣ ತಂಗಾಳಿ ಬೀಸ್ತಾ ಇದೆ," ಬೇಚೂಮಿಸಿರ ಹೇಳಿದ.

ಜ್ವಾಲಾಪ್ರಸಾದ ಆಕಾಶದ ಕಡೆ ನೋಡುತ್ತ ಹೇಳಿದ, "ಹೌದು, ಹವಾ ಇವತ್ತು ಇದ್ದಕ್ಕಿದ್ದಹಾಗೆ ಬಹಳ ಹಿತವಾಗಿದೆ. ಆಷಾಢಮಾಸ ಅರ್ಧ ಕಳೆದ ಮೇಲೆ ತಾನೇ ಮಳೆ ಷುರುವಾಗೋದು. ಈ ಸಲ ಬೇಸಿಗೆಯು ಹೊಡೆತ ಜೋರಾಗಿಯೇ ಇತ್ತು."

ಬೇಚೂಮಿಸಿರನ ಮುಖದ ಮೇಲೆ ಒಂದು ನಸುನಗೆ ಸುಳಿಯಿತು, "ನೋಡಿದರೆ ಹನುಮಂತನ ಗುಡಿಯ ತೋಪಿನಲ್ಲಿ ಈ ಸಲ ಮಾವಿನ ಫಸಲು ಚೆನ್ನಾಗಿ ಆಗಿದೆ ಅಂತ ಗೊತ್ತಾಗುತ್ತೆ. ನಿನ್ನೆ ಇಲ್ಲಿಂದ ಅಲಹಾಬಾದಿಗೆ ಐದು ಗಾಡಿ ಮಾವಿನ ಹಣ್ಣು ಮಾರಾಟಕ್ಕೆ ಹೋಯಿತು. ಹೋಗಲಿ ಬಿಡಿ, ನಿಮ್ಮ ತಮ್ಮ ಶ್ಯಾಮಲಾಲ ಏನೋ ಒಂದು ಕಸುಬು ಅಂತ ಷುರುಮಾಡಿದನಲ್ಲ."

ಜ್ವಾಲಾಪ್ರಸಾದ ಬೇಚೂಮಿಸಿರನನ್ನು ಆಶ್ಚರ್ಯದಿಂದ ನೋಡಿದ, "ಐದು ಗಾಡಿ ಮಾವಿನ ಹಣ್ಣು ಅಲಹಾಬಾದಿಗೆ ಹೋಯಿತೆ? ಮಾರಾಟಕ್ಕೆ? ನನಗಂತೂ ಇದರ ಯಾವ ಸಮಾಚಾರವೂ ತಿಳೀದು. ಅದು ಪಾಳುಬಿದ್ದಿರೋ ಹಳೇ ತೋಪು. ಅದರಲ್ಲಿ ಇಷ್ಟೊಂದು ಮಾವಿನ ಹಣ್ಣು, ಒಂದು ಸಲಕ್ಕೆ ಐದು ಗಾಡಿ, ಹೇಗೆ ತಾನೇ ಹುಟ್ಟುವಳಿಯಾಗುತ್ತೆ?"

"ಅದಂತೂ ನಾನು ಕಾಣೆ. ಕೇಳಿ ನನಗೂ ಆಶ್ಚರ್ಯವಾಯಿತು. ಯಾಕೆ ಅಂದರೆ ಈ ಸಲ ಬಹಳ ಕಡಿಮೆ ಮಾವಿನ ಹಣ್ಣು ಬಿಟ್ಟಿದೆ ಅಂತ ಘುಮರೂ ಹೇಳ್ತಿದ್ದ. ನಡೀರಿ, ಹೇಗಿದ್ದರೂ ಹವಾ ಸೊಗಸಾಗಿದೆ, ಸ್ವಲ್ಪ ಗಾಳಿಸವಾರಿ ಮಾಡಿ ಬರೋಣವಂತೆ. ಇವತ್ತು ಶನಿವಾರ, ಸುತ್ತಾಟಕ್ಕೆ ಪೇಟೆಗೀಟೆ ಒಂದೂ ಇಲ್ಲ. ನಮಗೂ ಇವತ್ತು ಮಹಾವೀರ ಜಿಯ ದರ್ಶನವಾದ ಹಾಗಾಯಿತು, ನಡೀರಿ."

ಬೇಚೂಮಿಸಿರನ ಮುಖದ ಮೇಲಿನ ವ್ಯಂಗ್ಯದ ನಗೆ ಕಂಡು ಜ್ವಾಲಾಪ್ರಸಾದ ಕಿಡಿಕಿಡಿಯಾಗಿ ಹೇಳಿದ, "ಯಾಕೆ, ಏನು ವಿಷಯ? ನೇರವಾಗಿ ಯಾಕೆ ಹೇಳೋಲ್ಲ ನೀವು?"

"ಹೇಗೆ ಹೇಳಲಿ, ಜ್ವಾಲಾಬಾಬು? ಅಂಥ ಮಹಾ ವಿಷಯವೇನೂ ಅಲ್ಲ.

ಆದರೆ ನಿಮ್ಮ ಮಾನಾಪಮಾನದ ಪ್ರಶ್ನೆ ಎದ್ದು ನಿಲ್ಲುತ್ತೆ. ಆದ್ದರಿಂದ ನಿಮಗೆ ಹೇಳದೇ ವಿಧಿಯಿಲ್ಲ. ಈಚೀಚೆಗೆ ಮಹಾವೀರಜಿಯ ತೋಪಿನ ಅಕ್ಕಪಕ್ಕದ ತೋಟಗಳಿಂದ ಮಾವಿನ ಹಣ್ಣು ಕಳುವಾಗ್ತಾ ಇದೆ ಅಂತ ರಿಪೋರ್ಟ್ ಬರ್‍ತಿದೆ. ಜನ ಕಳ್ಳರನ್ನ ಗುರುತಿಸಿಯೂ ಇದಾರೆ. ಆ ಜನ ಶ್ಯಾಮಲಾಲನ ಹೆಸರು ಹೇಳ್ತಾರೆ. ಯಾವಾಗ ಶ್ಯಾಮಲಾಲ ಐದು ಗಾಡಿ ಮಾವಿನ ಹಣ್ಣನ್ನು ಅಲಹಾಬಾದಿಗೆ ಮಾರಾಟಕ್ಕೆ ಕಳಿಸಿದನೋ ಆಗ ಸಂಶಯ ಗಟ್ಟಿಯೂ ಆಯಿತು. ಠಾಣೇದಾರ ಶಹಾಬುದ್ದೀನ್ ಆ ರಿಪೋರ್ಟನ್ನು ಅಡಗಿಸಿಟ್ಟಿದ್ದಾನೆ; ಆದರೆ ಅವನು ಶ್ಯಾಮಲಾಲನನ್ನು ಕರಸಿ ವಿಚಾರಣೆ ಮಾಡಿರೋದು ಖಂಡಿತ. ಶ್ಯಾಮಲಾಲ ಹೇಳೋದು, ಅವನು ಅಲಹಾಬಾದಿಗೆ ಕಳಿಸಿದ ಹಣ್ಣೆಲ್ಲಾ ಹನುಮಂತನ ಗುಡಿಯ ತೋಪಿನಿಂದ ಬಂದದ್ದು ಅಂತ."

ಜ್ವಾಲಾಪ್ರಸಾದನ ಹಣೆ ಗಂಟಿಕ್ಕಿತು, "ಹ್ಞಾ, ಹೀಗೋ ವಿಷಯ? ನಡೀರಿ, ಇದರ ಪರೀಕ್ಷೆ ಮಾಡಿಯೇ ಬಿಡೋಣ!"

ಹನುಮಂತನ ಗುಡಿಯ ಹಿಂಬದಿಯ ಬಾವಿಯ ಹತ್ತಿರ, ಮಾವಿನ ಮರದ ಕೆಳಗೆ ಘುಂಡೀಸ್ವಾಮಿ ಬೆಂಕಿಯ ಹೊಂಡ ಹಾಕಿಕೊಂಡು ಕುಳಿತಿದ್ದ. ಘುಂಡೀಸ್ವಾಮಿಯ ಅಪ್ಪಣೆಯ ಮೇರೆಗೆ ಕಿಶನಲಾಲ ಆ ಸ್ಥಳಕ್ಕೆ ಚಪ್ಪರ ಬಿಗಿಸಿಕೊಟ್ಟಿದ್ದ. ಘುಂಡೀಸ್ವಾಮಿಯ ಪ್ರಮುಖಶಿಷ್ಯನೆಂದರೆ ಕಿಶನಲಾಲ. ಅವನೂ ಊರಿನ ನಾಲ್ಕಾರು ಹುಡುಗರೂ ಅಲ್ಲಿ ಜಮಾಯಿಸಿದ್ದರು. ಚಿಲುಮೆಗೆ ಗಾಂಜಾ ತುಂಬಿ ಅಣಿಮಾಡಿ ಕಿಶನಲಾಲ ಘುಂಡೀ ಸ್ವಾಮಿಗೆ ಕೊಟ್ಟ. ಘುಂಡೀಸ್ವಾಮಿ ಒಂದು ಬಾರಿ ಆಳವಾಗಿ ದಮ್ಮೆಳೆದು ಎರಡು ಮೊಳ ಎತ್ತರದವರೆಗೆ ಕಿಡಿಹಾರಿಸಿದ. ಅವನ ಕಣ್ಣು ಕೆಂಡದಂತೆ ಉರಿಯತೊಡಗಿತ್ತು. "ತೊಗೋ ಶಿಷ್ಯ, ನೀನೂ ಪ್ರಸಾದ ಸೇವಿಸು" ಎನ್ನುತ್ತ ಚಿಲುಮೆಯನ್ನು ಕಿಶನಲಾಲನ ಕಡೆ ಚಾಚಿದ.

ಕಿಶನಲಾಲ ದಮ್ಮೆಳೆಯುತ್ತಿರುವಾಗ ಘುಂಡೀಸ್ವಾಮಿಯ ದೃಷ್ಟಿ ಆ ಕಡೆಯೇ ಬರುತ್ತಿದ್ದ ಜ್ವಾಲಾಪ್ರಸಾದ, ಬೇಚೂಮಿಸಿರರ ಮೇಲೆ ಬಿತ್ತು. ಸುತ್ತ ಕುಳಿತಿದ್ದ ಜನ ತಹಸೀಲದಾರರ ಮುಖ ನೋಡಿದೊಡನೆಯೇ ಎದ್ದುನಿಂತರು. ಘುಂಡೀಸ್ವಾಮಿ ಹೊಂಡಕ್ಕೆ ಒಂದು ಕಟ್ಟಿಗೆಯ ಚೂರು ಹಾಕುತ್ತ ಮೆಲ್ಲಗೆ ಹೇಳಿದ, "ಎದ್ದೇಳೋ ಮಗನೇ, ನಿಮ್ಮಣ್ಣ ಬರ್‍ತಿದಾನೆ!" ಆಮೇಲೆ ಧ್ವನಿ ಎತ್ತರಿಸಿ ಹೇಳಿದ, "ಮಹಾನುಭಾವ ಇವನು! ಧರ್ಮಕರ್ಮ ಮರ್ಯಾದೆಗಳ ಮನುಷ್ಯ. ಆದರೆ ಹಣಕ್ಕೆ ಕಷ್ಟವಾಗಿದೆ. ಆದರೆ ತುಂಬಾ ಐಶ್ವರ್ಯ ಸಿಗೋದಿದೆ—ಸಾವಿರಾರು ರೂಪಾಯಿ, ಚಿನ್ನಬೆಳ್ಳಿ, ಮುತ್ತು ವಜ್ರ!"

ಇಷ್ಟುಹೊತ್ತಿಗೆ ಜ್ವಾಲಾಪ್ರಸಾದನೂ ಬೇಚೂಮಿಸಿರನೂ ಘುಂಡೀಸ್ವಾಮಿಯ ಹೊಂಡದ ಹತ್ತಿರ ಬಂದಿದ್ದರು. ಘುಂಡೀಸ್ವಾಮಿ ಜ್ವಾಲಾಪ್ರಸಾದನ ಕಡೆ ನೋಡುತ್ತ "ತೊಗೋ ಮಗು, ಭಸ್ಮ" ಎಂದು ಅಗ್ನಿಕುಂಡದಿಂದ ಒಂದು ಚಿಟಿಕಿ ಬೂದಿ ತೆಗೆದು ಜ್ವಾಲಾಪ್ರಸಾದನ ಕೈಯಲ್ಲಿಟ್ಟ, "ಎಲ್ಲಿ ಮುಷ್ಟಿ ಮುಚ್ಚಿಕೊ! ಹ್ಞಾ, ಈಗ ತೆಗೆದು ನೋಡು!"

ಜ್ವಾಲಾಪ್ರಸಾದ ಮುಷ್ಟಿ ಬಿಚ್ಚಿ ನೋಡಿ ಆಶ್ಚರ್ಯದಿಂದ ಬೆಚ್ಚಿದ. ಅಲ್ಲಿ ಬೂದಿಯ ಬದಲು ಒಂದು ಕೆಂಪು ಬಣ್ಣದ ಕಲ್ಲಿತ್ತು. ಬೇಚೂಮಿಸಿರ ಮುಂದೆ ಬಂದು ನೋಡಿ, "ಅರೆ, ಇದು ಗೋಮೇದಕದ ಹಾಗೆ ಕಾಣುತ್ತೆ!" ಅಂದ.

ಘುಂಡೀಸ್ವಾಮಿ ನಗುತ್ತ, "ಕೇತು ಕೆಟ್ಟದಿದೆ, ಭಕ್ತ! ಅದಕ್ಕೇ ಬಂಭೋಲೇನಾಥ ಗೋಮೇದಕ ಕೊಟ್ಟಿದ್ದಾನೆ. ಇದನ್ನ ಉಂಗುರದಲ್ಲಿ ಕಟ್ಟಿಸಿ ಹಾಕಿಕೊ. ಆರು ತಿಂಗಳಲ್ಲಿ ಹುಗಿದಿಟ್ಟ ಹಣ ಸಿಗುತ್ತೆ."

ಬೇಚೂಮಿಸಿರನಿಗೆ ಜ್ವಾಲಾಪ್ರಸಾದನನ್ನು ಕಂಡು ಒಂದು ಬಗೆಯ ಅಸೂಯೆ ಉಂಟಾಯಿತು. ತಾನು ಜ್ವಾಲಾಪ್ರಸಾದನನ್ನು ತೋಪಿನ ಮಾವಿನ ಹಣ್ಣು ತೋರಿಸಲು ಕರೆದು ತಂದದ್ದನ್ನು ಮರೆತೇಬಿಟ್ಟ. ಘುಂಡೀಸ್ವಾಮಿ ತನಗೂ ಒಂದಿಷ್ಟು ಭಸ್ಮ ಇತ್ಯಾದಿ ಕೊಡುವನೇನೋ ಎಂಬ ಗುಂಗಿನಲ್ಲಿ ಮುಳುಗಿದ್ದ. ಆ ಹೊತ್ತಿಗೆ ತೋಪಿನ ದಕ್ಷಿಣದ ಕಡೆಯಿಂದ ಅಲ್ಲಿಯ ತೋಪಿನ ಮಾಲಿಕ ಜುಮ್ಮನ್‌ಮಿಯ್ಯಾ ಹಾಗೂ ಅವನ ಇಬ್ಬರು ಆಳುಗಳು ಶ್ಯಾಮಲಾಲನನ್ನು ಎಳೆದುಕೊಂಡು ಬರುತ್ತಿದ್ದರು. ಜುಮ್ಮನ್ ಮಿಯ್ಯಾ ಅರಚುತ್ತಿದ್ದ, "ಕಳ್ಳ! ಇವತ್ತು ಸಿಕ್ಕಿಬಿದ್ದ! ದೊಡ್ಡದಾಗಿ ತಹಸೀಲದಾರರ ತಮ್ಮ ಅಂತ ಅಂದುಕೊಂಡು ಓಡಾಡ್ತಾನೆ. ಇನ್ನೊಂದು ಸಲ ನನ್ನ ತೋಪಿನಲ್ಲಿ ಕಾಣಿಸಿಕೊಂಡರೆ ಕೈಕಾಲು ಮುರಿತೀನಿ. ಕಾವಲು ಜೋರುಮಾಡಬೇಕು, ಹಮದೂ. ಮರದ ಮಾವಿನ ಹಣ್ಣೆಲ್ಲಾ ಅರ್ಧಕ್ಕೆ ಇಳೀತು."

ಜುಮ್ಮನ್‌ಮಿಯ್ಯಾನ ದೃಷ್ಟಿ ಜ್ವಾಲಾಪ್ರಸಾದ ಮತ್ತು ಬೇಚೂಮಿಸಿರರ ಕಡೆ ಬಿತ್ತು. ಅವನು ಶ್ಯಾಮಲಾಲನನ್ನು ಆ ಕಡೆಯೇ ಎಳೆದು ತಂದ, "ಏನು ತಹಸೀಲದಾರ ಸಾಹೇಬರೇ, ನನ್ನ ತೋಪಿನ ಮಾವಿನ ಹಣ್ಣು ನೋಡಿಕೊಳ್ಳೋಕೆ ಹುಜ಼ೂರರು ಇವನನ್ನ ನೇಮಕ ಮಾಡಿದಾರೆಯೆ? ಹಗಲ ಹೊತ್ತು ಮಾವಿನ ಹಣ್ಣು ನೋಡಿ ಅಂದಾಜು ಹಾಕ್ತಾನೆ; ರಾತ್ರಿಹೊತ್ತು ಕೀಳ್ತಾನೆ. ಇವತ್ತು ಸಿಕ್ಕಿಬಿದ್ದ. ನನ್ನ ಕಸೀಹಣ್ಣಿನ ತೋಟಕ್ಕೆ ತೋಟಾನೇ ಹಾಳೆಬ್ಬಿಸಿದಾನೆ, ಈ ಕಳ್ಳ!"

ಈ ಗದ್ದಲವನ್ನು ಕೇಳಿ ಗುಡಿಗೆ ಬಂದಿದ್ದ ಜನರೆಲ್ಲರೂ ಅಲ್ಲಿಂದ ಇಲ್ಲಿ ಬಂದು ನೆರೆದರು. ಜ್ವಾಲಾಪ್ರಸಾದ, ಬೇಚೂಮಿಸಿರರ ಗಮನ ಈಗ ತಾವು ಯಾವ ಸತ್ಯವನ್ನು ಪತ್ತೆಮಾಡಲು ಬಂದಿದ್ದರೋ ಆ ಕಡೆ ಹರಿಯಿತು. ಬೇಚೂಮಿಸಿರ ಜುಮ್ಮನ್‌ಮಿಯ್ಯಾನಿಗೆ ಹೇಳಿದ, "ಇಷ್ಟೊಂದು ಕೋಪಿಸಿಕೊಳ್ಳೋ ಅಗತ್ಯವಿಲ್ಲ, ಜುಮ್ಮನ್‌ಮಿಯ್ಯಾ. ನೀನು ಶ್ಯಾಮಲಾಲ ಹಣ್ಣುಕಿತ್ತದ್ದನ್ನೇನೂ ನೋಡಿಲ್ಲವಲ್ಲ. ಈಗ ಹೋಗು, ಇನ್ನು ಮುಂದೆ ನಿನಗೆ ಯಾವ ನಷ್ಟವಾಗೋಕ್ಕೂ ಬಿಡೋಲ್ಲ. ಖುದ್ದಾಗಿ ತಹಸೀಲದಾರ ಸಾಹೇಬರು ಈ ವಿಷಯದ ವಿಚಾರಣೆ ಮಾಡೋಕ್ಕೆ ಬಂದಿದಾರೆ." ಆಮೇಲೆ ಗುಂಪಿನ ಕಡೆ ತಿರುಗಿ ಗದರಿಸಿಕೊಂಡ, "ನಡೀರಿ, ಎಲ್ಲಾ! ಏನು ಗುಂಪ್ಕಕೂಡಿದೀರಿ ಇಲ್ಲಿ!"

ಜುಮ್ಮನ್‌ಮಿಯ್ಯಾ ಆಳುಗಳೊಂದಿಗೆ ತನ್ನ ತೋಟಕ್ಕೆ ಹಿಂದಿರುಗಿದ. ಅವನ

ಹಿಂದೆಯೇ ಅಲ್ಲಿ ಸೇರಿದ್ದ ಗುಂಪೂ ಕರಗಿತು. ಜ್ವಾಲಾಪ್ರಸಾದ ಹತಪ್ರಭನಾಗಿ ತಲೆ ತಗ್ಗಿಸಿಕೊಂಡು ನಿಂತಿದ್ದ. ಆಗ ಘುಂಡೀಸ್ವಾಮಿಯ ಅಟ್ಟಹಾಸ ಕೇಳಿಬಂತು, "ಏನು ಯೋಚನೆ ಮಾಡ್ತಿದಿ, ಭಕ್ತ? ಇದರಲ್ಲಿ ದುಃಖಪಡೋಕ್ಕೆ ಏನಿದೆ? ಇವೆಲ್ಲಾ ಇದ್ದೇ ಇರುತ್ತೆ. ಯಾರ ಹಣೇಲಿ ಯಾವ ಭಾಗ್ಯ ಬರೆದಿದೆಯೋ ಅದು ಅವರಿಗೆ ಸಿಕ್ಕೇ ತೀರುತ್ತೆ. ಈ ಶ್ಯಾಮಲಾಲನ ಭಾಗ್ಯ ಚೆನ್ನಾಗಿದೆ. ಸಂಪತ್ತು ಓಡೋಡಿ ಅವನ ಹತ್ತಿರ ಬರುತ್ತೆ." ಘುಂಡೀಸ್ವಾಮಿ ಬೇಚೂಮಿಸಿರನ ಕಡೆ ತಿರುಗಿ, "ನೀನೇನು ಅಂದು ಕೊಂಡೆ, ಭಕ್ತ. ನೀನೂ ಪ್ರಸಾದ ತೊಗೋ! ಘುಂಡೀಸ್ವಾಮಿ ಪಕ್ಷಪಾತ ಮಾಡಿದ ಅಂತ ಯೋಚಿಸ್ತಿದೀಯೇನೋ" ಎಂದು ಹೊಂಡದಿಂದ ಇನ್ನೊಂದು ಚಿಟಿಕೆ ಬೂದಿ ಯನ್ನು ತೆಗೆದು ಬೇಚೂಮಿಸಿರನ ಕೈಯಲ್ಲಿಟ್ಟ. ಅವನು ಮುಷ್ಟಿ ಮುಚ್ಚಿ ಮತ್ತೆ ತೆಗೆದು ನೋಡಿದಾಗ ಅಲ್ಲೊಂದು ಹವಳವಿತ್ತು.

ಘುಂಡೀಸ್ವಾಮಿ ಮತ್ತೆ ಗೊಳ್ಳನೆ ನಕ್ಕ, "ಮಂಗಳ ಕೆಟ್ಟದ್ದಿದೆ, ಮಂಗಳ! ತಮ್ಮನ್ನ ಮಹಾವೀರಜಿಯ ಸೇವೆಗೆ ತೊಡಗಿಸಿ ಒಳ್ಳೇದು ಮಾಡಿದೆ. ಇಲ್ಲದೇ ಇದ್ದರೆ ನಿಮ್ಮ ದೆಲ್ಲಾ ನಷ್ಟವಾಗಿ ಹೋಗ್ತಿತ್ತು! ಈ ಹವಳಾನ ಧರಿಸು. ಮಂಗಳವಾರ ವ್ರತಮಾಡು. ದಿನಾಗಲೂ ಸಂಜೆ ಮಹಾವೀರಜಿಯ ದರ್ಶನ ಮಾಡು!"

ಹತ್ತಿರ ನಿಂತಿದ್ದ ಬಿಶನಲಾಲ ಹೇಳಿದ, "ನೀನೂ ದೊಡ್ಡ ಮಾಯಾವಿ, ಘುಂಡೀ ಸ್ವಾಮಿ! ಗೋಮೇದಕ, ಹವಳ, ಕೆಂಪುಕಲ್ಲುಗಳನ್ನು ಹಂಚ್ತಿದಿ. ಯಾರ ಮುಷ್ಟೀ ಲಾದರೂ ವಜ್ರ, ಮಾಣಿಕ್ಯ, ಪಚ್ಚೇನ ಬರಿಸು, ಗೊತ್ತಾಗುತ್ತೆ!" ಆಮೇಲೆ ಜ್ವಾಲಾ ಪ್ರಸಾದನ ಕಡೆ ತಿರುಗಿ, "ಹೋಗೀ ಹೋಗೀ ನೀನು ಯಾರ ಬಲೆಯಲ್ಲಿ ಸಿಕ್ಕಿಬೀಳ್ತಿದಿ, ಅಣ್ಣ! ಶ್ಯಾಮೂಅಣ್ಣ, ಕಿಶನೂ ಅಣ್ಣ ಇಬ್ಬರನ್ನೂ ಬಲೇಗೆ ಹಾಕ್ಕೊಂಡು ನಮ್ಮ ತೋಪಿನಲ್ಲಿ ಬಂದು ತಳ ಊರಿದಾನೆ. ಹಗಲೂ ರಾತ್ರಿ ಯಾವಾಗ ನೋಡಲಿ ಗಾಂಜಾ ಎಳೆದದ್ದೂ ಎಳೆದದ್ದೇ; ಈಚೆಗೆ ಹೆಂಗಸರು ಬರೋದೂ ಷುರುವಾಗಿದೆ. ಏನೋ ಘುಮರೂ ಪಂಡಿತ, ನಾನು ಹೇಳ್ತಿರೋದು ಸರಿ ತಾನೆ?"

ಘುಮರೂ ಮಹಾವೀರನ ಸೇವೆಗೆ ತನ್ನೊಬ್ಬ ಶಿಷ್ಯನನ್ನು ಬಿಟ್ಟು ತಮಾಷೆ ನೋಡಲು ಬಂದಿದ್ದ. ಅವನಂದ, "ಇವರಿಂದ ನಮ್ಮ ಪ್ರಾಣಕ್ಕೆ ಸಂಚಕಾರ ಬಂದಿದೆ. ಒಬ್ಬೊಬ್ಬ ರಾಗಿ ಗೂಂಡಾಗಳೆಲ್ಲಾ ಇಲ್ಲಿ ಸೇರ್ತಿದಾರೆ. ಹನುಮಂತ ದೇವರಿಗೆ ಅರ್ಪಣೆಯಾದ ನೈವೇದ್ಯ ದಲ್ಲಿ ಅರ್ಧ ಕೊಡಬೇಕು ಅಂತ ಕೂತಿದಾರೆ."

ಜ್ವಾಲಾಪ್ರಸಾದ ಮರ್ಮಾಘಾತವಾದವನಂತೆ ಮಂಕಾಗಿ ನಡೆಯುತ್ತಿದ್ದುದೆಲ್ಲ ವನ್ನೂ ನೋಡುತ್ತ, ಕೇಳುತ್ತ ನಿಂತಿದ್ದ. ಆದರೆ ಬೇಚೂಮಿಸಿರ ಹನುಮಂತನ ನೈವೇದ್ಯದ ಪಾಲಿನ ವಿಷಯ ಕಿವಿಗೆ ಬಿದ್ದೊಡನೆಯೇ ಎಚ್ಚರಗೊಂಡ. "ಎಲ್ಲೀವರೆಗೆ ಇಲ್ಲಿ ಇರಬೇಕು ಅಂತಿದೀರಿ, ಸ್ವಾಮಿಜಿ?" ಅವನು ಘುಂಡೀಸ್ವಾಮಿಯನ್ನು ಕೇಳಿದ.

"ಬಮ್‌ಭೋಲೇನಾಥನ ಇಚ್ಛೆ, ಭಕ್ತ! ಭಗವಾನ್ ಭೂತನಾಥ 'ಇನ್ನು ನಡೀ,

ಘುಂಡೀ ' ಅಂತ ಅಪ್ಪಣೆ ಮಾಡಿದ ತಕ್ಷಣ ನಾವು ಹೊರಟೆವು. ಇನ್ನು ಈ ಹುಡುಗರು ಹೇಳಿದ್ದು, ನಾವು ವಿಷದ ಗುಟುಕನ್ನ ಕುಡಿಯೋರು ಅದನ್ನೂ ಕುಡಿದುಕೊಂಡೆವು. ಆದರೆ ಈ ಕೋಪದ ಮೂರನೇ ಕಣ್ಣು ಯಾವಾಗ ತೆರೆಯುತ್ತೆ, ಈ ಹುಡುಗರು ಯಾವಾಗ ಭಸ್ಮವಾಗಿ ಹೋಗ್ತಾರೆ ಅನ್ನೋದನ್ನ ಶಿವ ಬಲ್ಲ !"

ಇಷ್ಟುಹೊತ್ತಿಗೆ ಜ್ವಾಲಾಪ್ರಸಾದನ ಚೇತನ ಹಿಂದಿರುಗಿತ್ತು. ಅವನು ಖಡಾ ಖಂಡಿತವಾದ ಧ್ವನಿಯಲ್ಲಿ ಹೇಳಿದ, "ನಾಳೆ ಬೆಳಗ್ಗೆ ನೀವು ಇಲ್ಲಿಂದ ಹೊರಡಬೇಕು ಅಂತ ಭಗವಾನ್ ಶಂಕರರ ಅಪ್ಪಣೆಯಾಗಿದೆ. ನಾಳೆ ಸಂಜೆ ಮತ್ತೆ ನಾನು ಇಲ್ಲಿ ಬರ್‍ತೀನಿ. ಅಲ್ಲೀ ತನಕ ನೀವಿಲ್ಲೇ ಇದ್ದರೆ ನಿಮ್ಮನ್ನ ಬಂದೀಖಾನೆಗೆ ಹಾಕಬೇಕಾಗುತ್ತೆ. ನಾಯಬ್ ಸಾಹೇಬ್, ಠಾಣೇದಾರ ಶಹಾಬುದ್ದೀನರಿಗೆ ಹೇಳಿ, ಇಬ್ಬರು ಪೋಲೀಸಿನೋರನ್ನ ಈಗಲೇ ಇಲ್ಲಿ ಕಾವಲಿಗೆ ನೇಮಿಸಬೇಕು ಅಂತ."

## ಹದಿಮೂರು

ಛಿನಕಿ ಏದುಸಿರುಬಿಡುತ್ತಿದ್ದಳು. ಅವಳ ಬಾಯಿಂದ ಮಾತು ಹೊರಡದಾಗಿತ್ತು. ಯಮುನಳ ಕಾಲ ಬಳಿ ಕುಳಿತು ಬಡಬಡಿಸತೊಡಗಿದಳು, "ಅಯ್ಯೋ ದೇವರೇ, ಇನ್ನೇನು ಗತಿ? ಈ ಜನಕ್ಕೆ ಬುದ್ಧಿ ಕಲಿಸೋರು ಯಾರೂ ಇಲ್ಲವೆ? ಓ ಗಂಗಾಮಾತೆ, ನಮ್ಮ ಜ್ವಾಲನ್ನೂ ಗಂಗನ್ನೂ ಕಾಪಾಡು !"

ಯಮುನಾ ಗಾಬರಿಯಿಂದ ಕೇಳಿದಳು, "ಏನಾಯಿತೆ? ಏನು ವಿಪತ್ತು ಬಂತೆ? ಇಷ್ಟೊಂದು ಗಾಬರಿ ಯಾಕಾಗಿದೆ ಅಂತ ಏನಾದರೂ ಹೇಳೊಲ್ಲೆಯೇಕೆ ? "

"ಕಣ್ಣು ಬಿಟ್ಟು ನೋಡಿದರೆ ವಿಪತ್ತೋ ವಿಪತ್ತು, ನಾಲ್ಕೂ ಕಡೆ ತುಂಬಿಕೊಂಡಿದೆ ಅನ್ನೋದು ಗೊತ್ತಾಗುತ್ತೆ. ನೀನು ಇಲ್ಲಿ ಪಟ್ಟದ ರಾಣಿ ಹಾಗೆ ಕಣ್ಣು ಮುಚ್ಚಿಕೊಂಡು ಮಲಗಿದಿ, ಅಲ್ಲಿ ನಿನ್ನ ಪಟ್ಟ ಲೂಟಿಯಾಗ್ತಿದೆ." ನನ್ನಿಂದ ಇದನ್ನೆಲ್ಲಾ ನೋಡೋಕ್ಕಾಗೋಲ್ಲ, ಈ ಅನ್ಯಾಯಾನೆಲ್ಲಾ."

ಛಿನಕಿಯ ಈ ಪೀಠಿಕೆ ಯಮುನಳಿಗೆ ಚೆನ್ನಾಗಿಯೇ ಪರಿಚಿತವಾಗಿತ್ತು. ಅವಳು ಮುಖಮಾಡುತ್ತ ಹೇಳಿದಳು, "ಛಿನಕೀಚಾಚೀ, ನಿನಗಂತೂ ದಿನವೂ ಇದೇ ಮಾತು. ನಾನು ಅವರಿಗೆ ದೂರೊಯ್ದರೆ ಅವರವರ ಭಾಗ್ಯದಲ್ಲಿ ಬರೆದಿರೋದನ್ನ ಅವರವರು ಉಣ್ತಾರೆ ಅಂತ ಅಂದುಬಿಡ್ತಾರೆ; ನೀನೋ ದಿನಕ್ಕೊಂದು ಹೊಸ ಹೊಸ ಕತೆ ಕಟ್ಟಿಕೊಂಡು ಬರ್‍ತಿ. ಬಲು ಕಷ್ಟಕ್ಕಿಟ್ಟುಕೊಂಡಿತು ಇದು."

ಛಿನಕಿ ಕೋಪದಿಂದ ಎದ್ದುನಿಂತಳು, "ಹೌದು ರಾಣೀಜಿ, ನಾನು ಕತೆ ಕಟ್ತೀನಿ ಅಲ್ಲವೆ? ನಿನ್ನ ವಾರಗಿತ್ತೀದು ಅರ್ಧಸೇರು ತೂಗೋ ಅಡ್ಡಿಕೆ, ಸವಾಸೇರು ತೂಗೋ

ಕಾಲುಕಡಗ ಈಗ ತಾನೇ ಅಕ್ಕಸಾಲಿ ಮನೆಯಿಂದ ತಯಾರಾಗಿ ಬಂದಿದೆ, ನಾನು ಕತೆ ಕಟ್ತಿದೀನಿ, ಅಲ್ಲವೆ! ಲೂಟಿ ಹೊಡಸಿಕೋ, ಚೆನ್ನಾಗಿ ಕಣ್ಣು ಮುಚ್ಚಿಕೊಂಡು ಲೂಟಿ ಹೊಡಸಿಕೊ. ಗಂಗನಿಗೆ ಹೊಟ್ಟೆಗಿಲ್ಲದ ಹಾಗೆ ಮಾಡು!"

ಯಮುನಾ ಚಾರಪಾಯಿಯಿಂದ ಝಗ್ಗನೆದ್ದು ಕೆಳಗಿಳಿದಳು, "ಕೈಮುಗೀತೀನಿ, ಛಿನಕೀಚಾಚೀ! ನಾನು ಅಂದದ್ದನ್ನ ತಪ್ಪು ತಿಳಕೋಬೇಡ. ದಾದಾಜಿ ಈ ಒಡವೆ ಮಾಡಿಸಿದಾರೆಯೆ? ನೀನು ಹೇಳೋದು ನಿಜವೆ? ಈ ಒಡವೆ ಯಾವಾಗ ಬಂದವು? ನೀನು ಕಣ್ಣಾರೆ ನೋಡಿದೆಯಾ?"

ಛಿನಕಿ ಯಮುನಳ ಮಾತಿಗೆ ಏನೊಂದೂ ಉತ್ತರ ಕೊಡಲಿಲ್ಲ. ಶ್ಯಾಮಲಾಲನ ಹೆಂಡತಿ ಕೋಣೆಯೊಳಗೆ ಬರುತ್ತಿರುವುದನ್ನು ಕಂಡು ಅಲ್ಲಿಂದ ಹೊರಡುವುದೇ ಲೇಸೆಂದು ತಿಳಿದು ಕಾಲು ತೆಗೆದಳು. ಛಿನಕಿ ಹೋದ ಮೇಲೆ ಶ್ಯಾಮಲಾಲನ ಹೆಂಡತಿ ಯಮುನಳಿಗೆ ಹೇಳಿದಳು, "ಅಕ್ಕ, ದೊಡ್ಡಕ್ಕಂದು ಅಡ್ಡಿಕೆ, ಕಾಲುಕಡಗ ಈಗ ತಾನೇ ತಯಾರಾಗಿ ಬಂದಿದೆ. ನಾನು ಪಕ್ಕದ ಕೋಣೇಲಿದ್ದೆ, ಬಾಗಿಲ ಹತ್ತಿರ. ಆಗ ದಾದಾಜಿಯ ಧ್ವನಿ ಕೇಳಿಸಿತು. ಅವರು ಹೇಳ್ತಿದ್ದರು, ಕಾಲುಕಡಗ ಸವಾಸೇರಿದೆ, ಅಡ್ಡಿಕೆ ಅರ್ಧಸೇರಿದೆ, ಆದರೆ ಈ ಒಡವೆ ಸುದ್ದಿ ಯಾರಿಗೂ ಗೊತ್ತಾಗಕೂಡದು ಅಂತ."

ರಾಧೇಲಾಲನ ಸಂಸಾರದಲ್ಲಿ ತೀರಾ ಹೆಚ್ಚಿನ ನಿಕೃಷ್ಟಕ್ಕೆ ಗುರಿಯಾಗಿದ್ದವಳೆಂದರೆ ಶ್ಯಾಮಲಾಲನ ಹೆಂಡತಿ. ಶ್ಯಾಮಲಾಲನಿಗೆ ಮಕ್ಕಳಾಗಿಲ್ಲದಿದ್ದುದೇ ಇದಕ್ಕೆ ಕಾರಣ. ಶ್ಯಾಮಲಾಲನ ಹೆಂಡತಿ ಎತ್ತರದ ದಡೂತಿ ಹೆಂಗಸು. ಕೊಂಚಮಟ್ಟಿಗೆ ಕಪ್ಪಾಗಿಯೂ ಕುರೂಪಿಯಾಗಿಯೂ ಇದ್ದಳು. ಜೊತೆಗೆ ಅವಳದು ಸ್ವಲ್ಪ ಹರಕುಬಾಯಿ ಬೇರೆ. ಆದರೆ ಕೆಲಸಕಾರ್ಯಗಳಲ್ಲಿ ಮಾತ್ರ ಅವಳು ಇತರರಿಗಿಂತ ಹೆಚ್ಚು ನಿಪುಣೆ. ಮೈಬಗ್ಗಿಸಿ ದುಡಿಯುತ್ತಿದ್ದಳು. ಇಡೀ ಸಂಸಾರಕ್ಕೆ ಒಬ್ಬಳೇ ಅಡಿಗೆ ಮಾಡಿ ಬಡಿಸುತ್ತಿದ್ದಳು. ಅಡಿಗೆ ಕೋಣೆಯನ್ನು ಸಾರಿಸಿ ಗುಡಿಸುವುದು, ಪಾತ್ರೆ ತೊಳೆಯುವುದು ಮುಂತಾದ ಕೆಲಸಗಳನ್ನು ಸಹ ಏಕಾಕಿಯಾಗಿ ನಿರ್ವಹಿಸುತ್ತಿದ್ದಳು. ಇಷ್ಟಾದರೂ ಅವಳಿಗೆ ಮನೆಯವರಿಂದ ಸಿಗುತ್ತಿದ್ದುದು ಅಪಮಾನ, ನಿರಾದರಗಳೆಷ್ಟೋ ಅಷ್ಟೆ. ಆಗಾಗ ಯಮುನಾ ಅವಳ ವಿಷಯದಲ್ಲಿ ಸಹಾನುಭೂತಿ ತೋರಿಸುತ್ತಿದ್ದಳು. ಎಂತಲೇ ಅವಳು ಯಮುನಳಲ್ಲಿ ಹೇಳಿಕೊಂಡಳು, "ಅಕ್ಕ, ನಾನು ಹಾಕಿಕೊಂಡಿರೋದು ಹೆಸರಿಗಷ್ಟೇ ಕಾಲುಚೈನು. ಅದರಲ್ಲಿ ಎರಡು ಕೊಂಡಿ ಸವೆದು ಮುರಿದುಹೋಗಿದೆ; ಉಳಿದದ್ದೂ ಮುರಿಯೋ ಸ್ಥಿತೀಲಿದೆ. ಸಾಧ್ಯವಾದರೆ ದಾದಾಜಿಗೆ ಹೇಳಿ ನನಗೂ ಒಂದು ಎಂಟು ಕೊಂಡೀದು ಚೈನು ಮಾಡಿಸಿಕೊಡು. ಅಲ್ಲಿ ನೋಡಿದರೆ ದೊಡ್ಡಕ್ಕ ಒಡವೇ ಭಾರಕ್ಕೆ ಕುಸಿದುಹೋಗ್ತಿದಾಳೆ; ಇಲ್ಲಿ ನನ್ನ ಹತ್ತಿರ ಇರೋ ಚೂರು ಒಡವೆಯೂ ಮುರಿದುಹೋಗಿದೆ. ಇದು ಭಾರೀ ಅನ್ಯಾಯ, ನೋಡಕ್ಕ!"

ಯಮುನಾ ಆಗ ಅದಕ್ಕಿಂತ ಭಾರೀ ಅನ್ಯಾಯವೊಂದನ್ನು ಕುರಿತು ಯೋಚಿಸು

ತ್ತಿದ್ದಳು. ಛಿನಕಿ ಹೇಳಿದ್ದುದು, ಹೇಳುತ್ತ ಬಂದಿದ್ದುದು ನಿಜವೇ ಆಗಿತ್ತು. ಅವಳ ಕಣ್ಣೆದುರಿಗೇ ಅವಳ ಸತ್ಯನಾಶವಾಗುತ್ತಿತ್ತು.

ಹೊರಗೆ ಜೋರಾಗಿ ಮಳೆ ಬೀಳುತ್ತಿತ್ತು. ಜ್ವಾಲಾಪ್ರಸಾದ ಕಚೇರಿಯಿಂದ ಬರುವ ಹೊತ್ತದು. ಕಚೇರಿ ಮತ್ತು ಮನೆ ಎದುರುಬದುರಿಗಿದ್ದರೂ ಬೀಳುತ್ತಿದ್ದ ಮಳೆಯ ಜೋರಿಗೆ ಜ್ವಾಲಾಪ್ರಸಾದ ಮನೆ ಮುಟ್ಟುವ ಹೊತ್ತಿಗೆ ನೆನೆದು ಹೋಗುತ್ತಿದ್ದುದು ಖಂಡಿತ. ಯಮುನಾ ಶ್ಯಾಮಲಾಲನ ಹೆಂಡತಿಗೆ ಹೇಳಿದಳು, "ನಾನು ಅವರಿಗೆ ಹೇಳ್ತೀನಿ. ಆದರೆ ಅವರಂತೂ ಸಂಬಳಾನೆಲ್ಲಾ ತಮ್ಮ ಚಿಕ್ಕಪ್ಪನಿಗೆ ಕೊಟ್ಟುಬಿಡ್ತಾರೆ. ನೀನೇ ಹೋಗಿ ಚಾಚಾಜೀನ ಕೇಳು; ನಾನೂ ನಿನ್ನ ಜೊತೆ ಬರ್ತೀನಿ."

ಶ್ಯಾಮಲಾಲನ ಹೆಂಡತಿ ದೈನ್ಯದಿಂದ ಉತ್ತರಕೊಟ್ಟಳು, "ನಾನು ಬೈಗುಳ ತಿನ್ನಲಿ ಅಂತ ನಿನ್ನ ಆಸೆಯೆ! ಮಾವನೋರ ಸ್ವಭಾವ ನಿನಗೆ ಗೊತ್ತೇ ಇದೆ. ಇನ್ನು ಅಮ್ಮಾಜಿನಂತೂ ನಾವು ಕಣ್ಣುಬಿಟ್ಟು ಸಹ ನೋಡೋಕ್ಕಾಗೋಲ್ಲ. ಆ ರಾಕ್ಷಸೀ ಮುದುಕೀನ ಒಂದು ದಿನ ನೆಲಕ್ಕೆ ಕೆಡವಿ ಸಾಯೋತನಕ, ಮಾತಾಡೋಕ್ಕೆ ಆಗದ ಹಾಗೆ ತುಳಿದುಬಿಡಬೇಕು ಅನ್ನೋ ಅಷ್ಟು ಕೋಪ ಬರುತ್ತೆ!"

ಯಮುನಳ ಮುಖದಲ್ಲಿ ನಗೆ ಮೂಡಿತು. "ರಾಮರಾಮ! ಅತ್ತೇನ ಯಾರಾದರೂ ಹೀಗೆಲ್ಲಾ ಅಂತಾರೇನೇ, ನಡುಕಲಿ?"

ಶ್ಯಾಮಲಾಲನ ಹೆಂಡತಿಯ ಕಣ್ಣಲ್ಲಿ ನೀರೂರಿತು. "ಏನು ಮಾಡೋದಕ್ಕ! ಸಹನೆಗೂ ಒಂದು ಮಿತಿ ಇದೆ. ಈ ಮನೆಯೋರ ವರ್ತನೆಯಿಂದ ಜೀವ ಹಣ್ಣಾಗಿದೆ. ಮೈಮೇಲೆ ಸೀಮೆಎಣ್ಣೆ ಸುರಕೊಂಡು ಬೆಂಕಿ ಹಚ್ಚಿಕೊಂಡುಬಿಡೋಣ ಅಂತ ಎಷ್ಟೋ ಸಲ ಅನ್ನಿಸುತ್ತೆ. ಆದರೆ ಸಾಯೋಕ್ಕೆ ಮುಂಚೆ ಈ ಮುದುಕಿಯ ಪ್ರಾಣ ತಗೊಂಡೇ ಸಾಯ್ತೀನಿ, ಇಷ್ಟನ್ನ ಚೆನ್ನಾಗಿ ತಿಳಕೊಂಡಿರಲಿ."

ಶ್ಯಾಮಲಾಲನ ಹೆಂಡತಿಯ ಬೆದರಿಕೆಯ ಮಾತನ್ನು ಕೇಳಿ ಯಮುನಾ ಅಂಜಿದಳು. "ಇದೆಲ್ಲಾ ಮಾಡೋ ಅಗತ್ಯವಿಲ್ಲ. ನೋಡು. ನಾನೊಂದು ಉಪಾಯಮಾಡ್ತೀನಿ. ಛಿನಕೀಚಾಚೀನ ಚಾಚಾಜಿ ಹತ್ತಿರ ಕಳಿಸ್ತೀನಿ. ನಿಮ್ಮ ಅತ್ತೆಮಾವ ಯಾರಿಗಾದರೂ ಹೆದರೋದಿದ್ದರೆ ಅವಳೊಬ್ಬಳಿಗೆ."

ಇದೇಹೊತ್ತಿಗೆ ಛಿನಕಿ ಕೋಣೆಯೊಳಗೆ ಬಂದಳು. ಅವಳು ವಿಪರೀತ ವ್ಯಗ್ರಳಾಗಿದ್ದಳು. ಕೋಣೆಯೊಳಗೆ ಕಾಲಿಡುತ್ತಲೇ ಅವಳಿಗೆ ಯಮುನಳ ಮಾತು ಕೇಳಿಸಿತು. ಅವಳಂದಳು, "ಚಿಕ್ಕಯಜಮಾನರ ಹತ್ತಿರ ಏಕೆ, ಜ್ವಾಲನ ಹತ್ತಿರಾನೇ ಮಾತಾಡ್ತೀನಿ. ಜ್ವಾಲ ಬರೋ ಹೊತ್ತಾಯ್ತು, ಅವನ ಛತ್ರಿ ಎಲ್ಲೂ ಸಿಗ್ತಾ ಇಲ್ಲ. ಭೀಖೂ ಮನೇಲೆಲ್ಲಾ ಹುಡುಕಿದ. ಛತ್ರಿ ಎಲ್ಲಿ ಕಳೆದುಹೋಯ್ತೋ ಗೊತ್ತಿಲ್ಲ."

"ಚಾಚಾಜಿ ಛತ್ರೀನ ಮಧ್ಯಾಹ್ನ ನನ್ನ ಕೇಳಿ ಇಸಕೊಂಡು ಹೋದರು. ಒಂದು ಗಂಟೆ ಒಳಗೆ ಬಂದುಬಿಡ್ತೀನಿ ಅಂತಿದ್ದರು, ಹೋಗಿ ಅವರನ್ನ ಕೇಳು," ಯಮುನಾ ಹೇಳಿದಳು.

“ಹ್ಞೂ, ಹೋಗಿ ಕೇಳು, ಆ ಭೂತಪ್ರೇತಗಳನ್ನ. ಚಿಕ್ಕಯಜಮಾನರದ್ದಂತೂ ಪತ್ತೆಯೇ ಇಲ್ಲ, ಅವರ ಮಕ್ಕಳು ಸಹ ಯಾರೂ ಕಾಣಿಸೋಲ್ಲ. ಈಗೇನು ಮಾಡೋದು? ಮಳೆಯಂತೂ ಒನಕೆ ಏಟು ಬಿದ್ದ ಹಾಗೆ ಬೀಳ್ತಾ ಇದೆ!”

ಈ ಕಡೆ ಛತ್ರಿಯ ಶೋಧನೆ ನಡೆದಿದ್ದರೆ ಆಕಡೆ ಜ್ವಾಲಾಪ್ರಸಾದ ಬೇಚೂಮಿಸಿರನ ಛತ್ರಿಯ ಆಸರೆ ಪಡೆದು ಮನೆಗೆ ಹಿಂದಿರುಗಿದ. ಬೇಚೂಮಿಸಿರನ ಛತ್ರಿಯನ್ನು ಭೀಖುವಿನ ಕೈಯಲ್ಲಿ ಹಿಂದಕ್ಕೆ ಕಳಿಸುತ್ತ ಜ್ವಾಲಾಪ್ರಸಾದ ಹೆಂಡತಿಯನ್ನು ಕೇಳಿದ, “ಇಷ್ಟು ಹೊತ್ತು ನಾನು ಕಾದರೂ ನೀನು ಛತ್ರೀನೇಕೆ ಕಳಿಸಲಿಲ್ಲ?”

“ಛತ್ರೀನ ಮಧ್ಯಾಹ್ನ ಚಾಚಾಜಿ ಇಸಕೊಂಡು ಹೋದರು. ಒಂದು ಗಂಟೆ ಒಳಗೆ ವಾಪಸು ಬರ್ತೀನಿ ಅಂತ ಹೇಳಿ ಹೋದರು. ಇಲ್ಲೀತನಕ ಅವರ ಪತ್ತೆಯಿಲ್ಲ. ದಾದಾ ಜೀನೂ ಅವರ ಜೊತೆ ಹೋಗಿದಾರೆ ಅಂತ ಕಾಣುತ್ತೆ.”

ಜ್ವಾಲಾಪ್ರಸಾದ ಬಟ್ಟೆ ಬದಲಾಯಿಸಿದ. ಅಷ್ಟುಹೊತ್ತಿಗೆ ಮಳೆ ನಿಂತಿತ್ತು. ಮಳೆ ನಿಂತಿದ್ದರ ಜೊತೆಗೇ ಸೆಕೆ ಇದ್ದಕ್ಕಿದ್ದ ಹಾಗೆ ಹೆಚ್ಚಾಗಿತ್ತು. ಜ್ವಾಲಾಪ್ರಸಾದ ಕಚೇರಿಯ ಕಾಗದಪತ್ರಗಳನ್ನು ಹೊರತೆಗೆದ. ಆದರೆ ಅವನಿಗೆ ಕುಳಿತುಕೊಳ್ಳುವುದಾಗ ಲಿಲ್ಲ. ಯಮುನಳಿಗೆ ಹೇಳಿದ, “ಠಾಕೂರ್ ವೀರಭಾನರ ಮನೆಗೆ ನಾವು ಹೋಗಿ ಬಹಳ ದಿನವಾಯಿತು. ಬರಲಿಲ್ಲ ಅಂತ ಆಕ್ಷೇಪಣೆ ಮಾಡ್ತಾರೆ. ಹೋಗಿ ಬರೋಣ ಅಂತ ಯೋಚನೆ ಮಾಡ್ತಿದೀನಿ. ಠಾಕೂರಿಣಿ ನಿನಗೂ ಎಷ್ಟೋ ಸಲ ಹೇಳಿಕಳಿಸಿದ್ದರು. ಗಾಡಿ ಕಟ್ಟೋಕೆ ಹೇಳ್ತೀನಿ, ಅಷ್ಟುಹೊತ್ತಿಗೆ ನೀನೂ ಸಿದ್ಧವಾಗು.”

“ನಾನು ಇನ್ನೊಂದು ಅರ್ಧಗಂಟೇಲಿ ಸಿದ್ಧವಾಗ್ತೀನಿ. ಅಷ್ಟುಹೊತ್ತಿಗೆ ನೀವು ತಿಂಡಿ ತಿಂದು ಮುಗಿಸಿ.”

ಯಮುನಾ ಅಡಿಗೆಮನೆಗೆ ಹೋಗಿ ಪೂರಿ ಮಾವಿನ ಹಣ್ಣು ಕಳಿಸಿಕೊಟ್ಟಳು. ಜ್ವಾಲಾ ಪ್ರಸಾದ ತಿನ್ನತೊಡಗಿದ. ಧಿನಕಿ ಶ್ಯಾಮಲಾಲನ ಹೆಂಡತಿಗೆ ಕೊಟ್ಟಿದ್ದ ಮಾತನ್ನು ಪೂರೈಸಹೊರಟಳು. “ಶ್ಯಾಮೂ ಹೆಂಡತಿಯ ಕಾಲುಚೈನಿನ ಕೊಂಡಿಯೆಲ್ಲಾ ಸವೆದು ಹೋಗಿದೆ. ರಾಮೂ ಹೆಂಡತಿಗಾದರೋ ಇವತ್ತು ತಾನೇ ಸವಾಸೇರಿನ ಕಾಲುಕಡಗ, ಅರ್ಧಸೇರಿನ ಅಡ್ಡಿಕೆ ತಯಾರಾಗಿ ಬಂದಿದೆ, ನನಗೊಂದು ನಾಲ್ಕು ಕೊಂಡಿ ಮಾಡಿಸಿ ಕೊಡೋರು ಯಾರೂ ಇಲ್ಲ ಅಂತ ಗೋಳಾಡ್ತಿದಾಳೆ ಪಾಪ, ಬಡಪಾಯಿ. ಸುಮ್ಮನಿರು, ನಾನು ನಿನ್ನ ಜೊತೆ ಮಾತನಾಡ್ತೀನಿ ಅಂತ ಅಂದೆ.”

ಪರಿವಾರದಲ್ಲಿ ಶ್ಯಾಮಲಾಲನ ಹೆಂಡತಿಯ ಸ್ಥಾನವೇನೆಂಬುದು ಜ್ವಾಲಾಪ್ರಸಾದ ನಿಗೆ ಚೆನ್ನಾಗಿ ಗೊತ್ತಿತ್ತು. ಅವಳನ್ನು ಕಂಡರೆ ಅವನಿಗೂ ಸಹಾನುಭೂತಿಯಿತ್ತು. “ಒಳ್ಳೇದು, ನಾಳೆ ಅವಳ ಕಾಲುಚೈನು ಇಸಕೊಂಡು ಬಾ. ಅಕ್ಕಸಾಲೀನ ಕರಸಿ ಹೊಸದು ಮಾಡಿಸಿಕೊಡ್ತೀನಿ. ಅತ್ತಿಗೇಗೆ ಕಾಲುಕಡಗ, ಅಡ್ಡಿಕೆ ಮಾಡಿಸಿರೋದು ನಿಜವೆ?”

“ನಿಜವಲ್ಲದೆ ಮತ್ತೇನು ಸುಳ್ಳೇ? ಇವತ್ತು ಬೆಳಗ್ಗೆ ರಾಮೂ ಒಡವೆ ತೊಗೊಂಡು

ಬಂದು ತನ್ನ ತಾಯಿ, ಹೆಂಡತೀರ ಕೈಗೆಕೊಟ್ಟು. ಯಾರಿಗೂ ಹೇಳಬೇಡಿ, ಮುಚ್ಚಿಟ್ಟು ಕೊಳ್ಳಿ ಅಂತ ಅಂದ. ನಾನು ಅಲ್ಲೇ ಹತ್ತಿರ ಇದ್ದದ್ದರಿಂದ ನೋಡೋಕ್ಕೆ ಆಯಿತು."

ಶಂಕೆಯಿಂದ ಜ್ವಾಲಾಪ್ರಸಾದನ ಹಣೆ ಗಂಟಿಕ್ಕಿತು. ಅವನು ಮಾತನ್ನು ಮುಂದು ವರಿಸಲಿಲ್ಲ.

ಜ್ವಾಲಾಪ್ರಸಾದ ಯಮುನಳ ಜತೆ ಠಾಕೂರ್ ವೀರಭಾನಸಿಂಹನ ಮನೆ ತಲಪಿದಾಗ ಮುನಿಷಿ ರಾಧೇಲಾಲ ರಾಮಲಾಲನ ಸಮೇತ ಅಲ್ಲಿದ್ದುದು ಕಂಡಿತು. ಯಮುನಾ ಒಳಗೆ ಹೆಂಗಸರ ಕೋಣೆಗೆ ಹೋದಳು. ಜ್ವಾಲಾಪ್ರಸಾದ ಅಂಗಳದಲ್ಲಿ ಠಾಕೂರ್ ವೀರ ಭಾನಸಿಂಹನ ಪಕ್ಕದಲ್ಲಿ ಕುಳಿತುಕೊಂಡ. ಜ್ವಾಲಾಪ್ರಸಾದ ಬಂದೊಡನೆಯೇ ಮುನಿಷಿ ರಾಧೇಲಾಲ ಹೇಳಿದ, "ನೀನು ಒಳ್ಳೇ ಹೊತ್ತಿಗೆ ಬಂದೆ, ಜ್ವಾಲಾ. ರಾಮೂಗೆ ಇಲ್ಲೇ ಸ್ಕೂಲಿನಲ್ಲಿ ಕೆಲಸ ಮಾಡಿಸಿಕೊಡೋಕ್ಕೆ ಠಾಕೂರ್ ಸಾಹೇಬರು ಪ್ರಯತ್ನ ನಡಸಿದಾರೆ. ಮನೆತನದ ಮಂದಿ ಎಲ್ಲೆಲ್ಲೋ ಚದುರಿರೋದರ ಬದಲು ಎಲ್ಲಾ ಒಟ್ಟಿಗೆ ಒಂದು ಕಡೆ ಇರೋದು ಒಳ್ಳೇದು."

"ಆದರೆ ಫತಹಪುರದ ಮನೆಯ ಗತಿಯೇನು, ಚಾಚಾ. ಅಲ್ಲದೆ ನಾನು ಈಗಿರೋ ಮನೆ ಇಷ್ಟೊಂದು ಜನಕ್ಕೆ ಸಾಕಾಗೋಲ್ಲ," ಜ್ವಾಲಾಪ್ರಸಾದನ ಬಾಯಿಂದ ಅನಾಯಾಸ ವಾಗಿ ಮಾತು ಹೊರಟಿತು.

ಜ್ವಾಲಾಪ್ರಸಾದನ ಪ್ರಶ್ನೆಗೆ ಠಾಕೂರ್ ವೀರಭಾನಸಿಂಹ ಉತ್ತರಕೊಟ್ಟ, "ತಹಸೀಲ ದಾರ್ ಸಾಹೇಬ್, ಮನೆ ಚಿಂತೆ ನಿಮಗೆ ಬೇಡ. ನಾನು ನನಗೋಸ್ಕರ ಒಂದು ಹೊಸ ಬಂಗಲೆ ಕಟ್ಟಿಸ್ತಿದೀನಿ. ಠಾಕೂರಿಣಿಗೆ ಈ ಮನೆ ಬೇಜಾರು ಬಂದಿದೆ. ಇದನ್ನ ನಿಮಗೆ ಬಿಟ್ಟುಕೊಡ್ತೀನಿ. ಮೂರು ಅಂಗಳವಿರೋ ಮನೆ ಇದು. ನಿಮ್ಮ ಪೂರ್ತಿಸಂಸಾರಕ್ಕೆ ಸಾಕಾಗುತ್ತೆ. ನೀವು ಇಲ್ಲಿ ಆರಾಮವಾಗಿರಬಹುದು."

ಜ್ವಾಲಾಪ್ರಸಾದ ಹೇಳಿದ, "ನಿಮ್ಮ ದಯೆ ದೊಡ್ಡದು, ಠಾಕೂರ್ ಸಾಹೇಬ್, ಆದರೆ ನಿಮ್ಮ ಬಂಗಲೇಲಿ ನಾನು ವಾಸಮಾಡಿದರೆ ಸರಕಾರದ ಕಡೆಯಿಂದ ಆಕ್ಷೇಪಣೆ ಬರುತ್ತೆ. ಇದೆಲ್ಲಾ ನಿಮಗೆ ಅರ್ಥವಾಗೋಲ್ಲ, ಠಾಕೂರ್ ಸಾಹೇಬ್."

ಠಾಕೂರ್ ವೀರಭಾನಸಿಂಹ ನಕ್ಕ, "ನನಗೆಲ್ಲಾ ಅರ್ಥವಾಗುತ್ತೆ, ತಹಸೀಲದಾರ ಸಾಹೇಬರೇ. ನೀವು ಚಿಂತಿಸಬೇಡಿ. ಈ ಮನೇನ ನಾನು ನಿಮ್ಮ ಹೆಸರಿಗೋ ಗಂಗನ ಹೆಸರಿಗೋ ಬರೀತೀನಿ. ಇದನ್ನ ಕಟ್ಟಿ ಎಪ್ಪತ್ತು ವರ್ಷದ ಮೇಲಾಯಿತು. ಈಗ ಇದರ ಬೆಲೆ ತಾನೇ ಏನಿದ್ದಾತು, ಮಹಾ. ನಾನು ಇದನ್ನ ಖಾಲಿಮಾಡಿದೆ ಅಂದರೆ ಎರಡು ಮೂರು ವರ್ಷದಲ್ಲಿ ಪಾಳು ಬಿದ್ದುಹೋಗುತ್ತೆ. ಬರೀ ಜಮೀನಿನ ಬೆಲೆಗೆ ಈ ಮನೆ ನಿಮಗೆ ಸಿಗುತ್ತೆ. ಇರಲಿ, ಅದರ ಯೋಚನೆಯೆಲ್ಲಾ ನಿಮಗೆ ಬೇಡ ಮುನಿಷಿ ರಾಧೇಲಾಲ ಅದನ್ನೆಲ್ಲಾ ನೋಡಿಕೋತಾರೆ."

ಜ್ವಾಲಾಪ್ರಸಾದ ಈ ಪ್ರಸಂಗವನ್ನು ಬದಿಗೊತ್ತುತ್ತ ಹೇಳಿದ, "ಅಯ್ಯೋ ಬಿಡಿ, ಈ ಮಾತನ್ನ. ನಿಮ್ಮ ಹೊಸ ಬಂಗಲೆ ಕಟ್ಟಿಮುಗಿಯೋಕ್ಕೆ ವರ್ಷ, ಎರಡು ವರ್ಷ ಬೇಕಾಗುತ್ತೆ. ಈಗಿನ್ನೂ ನೀವು ಅದರ ಪಾಯ ಅಷ್ಟೇ ಹಾಕಿಸಿದೀರಿ."

"ಹ್ಞಾ, ಏಳೆಂಟು ತಿಂಗಳಂತೂ ಬೇಕಾಗುತ್ತೆ—ಒಂದು ವರ್ಷ ಅಂತಾನೇ ಇಟ್ಟು ಕೊಳ್ಳಿ," ಠಾಕೂರ್ ವೀರಭಾನಸಿಂಹ ಒಪ್ಪಿಕೊಂಡ.

"ಅಲ್ಲೀವರೆಗೆ ನಾವು ಹೇಗೋ ಮಾಡಿಕೋತೀವಿ. ಈಗಲೂ ಹೇಗೋ ನಡೀ ತಿದೆಯಲ್ಲ," ಮುನಿಷಿ ರಾಧೇಲಾಲ ಎದ್ದುನಿಂತ, "ಒಳ್ಳೇದು ನಾನು ಹೊರಡ್ತೀನಿ. ನೀವು ನಿಮ್ಮ ಮಾತುಕತೆ ನಡಸಿ. ಮಧ್ಯಾಹ್ನ ಠಾಕೂರ್ ಸಾಹೇಬರ ಜೊತೆ ಅಲಹಾ ಬಾದಿಗೆ ಹೋಗಿದ್ದೆ. ಅಲ್ಲಿ ರಾಮೂ ವಿಷಯ ನೆಟ್ಟಗಾಯಿತು. ಇನ್ನು ಹದಿನೈದಂ ದಿನದಲ್ಲಿ ಆರ್ಡರ್ ಕೈಗೆ ಬರುತ್ತೆ. ಒಂದೆರಡು ದಿನದಲ್ಲಿ ರಾಮೂನ ಕರಕೊಂಡು ಫತಹಪುರಕ್ಕೆ ಹೋಗಬೇಕಾಗಿದೆ. ಅಲ್ಲೀ ಕೆಲಸಕ್ಕೆ ರಾಜೀನಾಮೆ ಕೊಡಬೇಕು ತಾನೇ! ಅಲ್ಲದೆ, ಅಲ್ಲಿ ಮನೆ, ಜಮೀನಿನ ಉಸ್ತುವಾರಿಗೆ ಏನಾದರೂ ಏರ್ಪಾಡು ಮಾಡಬೇಕಾ ಗಿದೆ." ರಾಧೇಲಾಲ ರಾಮಲಾಲನ ಸಂಗಡ ಹೊರಟ.

ಅವರು ಹೋದಮೇಲೆ ಕೊಂಚಹೊತ್ತು ಜ್ವಾಲಾಪ್ರಸಾದ ಠಾಕೂರ್ ವೀರಭಾನ ಸಿಂಹರಿಬ್ಬರೂ ಮೌನವಾಗಿ ಕುಳಿತಿದ್ದರು. ಆಮೇಲೆ ವೀರಭಾನಸಿಂಹ ಕೇಳಿದ, "ಯಾಕಿಷ್ಟು ನಿರುತ್ಸಾಹ, ತಹಸೀಲದಾರ ಸಾಹೇಬರೇ? ಇವರು ನಿಮ್ಮ ಜತೆ ಇರೋದು ಇಷ್ಟವಿಲ್ಲವೆ?"

ಜ್ವಾಲಾಪ್ರಸಾದ ತೊದಲುತ್ತ ಉತ್ತರಿಸಿದ, "ಅ್ಞ . . . ಅ್ಞ . . . ಹಾಗೇನಿಲ್ಲ."

ಠಾಕೂರಿಣಿಯ ಬಲವಂತಕ್ಕೆ ಯಮುನಾ ಜ್ವಾಲಪ್ರಸಾದರು ಅವತ್ತು ಅಲ್ಲಿಯೇ ಊಟಕ್ಕೆ ಏಳಬೇಕಾಯಿತು. ಊಟಕ್ಕೆ ಮುಂಚೆ ಜ್ವಾಲಾಪ್ರಸಾದ ಠಾಕೂರ್ ವೀರಭಾನ ಸಿಂಹನ ಜೊತೆ ಸ್ವಲ್ಪ ಮದ್ಯವನ್ನೂ ಸೇವಿಸಿದ. ಅದರಿಂದಾಗಿ ಅವನ ಮನಸ್ಸು ಕೊಂಚ ಹಗುರವಾಯಿತು. ಅವನೊಳಗೆ ಬಂದು ಬಗೆಯ ಸಾಹಸ ಜಾಗ್ರತವಾಗುತ್ತಿತ್ತು. ಏನೇ ಆಗಲಿ, ಇದನ್ನೆಲ್ಲ ನಡೆಯಲು ಬಿಡಬಾರದು, ಖಂಡಿತ ಬಿಡಬಾರದು; ನರಕವನ್ನು ನಿರ್ಮಿಸುವ ಅಧಿಕಾರ ಮನುಷ್ಯನಿಗಿರುವಾಗ ಅದನ್ನು ತಡೆಯುವ ಅಧಿಕಾರವೂ ಅವನಿ ಗಿದೆ ಎಂದುಕೊಂಡ.

ಜ್ವಾಲಾಪ್ರಸಾದ ಮನೆಗೆ ಹಿಂದಿರುಗಿದಾಗ ನಡುರಾತ್ರಿಯಾಗಿತ್ತು. ಮಲಗಿ ನಿದ್ರಿಸು ತ್ತಿದ್ದ ಗಂಗಾಪ್ರಸಾದನ ತಲೆದಸಿಯಲ್ಲಿ ಛಿನಕಿಯೊಬ್ಬಳೇ ಎಚ್ಚರವಾಗಿ ಕುಳಿತಿದ್ದಳು. ಭೀಖೂ ಹೊರಬಾಗಿಲ ಬಳಿ ಕುಳಿತು ತೂಕಡಿಸುತ್ತಿದ್ದ. ಯಮುನಾ ಜ್ವಾಲಾಪ್ರಸಾದರು ಕೋಣೆ ಯೊಳಗೆ ಬಂದೊಡನೆಯೇ ಛಿನಕಿ ಎದ್ದು ಹೊರಡಲನುವಾದಳು. "ಸ್ವಲ್ಪ ಇರು, ಛಿನಕೀಚಾಚೀ, ನಿನ್ನನ್ನ ಒಂದು ಸಲಹೆ ಕೇಳೋದಿದೆ," ಎಂದು ಜ್ವಾಲಾಪ್ರಸಾದ ಅವಳನ್ನು ತಡೆದ.

ಛಿನಕಿ ಒಮ್ಮೊಂದೊಮ್ಮೆ ಬೆಚ್ಚಿದಳು. ಇವತ್ತಿನ ತನಕ ಯಾರೊಬ್ಬರೂ ಅವಳ ಸಲಹೆಯನ್ನು ಕೇಳಿರಲಿಲ್ಲ. ಅವಳು ತಾನಾಗಿಯೇ ಮುಂದಾಗಿ ಸಲಹೆ ಕೊಡುತ್ತಿದ್ದಳು. ಅವಳು ಅಲ್ಲೇ ನೆಲದ ಮೇಲೆ ಕುಳಿತುಕೊಂಡು "ಏನದು ?" ಎಂದಳು.

ಜ್ವಾಲಾಪ್ರಸಾದ ಹೇಳಿದ, "ಠಾಕೂರ್ ವೀರಭಾನಸಿಂಹನ ಈಗಿನ ಬಂಗಲೇನ ನಮಗೆ ಕೊಡಿ ಅಂತ ಚಾಚಾ ಕೇಳಿದಾರೆ. ಠಾಕೂರರು ಹೊಸ ಬಂಗಲೆ ಕಟ್ಟಿಸ್ತಿದಾರೆ. ರಾಮೂ ಅಣ್ಣ ಫತಹಪುರದಿಂದ ಕೆಲಸ ಬಿಟ್ಟು ಇಲ್ಲಿ ಸೋರಾವಿನಲ್ಲಿ ಮೇಷ್ಟರ ಕೆಲಸ ಮಾಡ್ತಾನಂತೆ. ಚಾಚಾ ಇದನ್ನೆಲ್ಲಾ ತಾವೇ ಏರ್ಪಾಡು ಮಾಡಿದಾರೆ. ಅವರು ಹೇಳೋದು ಇಡೀ ಮನೆತನದವರೆಲ್ಲರೂ ಒಟ್ಟಿಗಿರಬಹುದು ಅಂತ."

"ಅಯ್ಯೋ ದೇವರೇ ! ನಿನ್ನ ಎದೆಮೇಲೆ ಗಾಣ ಅರೆಯೋಕ್ಕೆ ಬಂದಿದಾರೆ ಇವ ರೆಲ್ಲರೂ—ಕಳ್ಳರು, ನಿಯತ್ತಿಲ್ಲದವರು, ಪೋಕರಿಗಳು. ನೀನು ಅದಕ್ಕೆ ಒಪ್ತೀಯಾ?"

"ಆ ವಿಷಯವಾಗಿ ನಿನ್ನ ಸಲಹೆ ಕೇಳೋಣ ಅಂತಾನೇ ನಿನ್ನನ್ನ ನಿಲ್ಲಿಸಿಕೊಂಡದ್ದು, ಛಿನಕೀಚಾಚೀ ! ಏನು ಮಾಡೋಕ್ಕೂ ತೋರ್ರಿಲ್ಲ !"

"ಮಾಡೋದೇನು ! ಸ್ಪಷ್ಟವಾಗಿ ಚಿಕ್ಕಯಜಮಾನರಿಗೆ ಹೇಳಿಬಿಡು, ಮಕ್ಕಳು–ಮರಿ ಕಟ್ಟಿಕೊಂಡು ಫತಹಪುರಕ್ಕೆ ಹೋಗಿ ಇರಿ ಅಂತ."

ಈ ಹೊತ್ತಿಗೆ ಭೀಖೂ ಕಣ್ಣು ಬಿಟ್ಟಿದ್ದ. ಛಿನಕಿ ಏನು ಹೇಳುತ್ತಿದ್ದಳೆಂಬುದು ಅವನಿಗೆ ಹೊಳೆಯಲಿಲ್ಲ. ಬಾಗಿಲ ಬಳಿಯಿಂದ ಮೆಲ್ಲಗೆ ಕೋಣೆಯೊಳಕ್ಕೆ ನುಸುಳಿಬಂದು "ಏನು ಸಮಾಚಾರ, ಅಣ್ಣ ? ಅಮ್ಮ ಯಾರಮೇಲೆ ಕೂಗಾಡ್ತಿದಾಳೆ ? " ಅಂದ

"ರೇಗಾಡ್ತಿಲ್ಲ, ಬಂದಿರೋ ವಿಪತ್ತಿಗೆ ಪರಿಹಾರ ಹುಡುಕ್ತಿದೀನಿ. ನಮ್ಮ ಜ್ವಾಲನ ಎದೆ ಮೇಲೆ ಗಾಣ ಅರೆಯೋಕ್ಕೆ ಫತಹಪುರದ ಮನೆಯೋರೆಲ್ಲರೂ ಒಟ್ಟುಗೂಡಿದಾರೆ. ಸೋರಾವಿನಲ್ಲೇ ಇರೋಕ್ಕೆ ಬಂದಿದಾರೆ," ಛಿನಕಿ ಉತ್ತರ ಕೊಟ್ಟಳು.

"ಇದು ಒಳ್ಳೇ ಕಷ್ಟಕ್ಕೆ ಬಂತಲ್ಲ, ಅಣ್ಣ. ನನಗಂತೂ ಇವರನ್ನೆಲ್ಲಾ ಕಂಡರೆ ಭಯ ವಾಗುತ್ತೆ. ಮನುಷ್ಯರಲ್ಲ ಈ ಜನ, ಸೈತಾನರು," ಭೀಖೂ ಹೇಳಿದ.

ಮದ್ಯದ ಅಮಲು ಇಳಿಯುತ್ತ ಹೋದಂತೆಲ್ಲಾ ಅದಕ್ಕೆ ಉತ್ತರವಾಗಿಯೋ ಎಂಬಂತೆ ಜ್ವಾಲಾಪ್ರಸಾದನ ಧೈರ್ಯವೂ ಕುಗ್ಗುತ್ತ ಹೋಯಿತು. ಒಮ್ಮೆ ಅವನು ತನ್ನ ಸಮಸ್ತ ಸಾಹಸವನ್ನೂ ಒಟ್ಟುಗೂಡಿಸಿ ಹೇಳಿದ, "ಭೀಖೂ, ಇವರೆಲ್ಲಾ ಬಂದು ಸೋರಾವಿನಲ್ಲಿ ನೆಲಸೋದು ನನಗಿಷ್ಟವಿಲ್ಲ, ಎಲ್ಲರನ್ನೂ ಕರಕೊಂಡು ವಾಪಸು ಫತಹ ಪುರಕ್ಕೆ ಹೋಗಬೇಕಂತೆ ಅಂತ ನೀನು ಬೆಳಗ್ಗೆ ಚಾಚಾಜೀಗೆ ಹೇಳಿಬಿಡು."

ಭೀಖೂ ಕಣ್ಣುಕಣ್ಣು ಬಿಡುತ್ತ ಉತ್ತರಕೊಟ್ಟ, "ಅವರೆಲ್ಲಾ ಸೇರಿ ನನಗೆ ತದಕೋಕ್ಕೆ ಷುರುಮಾಡಿದರೆ ನೀನು ಬಂದು ಬಿಡಿಸ್ತೀಯಾ? ಇಲ್ಲಣ್ಣ, ಅದನ್ನೆಲ್ಲಾ ನನಗೆ ಹೇಳು ಅನ್ನಬೇಡ. ಅವರಿಗೆ ನೀನೇ ಹೇಳು."

ಜ್ವಾಲಾಪ್ರಸಾದ ತಲೆಯ ಮೇಲೆ ಕೈಹೊತ್ತುಕೊಂಡ. "ಇದೇ ಕಷ್ಟ, ನೋಡು.

ಬೆಕ್ಕಿನ ಕತ್ತಿಗೆ ಗಂಟೆ ಕಟ್ಟೋರು ಯಾರು? ಸರಿ, ಬಿಡು. ನಾಳೆ ಬೆಳಗ್ಗೆ ನಾನು ಇದನ್ನೆಲ್ಲಾ ಕಾಗದದಲ್ಲಿ ಬರೆದಿಡ್ತೀನಿ. ನೀನು ಚಾಚನಿಗೆ ಆ ಕಾಗದ ಕೊಟ್ಟುಬಿಡು."

"ಹ್ಞಾ, ಅದು ಮಾಡಬಲ್ಲೆ," ಭೀಖೂ ಆಕಳಿಸುತ್ತ ಹೇಳಿದ. "ಇಲ್ಲಿ ಕೇಳಣ್ಣ, ಅಲಹಾಬಾದಿನಿಂದ ಒಬ್ಬ ಎತ್ತಿನ ಮೇಲೆ ಬಂದಿದ್ದ. ನಿನ್ನ ಹೆಸರಿಗೆ ಒಂದು ಕಾಗದ ಕೊಟ್ಟುಹೋಗಿದಾನೆ. ಅದನ್ನು ನಿನ್ನ ದಿಂಬಿನ ಕೆಳಗೆ ಇಟ್ಟಿದೀನಿ."

ಛಿನಕಿ ಮತ್ತು ಭೀಖೂ ಹೋದ ಮೇಲೆ ಜ್ವಾಲಾಪ್ರಸಾದ ದಿಂಬಿನ ಕೆಳಗಿದ್ದ ಕಾಗದ ತೆಗೆದು ನೋಡಿದ. ಆ ಕಾಗದ ಜೈದೇಯಿಯದು. ಜೈದೇಯಿ ಅಲಹಾಬಾದಿಗೆ ಬಂದು ಕಾಹಿಲೆ ಬಿದ್ದಿದ್ದಳು, ಆದ್ದರಿಂದ ಅವಳು ಸೋರಾವಿಗೆ ಬರುವಂತಿರಲಿಲ್ಲ. ಜ್ವಾಲಾಪ್ರಸಾದನಿಗೆ ಅನಾನುಕೂಲವಾಗದಿದ್ದಲ್ಲಿ ಅವನೇ ಯಮುನಳನ್ನು ಕರೆದುಕೊಂಡು ಯಾವತ್ತಾದರೂ ಒಂದು ದಿನ ಅಲಹಾಬಾದಿಗೆ ಬರಬೇಕೆಂದು ಕಾಗದದಲ್ಲಿ ಬರೆದಿದ್ದಳು. ನಾಲ್ಕಾರು ದಿನ ರಜ ತೆಗೆದುಕೊಂಡು ಬರುವುದಾದಲ್ಲಿ ಇದ್ದಿದ್ದೂ ಒಳ್ಳೆಯದು ಎಂದಿದ್ದಳು.

ಜ್ವಾಲಾಪ್ರಸಾದ ನಕ್ಕ, "ಲಂಬರ್‌ದಾರಿಣಿಯ ಕಾಗದ ಬಂದಿದೆ. ಅಲಹಾಬಾದಿಗೆ ಬಂದು ಕಾಹಿಲೆ ಬಿದ್ದಿದ್ದಾಳೆ. ನಮ್ಮನ್ನ ಅಲ್ಲಿಗೇ ಬರೋಕ್ಕೆ ಹೇಳಿದಾಳೆ. ನಾಡಿದ್ದು ಭಾನುವಾರ. ನಾಳೆ ಸಂಜೆ ಅಲಹಾಬಾದಿಗೆ ಹೊರಡಬೇಕು. ಸೋಮವಾರ ಅಮಾವಾಸ್ಯೆಯ ರಜವಿದೆ. ಸೋಮವಾರ ರಾತ್ರಿ ಇಲ್ಲವೇ ಮಂಗಳವಾರ ಬೆಳಗ್ಗೆ ನಾವು ವಾಪಸು ಬರೋಣಂತೆ," ಜ್ವಾಲಾಪ್ರಸಾದ ಯಮುನಳಿಗೆ ಹೇಳಿದ.

"ಹೌದು, ಅಲಹಾಬಾದಿಗೆ ಹೋಗಿಬರೋಣ ಅಂತ ನಾನೇ ಹೇಳಬೇಕು ಅಂತಿದ್ದೆ. ಆದರೆ ಧೈರ್ಯವಾಗ್ತಿರಲಿಲ್ಲ, ಈಗಂತೂ ಈ ಮನೆ ನನ್ನನ್ನ ತಿಂದುಹಾಕ್ತಿದೆ. ಎಲ್ಲಾದರೂ ಓಡಿಹೋಗೋಣ ಅಂತ ಅನ್ನಿಸುತ್ತೆ."

ಜ್ವಾಲಾಪ್ರಸಾದನ ಕಣ್ಣು ಮಿಂಚತೊಡಗಿತು. "ಅಲಹಾಬಾದಿಗೆ ಹೋದರೆ ರಾಮೂ ಸೋರಾವಿಗೆ ಬರೋದನ್ನೂ ತಪ್ಪಿಸಬಹುದು. ಲಂಬರ್‌ದಾರಿಣಿಯಿಂದ ಕಿಶನುವಿನ ದುರ್ನಡತೆಯ ವಿಷಯವೂ ತಿಳಿಯುತ್ತೆ. ಆದರೆ ಮನೇಲಿ ಯಾರಿಗೂ ನಾವು ಲಂಬರ್‌ದಾರಿಣೀನ ನೋಡೋಕ್ಕೆ ಹೋಗ್ತಿದೀವಿ ಅಂತ ಸುಳಿವು ಸಿಗಬಾರದು. ಡಿಪ್ಟಿ ಸಾಹೇಬರ ಮನೇಲಿ ಮಗೂಗೆ ಕಿವಿ ಚುಚ್ತಾರೆ, ಅಲ್ಲಿಗೆ ಹೋಗ್ತಿದೀವಿ ಅಂತ ಹೇಳಿಬಿಡು."

"ಹಾಗೇ ಆಗಲಿ, ನೀವು ನಿಶ್ಚಿಂತೆಯಿಂದಿರಿ," ಯಮುನಾ ಹೇಳಿದಳು.

ಹನ್ನೊಂದು ಹನ್ನೆರಡು ವರ್ಷಗಳ ಹಿಂದೆ ಮೂವತ್ತೈದರ ವಯಸ್ಸಿನಲ್ಲಿ ಇಪ್ಪತ್ತೈದರ ಹರೆಯದವಳಂತೆ ಕಾಣುತ್ತಿದ್ದ ಜೈದೇಯಿ ಈಗ ಅರವತ್ತರ ಮುದುಕಿಯಂತೆ ಕಾಣುತ್ತಿದ್ದಳು. ಅವಳ ಕೂದಲು ಬಹುಮಟ್ಟಿಗೆ ಬೆಳ್ಳಗಾಗಿತ್ತು. ಮುಖದಮೇಲೆ ಸುಕ್ಕು ಕಾಣಿಸಿಕೊಳ್ಳತೊಡಗಿತ್ತು. ದೇಹದಲ್ಲೇನೂ ಹೆಚ್ಚಿನ ವ್ಯತ್ಯಾಸವಾಗಿರಲಿಲ್ಲವಾದರೂ ಅವಳ ಶಕ್ತಿ ಕುಂದಿತ್ತು. ಕಣ್ಣಿನ ಕಾಂತಿ ಇಳಿಯುತೊಡಗಿತ್ತು.

ಜೈದೇಯಿಗೆ ಕಳೆದ ಎರಡು ವರ್ಷಗಳಿಂದ ಚಳಿಜ್ವರ ಬರುತ್ತಿತ್ತು. ವೈದ್ಯರ ಔಷಧಿಯಾಯಿತು, ಹಕೀಮರ ಔಷಧಿಯಾಯಿತು, ಮೂಲಿಕೆ ಭಸ್ಮಗಳಾದವು, ಯಂತ್ರಮಂತ್ರಗಳಾದವು. ಇಷ್ಟಾದರೂ ಚಳಿಜ್ವರ ಮಾತ್ರ ಜೈದೇಯಿಯ ಜತೆ ಬಿಡಲಿಲ್ಲ. ನಡುನಡುವೆ ಹದಿನೈದು ದಿನ ತಿಂಗಳಿಗೊಮ್ಮೆ ಬಿಡುವು ದೊರೆಯುತ್ತಿತ್ತು. ಆದರೆ ಆಮೇಲೆ ಮತ್ತೆ ಚಳಿಜ್ವರದ ಹೊಡೆತ ಷುರುವಾಗುತ್ತಿತ್ತು. ಅವತ್ತು ಯಮುನಾ, ಜ್ವಾಲಾಪ್ರಸಾದರು ಜೈದೇಯಿಯ ಮನೆ ತಲಪಿದಾಗ ಅವಳು ಜ್ವರದಿಂದ ಪ್ರಜ್ಞೆತಪ್ಪಿ ಮಲಗಿದ್ದಳು. ಲಕ್ಷ್ಮೀಚಂದನ ಹೆಂಡತಿ ರಾಧೆ ಅವಳ ತಲೆದಸಿಯಲ್ಲಿ ಕುಳಿತಿದ್ದಳು.

ಲಕ್ಷ್ಮೀಚಂದ ಆರು ತಿಂಗಳ ಹಿಂದೆ ಸಿವಿಲ್ ಲೈನಿನಲ್ಲಿ ಒಂದು ಬಂಗಲೆ ಕೊಂಡಿದ್ದ. ಅಲಹಾಬಾದಿಗೆ ಬಂದಾಗಲೆಲ್ಲಾ ಆವನು ಅಲ್ಲಿ ಉಳಿಯುತ್ತಿದ್ದ; ಜ್ವಾಲಾಪ್ರಸಾದ ಅಲಹಾಬಾದಿಗೆ ಬಂದಾಗಲೂ ಅಲ್ಲೇ ಇಳಿಯುತ್ತಿದ್ದ. ಆಳುಗಳು ಜ್ವಾಲಾಪ್ರಸಾದನ ಸಾಮಾನನ್ನು ಗಾಡಿಯಿಂದ ಕೆಳಗಿಳಿಸಿದರು. ಜ್ವಾಲಾಪ್ರಸಾದ ಹೊರಗಿನ ಕೋಣೆಯಲ್ಲಿ ಕುಳಿತುಕೊಂಡ. ಯಮುನಾ ಒಳಗೆ ಜೈದೇಯಿಯ ಕೋಣೆಗೆ ಹೋದಳು.

ರಾಧೆ ಯಮುನಳ ಕಾಲುಮುಟ್ಟಿ ನಮಸ್ಕರಿಸಿ, ಅವಳಿಗೆ ಕುರ್ಚಿಯ ಮೇಲೆ ಕುಳಿತುಕೊಳ್ಳಲು ಹೇಳುತ್ತಾ, "ಅಮ್ಮಾಜಿಗೆ ಹದಿನೈದು ದಿನದಿಂದ ದಿನಾಗಲೂ ಚಳಿಜ್ವರ ಬರ್ತ್ತಿದೆ. ಸಂಜೆ ದೀಪ ಹಚ್ಚುವ ಹೊತ್ತಿಗೆ ದಿನವೂ ಚಳಿಯ ನಡುಕ ಷುರುವಾಗಿ ಜ್ವರ ಏರುತ್ತದೆ, ನಡುರಾತ್ರಿಯ ಹೊತ್ತಿಗೆ ಬೆವರು ಸುರಿದು ಜ್ವರವಿಳಿಯುತ್ತೆ. ಬೆಳಗಿನಿಂದ ಹಿಡಿದು ಸಂಜೆಯವರೆಗೆ ಸಂತೋಷವಾಗಿ ಉಂಡೂ, ತಿಂದೂ ಕೆಲಸಕಾರ್ಯ ಮಾಡ್ತಾರೆ. ಆದರೆ ಮುಖ ಮಾತ್ರ ವಿಪರೀತ ಬಿಳುಪಾಗಿದೆ. ವಾರದ ಹಿಂದೆ ಇವರು ಕಾನಪುರದಿಂದ ಘಾಟಮಪುರಕ್ಕೆ ಬಂದಿದ್ದರು. ನೋಡಿದವರೇ ಅಮ್ಮಾಜಿಗೆ ಔಷಧೋಪಚಾರ ಮಾಡಿಸೋಕ್ಕೆ ಅಂತ ನಮ್ಮನ್ನ ಬಲವಂತವಾಗಿ ಇಲ್ಲಿ ಅಲಹಾಬಾದಿಗೆ ಕರೆತಂದರು. ಆದರೆ ಅಮ್ಮಾಜಿ ಡಾಕ್ಟರ ಔಷಧಿ ತೊಗೊಳ್ಳೋಕ್ಕೆ ಒಪ್ಪೋಲ್ಲ. ಇವರು ಸೋತು ನಿನ್ನೆ ಕಾನಪುರಕ್ಕೆ ವಾಪಸು ಹೋದರು. ಅಲ್ಲಿ ಜರೂರೀ ಕೆಲಸವಿತ್ತು" ಅಂದಳು.

ಯಮುನಾ ರಾಧೆಯರ ಮಾತುಕತೆಯಿಂದ ಜೈದೇಯಿಗೆ ಎಚ್ಚರವಾಯಿತು. ಕಣ್ಣುಮುಚ್ಚಿಕೊಂಡೇ ಅವಳು "ಯಾರದು ?" ಎಂದು ಕೇಳಿದಳು.

"ಅಮ್ಮಾಜಿ, ತಪಸೀಲದಾರಿಣಿ-ಚಾಚಿ ಬಂದಿದಾರೆ. ಚಾಚಾಜಿ ಹೊರಗಡೆ ಕೋಣೇಲಿ ಕೂತಿದಾರೆ," ರಾಧೆ ಹೇಳಿದಳು.

ಜೈದೇಯಿ ಪ್ರಯಾಸದಿಂದ ಕಣ್ಣುತೆರೆದಳು. "ದೇವರ್‌ಜಿ ಬಂದಿದಾರೆಯೆ ! ದೇವರಾಣೀಜಿ, ನೀನೂ ಬಂದೆಯಾ ? ಒಳ್ಳೇದಾಯಿತು. ಜಿಡು. ರಾಧಾ, ದೇವರ್‌ಜೀನ ಇಲ್ಲೇ ಈ ಕೋಣೇಗೆ ಬರಬೇಕಂತೆ ಅಂತ ಅನ್ನು."

ಜ್ವಾಲಾಪ್ರಸಾದ ಒಳಬಂದೊಡನೆಯೇ ರಾಧೆ ಮುಖಕ್ಕೆ ಮುಸುಕೆಳೆದುಕೊಂಡಳು. ರಾತ್ರಿ ಸಾಕಷ್ಟು ಕಳೆದಿತ್ತು. ದೂರದ ಗಡಿಯಾರ ಹನ್ನೊಂದು ಹೊಡೆಯಿತು

ಕ್ತಿತ್ತು. ಜೈದೇಯಿಯ ಚಳಿ ಇಳಿಯುವ ಹೊತ್ತು ಅದು. ಅವಳು ರಾಧೆಗೆ ಹೇಳಿದಳು, "ರಾಧಾ, ಹೋಗಿ ದೇವರ್‌ಜೀಗೂ ದೇವರಾಣೀಗೂ ಒಂದಿಷ್ಟು ಏನಾದರೂ ಊಟಕ್ಕೆ ಏರ್ಪಾಡು ಮಾಡು. ನಿನ್ನ ಜೊತೆ ದೇವರಾಣೀನೂ ಕರಕೊಂಡು ಹೋಗು. ಅವಳೂ ನೆರವಾಗ್ತಾಳೆ. ಅಲ್ಲೀತನಕ ನಾನು ದೇವರ್‌ಜಿ ಜೊತೆ ಮಾತನಾಡ್ತಾ ಇರ್ತೀನಿ."

ಜೈದೇಯಿ ಜ್ವಾಲಾಪ್ರಸಾದನ ಜತೆ ಏಕಾಂತದಲ್ಲಿ ಮಾತನಾಡಬಯಸಿದ್ದಳೆಂಬುದು ಸ್ಪಷ್ಟವಾಗಿತ್ತು. ರಾಧೆ ಯಮುನಳ ಕೈಹಿಡಿದುಕೊಂಡು ಎಬ್ಬಿಸುತ್ತ ಅವಳ ಕಿವಿಯಲ್ಲಿ ಮೆಲ್ಲನೆ ಹೇಳಿದಳು, "ಬನ್ನಿ ಚಾಚೀಜಿ, ಅಮ್ಮಾಜಿ ಚಾಚಾಜೀಗೆ ಹೇಳೋದನ್ನೇ ನಾನು ನಿಮಗೆ ತಪಸೀಲಾಗಿ ಹೇಳ್ತೀನಿ. ನೀವು ಆಮೇಲೆ ಚಾಚಾಜೀಗೆ ಎಲ್ಲಾನ್ನೂ ತಿಳಿಸೋರಂತೆ."

ಅಡಿಗೆಮನೆಗೆ ಹೋದ ಮೇಲೆ ರಾಧೆ ಯಮುನಳಿಗೆ ಹೇಳಿದಳು, "ಚಾಚೀಜಿ, ಚಾಚಾಜಿಯ ಆ ಚಿಕ್ಕಪ್ಪನ ಮಗ, ಘಾಟಮಪುರಕ್ಕೆ ಬಂದಿದ್ದನಲ್ಲ, ಅವನು ಅಷ್ಟೊಂದು ಕೇಡಿ, ಪೋಲಿ ಅಂತ ನಮಗೇನು ಗೊತ್ತಿತ್ತು. . . . "

ರಾಧೆ ಹೇಳಿದುದನ್ನು ಕೇಳಿ ಯಮುನಾ ಸ್ತಂಭಿತಳಾದಳು. ಕಿಶನಲಾಲ ಇಷ್ಟೊಂದು ಕೆಳಗೆ ಇಳಿಯಬಲ್ಲನೆ!

ಜೈದೇಯಿಯೂ ಕಣ್ಣೀರು ಸುರಿಸುತ್ತ ಜ್ವಾಲಾಪ್ರಸಾದನಿಗೆ ನಡೆದುದೆಲ್ಲವನ್ನೂ ಹೇಳಿದಳು. ಕೇಳಿ ಜ್ವಾಲಾಪ್ರಸಾದ ಕೋಪದಿಂದ ಕೆಂಪಾದ. ಅವನಂದ, "ಅತ್ತಿಗೆ, ನೀನು ಬಂದು ಒಂದು ವಾರ ಸೋರಾವಿನಲ್ಲಿರು. ಆದಷ್ಟು ಬೇಗ ಬಾ. ನಿನ್ನ ಮುಂದೇನೇ ಇದನ್ನ ಫೈಸಲು ಮಾಡ್ತೀನಿ. ಈ ಜನರಿಂದ ನನಗೆ ತುಂಬಾ ಬೇಸರ ಬಂದಿದೆ."

"ದೇವರ್‌ಜೀ, ನನ್ನ ಸ್ಥಿತೀನ ನೀನು ನೋಡ್ತಾನೇ ಇದೀಯೆ. ಈ ಹಾಳು ಜ್ವರ ಬಿಡೋ ಹಾಗೆ ಕಾಣೊಲ್ಲದು."

"ಅತ್ತಿಗೆ, ನೀನು ಒಪ್ಪೋದಾದರೆ ಒಂದು ಮಾತು ಹೇಳಲೇ?"

"ರಾಮ ರಾಮ! ದೇವರ್‌ಜಿ, ನಿನ್ನ ಮಾತನ್ನು ನಾನು ಯಾವಾಗಲಾದರೂ ತೆಗೆದು ಹಾಕಿದೀನೆಯೆ?"

"ನಾಳೆ ಬೆಳಗಿನಿಂದಲೇ ನೀನು ಡಾಕ್ಟರ ಔಷಧಿ ಷುರುಮಾಡಬೇಕು. ನನಗೆ ಡಾ॥ ಬ್ರೈಟ್ ಚೆನ್ನಾಗಿ ಗೊತ್ತು. ಅವರು ತುಂಬ ಒಳ್ಳೇ ಡಾಕ್ಟರು. ಅವರೊಬ್ಬರೇ ಈ ಕಾಹಿಲೇನ ದೂರಮಾಡಬಲ್ಲರು, ನೋಡು."

"ನಿನಗೆ ಕೈ ಮುಗಿತೀನಿ, ದೇವರ್‌ಜಿ. ಈ ವಿಲಾಯಿತೀ ಔಷಧಿ ಕುಡೀ ಅಂತ ಮಾತ್ರ ಹೇಳಬೇಡ. ಧರ್ಮ ಹಾಳಾಗುತ್ತೆ. ಅಲಹಾಬಾದಿನ ವೈದ್ಯರಾಜ ನಿತ್ಯಾನಂದಜಿ ಇಲ್ಲಿರೋರಲ್ಲೆಲ್ಲಾ ಬಹಳ ಒಳ್ಳೇ ವೈದ್ಯರು. ಈಗ ಅವರ ಔಷಧಿ ಷುರು ಮಾಡಿದೀನಿ."

ಜ್ವಾಲಾಪ್ರಸಾದ ಸಿಟ್ಟಿನಿಂದ ಹೇಳಿದ, "ಈ ಹಕೀಮರು ವೈದ್ಯರುಗಳ ಕೈಗೆ ಸಿಕ್ಕಿಬಿದ್ದು ಇವತ್ತಿಗೆ ಎರಡು ವರ್ಷವಾಯಿತು. ಇನ್ನು ಹೀಗೆ ನಡೆಯೋಕ್ಕೆ ನಾನು ಬಿಡೋಲ್ಲ. ನಾಳೆಯೇ ನಾನು ಡಾ॥ ಬ್ರೈಟರನ್ನು ಕರಕೊಂಡು ಬರ್ತೀನಿ."

ಜೈದೇಯಿ ಸುಸ್ತಿನಿಂದ ಕಣ್ಣುಮುಚ್ಚುತ್ತ ಹೇಳಿದಳು, "ನಿನ್ನ ಇಷ್ಟ, ದೇವರ್‌ಜೀ. ಲಕ್ಷ್ಮೀ ಹೇಳಿದಾಗಲೆಲ್ಲಾ ಹಟ ಹಿಡೀತಿದ್ದೆ; ಆದರೆ ನಿನ್ನ ಹತ್ತಿರ ಅದು ನಡೆಯೋಲ್ಲ. ಮೂರು ನಾಲ್ಕು ದಿನಕ್ಕೊಂದು ಸಲ ಬಂದು ನೋಡ್ಕೊಂಡು ಹೋಗ್ತಾ ಇರು, ದೇವರ್‌ಜೀ. ನೀನು ಹೇಳಿದ ಹಾಗೆ ಮಾಡ್ತೀನಿ."

ಮಾರನೆಯ ದಿನ ಡಾಕ್ಟರ್ ಬೈಟರು ಬಂದು ಜೈದೇಯಿಯ ಪರೀಕ್ಷೆ ಮಾಡಿದರು. ಸ್ಪಷ್ಟವಾಗಿ ಅವಳದು ಬಿಟ್ಟುಬಿಟ್ಟು ಬರುವ ಮಲೇರಿಯವಾಗಿತ್ತು. ಔಷಧಿ ಬರೆದು ಕೊಡುತ್ತ ಡಾ॥ ಬೈಟ್ ಹೇಳಿದರು, "ಅಲಕ್ಷ್ಯದಿಂದ ದೇಹಸ್ಥಿತಿ ಸಾಕಷ್ಟು ಕೆಟ್ಟಿದೆ—ಜ್ವರದ ಗಡ್ಡೆ ದೊಡ್ಡದಾಗಿದೆ. ಜ್ವರವೇನೋ ಮೂರು ದಿನದೊಳಗಾಗಿ ಇಳಿಯುತ್ತೆ. ಆದರೆ ಔಷಧೀನ ಒಂದು ತಿಂಗಳ ತನಕ ತೊಗೋಬೇಕಾಗುತ್ತೆ."

ಜ್ವಾಲಾಪ್ರಸಾದ ಸೋಮವಾರದಂದು ಇಡೀ ದಿನ ಮನೆಯಲ್ಲೇ ಇದ್ದ. ಮಳೆ ಬಿಟ್ಟುಬಿಟ್ಟು ಸುರಿಯುತ್ತಲೇ ಇತ್ತು. ಜೊತೆಗೆ ಮನಸ್ಸು ಭಾರವಾಗಿ ಅವನಿಗೆ ಎಲ್ಲೂ ಹೋಗಬೇಕೆನಿಸುತ್ತಿರಲಿಲ್ಲ. ಸೋಮವಾರ ಸಂಜೆ ಜೈದೇಯಿಯಿಂದ ಬೀಳ್ಕೊಂಡು ಯಮುನಳೊಂದಿಗೆ ಸೋರಾವಿಗೆ ಹಿಂದಿರುಗಿದ.

ಈಗ ಜ್ವಾಲಾಪ್ರಸಾದನ ಮನಸ್ಸಿನಲ್ಲಿ ತನ್ನ ಪರಿವಾರದ ಮಂದಿಯ ಬಗ್ಗೆ ಖಂಡಿತವಾಗಿ ಒಂದು ಬಗೆಯ ಅಸಹ್ಯ ಹುಟ್ಟಿತ್ತು. ಅಲಹಾಬಾದಿನಿಂದ ಹಿಂದಿರುಗಿ ಬಂದವನೇ ಯಮುನಳನ್ನು ಮನೆಯಲ್ಲಿ ಇಳಿಸಿ, ತಾನು ನೇರವಾಗಿ ಠಾಕೂರ್ ವೀರಭಾನಸಿಂಹನ ಮನೆಗೆ ನಡೆದ—ರಾಮಲಾಲನಿಗೆ ಸೋರಾವಿನಲ್ಲಿ ಕೆಲಸ ಕೊಡಿಸಬೇಡಿರೆಂದು ಹೇಳಿ ಬರೋಣವೆಂದು. ಆಗಿನ್ನೂ ಬೆಳಗ್ಗೆ ಒಂಬತ್ತು ಗಂಟೆಯ ಸಮಯ. ಹೋಗಿ ನೋಡಿದರೆ ಮುನಿಷಿ ರಾಧೇಲಾಲನಾಗಲೇ ವೀರಭಾನಸಿಂಹನ ಮನೆಯಲ್ಲಿ ಹಾಜರಾಗಿ ಅವನ ಮುಖಸ್ತುತಿಯಲ್ಲಿ ತೊಡಗಿದ್ದಾನೆ!

ಠಾಕೂರ್ ವೀರಭಾನಸಿಂಹ ಎದ್ದು ಜ್ವಾಲಾಪ್ರಸಾದನನ್ನು ಸ್ವಾಗತಿಸಿದ. ಜೊತೆಗೇ ಅವನ ಭಟ್ಟಂಗಿಗಳೂ ಎದ್ದುನಿಂತರು. ಮುನಿಷಿ ರಾಧೇಲಾಲ ಮಾತಿಗೆ ಷುರುಮಾಡಿದ, "ಅರೆ ಜ್ವಾಲಾ, ನೀನು ವಾಪಸು ಬಂದೆಯಾ! ನೀನು ಇವತ್ತೇ ವಾಪಸು ಬರ್ತಿ ಅಂತ ನಮಗೇನು ಗೊತ್ತಿತ್ತು. ಗೊತ್ತಿದ್ದಿದ್ದರೆ ರಾಜಾಸಾಹೇಬರನ್ನ ಉಳಿಸಿಕೊಳ್ತಿದ್ದೆವು. ನಿನ್ನನ್ನ ನೋಡಬೇಕು ಅಂತ ಅವರು ತುಂಬ ಆಸೆ ಪಟ್ಟಿದ್ದರು. ಶ್ಯಾಮೂ ಅವರ ಜೊತೆ ಹೋಗಿದಾನೆ. ಇಲ್ಲೇ ಪ್ರತಾಪಗಢದಲ್ಲಿ, ಇಪ್ಪತ್ತು ಕೋಸು ದೂರದಲ್ಲಿ, ಅವರ ಜೋಡಿ, ಜಮೀನು ಇರೋದು.

ಜ್ವಾಲಾಪ್ರಸಾದ ತನ್ನ ಚಿಕ್ಕಪ್ಪನ ಮಾತಿಗೆ ಏನೊಂದೂ ಉತ್ತರ ಕೊಡಲಿಲ್ಲ. ಅವನು ಹೇಳಿದುದು ತನಗೆ ಕೇಳಿಸಲಿಲ್ಲವೆಂಬಂತೆ ಸುಮ್ಮನಿದ್ದ. ಇದನ್ನು ನೋಡಿ ಠಾಕೂರ್ ವೀರಭಾನಸಿಂಹ ಹೇಳಿದ, "ತಹಸೀಲದಾರ ಸಾಹೇಬ್, ಸರೋಹನ್‌ನ ರಾಜಾಸಾಹೇಬರು

ನಮ್ಮ ಮಾವ. ಅವರು ಪ್ರತಾಪಗಢ ಜಿಲ್ಲೆಯ ತಾಲೂಕ್‌ದಾರರು. ಈಚೆಗೆ ಸ್ವಲ್ಪ ಕಷ್ಟದಲ್ಲಿದ್ದಾರೆ. ವ್ಯಾಜ್ಯದಲ್ಲಿ ಸಿಕ್ಕಿಬಿದ್ದಿದ್ದಾರೆ. ಕೈ ಬಹಳ ಧಾರಾಳ, ಲೆಕ್ಕಪತ್ರದ ಕಡೆ ಗಮನವಿಲ್ಲ. ಆಸ್ತೀಲಿ ಒಂದಿಷ್ಟು ಭೋಗ್ಯವಾಗಿದೆ, ಒಂದಿಷ್ಟನ್ನ ಮಾರಿದಾರೆ. ಆದರೆ ನೋಡಿ, ಬಲು ಮಸ್ತಿನ ಮನುಷ್ಯ. ಅವರನ್ನ ಭೇಟಿ ಮಾಡಿದರೆ ನಿಮ್ಮ ಚಿತ್ತ ಪ್ರಸನ್ನವಾಗುತ್ತೆ."

ಜ್ವಾಲಾಪ್ರಸಾದ ನಿರುತ್ಸಾಹನಾಗಿ ಹೇಳಿದ, "ಅವರನ್ನ ಭೇಟಿ ಮಾಡೋಕ್ಕಾಗ ಲಿಲ್ಲವಲ್ಲ ಅಂತ ವಿಷಾದವಾಗುತ್ತೆ. ಬೇರೆ ಕಡೆಯೂ ನಾನು ಅವರ ಪ್ರಶಸ್ತೀನ ಕೇಳಿ ದೀನಿ. ಒಳ್ಳೇದು, ನಿಮ್ಮ ನೆಂಟರು ಅಂದಮೇಲೆ ಮತ್ತೆ ಯಾವಾಗಲಾದರೂ ಅವರ ಭೇಟಿ ಆಗೇ ತೀರುತ್ತೆ. ಹ್ಞಾ, ನಾನು ನಿಮ್ಮ ಜೊತೆ ಸ್ವಲ್ಪ ಜರೂರಾಗಿ ಮಾತಾಡೋ ದಿತ್ತು ಅಂತ ಬಂದೆ. ತೊಂದರೆಯಾಗದಿದ್ದರೆ ಒಂದೈದು ನಿಮಿಷ ಹೊರಗೆ ಬರ್ತೀರಾ?"

ಠಾಕೂರ್ ವೀರಭಾನಸಿಂಹನನ್ನು ಏಕಾಂತಕ್ಕೆ ಕರೆದುಕೊಂಡುಹೋಗಿ ಜ್ವಾಲಾ ಪ್ರಸಾದ ಹೇಳಿದ, "ರಾಮಲಾಲನಿಗೆ ಇಲ್ಲಿ ಸೋರಾವಿನಲ್ಲಿ ಕೆಲಸ ಕೊಡಿಸಿಕೊಡಬೇಡಿ. ಅವನು ಫತಹಪುರ ಬಿಟ್ಟುಬರೋದು ನನಗೆ ಇಷ್ಟವಿಲ್ಲ."

ಠಾಕೂರ್ ವೀರಭಾನಸಿಂಹ ತಲೆಯಮೇಲೆ ಕೈ ಹೊತ್ತುಕೊಳ್ಳುತ್ತ ಹೇಳಿದ, "ಆ ವಿಷಯ ಬಹುಮಟ್ಟಿಗೆ ನಿಶ್ಚಯವಾಗಿಬಿಟ್ಟಿದೆ. ನೀವು ನನಗೆ ಮೊದಲೇ ಹೇಳಬಾರ ದಾಗಿತ್ತೆ? ನಾನು ನಿಮಗೋಸ್ಕರ ಅಂತ ಪ್ರಯತ್ನಪಟ್ಟಿದ್ದು."

"ಹಾಗಾದರೆ ನನಗೋಸ್ಕರ ಅಂತಾನೇ, ಅವನು ಏನೇ ಆಗಲಿ ಸೋರಾವಿಗೆ ಬರೋಕ್ಕೆ ಆಗದ ಹಾಗೆ ಪ್ರಯತ್ನಮಾಡಿಬಿಡಿ," ಜ್ವಾಲಾಪ್ರಸಾದ ಕೊಂಚ ನಗುತ್ತ ಹೇಳಿದ. "ಅಲ್ಲದೇ ನೀವು ನಮ್ಮ ಚಿಕ್ಕಪ್ಪನಿಗೆ ಜಾಸ್ತಿ ಸದರ ಕೊಡಬೇಡಿ. ಇಷ್ಟೇ ನನ್ನ ವಿನಂತಿ."

ಠಾಕೂರ್ ವೀರಭಾನಸಿಂಹ ಸ್ವಲ್ಪಹೊತ್ತು ಯೋಚಿಸುತ್ತಿದ್ದು ಆಮೇಲೆ ಹೇಳಿದ, "ತಹಸೀಲದಾರ ಸಾಹೇಬ್, ನನಗೆ ನಿಮ್ಮ ಸಂಸಾರದ ಒಳಗಿನ ಗುಟ್ಟು ಗೊತ್ತಿರಲಿಲ್ಲ. ನಾನು ಏನೊಂದಿಷ್ಟು ಮಾಡಿದೆ, ಮಾಡ್ತಿದೀನಿ, ಅದೆಲ್ಲಾ ನಿಮಗೆ ಸಹಾಯವಾಗ್ತಿದೆ ಅಂತ ತಿಳಕೊಂಡುಮಾಡಿದ್ದು. ಇಲ್ಲದೇ ಹೋದರೆ ಈ ಜನರಲ್ಲಿ ನನಗೇನು ಆಸಕ್ತಿ ಹೇಳಿ! ಇನ್ನು ನೀವು ಹೋಗಿ ನಿಶ್ಚಿಂತೆಯಿಂದ ಮಲಕ್ಕೊಳಿ."

ಜ್ವಾಲಾಪ್ರಸಾದ ಹೊರಟುಬಂದ.

ಆ ದಿನ ಸಂಜೆ ಜೈದೇಯಿಯನ್ನು ನೋಡಿಬರಲು ಜ್ವಾಲಾಪ್ರಸಾದ ಅಲಹಾಬಾದಿಗೆ ಹೋಗುವುದಿತ್ತು. ಕಚೇರಿಯಲ್ಲಿ ಅವತ್ತು ಅವನಿಗೆ ಕೆಲಸ ಮಾಡಲು ಮನಸ್ಸಾಗಲಿಲ್ಲ. ಮನೆಗೆ ಬಂದು ನೋಡಿದಾಗ ಅಲ್ಲೊಂದು ಮಹಾಭಾರತವೇ ನಡೆದಿತ್ತು. ಶ್ಯಾಮಲಾಲನ ಹೆಂಡತಿಗೆ ಜೋರಾಗಿ ಏಟು ಬೀಳುತ್ತಿತ್ತು. ಅವಳು ಗಟ್ಟಿಯಾಗಿ ಕಿರಚುತ್ತ ಹೇಳು ತ್ತಿದ್ದಳು, "ನಾನು ಅಂತೀನಿ, ಸಾವಿರ ಸಲ ಅಂತೀನಿ. ನನ್ನ ಕಾಲುಚೈನಿನಲ್ಲಿ ಒಟ್ಟು

ಇರೋದು ನಾಲ್ಕೇ ನಾಲ್ಕು ಕೊಂಡಿ. ಅವು ಸಹ ಸವೆದುಹೋಗಿವೆ. ನಾನು ಎಷ್ಟು ಗೋಗರೆದುಕೊಂಡರೂ ಯಾರೂ ಮಾಡಿಸಿಕೊಡೋಲ್ಲ. ಅದೇ ಅಕ್ಕನಿಗಾದರೆ ಒಡವೆಯ ಮೇಲೆ ಒಡವೆ ಮಾಡಿಸಿಕೊಡ್ತಾರೆ."

ಜ್ವಾಲಾಪ್ರಸಾದ ಚಿಕ್ಕಪ್ಪನ ಕೊಟಡಿಯ ಹತ್ತಿರ ಬಂದು ನಿಂತುಕೊಂಡು ಬಾಗಿಲ ಬಳಿಯಿಂದಲೇ ಕೇಳಿದ, "ಚಾಚಾ, ಇದೇನು ಇಲ್ಲಿ ನಡೀತಾ ಇರೋದು? ಒಬ್ಬ ಹೆಂಗಸಿಗೆ ಇಷ್ಟೊಂದು ಜನ ಸೇರಿಕೊಂಡು ಹೊಡೀತಿದೀರಿ, ಇದು ಸರಿಯಲ್ಲ. ಪಾಪ, ಆ ಬಡ ಪಾಯಿಯ ಮೈತುಂಬ ಬಾಸುಂಡೆ ಬಂದಿದೆ. ಕ್ರೌರ್ಯ, ಅತ್ಯಾಚಾರಕ್ಕೂ ಒಂದು ಮಿತಿ ಇದೆ."

ಮುನಿಷಿ ರಾಧೇಲಾಲ ಕೊಟಡಿಯೊಳಗಿನಿಂದಲೇ ಗುರುಗುಟ್ಟುತ್ತ ಉತ್ತರಿಸಿದ, "ಬಡಪಾಯಿಯಲ್ಲ, ರಾಕ್ಷಸೀ, ರಾಕ್ಷಸಿ ಇವಳು. ಯಾವಾಗ ನೋಡಲಿ ಬೈಗಳ, ಅತ್ತೆ, ವಾರಗಿತ್ತೀರ ಜೊತೆ ಜಗಳ. ಎಲ್ಲೋ ಅನಿಷ್ಟ ಮುಂಡೆ. ಮೂರುನಾಲ್ಕು ತಿಂಗಳಿಗೊಂದು ಸಲ ಏಟು ಬೀಳದೆ ಹೋದರೆ ಇವಳಿಗೆ ಬುದ್ಧಿ ಹತೋಟೀಲಿ ಇರೋಲ್ಲ. ಒಂಟಿಯಾಗಿ ಯಾರೊಬ್ಬರಿಗೂ ಇವಳ ಜೊತೆ ಏಗೋಕ್ಕೆ ಆಗೋಲ್ಲ."

ಜ್ವಾಲಾಪ್ರಸಾದ ಧೈರ್ಯ ತಂದುಕೊಂಡು ಉತ್ತರಕೊಟ್ಟ, "ಚಾಚಾ, ಇದೆಲ್ಲಾ ಈ ಮನೇಲಿ ನಡೆಯೋದು ಸಾಧ್ಯವಿಲ್ಲ. ಇಷ್ಟನ್ನ ಸ್ಪಷ್ಟವಾಗಿ ತಿಳಕೊಳ್ಳಿ." ಹೀಗಂದು ಅವನು ದಡದಡನೆ ಅಲ್ಲಿಂದ ಹೊರಟು ತನ್ನ ಕೋಣೆ ಸೇರಿಕೊಂಡ.

ಅವತ್ತು ರಾತ್ರಿ ಜ್ವಾಲಾಪ್ರಸಾದ ಅಲಹಾಬಾದ್ ತಲಪಿದಾಗ ಲಕ್ಷ್ಮೀಚಂದನೂ ಅಲ್ಲೇ ಇದ್ದ. ಆ ದಿನ ಮಧ್ಯಾಹ್ನ ತಾನೇ ಅವನು ಕಾನಪುರದಿಂದ ಅಲಹಾಬಾದಿಗೆ ಬಂದಿದ್ದ. ಜೈದೇಯಿಗೆ ಮೂರು ದಿನಗಳ ಹಿಂದೆ ತಾನೇ ಜ್ವರ ಬಿಟ್ಟಿತ್ತು. ಅವಳು ಸಾಕಷ್ಟು ಸ್ವಸ್ಥಳಾಗಿರುವಂತೆ ಕಾಣುತ್ತಿದ್ದಳು. ಜ್ವಾಲಾಪ್ರಸಾದನ ದಾರಿನೋಡುತ್ತಿದ್ದಳೋ ಎಂಬಂತೆ ಅವಳು ಅವನ ಗಾಡಿಯ ಸದ್ದು ಕೇಳಿದ ತಕ್ಷಣ ವರಾಂಡಕ್ಕೆ ಓಡಿಬಂದಳು. "ಬಾ ದೇವರ್‌ಜೀ, ಈ ಸಲ ದೇವರಾಣೀನ ಜೊತೇಲಿ ಕರಕೊಂಡು ಬರಲಿಲ್ಲವೆ?"

ಮೂರು ದಿನಗಳ ಮೇಲೆ ಜೈದೇಯಿ, ಲಕ್ಷ್ಮೀಚಂದ ಹಾಗೂ ಅವನ ಹೆಂಡತಿ ರಾಧೆಯರನ್ನು ಜತೆಯಲ್ಲಿ ಕರೆದುಕೊಂಡು ಜ್ವಾಲಾಪ್ರಸಾದ ಸೋರಾವಿಗೆ ಹಿಂದಿರುಗಿ ಬಂದ. ಬೆಳಗಿನ ಹೊತ್ತು. ಅವರು ಬಂದಾಗ ಕಿಶನಲಾಲ ಹೊರಗೆ ಬಾವಿಕಟ್ಟೆಯ ಮೇಲೆ ಹಲ್ಲುತಿಕ್ಕುತ್ತ ಕುಳಿತಿದ್ದ. ಲಕ್ಷ್ಮೀಚಂದ, ರಾಧೆ, ಜೈದೇಯಿಯರ ಮುಖ ಕಂಡೊಡನೆಯೇ ಕಿಶನಲಾಲ ಕೈಲಿದ್ದ ಹಲ್ಲುಜ್ಜುವ ಕಡ್ಡಿಯನ್ನು ಬಿಸಾಡಿ ಅಲ್ಲಿಂದ ಕಾಲ್ತೆಗೆದ. ಅದನ್ನು ಕಂಡು ಜ್ವಾಲಾಪ್ರಸಾದ ಕೂಗುಹಾಕಿದ, "ಎಲ್ಲಿ ಹೊರಟೆ, ಕಿಶನೂ? ಸ್ವಲ್ಪ ಇಲ್ಲಿ ಬಾ."

ಕಿಶನಲಾಲ ಜ್ವಾಲಾಪ್ರಸಾದನ ಧ್ವನಿ ಕೇಳಿಸದವನಂತೆ ಅಲ್ಲಿಂದ ಓಡತೊಡಗಿದ. "ಯಾರಲ್ಲಿ? ಕಿಶನೂನ ಹಿಡೀರಿ!" ಜ್ವಾಲಾಪ್ರಸಾದ ಜೋರಾಗಿ ಕಿರಚಿಕೊಂಡ.

ಅದೇ ಹೊತ್ತಿಗೆ ಬಿಶನಲಾಲ ಅಖಾಡಾದಿಂದ ವಾಪಸು ಬಂದಿದ್ದವನು ಜ್ವಾಲಾ ಪ್ರಸಾದನ ಕೂಗು ಕೇಳಿ ಕಿಶನಲಾಲನ ಬೆನ್ನು ಹತ್ತಿದ. ಸ್ವಲ್ಪ ಹೊತ್ತಿನ ಮೇಲೆ ಅವ ನನ್ನು ಪೋಲೀಸರ ಕೈಯಿಂದ ಬಿಡಿಸಿಕೊಂಡು ಜ್ವಾಲಾಪ್ರಸಾದನ ಮುಂದೆ ಎಳೆದು ತಂದು ನಿಲ್ಲಿಸಿದ. ಗದ್ದಲ ಕೇಳಿ ರಾಧೇಲಾಲ, ರಾಮಲಾಲರು ಮನೆಯೊಳಗಿನಿಂದ ಬಂದರು. "ಏನು ಸಮಾಚಾರ, ಬಿಶನೂ? ಕಿಶನೂನ ಯಾಕೆ ಹೀಗೆ ಎಳಕೊಂಡು ಬರ್ತಿದಿ?" ರಾಧೇಲಾಲ ಕೇಳಿದ.

"ಜ್ವಾಲಣ್ಣ ಇವನನ್ನ ಕರೆದರೆ ಬರೋದು ಬಿಟ್ಟು ಇಲ್ಲಿಂದ ಓಡಿಹೋಗ್ತಾ ಇದ್ದ. ಆಗ ಜ್ವಾಲಣ್ಣ 'ಯಾರಲ್ಲಿ? ಹಿಡೀರಿ' ಅಂತ ಕೂಗಿದ. ಅದನ್ನ ಕೇಳಿ ತಹಸೀಲಿನ ಪೋಲೀಸಿನೋರು ಇವನನ್ನ ಹಿಡಕೊಂಡರು. ಅವರ ಕೈಯಿಂದ ಬಿಡಿಸಿಕೊಂಡು ಕರಕೊಂಡು ಬರ್ತಿದೀನಿ."

"ಹೆದರಿಕೊಳ್ಳೋ ಕಾರಣವಿಲ್ಲ, ಕಿಶನೂ," ಜ್ವಾಲಾಪ್ರಸಾದ ಹೇಳಿದ. "ಲಂಬರ್ ದಾರಿಣಿ ಮಗಸೊಸೇರ ಜೊತೆ ಬಂದಿದಾರೆ. ನೀನು ಮಾಡಿದ ತಪ್ಪಿಗೆ ಹೀಗೆ ವಿಚಾರಣೆ ಯಾಗುತ್ತೆ ಅಂತ ನಿನಗೂ ಗೊತ್ತೇ ಇತ್ತು; ಅದಕ್ಕೆ ಸಾಕಷ್ಟು ಶಿಕ್ಷೆಯೂ ನಿನಗೆ ಆಗಿದೆ. ಆದರೆ ನಮ್ಮಗಳ ಮುಂದೆ ಲಂಬರ್‌ದಾರಿಣಿ ಲಕ್ಷ್ಮೀಚಂದರ ಮೇಲೆ ಸುಮ್ಮಸುಮ್ಮನೆ ದೋಷಾರೋಪಣೆ ಮಾಡಿದ್ದು ಶುದ್ಧ ತಪ್ಪು. ಅದನ್ನ ಹೇಳೋಣ ಅಂತಾನೆ ನಿನ್ನನ್ನ ಕರೆದದ್ದು."

"ಏನು ಹೇಳಲಿ, ಈ ಪೋಕರಿ ಕುಲಕ್ಕೆ ಕಳಂಕ ಹಚ್ಚೋಕೆ ಹುಟ್ಟಿದಾನೆ," ಮುನಿಷಿ ರಾಧೇಲಾಲ ಗೋಳಿಟ್ಟ. "ಲಕ್ಷ್ಮೀಚಂದ್, ಈ ನಾಲಾಯಕ್‌ನನ್ನ ಕ್ಷಮಿಸಿಬಿಡು. ಅವನ ಪರವಾಗಿ ನಾನು ಕೈಮುಗಿದು ಕೇಳಿಕೋತೀನಿ."

ತಂದೆಯ ಈ ಮಾತನ್ನು ಕೇಳಿ ಬಿಶನಲಾಲನಿಗೆ ಜೋರಾಗಿ ನಗು ಬಂತು, "ನೀನು ಯಾರ ಯಾರ ಕ್ಷಮೆ ಕೇಳಿಕೊಂಡು ಅಲೀತಿ, ಅಪ್ಪ! ನೀನೆಷ್ಟೇ ಕ್ಷಮೆ ಕೇಳು, ಈ ಕಿಶನೂ ಅಣ್ಣ ಬದಲಾಯಿಸ್ತಾನೇನು! ಇವನು ನಮ್ಮ ಮರ್ಯಾದೆ ಕಳೆಯೋದ ಕ್ಕೇನೇ ಹುಟ್ಟಿದಾನೆ."

ಯಮುನಾ ಹೊರಬಂದು ಜೈದೇಯಿ ರಾಧೆಯರನ್ನು ಸ್ವಾಗತಿಸಿ ಒಳಗೆ ಕರೆದು ಕೊಂಡುಹೋದಳು.

ಲಕ್ಷ್ಮೀಚಂದ ಅವತ್ತು ಸಂಜೆಯೇ ರಾಧೆಯ ಜೊತೆ ಅಲಹಾಬಾದಿಗೆ ಹಿಂದಿರುಗಿದ. ಯಮುನಳ ಬಲವಂತಕ್ಕೆ ಕಟ್ಟುಬಿದ್ದು ಜೈದೇಯಿ ಕೆಲವು ದಿನ ಸೋರಾವಿನಲ್ಲಿಯೇ ಉಳಿದುಕೊಂಡಳು. ಮಾರನೆಯ ದಿನ ಜ್ವಾಲಾಪ್ರಸಾದ ಸರ್ಕೀಟಿನ ಮೇಲೆ ಹೊರಟ.

ಮೂರು ದಿನಗಳ ಮೇಲೆ ಜ್ವಾಲಾಪ್ರಸಾದ ಸರ್ಕೀಟು ಮುಗಿಸಿ ಹಿಂದಿರುಗಿದಾಗ ಶ್ಯಾಮಲಾಲನೂ ಸೋರಾವಿನಲ್ಲಿದ್ದ. "ಅಣ್ಣಾ, ಇವತ್ತು ಬೆಳಗ್ಗೆ ಸರೋಹನ್‌ನ

ರಾಜಾಸಾಹೇಬರು ಠಾಕೂರ್ ವೀರಭಾನಸಿಂಹರಲ್ಲಿಗೆ ಬಂದಿದ್ದಾರೆ. ನಿನ್ನನ್ನ ವಿಶೇಷ ವಾಗಿ ಕಾಣಬೇಕಾಗಿದೆಯಂತೆ."

"ಹೌದು. ಅವರಿಗೆ ವಿಶೇಷವಾಗಿ ನನ್ನನ್ನ ಕಾಣಬೇಕಾಗಿದೆ ಅಂತ ನನಗೆ ಗೊತ್ತಿದೆ. ಬಿಜ್ಜೂಗ್ರಾಮದ ಕ್ರಯಪತ್ರಾನ ನಿನ್ನ ಹೆಸರಿಗೆ ಮಾಡಿದಾರಲ್ಲ, ಆ ಸಂಬಂಧದಲ್ಲಿ ನನ್ನನ್ನ ಕಾಣಬೇಕಾಗಿದೆ ಅಂತ ತೋರುತ್ತೆ."

ಇಷ್ಟುಹೊತ್ತಿಗೆ ಮುನಿಷಿ ರಾಧೇಲಾಲನೂ ಅಲ್ಲಿ ಬಂದ. ಅವನಿಗೆ ಆಶ್ಚರ್ಯ ವಾಯಿತು. "ಇದೆಲ್ಲಾ ನಿನಗೆ ಹೇಗೆ ಗೊತ್ತಾಯ್ತು? ಶ್ಯಾಮೂ ನಾನೂ ಬಿಟ್ಟು ಮೂರನೆಯವರು ಯಾರಿಗೂ ಈ ವಿಷಯ ತಿಳೀದು. ಠಾಕೂರ್ ವೀರಭಾನಸಿಂಹ ರಿಗೂ ಇದು ಗೊತ್ತಿಲ್ಲ."

"ಈಗ ನಾಲ್ಕೈದು ದಿನದ ಹಿಂದೆ ಅಲಹಾಬಾದಿನ ಲಾಲಾ ಘನಶ್ಯಾಮದಾಸ ಬಂದಿದ್ದರು. ರಾಜಾಸಾಹೇಬರ ಮೂರು ಗ್ರಾಮ ಅವರಿಗೆ ಭೋಗ್ಯವಾಗಿದೆ. ಅದರಲ್ಲಿ ಬಿಜ್ಜೂ ಗ್ರಾಮವೂ ಒಂದು. ಅವರು ಎಲ್ಲಾನ್ನೂ ತಿಳಿಸಿದಾರೆ. ವ್ಯಾಜ್ಯಕ್ಕೆ ಸಿಕ್ಕಿ ಹಾಕಿಕೊಂಡು ತಲೆನೋವು ಬರಿಸಿಕೋಬೇಡ, ಹೆಸರು ಕೆಡಿಸಿಕೋಬೇಡ ಅಂತ ಹೇಳಿಹೋಗಿದಾರೆ!"

ರಾಧೇಲಾಲ ಹೇಳಿದ, "ವ್ಯಾಜ್ಯ ನಡೀತಾನೇ ಇದೆ, ರಾಜಾಸಾಹೇಬರು ಕಾಯ್ತಿದಾರೆ! ಆದರೆ ಆ ವ್ಯಾಜ್ಯಕ್ಕೂ ನಮಗೂ ಏನು ಸಂಬಂಧ? ಕಾಗದಪತ್ರ ಸರಿಯಾಗಿ ರುಜು ವಾತಾಯಿತು ಅಂದರೆ ರಾಜಾಸಾಹೇಬರ ಉಳಿದೆರಡು ಗ್ರಾಮ ಕೈಬಿಟ್ಟ ಹಾಗೆ ಈ ಬಿಜ್ಜೂಗ್ರಾಮವೂ ಕೈಬಿಡುತ್ತೆ. ಇಲ್ಲವೋ, ಯಾವ ತಂಟೆತಕರಾರೂ ಇಲ್ಲದೆ ಜಮೀನು ನಮ್ಮ ಕೈಗೆ ಬರುತ್ತೆ."

"ಹಾಗಿದ್ದರೆ ರಾಜಾಸಾಹೇಬರು ನನ್ನನ್ನ ಯಾಕೆ ನೋಡಬೇಕು ಅಂತಿದಾರೆ?" ಜ್ವಾಲಾಪ್ರಸಾದ ಕೇಳಿದ.

"ನೀನು ದೊಡ್ಡ ಸರಕಾರೀ ಅಧಿಕಾರಿ. ಪ್ರತಿಯೊಬ್ಬ ಶ್ರೀಮಂತರೂ ದೊಡ್ಡ ಆಫೀಸರನ್ನ ನೋಡಬೇಕು ಅಂತ ಬಯಸೋದು ಸ್ವಾಭಾವಿಕ. ಠಾಕೂರ್ ವೀರಭಾನ ಸಿಂಹ ಇವತ್ತು ರಾತ್ರಿ ನಿನ್ನನ್ನ ಔತಣಕ್ಕೆ ಬರಹೇಳಿದಾರೆ. ಅಲ್ಲೇ ರಾಜಾಸಾಹೇಬರ ಭೇಟಿಯೂ ಆಗುತ್ತೆ."

ಜ್ವಾಲಾಪ್ರಸಾದ ಮಾತನ್ನು ಹೆಚ್ಚು ಬೆಳಸಲಿಲ್ಲ. ಅವನು ಸ್ನಾನ ಮುಗಿಸಿ ಊಟ ಮಾಡಿದ. ಅಷ್ಟುಹೊತ್ತಿಗೆ ಮಧ್ಯಾಹ್ನವಾಗಿತ್ತು. ಠಾಕೂರ್ ವೀರಭಾನಸಿಂಹರಿಂದ ರಾತ್ರಿಯ ಊಟಕ್ಕೆ ಆಮಂತ್ರಣ ಬಂದಿದೆಯೆಂದು ಯಮುನಳೂ ಹೇಳಿದ್ದಳು. ಈ ಆಮಂತ್ರಣದಿಂದ ಹೇಗೆ ತಪ್ಪಿಸಿಕೊಳ್ಳುವುದೆಂದು ಅವನಿಗೆ ತೋರದಾಯಿತು. ಅವನು ಯಮುನಳಿಗೆ ಹೇಳಿದ, "ಗಾಡಿ ಕಟ್ಟಿಸಿಕೊಂಡು ನೀನು ವೀರಭಾನಸಿಂಹರಲ್ಲಿಗೆ ಹೋಗು. ನಾನು ಸ್ವಲ್ಪ ಬೇಜೂಮಿಸಿರನನ್ನ ಕಂಡು ಅವನಿಂದ ಸಲಹೆ ಪಡೆಯೋದಿದೆ. ಅಲ್ಲಿಂದ ಹಾಗಿಂದಹಾಗೇ ನೇರವಾಗಿ ಬರ್ತೀನಿ. ಹಾಗಂತ ಠಾಕೂರಾಣಿಗೂ ಹೇಳಿಬಿಡು."

ಯಮುನಾ ಹೇಳಿದಳು, "ಒಳ್ಳೇದು, ಶ್ಯಾಮೂ ಹೆಂಡತಿಗೆ ಕಾಲುಚೈನಿನ ಕೊಂಡಿ ಮಾಡಿಸಬೇಕಾಗಿದೆ. ಆ ಬಡಪಾಯೀನ ಎಲ್ಲರೂ ಸತಾಯಿಸ್ತಾರೆ. ದಾರೀಲಿ ಹೇಗಿದ್ದರೂ ಅಕ್ಕಸಾಲಿಯ ಅಂಗಡಿ ಸಿಗುತ್ತೆ. ಈ ಹಳೇ ಎಂಟು ಕೊಂಡೀನ ಕೊಟ್ಟು, ಮೇಲೆ ಎಷ್ಟುಬೇಕೋ ಅಷ್ಟು ಬೆಳ್ಳಿ ಹಾಕಿ ಹದಿನಾರು ಹೊಸ ಕೊಂಡಿ ಮಾಡಿಕೊಡು ಅಂತ ಹೇಳಿಬಿಡಿ." ಯಮುನಾ ಶ್ಯಾಮುವಿನ ಹೆಂಡತಿಯ ಚೈನಿನ ಕೊಂಡಿಗಳನ್ನು ಜ್ವಾಲಾಪ್ರಸಾದನಿಗೆ ಕೊಟ್ಟಳು.

ಜ್ವಾಲಾಪ್ರಸಾದ ಅವತ್ತು ಬೇಚೂಮಿಸಿರನಲ್ಲಿಗೆ ನಡೆದುಕೊಂಡೇ ಹೊರಟ. ಸರಾಫ್ ದೇವೀದಯಾಳನ ಅಂಗಡಿ ಬೇಚೂಮಿಸಿರನ ಮನೆಯ ದಾರಿಯಲ್ಲೇ ಇತ್ತು. ಅಂಗಡಿಯ ಮುಂದೆ ಬಂದಾಗ ದೇವೀದಯಾಳ ಎದ್ದು ಜ್ವಾಲಾಪ್ರಸಾದನನ್ನು ಸ್ವಾಗತಿಸಿದ, "ದಯಮಾಡಿ ಹುಜ಼ೂರ್! ನೀವೇ ಖುದ್ದಾಗಿ ಬರೋ ತೊಂದರೆ ಯಾಕೆ ತೊಗೊಂಡ್ರಿ? ನಾಳೆ ಹೊತ್ತಿಗೆ ತಯಾರಾಗಿರುತ್ತೆ, ಬಂದು ತಗೊಂಡು ಹೋಗಿ ಅಂತ ರಾಮಲಾಲಣ್ಣನಿಗೆ ಹೇಳಿದ್ದೆನಲ್ಲ."

"ಏನು ತಯಾರಾಗಿರುತ್ತೆ?" ಜ್ವಾಲಾಪ್ರಸಾದ ಆಶ್ಚರ್ಯದಿಂದ ಕೇಳಿದ.

"ಅದೇ, ತಹಸೀಲದಾರಿಣಿಯೋರ ಗುಂಡಿನ ಸರ. ನೋಡಿ ಎಷ್ಟು ಚೆನ್ನಾಗಿ ಮಾಡಿದೀನಿ. ಬರೀ ಪಾಲಿಶ್ ಮಾಡೋದೊಂದು ಬಾಕಿ. ಪಾಲೀಶಾದ ಮೇಲೆ ನೋಡಬೇಕು ಇದನ್ನ!" ಹೀಗನ್ನುತ್ತ ದೇವೀದಯಾಳ ಒಂದು ಚಿನ್ನದ ಗುಂಡಿನ ಸರವನ್ನು ತೆಗೆದು ಜ್ವಾಲಾಪ್ರಸಾದನ ಮುಂದಿಟ್ಟ. ಜ್ವಾಲಾಪ್ರಸಾದ ಅದನ್ನು ತಿರುಗಿಸಿ ತಿರುಗಿಸಿ ನೋಡುತ್ತ "ಎಷ್ಟು ತೂಕದ್ದು ಇದು!" ಎಂದ.

"ಒಟ್ಟು ಒಂದೂಕಾಲು ತೊಲ ಆಗುತ್ತೆ, ಹುಜ಼ೂರ್. ಆದರೆ ಐದು ತೊಲಕ್ಕೆ ಕಮ್ಮಿಯಿಲ್ಲದ ಹಾಗೆ ಕಾಣುತ್ತೆ. ಅಲಹಾಬಾದಿನ ಶ್ರೀಮಂತಜನ ಸಹ ನನ್ನ ಹತ್ತಿರ ಬಂದು ಗುಂಡಿನ ಸರ ಮಾಡಿಸಿಕೊಂಡು ಹೋಗ್ತಾರೆ. ನನ್ನ ಕೆಲಸಗಾರರು ಇಡೀ ಪ್ರಾಂತದಲ್ಲೇ ಹೆಸರಾದವರು!" ದೇವೀದಯಾಳ ಹೆಮ್ಮೆಯಿಂದ ಹೇಳಿಕೊಂಡ.

ಜ್ವಾಲಾಪ್ರಸಾದ ಕೊಂಚ ಯೋಚಿಸಿ ಹೇಳಿದ, "ಇತ್ತೀಚೆಗೆ ನಮ್ಮ ಮನೇಗೆ ಇನ್ನೂ ಏನಾದರೂ ಒಡವೆ ಮಾಡಿಕೊಟ್ಟಿದ್ದೀಯಾ?"

"ಅರೆ ಹುಜ಼ೂರ್, ಇದನ್ನೆಲ್ಲಾ ಕೇಳೋ ಅಗತ್ಯವೇನಿದೆ? ರಾಜರು, ಶ್ರೀಮಂತರು, ಅಧಿಕಾರಿಗಳು ಅಂದಮೇಲೆ ಅವರ ಮನೇಲಿ ಒಡವೆ ಮಾಡಸ್ತಾನೇ ಇರ್ತಾರೆ. ಅದರಲ್ಲಿ ಯೋಚಿಸೋದೇನಿದೆ? ರಾಮಲಾಲಣ್ಣನೇ ಈ ಎಲ್ಲಾ ಸಾಮಾನನ್ನೂ ಮಾಡಿಸಿಕೊಂಡು ಹೋಗಿದಾನೆ. ಲೆಕ್ಕಾಚಾರದಲ್ಲಿ ರಾಮಲಾಲಣ್ಣ ಬಹಳ ಗಟ್ಟಿಗ," ದೇವೀದಯಾಳ ನಕ್ಕ.

ಜ್ವಾಲಾಪ್ರಸಾದ ಹೇಳಿದ, "ಅದು ಸರಿ. ಆದರೆ ನಾನೂ ಸ್ವಲ್ಪ ಲೆಕ್ಕ ನೋಡಬೇಕು. ಕೊನೆಗೆ ಹಣ ಪಾವತಿ ಮಾಡೋನು ನಾನು ತಾನೆ?"

"ಏನು ಹುಜೂರ್, ನೀವೂ ಲೆಕ್ಕದ ಮಾತಾಡೋದೆ! ಶ್ರೀಮಂತರಲ್ಲಿಗೆ ವರ್ಷಕ್ಕೊಂದು ಸಲ ಲೆಕ್ಕದ ಚೀಟಿ ಕಳಿಸೋ ಪದ್ಧತಿ ಇಟ್ಟುಕೊಂಡಿದೀವಿ. ನಿಮಗೂ ದೀಪಾವಳಿಗೆ ಮೊದಲು ಚೀಟಿ ಬರುತ್ತೆ. ಮುನ್ನೂರು ನಾನೂರು ರೂಪಾಯಿ. ಅದು ನಿಮ್ಮಂಥೋರಿಗೆ ಕೈಯಿನ ಕೊಳೆ."

ಶ್ಯಾಮುವಿನ ಹೆಂಡತಿಯ ಕಾಲುಚೈನಿನ ಕೊಂಡಿಗಳನ್ನು ದೇವೀದಯಾಳನಿಗೆ ಕೊಟ್ಟು ಜ್ವಾಲಾಪ್ರಸಾದ ಹೇಳಿದ, "ನಾಳೆ ಮಧ್ಯಾಹ್ನದ ಹೊತ್ತಿಗೆ ಹದಿನಾರು ಹೊಸ ಕೊಂಡಿ ಮಾಡಿ, ನಾಳೆಯುವರೆಗಿನ ಪೂರ್ತಿ ಲೆಕ್ಕ ತೊಗೊಂಡು ನಮ್ಮ ಮನೇಗೆ ಬರಬೇಕು. ಮರೆಯಕೂಡದು. ನಾನು ಸಾಲ ಇಡೋನಲ್ಲ ಅಂತ ನಿನಗೆ ಗೊತ್ತಿದೆ."

## ಹದಿನಾಲ್ಕು

ಮಾರನೆಯ ದಿನ ಬೆಳಗ್ಗೆ ಜ್ವಾಲಾಪ್ರಸಾದ ಹೊತ್ತಾಗಿ ಎದ್ದ. ಕಣ್ಣು ತೆರೆದಾಗ ತಲೆ ಸ್ವಲ್ಪ ನೋಯುತ್ತಿತ್ತು. ಬೆಳಗಿನ ಜಾವ ನಾಲ್ಕು ಗಂಟೆಗೆ ಷುರುವಾಗಿದ್ದ ಜಡಿಮಳೆ ಈಗ ಸ್ವಲ್ಪ ಕಡಿಮೆಯಾಗಿತ್ತು. ಇಡೀ ವಾತಾವರಣ ಒಂದು ಬಗೆಯ ಉಲ್ಲಾಸದಿಂದ ತುಂಬಿತ್ತು. ಜೈದೇಯಿ ಪೂಜೆ ಮುಗಿಸಿ, ಯಮುನಳ ಪಕ್ಕದಲ್ಲಿ ಕುಳಿತು ರಾತ್ರಿಯ ಔತಣದ ವಿವರ ಕೇಳಿ ತಿಳಿದುಕೊಳ್ಳುತ್ತಿದ್ದಳು.

ಅವತ್ತು ಭಾನುವಾರ. ಕಚೇರಿಗೆ ರಜ. ತಹಸೀಲಿನ ಆಳು ಟಪಾಲು ತೆಗೆದುಕೊಂಡು ಜ್ವಾಲಾಪ್ರಸಾದನ ಮನೆಗೇ ಬಂದಿದ್ದ. ಜ್ವಾಲಾಪ್ರಸಾದ ಶೌಚಸ್ನಾನ ಮುಗಿಸುವ ಹೊತ್ತಿಗೆ ಹತ್ತು ಗಂಟೆಯಾಯಿತು. ಅಷ್ಟುಹೊತ್ತಿಗೆ ಮೋಡ ಚದುರಿ, ಸೂರ್ಯ ಬಿಟ್ಟುಬಿಟ್ಟು ಕಾಣಿಸಿಕೊಳ್ಳಲಾರಂಭಿಸಿದ್ದ. ಜ್ವಾಲಾಪ್ರಸಾದ ತಿಂಡಿ ಬೇಡವೆಂದು ಹೇಳಿ, ಆಫೀಸುಕೋಣೆಯಲ್ಲಿ ಕುಳಿತು ಸರಕಾರೀ ಟಪಾಲನ್ನು ನೋಡತೊಡಗಿದ. ಭೀಖುವಿನ ಮುಖಾಂತರ ಮುನಿಷಿ ರಾಧೇಲಾಲನಿಗೆ ಹೇಳಿಕಳಿಸಿದ.

ಮುನಿಷಿ ರಾಧೇಲಾಲ ಶ್ಯಾಮಲಾಲನನ್ನೂ ಕರೆದುಕೊಂಡು ರಾಜಾಸಾಹೇಬ ಸರೋಹನ್‌ರನ್ನು ಭೇಟಿಮಾಡಿ ಬರಲೆಂದು ಹೊರಟಿದ್ದಾಗ ಅವನಿಗೆ ಜ್ವಾಲಾಪ್ರಸಾದನ ಸಂದೇಶ ತಲಪಿತು. ಮುನಿಷಿ ರಾಧೇಲಾಲ ಶ್ಯಾಮಲಾಲನ ಜೊತೆ ಜ್ವಾಲಾಪ್ರಸಾದನ ದಿವಾನಖಾನೆಗೆ ಬಂದ. ಶ್ಯಾಮಲಾಲನನ್ನು ಕಂಡು ಜ್ವಾಲಾಪ್ರಸಾದ ಹೇಳಿದ, "ನೀನೂ ಬಂದದ್ದು ಒಳ್ಳೆಯದಾಯಿತು. ಚಾಚಾ, ನಾನು ನಿನ್ನೆ ರಾಜಾಸಾಹೇಬ್ ಸರೋಹನ್‌ರನ್ನು ಕಂಡು ಬಂದೆ. ಅವರ ಜೊತೆ ಅವರ ವಕೀಲರು ಬಾಬೂ ಬಟೇಶ್ವರೀಪ್ರಸಾದರೂ ಇದ್ದರು."

"ಹೌದು, ಬಟೇಶ್ವರೀ ಬಾಬು ನಮ್ಮ ಫತಹಪುರದವರೇಯೇ. ವಿಲಾಯಿತಿಗೆ ಹೋಗಿಬಂದ ಮೇಲೆ ಅವರನ್ನ ಜಾತಿಯಿಂದ ಹೊರಗೆ ಹಾಕಿದರು. ಆದರೆ ತುಂಬ ಹೆಸರುವಾಸಿಯಾದ ವಕೀಲರು. ಅಲಹಾಬಾದಿನಲ್ಲಿ ಅವರದೊಂದು ದೊಡ್ಡ ಬಂಗಲೆ ಇದೆ," ಮುನಿಷಿ ರಾಧೇಲಾಲ ಹೇಳಿದ.

"ಹ್ಞಾ, ಅವರು ಅದನ್ನೆಲ್ಲಾ ನನಗೆ ಹೇಳಿದರು. ತುಂಬ ವಿಶ್ವಾಸದಿಂದ ಕಂಡರು ...ಕೂತುಕೊಳ್ಳಿ, ಅವಸರದಲ್ಲೇನೂ ಇಲ್ಲ ತಾನೆ?"

"ಇಲ್ಲ, ಅಂಥ ವಿಶೇಷವಾದ ಅವಸರವೇನೂ ಇಲ್ಲ. ರಾಜಾಸಾಹೇಬರು ಇವತ್ತು ಸಂಜೆ ಸರೋಹನ್‌ಗೆ ಹೊರಟುಹೋಗ್ತಾರೆ. ಅವರು ಹೋಗೋಕ್ಕೆ ಮುಂಚೆ ಶ್ಯಾಮೂನೂ ಕರಕೊಂಡು ಅವರ ಭೆಟ್ಟಿಯಾಗಿ ಬರೋಣ ಅಂತ ಹೊರಟಿದ್ದೆ,"

"ಇನ್ನೂ ಸಂಜೇಗೆ ಬಹಳ ಹೊತ್ತಿದೆ. ನಾನು ನಿಮ್ಮಜೊತೆ ಸ್ವಲ್ಪ ಜರೂರಾಗಿ ಮಾತನಾಡಬೇಕಾಗಿದೆ."

ಮುನಿಷಿ ರಾಧೇಲಾಲ ಕುಳಿತುಕೊಂಡ. ಶ್ಯಾಮಲಾಲ ಹೇಳಿದ, "ಅಣ್ಣ, ನಾನು ಅಲ್ಲಿಗೆ ಹೋಗಿಬರೋದರಲ್ಲಿ ನಿನ್ನ ಅಭ್ಯಂತರವೇನೂ ಇಲ್ಲ ತಾನೆ? ಅಥವಾ ಇಲ್ಲಿ ನನ್ನ ಅಗತ್ಯ ಇದೆಯೊ?"

"ಇಲ್ಲ, ಇಲ್ಲ. ನೀನು ಹೋಗಬಹುದು, ನಾನು ಮಾತನಾಡಬೇಕಾಗಿರೋದು ಚಾಚನ ಜೊತೆ."

ಶ್ಯಾಮಲಾಲ ಹೋದಮೇಲೆ ಜ್ವಾಲಾಪ್ರಸಾದ ಮಾತಿಗೆ ಪ್ರಾರಂಭಿಸಿದ, "ಚಾಚಾ, ಅಪ್ಪ ಸತ್ತಿದ್ದು ಯಾಕೆ, ಹೇಗೆ ಅಂತ ನಿಮಗೆ ಗೊತ್ತಿದೆಯೆ?"

ಮುನಿಷಿ ರಾಧೇಲಾಲ ಕಕ್ಕಾಬಿಕ್ಕಿಯಾದ, "ಹ್ಞಾ, ನೀನೇ ಹೇಳಿದ್ದೆ, ಅವರು ಬಿದ್ದರು, ತುಂಬಿದ ಹೂಜಿ ಬುಡಮೇಲಾಗಿ ಅವರ ತಲೆ ಮೇಲೆ ಬಿತ್ತು ಅಂತ."

"ಹಾಗಲ್ಲ, ಅವರು ಹೂಜೀನ ತಲೆಯಮೇಲೆ ಕುಕ್ಕಿಕೊಂಡು ಆತ್ಮಹತ್ಯೆ ಮಾಡಿಕೊಂಡರು!" ಜ್ವಾಲಾಪ್ರಸಾದ ನಿಷ್ಠುರನಾಗಿ ಹೇಳಿದ, "ಈ ವಿಷಯ ನಿಮ್ಮೆಲ್ಲರಿಗೂ ಗೊತ್ತೇ ಇದೆ. ಅವರು ತಮ್ಮ ತಲೆಯ ಮೇಲೆ ಹೂಜೀನ ಕುಕ್ಕಿಕೊಂಡದ್ದು ಕೋಪದ ಹುಚ್ಚಿನಲ್ಲಿ; ಕೋಪ ಯಾಕೆ ಬಂದಿತ್ತು ಅಂದರೆ ನಾನು ನಿಮ್ಮಗಳ ಮೋಸದ ಬಲೇಲಿ ಸೇರಿ ಸುಳ್ಳು ಹೇಳೋಕ್ಕೆ ತಯಾರಿರಲಿಲ್ಲ ಅಂತ."

"ಆದದ್ದು ಆಗಿಹೋಯಿತು. ಆ ವ್ಯಾಜ್ಯದಲ್ಲಿ ನಮಗೆ ಸೋಲಾಯಿತು. ಈಗ ಆ ಮಾತೆತ್ತಿ ಏನು ಪ್ರಯೋಜನ? ನಿನ್ನನ್ನು ಬಲಾತ್ಕಾರ ಮಾಡಿದ್ದು ಅಣ್ಣನ ತಪ್ಪು."

"ಚಾಚಾ, ಆ ವಿಷಯವಿನ್ನೂ ಮುಗಿದಿಲ್ಲ. ಸರೋಹನ್ನಿನ ರಾಜಾಸಾಹೇಬರು ಬಿಜ್ನೂಗ್ರಾಮದ ಕ್ರಯಪತ್ರಾನ ಶ್ಯಾಮಲಾಲನ ಹೆಸರಿಗೆ ಮಾಡಿದಾರಲ್ಲ, ಅದಕ್ಕೆ ಯಾರು ಬಲಿಯಾಗ್ತಾರೆ ಅಂತ ನಾನು ಕೇಳ್ತೀನಿ."

"ಆ ಕ್ರಯಪತ್ರಕ್ಕೂ ನಿನಗೂ ಏನು ಸಂಬಂಧ ? ರಾಜಾಸಾಹೇಬರುಂಟು, ಶ್ಯಾಮ

ಲಾಲನುಂಟು. ಅದರಲ್ಲಿ ಸುಳ್ಳು ಹೇಳು ಅಂತ ನಿನ್ನನ್ನ ಯಾರು ಕೇಳಿದರು? ಯಾವ ಗೊಂದಲವೂ ಇಲ್ಲದೆ ಜಮೀನು ತಾನೇ ತಾನಾಗಿ ಕೈಗೆ ಬರುತ್ತೆ. ಮನೆಗೆ ಬರೋ ಲಕ್ಷ್ಮೀನ ನಿರಾಕರಿಸಬಾರದು ಅಂತ ಶಾಸ್ತ್ರಗಳಲ್ಲಿ ಬರೆದಿದೆ."

ಜ್ವಾಲಾಪ್ರಸಾದ ಇನ್ನೂ ಏನನ್ನೋ ಹೇಳುವುದರಲ್ಲಿದ್ದ, ಆದರೆ ಅಷ್ಟಕ್ಕೇ ನಿಲ್ಲಿಸಿದ. ಸರಾಫ್ ದೇವೀದಯಾಳ ಹದಿನಾರು ಕಾಲುಚೈನಿನ ಕೊಂಡಿ, ಲೆಕ್ಕದ ಪಟ್ಟಿಗಳನ್ನು ಹಿಡಿದು ಕೊಂಡು ದಿವಾನಖಾನೆಯ ಮುಂದೆ ನಿಂತಿದ್ದ. ಜ್ವಾಲಾಪ್ರಸಾದ ಹೊರಗೆ ನೋಡುತ್ತ ಹೇಳಿದ, "ಯಾರು, ದೇವೀದಯಾಳ್? ಒಳಗೆ ಬಾ."

ಜ್ವಾಲಾಪ್ರಸಾದ ದೇವೀದಯಾಳನಿಂದ ಎಳೆಗಳನ್ನು ಇಸಕೊಳ್ಳುತ್ತ 'ಭೀಖೂ' ಎಂದು ಕೂಗಿದ. ಆಕಸ್ಮಾತ್ತಾಗಿ ದಿವಾನಖಾನೆಯ ಹತ್ತಿರದಲ್ಲೇ ನಿಂತಿದ್ದ ಭೀಖೂ ಒಳಗೆ ಬಂದು 'ಏನಣ್ಣ' ಅಂದ. ಕೊಂಡಿಗಳನ್ನು ಭೀಖುವಿನ ಕೈಗೆ ಕೊಡುತ್ತ ಜ್ವಾಲಾ ಪ್ರಸಾದ ಹೇಳಿದ, "ಈ ಕೊಂಡಿಗಳನ್ನ ತೊಗೊಂಡುಹೋಗಿ ನಿಮ್ಮ ಅತ್ತಿಗೆಗೆ ಕೊಡು. ಹಾಗೇ ರಾಮೂ ಅಣ್ಣನ್ನ ಇಲ್ಲಿ ಕಳಿಸು. ನಾನು ಕರೀತಿದೀನಿ ಅಂತ ಹೇಳು."

ಮುನಿಷಿ ರಾಧೇಲಾಲನಿಗೆ ಏನೋ ಅನುಮಾನ ಬಂತು. "ಯಾಕೆ, ಏನು ಸಮಾಚಾರ?" ಎಂದು ಕೇಳಿದ.

"ರಾಮೂದಾದಾ ಸರಾಫ್ ದೇವೀದಯಾಳನಿಂದ ಒಂದಿಷ್ಟು ಒಡವೆ ಮಾಡಿಸಿ ದಾನೆ. ಇದು ಅದರ ಲೆಕ್ಕ," ಜ್ವಾಲಾಪ್ರಸಾದ ಶಾಂತವಾಗಿ ಹೇಳಿದ.

ರಾಧೇಲಾಲ ಈಗ ದೇವೀದಯಾಳನ ಕಡೆ ತಿರುಗಿದ, "ಏನ್ರೀ, ಇದು ರಾಮಲಾಲನ ಸ್ವಂತ ಲೆಕ್ಕ. ತಹಸೀಲದಾರ ಸಾಹೇಬರಿಗೂ ಈ ಲೆಕ್ಕಕ್ಕೂ ಏನು ಸಂಬಂಧ?"

ದೇವೀದಯಾಳ ಉತ್ತರ ಕೊಡುವ ಮೊದಲೇ ಜ್ವಾಲಾಪ್ರಸಾದ ಹೇಳಿದ, "ದೇವೀ ದಯಾಳ ರಾಮೂದಾದನ್ನ ಏನು ಬಲ್ಲ? ಅವನಿಗೆ ಗೊತ್ತಿರೋದು ಅಂದರೆ ನಾನು. ಅವನು ಕೊಡೋದು–ತೊಗೋಳೋದೇನಿದ್ರೂ ತಹಸೀಲದಾರರ ಮನೆಯ ಲೆಕ್ಕದಲ್ಲಿ; ಅದರ ಜವಾಬ್ದಾರಿ ನನ್ನದು. ಅಲ್ಲದೆ ಈ ಲೆಕ್ಕಾನ ಅವನು ತಾನಾಗಿಯೇ ತರಲಿಲ್ಲ; ನಾನೇ ಕೇಳಿ ತರಿಸಿಕೊಂಡೆ." ಹೀಗಂದು ಜ್ವಾಲಾಪ್ರಸಾದ ಲೆಕ್ಕದ ಪಟ್ಟಿಯ ಕಡೆ ಕಣ್ಣಾಡಿಸಿದ.

ಈ ಹೊತ್ತಿಗೆ ರಾಮಲಾಲ ಕೋಣೆಯೊಳಕ್ಕೆ ಬಂದ. ದೇವೀದಯಾಳನನ್ನು ನೋಡಿದವನೇ ರಾಮಲಾಲ ಹೇಳಿದ, "ಏನು ಲಾಲ? ತಹಸೀಲದಾರ ಸಾಹೇಬರ ಹತ್ತಿರ ಈ ಲೆಕ್ಕಾನ ಯಾಕೆ ತಂದೆ? ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇರಲಿಲ್ಲವೇ?"

ಜ್ವಾಲಾಪ್ರಸಾದ ಲೆಕ್ಕದ ಪಟ್ಟಿಯನ್ನು ಗಟ್ಟಿಯಾಗಿ ಓದಿದ, "ಕಾಲುಬಳೆ, ಒಂದು ಜೊತೆ, ನೂರಿಪ್ಪತ್ತು ರೂಪಾಯಿ ತೂಕ; ಅಡ್ಡಿಕೆ ನಲವತ್ತೈದು ರೂಪಾಯಿ ತೂಕ; ಬೆಳ್ಳಿಯ ಕಾಲುಚೈನು ನಲವತ್ತು ರೂಪಾಯಿ ತೂಕ; ಉಳಿದ ಬೆಳ್ಳಿ ನೂರಿಪ್ಪತ್ತೈದು ರೂಪಾಯಿ ತೂಕ, ಬೆಲೆ ಎಪ್ಪತ್ತೈದು ರೂಪಾಯಿ; ಮಜೂರಿ ಕಾಲುಬಳೆ ಹಾಗೂ

ಅಡ್ಡಿಕೆ ರೂಪಾಯಿ ತೂಕಕ್ಕೆ ಎರಡಾಣೆಯಂತೆ ಇಪ್ಪತ್ತು ರೂಪಾಯಿ ಹತ್ತಾಣೆ. ಒಟ್ಟು ಎಲ್ಲಾ ಸೇರಿ ತೊಂಬತ್ತೈದು ರೂಪಾಯಿ ಹತ್ತಾಣೆ. ಜ್ವಾಲಾಪ್ರಸಾದ ದೇವೀದಯಾಳನ ಕಡೆ ನೋಡಿದ, "ಗುಂಡಿನ ಸರದ ಲೆಕ್ಕ ಯಾಕಯ್ಯ ಇದರಲ್ಲಿ ಬರೆದಿಲ್ಲ?"

ದೇವೀದಯಾಳ ಉತ್ತರಿಸಿದ, "ಹುಜ್ಜೂರ್, ಗುಂಡಿನ ಸರ ಸಂಜೆ ಹೊತ್ತಿಗೆ ತಯಾರಾಗುತ್ತೆ, ನಾಳೆ ಬಿಲ್ಲಿನ ಜೊತೆ ಅದನ್ನೂ ತರ್ತೀನಿ. ಸುಮಾರು ಅರವತ್ತು ರೂಪಾಯಿ ಆಗುತ್ತೆ ಅದರದ್ದು."

"ಒಳ್ಳೇದು, ನೀನಿನ್ನು ಹೋಗು. ಗುಂಡಿನ ಸರಾನ್ನೂ ಅದರ ಬಿಲ್ಲನ್ನೂ ನಾಳೆ ಬೆಳಗ್ಗೆ ಕಳಿಸಿಕೊಡು."

ದೇವೀದಯಾಳ ಹೋದಮೇಲೆ ಜ್ವಾಲಾಪ್ರಸಾದ ರಾಮಲಾಲನಿಗೆ ಹೇಳಿದ, "ಎಲ್ಲಾ ಸೇರಿ ಒಟ್ಟು ನೂರೈವತ್ತೈದು ರೂಪಾಯಿ ಹತ್ತಾಣೆ ಆಗುತ್ತೆ. ನಾಳೆ ಬೆಳಗ್ಗೆ ದೇವೀದಯಾಳನಿಗೆ ಪಾವತಿ ಮಾಡಬೇಕಾಗಿದೆ. ನೂರೈವತ್ತೈದು ರೂಪಾಯಿ ಇಲ್ಲಿ ತಾ."

ರಾಮಲಾಲ ತಂದೆಯ ಕಡೆ ನೋಡಿದ. ರಾಧೇಲಾಲ ಉತ್ತರಿಸಿದ, "ರಾಮೂ ಹತ್ತಿರ ಹಣ ಎಲ್ಲಿದೆ? ಅವನು ದೇವೀದಯಾಳನಿಗೆ ತನ್ನ ಪೂರ್ತಿಸಂಬಳ, ಅಂದರೆ ತಿಂಗಳಿಗೆ ಹನ್ನೆರಡು ರೂಪಾಯಿನಂತೆ, ಕೊಟ್ಟು ತೀರಿಸ್ತಾನೆ. ಒಂದು ವರ್ಷದ ಹೊತ್ತಿಗೆ ಹಣಸಂದಾಯವಾಗುತ್ತೆ."

"ಆದರೆ ಅವನಿಗೆ ಕೆಲಸ ಎಲ್ಲಿದೆ?" ಜ್ವಾಲಾಪ್ರಸಾದ ಕೇಳಿದ.

"ಒಂದೆರಡು ದಿನದಲ್ಲಿ ಕೆಲಸದ ಆರ್ಡರ್ ಬರೋದಿದೆ," ರಾಮಲಾಲ ಹೇಳಿದ.

"ಆ ಆರ್ಡರ್ ಎಂದೆಂದಿಗೂ ನಿನ್ನ ಕೈಗೆ ಬರೋದಿಲ್ಲ. ನಾಳೆ ಸಾಯಂಕಾಲ ನೀನು ಫತಹಪುರಕ್ಕೆ ಹೊರಡಬೇಕು, ಗೊತ್ತಾಯ್ತೆ—ಹೆಂಡತಿ, ಮಕ್ಕಳ ಸಮೇತ. ಹೋಗಿ ಇರೋ ಕೆಲಸ ಕಾಪಾಡಿಕೊ."

ಜ್ವಾಲಾಪ್ರಸಾದನ ಮಾತನ್ನು ಕೇಳಿ ಮುನಿಷಿ ರಾಧೇಲಾಲ ಸ್ತಂಭಿತನಾದ. ರಾಮಲಾಲನಿಗಾದರೋ ಜ್ವಾಲಾಪ್ರಸಾದನ ಈ ವರ್ತನೆ ಕಂಡು ಕೋಪ ಬಂತು, "ಅಂದರೆ ಇದರ ಅರ್ಥ ನೀನು ನನ್ನನ್ನೂ ನನ್ನ ಹೆಂಡತಿಮಕ್ಕಳನ್ನು ಮನೆಬಿಟ್ಟು ಹೊರಕ್ಕೆ ಕಳಿಸ್ತಿದಿ ಅಲ್ಲವೆ!"

ಜ್ವಾಲಾಪ್ರಸಾದ ಉದ್ವೇಗದಿಂದ ಹೇಳಿದ, "ಮನೆಬಿಟ್ಟು ಹೊರಕ್ಕೆ ಕಳಿಸ್ತಿದೀನಿ ಅಂತ ನೀನು ತಿಳಕೊಳ್ತಿದಿ, ನಿಮ್ಮನ್ನ ನಿಮ್ಮ ಸ್ವಸ್ಥಾನಕ್ಕೆ ಕಳಿಸ್ತಿದೀನಿ ಅಂತ ನಾನು ತಿಳಕೊಂಡಿದೀನಿ. ನಿನಗೆ ಫತಹಪುರದಲ್ಲಿ ಕೆಲಸ ಇದೆ; ಶ್ಯಾಮಲಾಲನ ಹತ್ತಿರ ಸಾಕಷ್ಟು ಜಮೀನು–ಆಸ್ತಿ ಇದೆ; ಚಾಚಾಜಿ ಮನೆಯ ವ್ಯವಹಾರಾನೆಲ್ಲಾ ನೋಡಿಕೋತಾರೆ. ಕಿಶನಲಾಲನಿಗೆ ಮದುವೆಮಾಡಿ ಅವನನ್ನು ನಿಮ್ಮಗಳ ಮೇಲ್ವಿಚಾರಣೇಲಿ ಸರಿಯಾದ ದಾರಿಗೆ ತನ್ನಿ."

ರಾಧೇಲಾಲ ಏಕಾಏಕಿ ಅರಚಲಾರಂಭಿಸಿದ, "ಓ ಅಣ್ಣ, ಕೇಳ್ತಿದೀಯಾ? ನಮ್ಮನ್ನ

ಈ ನರಕದಲ್ಲಿ ಇರೋಕ್ಕೆ ಬಿಟ್ಟು ನೀನು ಹೋಗಿ ಸ್ವರ್ಗ ಸೇರಿಕೊಂಡೆ. ಈ ಜ್ವಾಲಾ ಹಾಳಾಗಿ ಹೋಗ್ತಾನೆ, ಇವನದೆಲ್ಲಾ ಸತ್ಯನಾಶವಾಗಿ ಹೋಗುತ್ತೆ," ಹೀಗನ್ನುತ್ತ ರಾಧೇ ಲಾಲ ತನ್ನ ಎರಡೂ ಕೈಗಳಿಂದ ತಲೆತಲೆ ಬಡಿದುಕೊಳ್ಳಲಾರಂಭಿಸಿದ.

ಮನೆಯಲ್ಲಿ ಎಲ್ಲೆಲ್ಲೂ ಅವನ ಬೊಬ್ಬೆಯೇ ತುಂಬಿಕೊಂಡಿತು. ಮೂಲೆಮೂಲೆ ಗಳಿಂದ ಜನ ಬಂದು ಗುಂಪುಗೂಡಿದರು. ಗುಂಪು ದೊಡ್ಡದಾದಂತೆಲ್ಲಾ ರಾಧೇಲಾಲನ ಬೈಗಳವೂ ಹೆಚ್ಚುತ್ತ ಹೋಯಿತು. ಆ ಹೊತ್ತಿಗೆ ಜೈದೇಯಿ ಜ್ವಾಲಾಪ್ರಸಾದನ ದಿವಾನಖಾನೆಯೊಳಕ್ಕೆ ಬಂದಳು. ಅವನ ಕೈ ಹಿಡಿದು ಎಬ್ಬಿಸಿ, "ಈ ಜಾಗ ಬಿಟ್ಟು ನಡಿ, ದೇವರ್‌ಜೀ. ಅವರು ಅರಚಾಡಲಿ" ಅಂದಳು. ಜ್ವಾಲಾಪ್ರಸಾದ ತನ್ನ ಕೋಣೆಗೆ ಹೋಗಿ ಒಳಗಿನಿಂದ ಅಗಳಿ ಹಾಕಿಕೊಂಡ. ಆದರೆ ಇದು ಯಾವದರಿಂದಲೂ ರಾಧೇಲಾಲನ ಅರಚಾಟ ಬೈಗಳಗಳು ಕಡಿಮೆಯಾಗಲಿಲ್ಲ. ರಾಧೇಲಾಲನ ಜತೆಗೆ ರಾಮಲಾಲನೂ ದನಿಗೂಡಿಸಿದ. ಇಬ್ಬರೂ ಬಯ್ಯಲಾರಂಭಿಸಿದರು.

ಭೀಖೂ ಹತ್ತು ಹದಿನೈದು ನಿಮಿಷ ಮೌನವಾಗಿ ನಿಂತು ಈ ತಮಾಷೆಯನ್ನು ನೋಡುತ್ತಿದ್ದ. ಅವನಿಗೆ ತಡೆಯಲಾಗಲಿಲ್ಲ. ಮುನ್ನುಗ್ಗಿ ರಾಮಲಾಲನ ರಟ್ಟೆ ಹಿಡಿದುಕೊಂಡು ಹೇಳಿದ, "ನಿಮ್ಮಪ್ಪನ್ನೂ ಕರಕೊಂಡು ಮನೆಯ ಒಳಕ್ಕೆ ನಡಿ. ಇಲ್ಲಿ ಈ ನಾಟಕ ಆಡೋದರಿಂದ ಏನೂ ಪ್ರಯೋಜನವಾಗೋಲ್ಲ."

ರಾಮಲಾಲ ಭೀಖುವನ್ನು ಯದ್ವಾತದ್ವಾ ಬಯ್ಯುತ್ತ ತನ್ನ ಧ್ವನಿಯನ್ನು ಇದ್ದಿದ್ದೂ ಏರಿಸಿದ. ಭೀಖುವಿಗೂ ರೇಗಿತು. ಅವನು ಹೇಳಿದ, "ಬಾಯಿ ಮುಚ್ಚಿಕೊಂಡು ಒಳಗೆ ಹೋಗ್ತಿಯೋ, ಇಲ್ಲವೇ ಆಳಿಗೆ ಹೇಳಿ ನಿನಗೆ ಬುದ್ಧಿ ಕಲಿಸಲೊ? ಅಣ್ಣನ ಅನ್ನ ತಿಂದು, ಅವನನ್ನೇ ಬೈತೀಯಾ! ಎಲ್ನೋ ನಮಕ್ ಹರಾಮ್ ಇದಿ ನೀನು."

ವಾಸ್ತವವಾಗಿ ಭೀಖುವಿನ ಹಿಂದೆ ತಹಸೀಲಿನ ಇಬ್ಬರು ಜವಾನರು ನಿಂತಿದ್ದುದು ರಾಧೇಲಾಲನ ಗಮನಕ್ಕೆ ಬಂತು. ರಾಧೇಲಾಲ ಮಗನ ಕೈ ಹಿಡಿದುಕೊಂಡು ಹೇಳಿದ, "ನಡೀ ರಾಮು, ಕತೆ ಇನ್ನೂ ಮುಗಿದಿಲ್ಲ. ಇವನು ಈ ಅಯೋಗ್ಯರನ್ನ ಬಿಟ್ಟು ನಮಗೆ ಹೊಡಸ್ತಾನೆ. ನಡೀ, ಇವತ್ತೇ ಇಲ್ಲಿಂದ ಹೋಗೋಣ. ಈ ಪಾಪಿಯ ಮನೇಲಿ ಇನ್ನು ಎಂದೆಂದಿಗೂ ಅನ್ನ ನೀರು ಮುಟ್ಟೋದು ಬೇಡ. ನಿಮ್ಮ ಅಮ್ಮನಿಗೂ ಸೊಸೇರಿಗೂ ಸಾಮಾನು ಕಟ್ಕೋಕ್ಕೆ ಹೇಳು. ಹೋಗಿ ಶಾಮೂ ಕಿಶನೂ ಎಲ್ಲಿದಾರೆ ಅಂತ ಹುಡು ಕ್ಕೊಂಡು ಬಾ." ಹೀಗನ್ನುತ ರಾಧೇಲಾಲ ರಾಮಲಾಲನ ಸಂಗಡ ಮನೆಯೊಳಗೆ ಹೋದ.

ರಾಧೇಲಾಲ, ರಾಮಲಾಲರು ಮನೆಯೊಳಗೆ ಹೋದಮೇಲೆ ಮನೆಯ ಹೊರಗಿನ ಗಲಭೆ ನಿಂತಿತು; ಆದರೆ ಮನೆಯೊಳಗಿನ ಗಲಭೆ ಹೆಚ್ಚಾಯಿತು. ಸಾಮಾನುಗಳನ್ನು ಎತ್ತಿ ಕುಕ್ಕುವುದು, ಬೈಗಳದ ಸುರಿಮಳೆ ಒಂದೇ ಸಮನೆ ನಡೆದೇ ಇತ್ತು. ಇದೆಲ್ಲವನ್ನೂ ನೋಡಿ ಬೇಸತ್ತು ಜೈದೇಯಿ ಜ್ವಾಲಾಪ್ರಸಾದನಿಗೆ ಹೇಳಿದಳು, "ದೇವರ್‌ಜೀ, ನೀನು ಎಲ್ಲಿಗಾದರೂ ಹೋಗಿ ಬಾ! ಇಲ್ಲಿಯ ಸ್ಥಿತಿ ಇದ್ದಿದ್ದೂ ಹದಗೆಡ್ತಿದೆ."

"ಆದರೆ ಊಟತಿಂಡಿಗೆ ಏನು ಮಾಡೋದು, ಅತ್ತಿಗೆ?" ಜ್ವಾಲಾಪ್ರಸಾದ ಕೇಳಿದ.

"ಊಟತಿಂಡಿಯ ವಿಷಯದಲ್ಲಿ ಇವತ್ತು ಏಕಾದಶಿ ಅಂದುಕೋ," ಜೈದೇಯಿ ನಗುತ್ತ ಹೇಳಿದಳು, "ಎಂದೆಂದಿಗೂ ಗೋಳು ಕಳೆಯೋದಾದರೆ ಒಂದು ದಿನ ಉಪವಾಸ ಮಾಡಿದರೆ ತಾನೇ ಏನು ನಷ್ಟ! ಅಲ್ಲದೆ ಇವತ್ತು ಮನೆಯೋರಿಗೆಲ್ಲಾ ಉಪವಾಸವೇ."

ಜ್ವಾಲಾಪ್ರಸಾದನ ಮುಖದಲ್ಲಿಯೂ ನಗೆ ಮೂಡಿತು. "ಇಲ್ಲ, ಅತ್ತಿಗೆ. ಅಂಥ ಉಪವಾಸ ಮಾಡಿ ತಾನೇ ಏನು ಪ್ರಯೋಜನ?" ಎಂದು ಯಮುನಳಿಗೆ "ನೀನೂ, ಛಿನಕೀ ಅಂಗಳಕ್ಕೆ ಹೋಗಿ ನೋಡಿಬನ್ನಿ, ಏನು ನಡೀತಿದೆ ಅಂತ. ಇಲ್ಲವೇ, ನೀನೂ ಇವರ ಜೊತೆ ಹೋಗು, ಅತ್ತಿಗೆ. ಅಷ್ಟುಹೊತ್ತಿಗೆ ದಿವಾನಖಾನೆಗೆ ಹೋಗಿ ಇವತ್ತಿನ ಟಪಾಲು ನೋಡಿಬರ್ತೀನಿ." ಜ್ವಾಲಾಪ್ರಸಾದ ದಿವಾನಖಾನೆಗೆ ಎದ್ದುಹೋದ.

ಅಡಿಗೆಮನೆಯಲ್ಲಿ ಶ್ಯಾಮಲಾಲನ ಹೆಂಡತಿ ನಿರ್ಲಿಪ್ತಳಾಗಿ ಅಡಿಗೆಮಾಡುತ್ತಿದ್ದಳು. ಅತ್ತು ಕರೆದು ಗೋಳು ಹೊಯ್ಯುತ್ತಿದ್ದವರೆಂದರೆ ರಾಧೇಲಾಲ, ರಾಮಲಾಲನ ಹೆಂಡತಿ ಯರೇ. ಮುನಿಷಿ ರಾಧೇಲಾಲ ಅರಚಾಡುತ್ತಿದ್ದ, "ಇಲ್ಲ, ನಾನು ಊಟಮಾಡೋಲ್ಲ. ನೀರನ್ನೂ ಮುಟ್ಟೋಲ್ಲ. ಹಸಿಕೊಂಡಿದ್ದು ಇಲ್ಲೇ ಪ್ರಾಣ ಬಿಡ್ತೀನಿ. ಇವನು ಅಣ್ಣನ ಪ್ರಾಣ ತೊಗೊಂಡ; ನಾನೂ ಇವನ ಕೈಯಲ್ಲೇ ಸಾಯ್ತೀನಿ. ತಾನೇ ಅನುಭವಿಸಲಿ ತನ್ನ ತಹಸೀಲದಾರಿಕೇನ, ರಾಜಪಟ್ಟಾನ, ಆಫೀಸರ್‌ಗಿರೀನ! ನರಕದಲ್ಲಿ ಸಹ ಇವನಿಗೆ ಜಾಗ ಸಿಗೋಲ್ಲ!"

ಛಿನಕಿಗೆ ತಡೆಯಲಾಗಲಿಲ್ಲ, ಮುನಿಷಿ ರಾಧೇಲಾಲನ ಮುಂದೆ ಬಂದು ನಿಂತು ಕೊಂಡು ಹೇಳಿದಳು, "ಪ್ರಾಣ ಬಿಡೋದಾದರೆ ಈಗಲೇ ಬಿಡು. ಹೀಗೆಲ್ಲಾ ಬೈಗಳ ಬೊಗಳೋದರಿಂದ ಪ್ರಾಣ ಹೋಗೋದಿಲ್ಲ. ಹೀಗೆಲ್ಲಾ ಆಡಿದ್ದರಿಂದಲೇ ನೀನು ಇಂಥಾ ದಿನ ನೋಡಬೇಕಾಗಿ ಬಂದದ್ದು. ನಾಚಿಕೆ ಇದ್ದರೆ, ಗಂಡಸಾದರೆ ಬಿಡೂ ಪ್ರಾಣಾನ. ನಾವೂ ಸ್ವಲ್ಪ ನೋಡೋಣ ಅದು ಹೇಗೆ ಪ್ರಾಣ ಬಿಡ್ತೀ ಅಂತ."

ಮಾತು ತುಂಬ ಮುಂದೆ ಹೋದದ್ದಷ್ಟೇ ಅಲ್ಲ, ಇನ್ನು ತಮ್ಮ ಆಟ ಮುಗಿಯಿತು ಎಂದು ರಾಧೇಲಾಲನ ಪತ್ನಿಗೆ ಅನ್ನಿಸಿತು. ಮುನಿಷಿ ರಾಧೇಲಾಲ ಜೋರುಜೋರಾಗಿ ಅರಚುತ್ತ ಛಿನಕಿಗೆ ಬಯ್ಯಲಾರಂಭಿಸಿದ. ರಾಧೇಲಾಲನ ಹೆಂಡತಿ ಕಣ್ಣೀರು ಒರಸಿ ಕೊಳ್ಳುತ್ತ ಹೇಳಿದಳು, "ಏನೇ ಛಿನಕೀ, ಚಿಕ್ಕಯಜಮಾನರ ಮೇಲೆ ಬಾಯಿ ಮಾಡೋ ಅಷ್ಟು ನಿನಗೆ ಧೈರ್ಯ ಬಂತೇನೆ, ಈಗ!"

"ಯಾಕೆ, ಇವರನ್ನ ಕಂಡರೆ ನನಗೇನು ಹೆದರಿಕೆಯೆ? ಇವರೇನು ನನಗೆ ಅನ್ನಬಟ್ಟೆ ಕೊಟ್ಟಿದ್ದಾರೆಯೆ? ನಾನು ನನ್ನ ಮಗನ ಮನೇಲಿದೀನಿ ಅಂದಮೇಲೆ ನಾನೇಕೆ ಸುಮ್ಮ ನಿರಬೇಕು? ಜ್ವಾಲನ ಎದೆಮೇಲೆ ಗಾಣ ಅರೆಯೋಕ್ಕೆ ನೋಡ್ತೀರಾ? ಇನ್ನು ಅದೆಲ್ಲಾ ನಡೆಯೋಲ್ಲ. ಮನೆಮಠ ಇದೆ, ಅಲ್ಲಿ ಹೋಗಿ ಇರಿ ಅಂದ ಜ್ವಾಲಾ. ಅವನು ಆಡಬಾರದ್ದನ್ನ ಏನು ಆಡಿದಾ? ಜಮೀನು ತೆಕ್ಕೊಟ್ಟಿದ್ದಾನೆ, ಎಲ್ಲಾತರಹದ ಸಹಾ

ಯಾನೂ ಮಾಡ್ತಿದಾನೆ. ಇಷ್ಟಾದರೂ ತೃಪ್ತಿಯಿಲ್ಲ. ಅವನ ಪ್ರಾಣ ತೊಗೋಳೋಕ್ಕೆ ಪಣ ತೊಟ್ಟಿದೀರಿ! ಇನ್ನು ಅದೆಲ್ಲಾ ನಡೆಯೋಲ್ಲ."

ರಾಧೇಲಾಲನ ಹೆಂಡತಿ ಗಂಡನ ಬಾಯಿ ಮುಚ್ಚಿಸಿದಳು, "ಹೀಗೆ ಕೂಗಾಡೋ ದರಿಂದ ಏನೂ ಸಾಧಿಸೋಲ್ಲ. ಫತಹಪುರಕ್ಕೆ ಹೋಗೋ ತಯಾರಿ ಮಾಡಬೇಕಾಗಿದೆ. ಸ್ವಲ್ಪ ಹುಷಾರಾಗಿ ಎಲ್ಲಾನ್ನೂ ಸಿದ್ಧತೆ ಮಾಡಿ. ಹೀಗೆ ಪ್ರಾಣ ಬಿಡೋದರಿಂದ ಏನು ಲಾಭ?"

ರಾಧೇಲಾಲ ಗುಡುಗಿದ, "ಅಷ್ಟು ಸುಲಭವಾಗಿ ನಾನು ಪ್ರಾಣ ಬಿಡ್ತೀನೆ? ಇವತ್ತು ಸಾಯಂಕಾಲದೊಳಗೆ ನಾವು ಈ ಪಾಪಿಯ ಮನೆ ಬಿಡಬೇಕು. ಇನ್ನು ಈ ಮನೇಲಿ ನಾನು ಅನ್ನ ನೀರು ಮುಟ್ಟೋದಿಲ್ಲ; ನಿಮಗೂ ಮುಟ್ಟಗೊಡಿಸೋದಿಲ್ಲ. ಶ್ಯಾಮೂ ಹೆಂಡತಿಗೆ ಅಡಿಗೆಮನೆ ಬಿಟ್ಟು ಬಾ ಅಂತ ಹೇಳು."

ಶ್ಯಾಮಲಾಲನ ಹೆಂಡತಿ ಬೇಗಬೇಗನೆ ರೊಟ್ಟಿ ಸುಡುತ್ತಿದ್ದಳು. ರಾಧೇಲಾಲನ ಹೆಂಡತಿಯ ಅಪ್ಪಣೆಯಾಗುವ ಮೊದಲೇ ಅವಳು ಯಮುನಳ ಕಿವಿಯಲ್ಲಿ ಉಸುರಿದಳು, "ಅಡಿಗೆ ಮಾಡಿ ಮುಗಿಸಿದೀನಿ, ಅಕ್ಕ. ನೀನು ಯೋಚನೆ ಮಾಡಬೇಡ. ಇನ್ನು ಫತಹಪುರಕ್ಕೆ ಹೊರಡೋ ತಯಾರಿ ಮಾಡಬೇಕು."

ಯಮುನಳಿಗೆ ಇದ್ದಕ್ಕಿದ್ದಂತೆ ಶ್ಯಾಮಲಾಲನ ಹೆಂಡತಿಯ ಕಾಲುಚೈನಿನ ನೆನಪಾಯಿತು. ಅವಳಂದಳು, "ನಿನ್ನ ಕಾಲುಚೈನು ತಯಾರಾಗಿ ಬಂದಿದೆ. ಸ್ವಲ್ಪತಾಳು, ತಂದು ಕೊಡ್ತೀನಿ."

ಅದೇಹೊತ್ತಿಗೆ ರಾಧೇಲಾಲನ ಹೆಂಡತಿ ಅಡಿಗೆಮನೆಯ ಬಾಗಿಲಬಳಿ ಕಾಣಿಸಿ ಕೊಂಡಳು. "ಏಳೇ ನಡುಕಲಿ, ಎದ್ದು ನಿನ್ನ ಸಾಮಾನು ಕಟ್ಟು. ಅಡಿಗೆಮನೆ ಬಿಟ್ಟು ಬಾ," ಎಂದವಳೇ ಹಾಗೆಯೇ ವಾಪಸು ಹೋದಳು.

ಶ್ಯಾಮಲಾಲನ ಹೆಂಡತಿ ಯಮುನಳ ದಾರಿ ನೋಡಹತ್ತಿದಳು. ಯಮುನಾ ಹದಿನಾರು ಕೊಂಡಿಯ ಕಾಲುಚೈನನ್ನು ತಂದು ಕೈಗಿತ್ತಾಗ ಅವಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಬೇಗಬೇಗನೆ ಕಾಲುಚೈನನ್ನು ತೊಡುತ್ತ ಅವಳಂದಳು, "ಬಿಡಕ್ಕ, ಈ ಜನರ ಕೈಯಿಂದ ನಿನ್ನ ಪ್ರಾಣ ಉಳೀತು."

ರಾಧೇಲಾಲನ ಹೆಂಡತಿಯ ಧ್ವನಿ ಮತ್ತೆ ಕೇಳಿಸಿತು, "ಏನೇ ನಡುಕಲಿ, ಏನು ಮಾಡ್ತಿದಿ? ಅಡಿಗೆಮನೆ ಬಿಟ್ಟು ಬಾ, ಸಾಮಾನು ಕಟ್ಟಬೇಕು ಅಂತ ಹೇಳಲಿಲ್ಲವೇ?"

ಶ್ಯಾಮಲಾಲನ ಹೆಂಡತಿ ಅಲ್ಲಿಂದಲೇ "ಇನ್ನೇನು ಬಂದೆ, ಅಮ್ಮಾಜಿ. ಕೊಂಚ ಕೈಕಾಲು ತೊಳಕೋತಿದೀನಿ" ಎಂದು ಹೇಳಿ ಯಮುನಳ ಜೊತೆ ಮಾತು ಮುಂದುವರಿಸಿ ದಳು, "ಏನು ಹೇಳಲಕ್ಕ? ನಿನ್ನನ್ನು ಬಿಟ್ಟು ಹೋಗೋಕ್ಕೆ ಮನಸ್ಸಿಗೆ ತುಂಬ ವ್ಯಥೆ ಯಾಗುತ್ತೆ.ಆದರೆ ನಾವು ಹೋಗೋದರಿಂದ ನಿಮಗೆ ಒಳ್ಳೇದಾಗುತ್ತೆ ಅಂತ ಚೆನ್ನಾಗಿ ಗೊತ್ತು." ಶ್ಯಾಮಲಾಲನ ಹೆಂಡತಿಯ ಕಣ್ಣಲ್ಲಿ ತಾನೇತಾನಾಗಿ ನೀರು ತುಂಬಿತು.

ಶ್ಯಾಮಲಾಲನ ಹೆಂಡತಿಯ ಕಣ್ಣೀರನ್ನು ಕಂಡು ಯಮುನಳ ಅಂತರ್ಯದಲ್ಲಿ ಕರುಣೆ ಚಿಮ್ಮಿ ಹರಿಯಿತು. ಅವಳು ಶ್ಯಾಮಲಾಲನ ಹೆಂಡತಿಯನ್ನು ಅಪ್ಪಿಕೊಂಡಳು. ತನ್ನ ಕಾಲಿನ ಅಂದುಗೆಯನ್ನು ಕಳಚಿ ಶ್ಯಾಮಲಾಲನ ಹೆಂಡತಿಗೆ ಕೊಡುತ್ತ ಹೇಳಿದಳು, "ನಿನಗೆ ನಾನು ಏನು ಒಡವೇನೂ ಮಾಡಿಸಿಕೊಡೋಕ್ಕಾಗಿಲ್ಲ. ಈ ನನ್ನ ಅಂದುಗೆ ತೊಗೊಂಡುಹೋಗು. ನಾನು ಬೇರೆ ಮಾಡಿಸಿಕೋತೀನಿ. ಹುಷಾರಾಗಿ ಇಟ್ಟುಕೊ ಇದನ್ನ. ಈ ಜನ ನಿನಗೆ ಏನಾದರೂ ಕಷ್ಟ ಕೊಟ್ಟರೆ ನನಗೆ ಹೇಗಾದರೂ ಸುದ್ದಿ ತಿಳಿಸು."

ಶ್ಯಾಮಲಾಲನ ಹೆಂಡತಿ ಬೇಗಬೇಗನೆ ಅಂದುಗೆಯನ್ನು ತನ್ನ ಸೀರೆಯ ಸೆರಗಿನಲ್ಲಿ ಕಟ್ಟಿಕೊಂಡಳು. ಬಗ್ಗಿ ಯಮುನಳ ಕಾಲುಮುಟ್ಟಿ ನಮಸ್ಕಾರಮಾಡಿ ಅಲ್ಲಿಂದ ದಡ ದಡನೆ ಹೊರಟುಹೋದಳು.

ಮಧ್ಯಾಹ್ನವಾಯಿತು. ಜ್ವಾಲಾಪ್ರಸಾದನ ಮನೆಯ ಅಂಗಳದಲ್ಲಿ ಸ್ತಬ್ಧತೆ ಕವಿ ದಿತ್ತು. ಮುನಿಷಿ ರಾಧೇಲಾಲ ಹಾಗೂ ಅವನ ಪರಿವಾರದ ಮಂದಿ ಊಟ ಮಾಡಲೇ ಇಲ್ಲ. ದಿವಾನಖಾನೆಯಲ್ಲಿ ಬಂದು ಕುಳಿತರೂ ಜ್ವಾಲಾಪ್ರಸಾದನ ಮನಸ್ಸಿಗೆ ಶಾಂತಿ ಸಿಕ್ಕಿರಲಿಲ್ಲ. ಆದ್ದರಿಂದ ಗಾಡಿಕಟ್ಟಿಸಿಕೊಂಡು ಹತ್ತಿರದ ಒಂದು ಹಳ್ಳಿಗೆ, ಗೆಳೆಯನೊಬ್ಬ ನಲ್ಲಿಗೆ ಹೋಗಿದ್ದವನು ಮಧ್ಯಾಹ್ನದ ಹೊತ್ತಿಗೆ ವಾಪಸು ಬಂದ. ಈ ನಡುವೆ ಶ್ಯಾಮ ಲಾಲ, ಕಿಶನಲಾಲರೂ ಮನೆಗೆ ಬಂದಿದ್ದರು. ಎಲ್ಲರೂ ಸೇರಿ ಸಾಮಾನು ಕಟ್ಟುವುದರಲ್ಲಿ ನಿರತರಾಗಿದ್ದರು.

ಯಮುನಾ ಬಂದು ಜ್ವಾಲಾಪ್ರಸಾದನನ್ನು ಊಟಕ್ಕೆ ಎಬ್ಬಿಸಿದಳು. ಜ್ವಾಲಾ ಪ್ರಸಾದ ಅಡಿಗೆಮನೆಗೆ ಹೋಗಿ ನೋಡಿದಾಗ ಯಮುನಳೊಬ್ಬಳೇ ಅಲ್ಲಿದ್ದುದನ್ನು ಕಂಡ; ಅಂಗಳದಲ್ಲಿ ಮೌನ ಕವಿದಿತ್ತು. "ಉಳಿದವರು? ಏನು, ಅವರು ಊಟ ಮಾಡೋದಿಲ್ಲವೆ?" ಜ್ವಾಲಾಪ್ರಸಾದ ಕೇಳಿದ.

ಯಮುನಾ ಉತ್ತರ ಕೊಡುವ ಮೊದಲೇ ಅಡಿಗೆಮನೆಯ ಬಾಗಿಲಲ್ಲಿ ನಿಂತಿದ್ದ ಛಿನಕಿ ಹೇಳಿದಳು, "ಚಿಕ್ಕಯಜಮಾನರು ಈ ಮನೇಲಿ ಇನ್ನು ಅನ್ನ ಮುಟ್ಟೋಲ್ಲ ಅಂತ ಆಣೆ ಮಾಡಿದಾರೆ. ಬರೀ ತಾವು ಆಣೆ ಮಾಡೋದಷ್ಟೇ ಅಲ್ಲದೆ ಮಕ್ಕಳು–ಸೊಸೇರಿಂದಲೂ ಆಣೆ ಇಡಿಸಿದಾರೆ. ಎಲ್ಲರೂ ಸಾಮಾನು ಕಟ್ತಿದಾರೆ."

ಜ್ವಾಲಾಪ್ರಸಾದ ಬಡಿಸಿದ್ದ ತಟ್ಟೆ ಬಿಟ್ಟೆದ್ದ. ಕೈಬಾಯಿ ತೊಳೆದುಕೊಂಡು ಮುನಿಷಿ ರಾಧೇಲಾಲನ ಕೊಟಡಿಯ ಮುಂದೆ ಬಂದು ನಿಂತುಕೊಂಡ. ರಾಧೇಲಾಲನಿಗೆ ಏನನ್ನೂ ಹೇಳದೆ, ಅವನ ಹೆಂಡತಿಯ ಕಡೆ ತಿರುಗಿ ಹೇಳಿದ, "ಚಿಕ್ಕಮ್ಮ, ನೀವುಗಳು ಈ ಮನೇಲಿ ಊಟ ಮಾಡೋಲ್ಲ ಅಂತ ಆಣೆ ಇಟ್ಟೀದೀರಂತೆ, ಹೌದೆ?"

ಈ ಪ್ರಶ್ನೆಗೆ ಉತ್ತರ ಕೊಟ್ಟವನು ರಾಧೇಲಾಲ, "ಹೌದು, ಇಷ್ಟು ಅವಮಾನ ಮಾಡಿಸಿಕೊಂಡು ಇನ್ನು ನಾವು ಈ ಮನೇಲಿ ಊಟಮಾಡೋದುಂಟೆ! ನಮ್ಮ ಪಾಲಿಗೆ ನೀನು ಸತ್ತುಹೋದೆ."

ಜ್ವಾಲಾಪ್ರಸಾದನ ಹಿಂದೆಹಿಂದೆಯೇ ಬಂದಿದ್ದ ಛಿನಕಿ ಮುಂದೆ ಬಂದು ಅರಚಿದಳು. "ಸತ್ತೋರು ಅಂದರೆ ನೀನು, ನಿನ್ನ ಮಕ್ಕಳು! ಎಲ್ಲೋ ಶನಿ, ನನ್ನ ಮಗನ್ನ ಜೈತಾನ. ದೇವರು ನಿನ್ನ ಹಾಳುಮಾಡ್ತಾನೆ, ನೋಡ್ತಿರು."

"ಛಿನಕೀಚಾಚಿ, ನೀನು ನಡೀ ಇಲ್ಲಿಂದ! ನಿನ್ನ ಬಾಯಿಂದ ಇನ್ನು ಒಂದು ಮಾತು ಬಂದರೆ ನೋಡು. ಹುಷಾರ್!" ಜ್ವಾಲಾಪ್ರಸಾದ ಛಿನಕಿಯನ್ನು ಗದರಿಸಿಕೊಂಡ. ಆಮೇಲೆ ರಾಧೇಲಾಲನ ಹೆಂಡತಿಯ ಕಡೆ ತಿರುಗಿ ಹೇಳಿದ, "ಕೇಳಿದೆಯಾ ಚಿಕ್ಕಮ್ಮ? ನಿಮ್ಮ ಪಾಲಿಗೆ ನಾನು ಸತ್ತಿದೀನಿ. ಇನ್ನು ನಿಮ್ಮ ಸಂಸಾರಾನ, ನಿಮ್ಮ ಮನೆತನಾನ ನೀವು ಕಾಪಾಡಿಕೊಳ್ಳಿ. ಫತಹಪುರದ ಮನೇನೂ ಆಸ್ತಿಪಾಸ್ತೀನೂ ನಾನು ಸತ್ತು ನಿಮ್ಮ ಹೆಸರಿಗೆ ಉಯಿಲು ಬರೆದಿದೀನಿ. ಇನ್ನು ನನಗೂ ಆ ಮನೆ, ಆಸ್ತಿಪಾಸ್ತೀಗೂ ಯಾವ ಸಂಬಂಧವೂ ಇಲ್ಲ."

ಒಮ್ಮಿಂದೊಮ್ಮೆಗೇ ರಾಧೇಲಾಲನ ಹೆಂಡತಿ ಓಡಿಬಂದು ಜ್ವಾಲಾಪ್ರಸಾದನ ಕಾಲಮೇಲೆ ಬಿದ್ದಳು, "ಅಯ್ಯೋ ಮಗು, ಈ ದಿನಾನ ನೋಡೋದು ನಮ್ಮ ಹಣೇಲಿ ಬರೆದಿತ್ತೆ! ನಮ್ಮನ್ನ ಕ್ಷಮಿಸು, ಮಗು. ದೇವರು ನಮಗೆ ಯಾವದೋ ದೊಡ್ಡ ವಿಪತ್ತು ಕೊಡೋನಿದಾನೆ. ಅದಕ್ಕೇ ಇವರ ಬುದ್ಧಿ ಕೆಟ್ಟಿದೆ. ನಿನ್ನನ್ನ ನನ್ನ ಮಗ ಅಂತ ತಿಳಕೊಂಡು ಸಾಕಿ ಬೆಳಸಿದೀನಿ. ನಾನು ಕೇಳಿಕೋತಿದೀನಿ ಅಂತ ಇವರನ್ನ ಕ್ಷಮಿಸಿ ಬಿಡು, ಮಗು." ಹೀಗಂದು ರಾಧೇಲಾಲನ ಹೆಂಡತಿ ಜ್ವಾಲಾಪ್ರಸಾದನ ಕಾಲನ್ನು ಭದ್ರವಾಗಿ ಹಿಡಿದುಕೊಂಡಳು.

ರಾಧೇಲಾಲನ ಹೆಂಡತಿ ಜ್ವಾಲಾಪ್ರಸಾದನನ್ನು ತನ್ನ ಮಗನಂತೆಯೇ ಪಾಲನೆ ಪೋಷಣೆ ಮಾಡಿ ಬೆಳಸಿದ್ದುದು ನಿಜ. ಜ್ವಾಲಾಪ್ರಸಾದನ ಕಣ್ಣಲ್ಲಿ ನೀರು ಮೂಡಿತು. ಬಗ್ಗಿ ಚಿಕ್ಕಮ್ಮನನ್ನು ಮೇಲೆಬ್ಬಿಸುತ್ತ ಹೇಳಿದ, "ರಾಮರಾಮ! ನನ್ನನ್ನ ನರಕಕ್ಕೆ ಯಾಕೆ ಹಾಕ್ತೆ, ಚಿಕ್ಕಮ್ಮ? ಕೋಪದಲ್ಲಿ ನಾನು ಆಡಿದ ಮಾತಿಗೆ ಕ್ಷಮಾಪಣೆ ಕೇಳ್ತೀನಿ. ಚಿಕ್ಕಪ್ಪ, ಈ ಕೋಪದಿಂದ ಏನೂ ಕೆಲಸ ಆಗೋಲ್ಲ. ನಾನು ನಿಮಗೆ ಹೇಳಿದ್ದು ನಿಮ್ಮ ಹಿತದೃಷ್ಟಿಯಿಂದ, ನನ್ನ ಹಿತದೃಷ್ಟಿಯಿಂದ. ಮಕ್ಕಳಿಗೆ ನಂಬಿಕಸ್ಥರಾಗಿ ಕಷ್ಟಪಟ್ಟು ದುಡೀರಿ ಅಂತ ಹೇಳಿ. ಅವರು ನಂಬಿಕೆ ಉಳಿಸಿಕೊಂಡು ಕಷ್ಟಪಟ್ಟು ಕೆಲಸ ಮಾಡೋದಾದರೆ ಅವರಿಗೆ ಯಾವ ಸಹಾಯ ಬೇಕಾದರೂ ಮಾಡೋಕ್ಕೆ ನಾನು ಸಿದ್ಧ. ನನ್ನ ಜೊತೆ ಇದ್ದುಕೊಂಡು ಇವರು ವ್ಯಗಳ್ಳರು, ಪೋಲಿಗಳು, ದುರಾಚಾರಿಗಳು, ದರೋಡೆಕೋರರು ಆಗ್ತಿದಾರೆ. ಕೊನೇಗೆ ಇವರ ಬದುಕನ್ನ ತಿದ್ದೋದು ನಿಮ್ಮ ಕರ್ತವ್ಯ ತಾನೆ?"

ರಾಧೇಲಾಲನಿಗೆ ಬೆಳಗಿನಿಂದ ತಾನು ಆಡಿದುದು, ಮಾಡಿದುದೆಲ್ಲವೂ ಅತ್ಯಂತ ಕೋಪದ ಹುಚ್ಚಿನಿಂದಾದುದೆಂದು ಅನಿಸತೊಡಗಿತು. ಈಗ ಅವನ ಮನಸ್ಸಿನಲ್ಲಿ ಪಶ್ಚಾತ್ತಾಪ ಹುಟ್ಟತೊಡಗಿತ್ತು. ಅವನು ಜ್ವಾಲಾಪ್ರಸಾದನ ಮಾತಿಗೆ ಏನೊಂದೂ ಉತ್ತರ ಕೊಡಲಿಲ್ಲ. ಅವನ ಕಣ್ಣಿಂದ ಟಪಟಪನೆ ನೀರು ಸುರಿಯತೊಡಗಿತ್ತು.

ಜ್ವಾಲಾಪ್ರಸಾದ ರಾಧೇಲಾಲನ ಕೈಹಿಡಿದು ಎಬ್ಬಿಸುತ್ತ ಹೇಳಿದ, "ಏಳಿ ಚಿಕ್ಕಪ್ಪ, ಊಟ ಮಾಡೋರಂತೆ! ನೀವು ಊಟ ಮಾಡದಿದ್ದರೆ ಮನೇಲಿ ಬೇರೆ ಯಾರೂ ಊಟ ಮಾಡೋದಿಲ್ಲ. ನನ್ನ ಬಾಯಿಂದ ತಿಳೀದೆ ಏನಾದರೂ ನಿಷ್ಠುರವಾದ ಮಾತಂ ಬಂದಿದ್ದರೆ ಕ್ಷಮಿಸಿ!"

ರಾಧೇಲಾಲನ ಬಿಕ್ಕು ನಿಂತಿತ್ತು. ಎದ್ದು ಜ್ವಾಲಾಪ್ರಸಾದನ ಸಂಗಡ ಅಡಿಗೆಮನೆಗೆ ಬಂದ; ಅವನ ಜೊತೆಯೇ ಕುಳಿತು ಊಟ ಮಾಡಿದ. ಊಟ ಮಾಡುತ್ತ ಅವನು ಜ್ವಾಲಾಪ್ರಸಾದನಿಗೆ ಹೇಳಿದ, "ಮಗು, ನಿನ್ನ ತಮ್ಮಂದಿರನ್ನ ನೀನು ಚೆನ್ನಾಗಿ ಬಲ್ಲೆ. ಒಬ್ಬರಿಗಿಂತ ಒಬ್ಬರು ಮೈಗಳ್ಳರೂ ಪೋಲಿಗಳೂ ಆಗಿದಾರೆ. ನಿನ್ನ ಜೊತೆ ಇದ್ದು ಕೊಂಡು ಅವರ ಬದುಕು ಸುಧಾರಿಸುತ್ತೆ ಅಂತ ಅಂದುಕೊಂಡಿದ್ದೆ. ಹಾಗೆ ಅಂದು ಕೊಂಡದ್ದು ತಪ್ಪಾಯ್ತು. ಈಗ ಜೀವನ ಹೇಗೆ ನಿರ್ವಹಿಸೋದು ಅನ್ನೋದು ನಮ್ಮ ಮುಂದಿರೋ ಪ್ರಶ್ನೆ."

ಜ್ವಾಲಾಪ್ರಸಾದ ಹೇಳಿದ, "ಯಾಕೆ, ಸಾಕಷ್ಟು ಜಮೀನು ಕೊಂಡುಕೊಂಡಿದೀರಿ! ಜೊತೆಗೆ ರಾಮೂ ಕೆಲಸದಲ್ಲಿದಾನೆ. ಕಿಶನಲಾಲನನ್ನೂ ಶ್ಯಾಮಲಾಲನನ್ನೂ ಜೊತೇಲಿ ಸೇರಿಸಿಕೊಂಡು ನೀವು ಜಮೀನು ನೋಡಿಕೊಳ್ಳಿ. ನಿಮಗೆ ಯಾವ ತರಹದ ಕೊರತೆಯೂ ಇರೋಲ್ಲ ಅಂತ ಅಂದುಕೊಂಡಿದೀನಿ. ಅಗತ್ಯ ಬಿದ್ದರೆ ನನಗೆ ಬರೀರಿ. ಎಷ್ಟು ಕೈಲಾ ಗುತ್ತೋ ಅಷ್ಟು ಸಹಾಯ ಮಾಡ್ತೀನಿ."

ಸಂಜೆಯ ಹೊತ್ತಿಗೆ ರಾಧೇಲಾಲನ ಪರಿವಾರದ ಸಾಮಾನೆಲ್ಲವೂ ಕಟ್ಟಿಮುಗಿದಾಗಿತ್ತು. ಎಲ್ಲರೂ ಊಟ ಮುಗಿಸಿದ್ದರು. ಶ್ಯಾಮಲಾಲ ಮೂರು ಕುದುರೆಗಾಡಿ ಗೊತ್ತು ಮಾಡಿದ್ದ. ಅವು ಬಂದವು. ಅವತ್ತು ಬಿಶನಲಾಲ ಕುಸ್ತಿಗೆಂದು ಪ್ರತಾಪಗಢಕ್ಕೆ ಹೋಗಿದ್ದ. ಸಾಮಾನೆಲ್ಲವನ್ನೂ ಗಾಡಿಗೆ ಹೇರಿ ಮುಗಿಸಿದ ಮೇಲೆ ರಾಧೇಲಾಲನ ಹೆಂಡತಿ ಜ್ವಾಲಾಪ್ರಸಾದನಿಗೆ ಕೈಮುಗಿದು ಹೇಳಿದಳು, "ಮಗೂ ಜ್ವಾಲಾ, ಬಿಶನೂನ ನೋಡೋಕ್ಕಾಗಲಿಲ್ಲ. ಬಲು ಒಳ್ಳೇ ಹುಡುಗ; ಸಾಧು ಅವನು. ಅವನನ್ನ ನೋಡಿ ಕೊಳ್ಳೋದು ನಿನ್ನ ಭಾರ!"

"ಬಿಶನೂ ಯೋಚನೆ ಬಿಡು, ಚಿಕ್ಕಮ್ಮ. ಅವನ ಮೇಲೆ ದೂರು ಹೊರಿಸೋರು ಪ್ರಪಂಚದಲ್ಲಿ ಇನ್ನೂ ಯಾರೂ ಹುಟ್ಟಿಲ್ಲ."

ಗಾಡಿಗಳು ಅಲಹಾಬಾದಿನ ದಾರಿ ಹಿಡಿದು ಹೊರಟವು. ಜ್ವಾಲಾಪ್ರಸಾದ ದಿವಾನ ಖಾನೆಯಲ್ಲಿ ಬಂದು ಕುಳಿತುಕೊಂಡ. ಅವನ ಮನಸ್ಸು ಹಗುರವಾಗಿತ್ತು. ಆದರೆ ಅವನ ಸುತ್ತಲೂ ವಾತಾವರಣ ಏನೋ ಒಂದು ಬಗೆಯ ವಿಚಿತ್ರವಾದ ಕರುಣೆಯಿಂದ ತುಂಬಿತ್ತು. ಒಂದು ವರ್ಷದಿಂದ ಅವನಿಗೆ ವಾಡಿಕೆಯಾಗಿದ್ದ ಆ ಉಸಿರು ಕಟ್ಟಿಸುವಂತಹ ಗದ್ದಲ ಮಾಯವಾಗಿತ್ತು. ಈಗ ಇದ್ದದ್ದೆಂದರೆ ಒಂದು ಮುಕ್ತ ವಾತಾವರಣ. ಆದರೆ ಅದು ಎಷ್ಟು ಶುಷ್ಕವಾಗಿತ್ತು, ನೀರಸವಾಗಿತ್ತು! ಅವನ ಮನಸ್ಸೇನೋ ಹಗುರವಾಗಿತ್ತು.

ಆದರೆ ಅವನ ಜೀವ ಯಾವದೋ ಒಂದು ಬಗೆಯ ಯಾತನೆಯನ್ನು ಅನುಭವಿಸ ತೊಡಗಿತ್ತು. ಅವನು ಎಷ್ಟು ಹೊತ್ತು ಹಾಗೆ ಮೌನವಾಗಿ ಕುಳಿತು ಯೋಚಿಸುತ್ತಿದ್ದನೋ ಯಾವಾಗ ಕತ್ತಲಾಯಿತೋ ಒಂದೂ ತಿಳಿಯಲಿಲ್ಲ! ಇದ್ದಕ್ಕಿದ್ದಂತೆ ಅವನು ಬೆಚ್ಚಿಬಿದ್ದ. ನೋಡಿದರೆ ಜೈದೇಯಿ ಅವನ ಭುಜ ಅಲ್ಲಾಡಿಸುತ್ತ ಹೇಳುತ್ತಿದ್ದಳು, "ಏಳು, ದೇವರ್‌ಜಿ. ಈ ಕತ್ತಲಕೋಣೇಲಿ ಕೂತುಕೊಂಡು ಏನು ಯೋಚಿಸ್ತಿದಿ? ಹೊರಗೆ ಬಾ!"

ಜೈದೇಯಿ ಜ್ವಾಲಾಪ್ರಸಾದನ ಕೈ ಹಿಡಿದುಕೊಂಡು ಅಂಗಳಕ್ಕೆ ಕರೆದುಕೊಂಡು ಹೋದಳು. ಯಮುನಾ ಅಡಿಗೆಮನೆಯಲ್ಲಿದ್ದಳು, ಛಿನಕಿ ಅವಳಿಗೆ ಸಹಾಯ ಮಾಡುತ್ತಿದ್ದಳು. ಭೀಖೂ ಅಂಗಳಕ್ಕೆ ಹತ್ತಿಕೊಂಡಂತಿದ್ದ ಒಳಗಿನ ವರಾಂಡದಲ್ಲೇ ಗಂಗಾಪ್ರಸಾದನಿಗೆ ಹಾಸಿಗೆ ಹಾಸಿದ್ದ. ಜೈದೇಯಿ ಯಮುನಳನ್ನು ಕೂಗಿ ಕರೆದಳು, "ಅಡಿಗೆಮನೆ ಬಿಟ್ಟು ಬಂದು ಇವರನ್ನ ನೋಡಿಕೊ, ರಾಣೀಜಿ! ಇಲ್ಲೇ ಬಂದು ಕೂತುಕೊ. ಇವತ್ತು ಮಡಿ ಅಡಿಗೆ ಏನಲ್ಲವಲ್ಲ. ಛಿನಕಿಗೆ ಸಾಗು ಮಾಡು ಅಂತ ಹೇಳು. ಆಮೇಲೆ ನಾನೂ ನೀನೂ ಸೇರಿ ಪೂರಿ ಕರಿದರಾಯಿತು."

ಯಮುನಾ ಅಡಿಗೆಮನೆ ಬಿಟ್ಟು ಎದ್ದುಬಂದಳು. ಅವಳು ಆ ಹೊತ್ತು ಅದೆಷ್ಟು ಶಾಂತಿಯನ್ನು ಅನುಭವಿಸುತ್ತಿದ್ದಳು! ಭೀಖೂ ಗಂಗಾಪ್ರಸಾದನನ್ನು ಕರೆದುಕೊಂಡು ಹೊರಗೆ ಹೋಗಿದ್ದ. ಛಿನಕಿ ಅಡಿಗೆಮನೆಯಲ್ಲಿ ಸಾಗು ಮಾಡುತ್ತಿದ್ದಳು. ಜ್ವಾಲಾಪ್ರಸಾದ, ಯಮುನಾ, ಜೈದೇಯಿಯರು ಕುಳಿತು ಮಾತಾಡುತ್ತಿದ್ದರು.

ಜೈದೇಯಿ ಹೇಳಿದಳು, "ದೇವರ್‌ಜಿ, ಲಛ್ಮಿಯ ಹೆಂಡತಿಗೆ ಐದನೇ ತಿಂಗಳು ನಡೀತಿದೆ. ಅಲಹಾಬಾದ್ ಪ್ರಯಾಗರಾಜ. ಅಲ್ಲೇ ಅವಳಿಗೆ ಹೆರಿಗೆಯಾಗಲಿ ಅಂತ ಆಸೆ. ಹೇಗೂ ಅಲಹಾಬಾದಿನಲ್ಲಿ ಬಂಗಲೆ ಕೊಂಡಾಗಿದೆ. ಲಛ್ಮಿ ಅಲಹಾಬಾದಿನಿಂದ ಕಾನಪುರಕ್ಕೆ ಹೋಗಿ ಬಂದು ಮಾಡ್ತಿರ್ತಾನೆ. ಘಾಟಮಪುರಕ್ಕೆ ಹೋಗೋಕ್ಕೆ ಅವನಿಗೆ ಪುರಸೊತ್ತಾಗೋಲ್ಲ."

ಅದಕ್ಕೆ ಯಮುನಾ ಹೇಳಿದಳು, "ಅಕ್ಕಾ, ನೀನು ಬಂದು ಅಲಹಾಬಾದಿನಲ್ಲೇ ಇರಬಾರದೆ? ಘಾಟಮಪುರದಲ್ಲಿ ಏನಿದೆ ಅಂತ ಅಲ್ಲಿರಬೇಕು. ಆಳುಕಾಳುಗಳ ಮೇಲೆ ಮನೆ ನಿರ್ವಹಿಸೋಕ್ಕೆ ಆಗುತ್ತ್ಯೆ? ನನ್ನ ಕೇಳಿದರೆ ಘಾಟಮಪುರದ ಮನೆಮಠ ಮಾರಿ ಅಲಹಾಬಾದಿಗೆ ಬಂದುಬಿಡು."

"ಹೌದು, ರಾಣಿ. ಲಛ್ಮಿಯೂ ಅದೇ ಹೇಳ್ತಾನೆ, ಘಾಟಮಪುರದ ಮನೆಮಠ ಮಾರಿ ಬಂದುಬಿಡು ಅಂತ. ಅಲಹಾಬಾದಿನಲ್ಲೋ ಇಲ್ಲವೇ ಕಾನಪುರದಲ್ಲೋ ನೆಲಸೋ ಯೋಚನೆ ಅವನದ್ದು. ಕಾನಪುರದಲ್ಲೂ ಅವನೊಂದು ದೊಡ್ಡಮನೆ ಕೊಂಡುಕೊಂಡಿದಾನೆ. ಊರ ಮಧ್ಯದಲ್ಲಿದೆ. ಆದರೆ ನಮಗೆ ಆ ಮನೆ ಹಿಡಿಸಿಲ್ಲ. ಒಂದೊಂದು ಸಲ ಯೋಚನೆ ಬರುತ್ತೆ, ಪ್ರಯಾಗ ದೊಡ್ಡ ತೀರ್ಥಸ್ಥಳ, ಅಲ್ಲೇ ಯಾಕೆ ಉಳಿದ ಜೀವಮಾನಾನ ಕಳೀಬಾರದು ಅಂತ."

"ಹೌದಕ್ಕ, ಪ್ರಯಾಗ ತೀರ್ಥಗಳ ರಾಜ. ಜೊತೆಗೆ ರಾಜಧಾನಿ ಬೇರೆ! ಲಛ್ಮಿಯಂ ಹೆಂಡತಿಗೆ ಎಲ್ಲಿರಬೇಕು ಅಂತ ಇಷ್ಟ?"

"ಅವಳಿಗೆ ಕಾನಪುರ ಇಷ್ಟ. ಅದು ಅವಳ ತವರು ತಾನೇ! ಆದರೆ ಅವಳಿಗೆ ಯಾವುದು ಇಷ್ಟ, ಯಾವುದು ಇಷ್ಟವಿಲ್ಲ ಅನ್ನೋಣ! ಇನ್ನೂ ಎಳೆವಯಸ್ಸು, ತಿಳಿವಳಿಕೆ ಸಾಲದು. ರಾಣೀಜಿ, ಇನ್ನು ಎರಡು ಮೂರು ತಿಂಗಳು ಬಿಟ್ಟು ನೀನು ಅಲಹಾಬಾದಿಗೆ ಬಂದು ಒಂದು ತಿಂಗಳಿರಬೇಕಾಗುತ್ತೆ, ಲಛ್ಮಿಗೆ ಗಂಡುಮಗು ಆಗೋತನಕ. ದೇವರ್‌ಜಿ, ನನ್ನ ಮಾತು ಕೇಳಿಸ್ತೇ! ರಾಣೀಜೀನ ನಮ್ಮಲ್ಲಿಗೆ ಒಂದು ತಿಂಗಳು ಕಳಿಸಿಕೊಡಬೇಕಾಗುತ್ತೆ."

"ಓಹೋ, ಬೇಕಾದರೆ ಈಗಲೇ ನಿನ್ನ ಜೊತೆ ಕರಕೊಂಡು ಹೋಗು," ಜ್ವಾಲಾಪ್ರಸಾದ ನಗತೊಡಗಿದ. "ಅತ್ತಿಗೆ, ನಮ್ಮಮೇಲೆ ನಿನಗೆ ಪೂರ್ಣ ಅಧಿಕಾರವಿದೆ."

ಈ ಹೊತ್ತಿಗೆ ಜ್ವಾಲಾಪ್ರಸಾದನಿಗೆ ಭೀಖೂ ಗಂಗಾಪ್ರಸಾದರ ಧ್ವನಿ ಕೇಳಿಸಿತು. ಭೀಖೂ ಹೇಳುತ್ತಿದ್ದ, "ಇನ್ನೂ ಈಗ ತಾನೇ ಸ್ಕೂಲು ಷುರುವಾಗಿದೆ. ಇನ್ನೂ ಒಂದೆರಡು ತಿಂಗಳು ಸ್ಕೂಲಿನಲ್ಲಿ ಏನಂ ಪಾಠವೂ ಆಗೋಲ್ಲ. ಅಂದಮೇಲೆ ಮನೇಲಿ ಓದೋ ಅಗತ್ಯವೂ ಇಲ್ಲ. ನಡಿ, ಊಟ ಮಾಡಿ ಮಲಕ್ಕೊ. ಈ ಸೆಕೇನಲ್ಲಿ, ಹೀಗೆ ಕೋಣೇಲಿ ಕೂತುಕೊಂಡು ಯಾಕೆ ಓದಬೇಕು?"

ಇದಕ್ಕೆ ಉತ್ತರವಾಗಿ ಗಂಗಾಪ್ರಸಾದ ಹೇಳುತ್ತಿದ್ದ, "ಇಲ್ಲ, ಭೀಖೂ ಕಾಕಾ. ಈ ಸಲ ನಾನು ಕ್ಲಾಸಿನಲ್ಲಿ ಫಸ್ಟ್ ಬರಬೇಕು. ನಾಲ್ಕನೇ ರ್‍ಯಾಂಕಿನಿಂದ ಎರಡನೇ ರ್‍ಯಾಂಕಿಗೆ ಬಂದಿದೀನಿ. ಈ ಸಲ ನನ್ನನ್ನ ಯಾರೂ ಹಿಂದೆ ಬೀಳಿಸೋ ಹಾಗಿಲ್ಲ!"

ಜೈದೇಯಿ ನಗಲಾರಂಭಿಸಿದಳು, "ದೇವರ್‌ಜಿ, ಈ ಗಂಗಾ ನಿನಗಿಂತ ದೊಡ್ಡೋನಾಗ್ತಾನೆ. ಆದರೆ ಈ ಸೋರಾವಿನಲ್ಲಿ ಓದುಬರೆಹಕ್ಕೆ ಏನು ಅನುಕೂಲ ಇದೆ?"

ಜ್ವಾಲಾಪ್ರಸಾದ ಇದ್ದಕ್ಕಿದ್ದಂತೆ ಬೆಚ್ಚಿಬಿದ್ದ. ಗಂಗಾಪ್ರಸಾದ ಐದನೆಯ ಇಯತ್ತೆ ಮುಗಿಸಿ ಆರನೆಯದಕ್ಕೆ ಕಾಲಿಟ್ಟಿದ್ದ. ಸೋರಾವಿನಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಅನುಕೂಲವಿದ್ದದ್ದು ಆರನೆಯ ಇಯತ್ತೆಯವರೆಗೆ ಮಾತ್ರ. ಆರನೆಯ ಇಯತ್ತೆ ಮುಗಿದ ಮೇಲೆ ಗಂಗಾಪ್ರಸಾದನ ಓದಿಗೆ ಬೇರೆ ಎಲ್ಲಿಯಾದರೂ ಏರ್ಪಾಡು ಮಾಡಬೇಕಾಗಿತ್ತು. ಈ ಸಮಸ್ಯೆಯ ಬಗೆಗೆ ಹಿಂದೆಂದೂ ತನ್ನ ಗಮನ ಯಾಕೆ ಹರಿದಿರಲಿಲ್ಲವೆಂದು ಅವನಿಗೇ ಆಶ್ಚರ್ಯವಾಯಿತು. ಕಳೆದ ಒಂದೂವರೆ ಎರಡು ವರ್ಷಗಳಿಂದ ಅವನು ಸಂಸಾರದ ಗೊಂದಲದಲ್ಲಿ ಎಷ್ಟರಮಟ್ಟಿಗೆ ಸಿಕ್ಕಿಬಿದ್ದಿದ್ದನೆಂದರೆ ಈ ಬಗ್ಗೆ ಯೋಚಿಸುವುದಕ್ಕೂ ಅವನಿಗೆ ಪುರಸೊತ್ತಾಗಿರಲಿಲ್ಲ. ಅವನಂದ, "ಹೌದು ಅತ್ತಿಗೆ, ನೀನು ಸರಿಯಾಗಿ ನೆನಪುಮಾಡಿಕೊಟ್ಟೆ. ಗಂಗನ ವಿದ್ಯಾಭ್ಯಾಸದ ಬಗ್ಗೆ ನಾನು ಯೋಚಿಸಿಯೇ ಇರಲಿಲ್ಲ. ಈ ಸೋರಾವಿನಲ್ಲಿದ್ದುಕೊಂಡು ಅವನ ಓದು ಸಾಗೋ ಹಾಗಿಲ್ಲ. ಫತಹಪುರಕ್ಕೆ ಇವನನ್ನು ಕಳಿಸೋದಂತೂ ಸಾಧ್ಯವಿಲ್ಲ. ಇದರ ಬಗ್ಗೆ ಯೋಚಿಸಬೇಕಾಗಿದೆ."

ಜೈದೇಯಿ ನಕ್ಕಳು, "ದೇವರ್‌ಜಿ, ಇದರಲ್ಲಿ ಯೋಚಿಸೋದೇನಿದೆ! ಅಲಹಾಬಾದಿನಲ್ಲೂ ನಿನಗೆ ಮನೆ ಇದೆ ಅಲ್ಲವೆ? ಗಂಗನ್ನ ನನ್ನ ಜವಾಬ್ದಾರಿಗೆ ಬಿಡು. ದೊಡ್ಡ ಮಗ ಲಛ್ಮಿ ಈಗ ತನ್ನ ಕಾಲ ಮೇಲೆ ತಾನು ನಿಂತಿದಾನೆ. ಈ 'ಚಿಕ್ಕಮಗ'ನ ಆಶ್ರಯದಲ್ಲಿ ನಾನು ಬದುಕ್ತೀನಿ."

ಒಬ್ಬರ ಮನಸ್ಸನ್ನು ಇನ್ನೊಬ್ಬರು ಕಣ್ಣಸನ್ನೆಯಿಂದಲೇ ಅರ್ಥಮಾಡಿಕೊಂಡವರಂತೆ ಯಮುನಾ ಜ್ವಾಲಪ್ರಸಾದರು ಪರಸ್ಪರ ನೋಡಿದರು. ಯಮುನಾ ಜೈದೇಯಿಯ ಹೆಗಲಮೇಲೆ ಕೈಯಿಡುತ್ತ ಹೇಳಿದಳು, "ಗಂಗ ಹೇಗೆ ನನ್ನ ಮಗನೋ ಹಾಗೇ ನಿಮ್ಮ ಮಗನೂವೇ. ಅವನು ಇನ್ನೂ ತುಂಬ ಓದಬೇಕಾಗಿದೆ, ತಂದೆಗಿಂತ ದೊಡ್ಡವನಾಗಬೇಕಾಗಿದೆ. ಇನ್ನುಮೇಲೆ ಗಂಗ ನಿಮ್ಮವನು! ಇವರಿಗೆ ತಮ್ಮ ಆಫೀಸು ಕೆಲಸವೇ ಸಾಕಾಗಿದೆ. ಒಂದು ವರ್ಷದಿಂದ ಇವರ ಬಡ್ತಿ, ವರ್ಗದ ಸುದ್ದಿ ಎದ್ದಿದೆ. ಆಫೀಸು ಕೆಲಸದ ಭರಾಟೇಲಿ ಗಂಗನ ವಿದ್ಯಾಭ್ಯಾಸ ಹೇಗೆ ಸಾಗುತ್ತೆ!"

ಜೈದೇಯಿ ಯಮುನಳನ್ನು ಅಪ್ಪಿಕೊಂಡಳು, "ರಾಣೀಜಿ, ನೀನೆಷ್ಟು ಒಳ್ಳೆಯವಳು! ನಮ್ಮ ನಂಟಸ್ತನ ಉಳೀತು. ಗಂಗ ನನ್ನ ಪಾಲಿಗೆ ಲಛ್ಮಿಗಿಂತ ಕಡಿಮೆಯೇನೂ ಅಲ್ಲ. ಇನ್ನು ನಾನು ಪ್ರಯಾಗ ಬಿಟ್ಟು ಎಲ್ಲೂ ಹೋಗೋಲ್ಲ. ಲಛ್ಮಿಗೆ ಕಾನಪುರ ಹೆಚ್ಚು ಇಷ್ಟ. ಆದರೆ ನಾನು ಮಾತ್ರ ಅಲಹಾಬಾದಿನಲ್ಲೇ ಇದ್ದುಬಿಡ್ತೀನಿ."

ಜೈದೇಯಿಯ ಮುಖದ ಮೇಲಿನ ಸುಕ್ಕು ಒಮ್ಮೆಲೇ ಮಾಯವಾದಂತೆ ಕಂಡಿತು. ಅವಳಿಗೆ ತನ್ನ ಆಯುಷ್ಯದ ಹತ್ತು ವರ್ಷ ಹಿಂದಿರುಗಿ ಬಂದಂತೆ ಅನಿಸಿತು.

ದ್ವಿತೀಯ ಭಾಗ

# ಒಂದು

ಪಂಡಿತ ಸೋಮೇಶ್ವರದತ್ತರು ಆಕಾಶದ ಕಡೆ ನೋಡಿದರು, ಕೊಂಚ ಹೊತ್ತು ಒಂದೇ ಸಮನೆ ನೋಡುತ್ತಲೇ ಇದ್ದರು. ಅವರ ಮುಖದಲ್ಲಿ ಒಂದು ಬಗೆಯ ಚಿಂತನಪ್ರಧಾನ ವಾದ ಕರುಣೆ ತುಂಬಿತ್ತು. ಅವರ ಕಣ್ಣುಗಳು ಕೊಂಚ ತೇವವಾಗಿದ್ದವು. ಆಮೇಲೆ ಅವರು ಗಂಭೀರತಾಪೂರ್ವಕವಾಗಿ ತಮಗೆ ತಾವೇ ಮಾತಾಡಿಕೊಳ್ಳುತ್ತಿರುವವರಂತೆ ಹೇಳಿದರು, "ಈಗ ನಾವು ಪೂರ್ತಿ ಗುಲಾಮರಾದೆವು. ಇಂಗ್ಲಂಡಿನ ದೊರೆ ದಿಲ್ಲಿಗೆ ದರಬಾರು ನಡಸೋಕ್ಕೆ ಬರ್‍ತಿದಾನೆ. ಹಿಂದುಸ್ತಾನದ ರಾಜಮಹಾರಾಜರು ಅವನ ಮುಂದೆ ತಲೆ ಬಗ್ಗಿಸ್ತಾರೆ, ಅವನಿಗೆ ಕಪ್ಪಕಾಣಿಕೆ ಕೊಡ್ತಾರೆ, ಅವನನ್ನ ತಮ್ಮ ಅಧಿಪತಿ ಅಂತ ಒಪ್ಪಿಕೋತಾರೆ."

"ಯಾಕೆ ಪಂಡಿತ್‌ಜೀ; ಇದರಿಂದ ನಿಮಗೆ ದುಃಖವೆ?" ಶ್ರೀ ಕಿಶೋರೀರಮಣ ಪಂಡಿತ ಸೋಮೇಶ್ವರದತ್ತರ ಮುಂದೆ ಎಲೆಅಡಿಕೆಯ ಡಬ್ಬವನ್ನು ಚಾಚುತ್ತ ಕೇಳಿದ.

ಶ್ರೀ ಕಿಶೋರೀರಮಣ ಬರೇಲಿಯಲ್ಲಿ ಅಸಿಸ್ಟೆಂಟ್ ಸಿವಿಲ್ ಸರ್ಜನ್ ಆಗಿದ್ದ. ಅವನದು ಬಿಳುಪಾದ ಮೈಬಣ್ಣ, ಎತ್ತರದ ನಿಲುವು, ಗಾತ್ರವಾದ ಶರೀರ. ಯೌವನ ಮುಗಿಸಿ ಅದೇ ಆಗ ಪ್ರೌಢಾವಸ್ಥೆಯಲ್ಲಿ ಕಾಲಿಡುತ್ತಿದ್ದ ಅವನು ಬರೇಲಿಯಲ್ಲಿ ಜನ ಪ್ರಿಯ ಡಾಕ್ಟರ್ ಆಗಿದ್ದ. ಸರಕಾರೀ ಸಂಬಳದ ಜೊತೆಗೆ ಸ್ವಂತ ಪ್ರಾಕ್ಟೀಸಿನಿಂದ ತಿಂಗಳಿಗೆ ಸುಮಾರು ಇನ್ನೂರು ಮುನ್ನೂರು ರೂಪಾಯಿ ಸಂಪಾದನೆಯಾಗುತ್ತಿತ್ತು.

ಪಂಡಿತ ಸೋಮೇಶ್ವರದತ್ತರ ಮುಖದ ಮೇಲೆ ಒಂದು ಮುಗುಳುನಗೆ ಮೂಡಿತು. ಆದರೆ ಅದರಿಂದ ಅವರ ಗಾಂಭೀರ್ಯದಲ್ಲೇನೂ ವಿಶೇಷ ಬದಲಾವಣೆಯಾಗಲಿಲ್ಲ. ಯಾಕೆಂದರೆ ಆ ಮುಗುಳುನಗೆ ಅವರ ತುಟಿಯನ್ನು ನಿರಂತರವಾಗಿ ಮುಚ್ಚಿರುತ್ತಿದ್ದ ದಟ್ಟವಾದ ಕಿಚಡೀಬಣ್ಣದ ಮೀಸೆಯ ಮುಂಭಾಗವನ್ನು ತೂರಿ ಬರುವಷ್ಟು ಆಳವಾದ ದ್ದಾಗಿರಲಿಲ್ಲ. "ಇಲ್ಲ ಡಾಕ್ಟರೇ, ಈಗ ಆಗ್ತಿರೋದೆಲ್ಲಾ ಒಳ್ಳೇದಕ್ಕೇಯೆ. ನಮ್ಮ ಮೇಲಿನ ಈ ಮ್ಲೇಚ್ಛಯವನರ ಆಳಿಕೆ ಹೇಗೇ ಆಗಲಿ ಕಳೀತು, ದೇಶದ ಅರಾಜಕತೆ ದೂರ ವಾಯಿತು, ಬಲವಂತವಾಗಿಯಾದರೂ ತ್ರಾಣ ಬಂತು, ಎಲ್ಲೆಲ್ಲೂ ಶಾಂತಿ ಹರಡಿತು. ಇವನ್ನ ಯಾರು ತಾನೆ ಕೆಟ್ಟದ್ದು ಅಂತಾರೆ. ಆದರೆ ಇವೆಲ್ಲದರ ಜೊತೆಗೆ ಇನ್ನೂ ಒಂದು ಮುಖ್ಯವಾದ ಮಾತಿದೆ—ವಿದೇಶೀ ಏನೇ ಆಗಲಿ ವಿದೇಶಿಯೇ!"

ಪಂಡಿತ ಸೋಮೇಶ್ವರದತ್ತರು ಬರೇಲಿಯಲ್ಲಿ ಡೆಪ್ಯುಟಿ ಕಲೆಕ್ಟರ್ ಆಗಿದ್ದರು. ಅವರಿಗೆ ಸುಮಾರು ಐವತ್ತರ ವಯಸ್ಸು—ಎತ್ತರವಾದ ವ್ಯಕ್ತಿ, ಪ್ರಭಾವ ಬೀರುವ ಮುಖ, ಗೋದಿಯ ಮೈಬಣ್ಣ. ಅವರು ಸಂಸ್ಕೃತವನ್ನು ಚೆನ್ನಾಗಿ ಅಧ್ಯಯನ ಮಾಡಿ

ದ್ದರು, ಆಚಾರವಂತರು, ವಿಚಾರವಂತರು. ಹಾಗೆಯೇ ಖಂಡಿತವಾದಿಗಳು, ನ್ಯಾಯ ನಿಷ್ಠರು; ಕೊಂಚಮಟ್ಟಿಗೆ ಜಗಳಗಂಟರು ಸಹ.

ಪಂಡಿತ ಸೋಮೇಶ್ವರದತ್ತರು ಅನಾಯಾಸವಾಗಿ ಗೊಳ್ಳನೆ ನಗಲಾರಂಭಿಸಿದರು, "ಡಾಕ್ಟರ್ ಸಾಹೇಬರೇ, ನಮ್ಮನ್ನ ಈ ವಿದೇಶೀ ಜನ ಎಷ್ಟೊಂದು ಬದಲಾಯಿಸಿ ಬಿಟ್ಟಿದಾರೆ ಅಂತೀರಿ! ಇಲ್ಲಿ ನೋಡಿ, ಈ ಮಿರ್‌ಸಾಹೇಬ್ ಬರ್‍ತಿದಾನಲ್ಲ, ಇವರ ಅಪ್ಪ ಉದ್ದನೆಯ ಗಡ್ಡ ಬಿಟ್ಟಿದ್ದರು, ಯಾವಾಗಲೂ ಕಾಲತನಕ ಮೇಲಂಗಿ ತೊಡ್ತಿದ್ದರು, ಅವರ ಕೈಯಲ್ಲಿ ಸದಾ ಜಪಮಾಲೆ ಇರ್‍ತಿತ್ತು. ಅದೇ ಇವನನ್ನ ನೋಡಿ. ಕೋಟು, ಇಜಾರ ತೊಟ್ಟಿದಾನೆ; ನಯವಾಗಿ ಗಡ್ಡ ಬೋಳಿಸಿದಾನೆ, ಮಿಸೇನ ಹೇಗೆ ತೀಡಿ ಹುರಿಮಾಡಿದಾನೆ ಅಂದರೆ ನೋಡೋರು ಅದಕ್ಕೆ ಹೆದರಿ ಓಡಿಹೋಗಬೇಕು, ಬಾಯಲ್ಲಿ ಚಿರೂಟು ಸಿಕ್ಕಿಸಿ ಕೊಂಡಿದಾನೆ!"

ಪಂಡಿತ ಸೋಮೇಶ್ವರದತ್ತರ ಮಾತಿನ ತುಣುಕು ಮಿರ್ ಜಾಫರ್‌ಅಲಿಯ ಕಿವಿಗೆ ಬಿತ್ತು. ಅವನು ನಗುತ್ತ ಅವರ ಕಡೆಗೆ ಹೆಜ್ಜೆಹಾಕಿದ, "ಏನು ಪಂಡತ್, ನನ್ನನ್ನೇನೋ ಗೇಲಿ ಮಾಡ್ತಿದೀರಲ್ಲ! ನೀವು ನಿಮ್ಮ ವಿಷಯ ಯಾಕೆ ಹೇಳಿಕೊಳ್ಳೋಲ್ಲ? ಡಾಕ್ಟರ್ ಸಾಹೇಬ್, ಒಂದು ಹೊಸ ಸುದ್ದಿ ಕೇಳಿದೆ. ನಮ್ಮ ಪಂಡತ್‌ಜೀ ಆರ್‍ಯಸಮಾಜಿ ಆಗಿ ದಾರಂತೆ! ಏನು ಪಂಡತ್‌ಜೀ, ನಾನು ಹೇಳ್ತಿರೋದು ಸುಳ್ಳೇನೂ ಅಲ್ಲವಲ್ಲ?"

"ಅದರಿಂದ ನಿಮಗೇಕೆ ದುಃಖ ಆಗಬೇಕು? ನಮ್ಮ ಹಿಂದುಗಳ ಕಾಪಟ್ಯ ನಮ್ಮ ಧರ್ಮಾನ ಜೊಳ್ಳು ಮಾಡಿಬಿಟ್ಟಿತ್ತು. ನಮ್ಮ ಧರ್ಮದ ಈ ದೌರ್ಬಲ್ಯದಿಂದ ಮುಸಲ ಮಾನರೂ ಕಿರಿಸ್ತಾನರೂ ಲಾಭ ಪಡಕೊಂಡರು. ಲಕ್ಷಗಟ್ಟಲೆ, ಕೋಟಿಗಟ್ಟಲೆ ಸಂಖ್ಯೇಲಿ ಹಿಂದುಗಳು ಪರಧರ್ಮಕ್ಕೆ ಸೇರಿಕೊಂಡರು. ಈಗ ಆರ್ಯಸಮಾಜ ಹಿಂದೂಧರ್ಮದ ಸಂಘಟನೆ ಮಾಡ್ತಾ ಇದೆ. ಋಷಿಗಳ ಪರಂಪರೇಗೆ ಮತ್ತೆ ಹೊಸ ಜೀವ ಕೊಟ್ಟಿದೆ. ಹಿಂದೂಧರ್ಮ ವಿಶ್ವವನ್ನ ಜಯಿಸೋಕ್ಕೆ ಬೇಕಾದ ತಯಾರಿ ಮಾಡಿ ಕೋತಿದೆ!"

ಮಿರ್ ಜಾಫರ್‌ಅಲಿ ಬರೇಲಿಯಲ್ಲಿ ಪೋಲೀಸ್ ಡೆಪ್ಯುಟಿ–ಸೂಪರಿಂಟೆಂಡೆಂಟ್ ಆಗಿದ್ದ. ಅವನನ್ನು ಸುಮಾರು ಯುವಕನೆಂದೇ ಹೇಳಬಹುದಾಗಿತ್ತು—ಎತ್ತರವಾದ, ಒಳ್ಳೆಯ ಮೈಕಟ್ಟಿನ ಆಳು, ಮೈಬಣ್ಣ ಗೋದಿಗಿಂತಲೂ ಸ್ವಲ್ಪ ಕೆಂಪೇ. ಮಿರ್ ಸಾಹೇಬ್ ತಾನು ಪಠಾಣಕುಲದವನೆಂದೇ ಹೇಳಿಕೊಳ್ಳುತ್ತಿದ್ದ. ಅವನಿಗೆ ಧರ್ಮಕರ್ಮ ಗಳಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಉಪವಾಸ ವ್ರತ ಆಚರಿಸುತ್ತಿರಲಿಲ್ಲ, ನಮಾಜು ಮಾಡುತ್ತಿರಲಿಲ್ಲ. ಆದರೆ ಗಂಟೆಗಟ್ಟಲೆ ಧಾರ್ಮಿಕ ವಿಷಯಗಳನ್ನು ಕುರಿತು ವಾದ ಮಾಡುವುದು ಈಚೆಗೆ ಅವನಿಗೊಂದು ವೃತ್ತಿಯಂತೆಯೇ ಆಗಿತ್ತು.

ಮಿರ್‌ಜಾಫರ್‌ಅಲಿ ಮುಖ ಸಿಂಡರಿಸಿ ಹೇಳಿದ, "ಪಂಡತ್‌ಜೀ, ಸ್ವಲ್ಪ ವಿವೇಕ ದಿಂದ ಮಾತನಾಡಿ! ಈ ಧೋತಿ, ಪ್ರಸಾದ ಜಗತ್ತನ್ನ ಜಯಿಸೋದು ಸಾಧ್ಯವೇ?

ಸಾಯೋಕ್ಕೆ ಮುಂಚೆ ಇರುವೆಗೆ ರೆಕ್ಕೆ ಬಂದ ಹಾಗೆ ಬಂದಿದೆ ಹಿಂದೂಧರ್ಮದ ಮೇಲೆ ಈ ಆರ್ಯಸಮಾಜ. ನೀವೇನಂತೀರಿ ಜೊನಾಥನ್ ಸಾಹೇಬ್!" ಇಸ್ಪೀಟಿಗೆ ಯಾರಾದರೂ ಜೊತೆ ಸಿಕ್ಕಿಯಾರೆ ಎಂದು ಹುಡುಕುತ್ತ ಹೊರಟಿದ್ದ ಮಿಸ್ಟರ್ ಜೊನಾಥನ್ ಡೇವಿಡ್‌ರನ್ನು ಕೂಗುತ್ತ ಮಿರ್‌ಸಾಹೇಬ್ ಹೇಳಿದ.

ಮಿಸ್ಟರ್ ಜೊನಾಥನ್ ಡೇವಿಡ್ ಕುಳ್ಳಗೆ, ಕಪ್ಪಗೆ, ಕೊಂಚಮಟ್ಟಿಗೆ ಸೆಣಕಲಾಗಿದ್ದ ವ್ಯಕ್ತಿ. ವಯಸ್ಸು ನಲವತ್ತರ ಸುಮಾರಾದರೂ ಕಾಣುತ್ತಿದ್ದುದು ಐವತ್ತು ವರ್ಷದವನಂತೆ. ನಯವಾಗಿ ಗಡ್ಡಮಿಸೆ ಬೋಳಿಸಿ, ನೀಟಾಗಿ ಕೋಟು ಪ್ಯಾಂಟು ತೊಡುತ್ತಿದ್ದ. ಅವನು ಬರೇಲಿಯಲ್ಲಿ ಸಬ್ ಜಡ್ಜಿ.

ಮಿರ್‌ಸಾಹೇಬನ ಧ್ವನಿ ಕೇಳಿ ಜೊನಾಥನ್ ಡೇವಿಡ್ ಅವನ ಕಡೆಗೇ ಹೆಜ್ಜೆ ಹಾಕುತ್ತ ಹೇಳಿದ, "ಅರೆ ಮಿರ್, ನೀನು ಬಂದಿದೀಯಾ! ನಾನು ನಿನ್ನನ್ನೇ ಹುಡುಕುತ್ತಿದ್ದೆ ... ಹಲೋ ಡಾಕ್ಟರ್, ಇವತ್ತೇನು ಬ್ರಿಜ್‌ಗೆ ಸೇರೋಲ್ಲವೆ?" ಎನ್ನುತ್ತ ಮಿರ್ ಸಾಹೇಬನ ಹತ್ತಿರ ಬಂದು "ನೀನು ನನ್ನನ್ನ ಕರೆದೆಯಲ್ಲ, ಏನು ಹೇಳು" ಎಂದು ಹರಕು ಮುರಕು ಹಿಂದಿಯಲ್ಲಿ ಇಂಗ್ಲಿಷಿನ ಠೀವಿಯ ಉಚ್ಚಾರಣೆಯೊಂದಿಗೆ ಹೇಳಿದ.

ಮಿರ್ ಸಾಹೇಬ್ ಜೋರಾಗಿ ನಕ್ಕ, "ಡೇವಿಡ್ ಸಾಹೇಬ್, ಧ್ವನೀಲಿ ಇನ್ನೂ ಕೊಂಚ ದೇಸೀತನ ಉಳಿದಿದೆ. ಇನ್ನೊಂದು ಸ್ವಲ್ಪ ಅಭ್ಯಾಸ ಮಾಡಿದರಾಯಿತು, ಆಮೇಲೆ ಯಾವ ಆಂಗ್ಲೋ–ಇಂಡಿಯನ್ನನಾದರೂ ಮಿರಿಸಬಹುದು."

"ಏನು ಹುಚ್ಚಾಬಟ್ಟೆ ಹರಟ್ತಿದಿ, ಮಿರ್? ನಾವು ಪ್ಯೂರ್ ಯೂರೋಪಿಯನ್ ಇದೀವಿ. ಏಳು ಜೆನರೇಷನ್ಸ್ ಹಿಂದೆ ನಮ್ಮ ಫೋರ್ ಫಾದರ್ಸ್ ಹಿಂದುಸ್ತಾನಕ್ಕೆ ಬಂದರು—ಸೌತ್‌ಗೆ. ಅಲ್ಲೇ ನೆಲಸಿದರು. ಡಾಕ್ಟರ್, ಸೆವೆನ್ ಜೆನರೇಷನ್ಸ್ ಇನ್ ಇಂಡಿಯಾ, ಅಂಡ್ ಇನ್ ಸೌತ್!" ಜೊನಾಥನ್ ಡೇವಿಡ್ ನಾಟಕೀಯವಾಗಿ ಎರಡೂ ಕೈಗಳನ್ನು ಬೀಸುತ್ತ "ಅಂಡ್ ದಿ ರಿಸಲ್ಟ್?"

"ಹ್ಞಾ, ನೀವು!" ಡಾಕ್ಟರ್ ಕಿಶೋರೀರಮಣ ತುಂಬ ಗಾಂಭೀರ್ಯದಿಂದ ಹೇಳಿದ. "ಒಂದರ ಮೇಲೊಂದರಂತೆ ಹಿಂದುಸ್ತಾನದ ಕಪ್ಪು ಪದರಪದರವಾಗಿ ಸೇರಿಕೊಳ್ತಾ ಹೋಯಿತು! ಸೆವೆನ್ ಜೆನರೇಷನ್ಸ್, ಮತ್ತೆ ಏಳು ಪದರ! ಡೇವಿಡ್ ಸಾಹೇಬ್, ಕರೀ ಮರಾನ ಸಹ ನೀವು ಸೋಲಿಸಿಬಿಟ್ಟಿದೀರಿ ನೋಡಿ! ಆದರೆ ನಾನು ಸಿವಿಲ್ ಸರ್ಜನ್ ಆದ್ದರಿಂದ ಈ ಕಪ್ಪುಬಣ್ಣದ ಎಷ್ಟೇ ಪದರ ಇರಲಿ, ಅದರ ಕೆಳಗಿನ ನಿಮ್ಮ ಚರ್ಮದ ಅಸಲೀ ಬಿಳಿಯ ಬಣ್ಣ ನನಗೆ ಸ್ಪಷ್ಟವಾಗಿ ಕಾಣಿಸುತ್ತೆ. ಆ ಮೆಕ್‌ಗಿಲ್, ದೊಡ್ಡ ಸಿವಿಲ್ ಸರ್ಜನ್ ಅಂದುಕೋತಾನಲ್ಲ, ಅವನಿಗೆ ಕುರುಡೋ ಕುರುಡು. ಅದಕ್ಕೋಸ್ಕರವೇ ನಿಮ್ಮ ಬಿಳಿ ಬಣ್ಣ ಅವನಿಗೆ ಕಾಣಿಸದೆ ನಿಮ್ಮನ್ನ ಯೂರೋಪಿಯನ್ ಕ್ಲಬ್ ಒಳಗೆ ನುಸಿಯೋಕ್ಕೆ ಬಿಡಲಿಲ್ಲ!"

ಪಂಡಿತ ಸೋಮೇಶ್ವರದತ್ತರು ಇದುವರೆಗೆ ಮೌನವಾಗಿ ಈ ಮಾತುಕತೆಯ

ಸವಿ ಹೀರುತ್ತ ಕುಳಿತಿದ್ದರು. ಈಗ ಅವರಿಗೆ ಸುಮ್ಮನಿರಲಾಗಲಿಲ್ಲ. ಏನೇ ಆಗಲಿ, ಈ ದುಷ್ಟ ಯೂರೋಪಿಯನ್ನರು ನಿಮ್ಮನ್ನ ತಮ್ಮ ಕ್ಲಬ್ಬಿನೊಳಕ್ಕೆ ಬರೋಕ್ಕೆ ಬಿಡೋದಿಲ್ಲ, ಜೊನಾಥನ್ ಸಾಹೇಬ್! ನನ್ನ ಮಾತು ಕೇಳೋದಾದರೆ ನೀವು ಪರಿಶುದ್ಧರಾಗಿಬಿಡಿ. ನಮ್ಮ ಜನ, ಯಾರು ಹೊಡೆತಕ್ಕೆ ಹೆದರಿ ಮುಸಲಮಾನರಾಗಿದ್ದರೋ ಕ್ಷಾಮಕಾಲದಲ್ಲಿ ಅನ್ನದ ಆಸೆಗೆ ಕಿರಿಸ್ತಾನರಾಗಿದ್ದರೋ ಅವರನ್ನೆಲ್ಲಾ ಪರಿಶುದ್ಧರನ್ನಾಗಿ ಮಾಡಿ ಮತ್ತೆ ಹಿಂದೂಧರ್ಮಕ್ಕೆ ಸೇರಿಸಿಕೊಳ್ಳೋ ಕೆಲಸ ಷುರುವಾಗಿದೆ. ಡೇವಿಡ್ ಸಾಹೇಬ್, ನೀವೂ ಇಂಥ ಒಳ್ಳೇ ಅವಕಾಶದ ಲಾಭ ಪಡೀರಿ."

ಜೊನಾಥನ್ ಡೇವಿಡ್‌ನಾಗಲೀ, ಜಾಫರ್‌ಅಲಿಯಾಗಲೀ ಸೋಮೇಶ್ವರದತ್ತರಿಗೆ ಖಡಾಖಂಡಿತವಾಗಿ ಉತ್ತರ ಕೊಡುವ ಮೊದಲೇ ಡಾಕ್ಟರ್ ಕಿಶೋರೀರಮಣ ಬಾಯಿ ತೆಗೆದ, "ಪಂಡಿತ್‌ಜೀ. ಈ ಡೇವಿಡ್ ಸಾಹೇಬರೇನೋ ಶುದ್ಧರಾಗಬಹುದು. ಆದರೆ ಇವರ ಹೆಂಡತೀನ ನೀವು ಹೇಗೆ ತಾನೆ ಶುದ್ಧಮಾಡಬಲ್ಲಿರಿ? ಅವರು ನಿಜವಾದ ಯೂರೋಪಿಯನ್ನರು. ನಮ್ಮ ಜೊನಾಥನ್ ಡೇವಿಡ್ ಸಾಹೇಬರನ್ನ ಯೂರೋಪಿಯನ್ ಕ್ಲಬ್ಬಿಗೆ ಬಿಡದೇ ಇದ್ದರೆ ಏನಂತೆ, ಅವರ ಹೆಂಡತಿ ಅಲ್ಲಿ ದಿನಾಗಲೂ ಟೆನಿಸ್ ಆಡ್ತಾರೆ, ಡಾನ್ಸ್ ಮಾಡ್ತಾರೆ."

ಅದಕ್ಕೆ ಮಿರ್‌ಸಾಹೇಬ್ ಹೇಳಿದ, "ಜೊನಾಥನ್ ಸಾಹೇಬರನ್ನ ನೀವು ಏನೂ ಅಂತ ತಿಳಕೊಂಡಿದೀರಿ? ತಮ್ಮನ್ನ ಯೂರೋಪಿಯನ್ ಕ್ಲಬ್ಬಿಗೆ ಸೇರಿಸಿಕೊಳ್ಳೋ ಹಾಗೆ ಅಪ್ಪಣೆಯಾಗಬೇಕು ಅಂತ ಗವರ್ನರ್ ಸಾಹೇಬರಿಗೆ ಮೆಮೋರ್‍ಯಾಂಡಮ್ ಕಳಿಸಿದಾರ. ಇವರ ಯಜಮಾನಿತಿ ಮೆಮೋರ್‍ಯಾಂಡಮ್ ತೊಗೊಂಡು ಖುದ್ದಾಗಿ ಹೋಗಿ ಲೆಫ್ಟಿನೆಂಟ್ ಗವರ್ನರನ್ನ ಕಂಡುಬಂದಿದ್ದರು. ಒಂದು ಗಂಟೆ ಅವರ ಜೊತೆ ಮಾತಾಡಿದಾರೆ."

ಪಂಡಿತ ಸೋಮೇಶ್ವರದತ್ತರು ಜೊನಾಥನ್ ಡೇವಿಡ್‌ನ ಕಡೆ ನೋಡಿದರು. "ಏನು ಡೇವಿಡ್ ಸಾಹೇಬ್, ಮಿರ್‌ಸಾಹೇಬರು ಹೇಳ್ತಿರೋದು ನಿಜವೆ?"

ಜೊನಾಥನ್ ಡೇವಿಡ್ ಅತ್ಯಂತ ದೈನ್ಯದಿಂದ ಸೋಮೇಶ್ವರದತ್ತರ ಕಡೆ ನೋಡಿದ, "ಹೌದು ಪಂಡತ್, ಲೆಫ್ಟಿನೆಂಟ್ ಗವರ್ನರ್ ಸಾಹೇಬರು ನಮ್ಮ ಮೇಮ್ ಸಾಹೇಬರಿಗೆ ಇನ್‌ಕ್ವೈರಿ ಮಾಡ್ತೀವಿ ಅಂತ ಹೇಳಿದಾರೆ! ಕಮಿಷನರ್, ಕಲೆಕ್ಟರ್, ಡಿಸ್ಟ್ರಿಕ್ಟ್ ಜಜ್ ಎಲ್ಲರೂ ಒಪ್ಪಿಗೆ ಕೊಟ್ಟಿದಾರೆ, ಆದರೆ ಆ ಹಂದೀಮಗ ಸಿವಿಲ್ ಸರ್ಜನ್ ಇದಾನಲ್ಲ, ಅವನು ಕ್ಲಬ್ಬಿನಲ್ಲಿ ಕಾಲಿಟ್ಟರೆ ಎತ್ತಿ ಬಾಗಿಲಾಚೆ ಎಸೀತೀನಿ ಅಂತಾನೆ. ಅವನ ಜೊತೆಗೆ ಆ ಸೂಳೇಮಗ ಕ್ಲೀಮೆಂಟ್ಸ್—ಮಿರ್, ಅವನು ನಿಮ್ಮ ಪೋಲೀಸ್ ಸೂಪರಿಂಟೆಂಡಂಟ್ ಬೇರೆ—ಸೇರಿಕೊಂಡಿದಾನೆ." ಹೀಗಂದು ಜೊನಾಥನ್ ಡೇವಿಡ್ ಕ್ಲಬ್ಬಿನ ಬೇರರ್‌ನಿಗೆ ಕೂಗಿಹೇಳಿದ, "ಬಾಯ್, ಒಂದು ಸಣ್ಣಪೆಗ್. ವೆಲ್ ಮ್ಯಾನ್, ನೀನೂ ತೊಗೋತೀಯಾ, ಮಿರ್? ಎರಡು ಸಣ್ಣದು!"

ಪಂಡಿತ ಸೋಮೇಶ್ವರದತ್ತರ ನಗೆ ಅವರ ಮೀಸೆ ತೂರಿ ಬಂತು. "ಮಿಸ್ಟರ್ ಡೇವಿಡ್, ಈ ಪೋಲೀಸ್ ಕ್ಯಾಪ್ಟನ್ ಕ್ಲೀಮೆಂಟ್ಸ್ ದಿನಾಗಲೂ ಗಂಗಾಪ್ರಸಾದನನ್ನ ಯೂರೋಪಿಯನ್ ಕ್ಲಬ್ಬಿಗೆ ಕರಸಿ ಅವನ ಜೊತೆ ಟೆನಿಸ್ ಆಡ್ತಾನೆ ಅಂತ ಕೇಳಿದೀನಿ. ಇದು ನಿಜವೆ?"

ಕಿಶೋರೀರಮಣ ಈಗ ಜೋರಾಗಿ ನಗಲಾರಂಭಿಸಿದ, "ಪಂಡಿತ್‌ಜೀ, ನಮ್ಮ ಸಿವಿಲ್ ಸರ್ಜನ್ ಮಿಸ್ಟರ್ ಮೆಕ್‌ಗಿಲ್ ಇದಾರಲ್ಲ, ಅವರು ನನ್ನನ್ನೂ ನಾಲ್ಕಾರು ಸಲ ಯೂರೋಪಿಯನ್ ಕ್ಲಬ್ಬಿಗೆ ಕರಕೊಂಡು ಹೋಗಿದಾರೆ. ಆದರೆ ನಮ್ಮ ಜೊನಾಥನ್ ಡೇವಿಡ್‌ರನ್ನ ಕಂಡರೆ ಅವರಿಗೆ ಯಾಕೆ ವೈರವೋ ಕಾಣೆ! ಇವರ ಮುಖ ಕಂಡರೆ ಸಾಕು, ಅವರು ಸಿಡಿದುಬೀಳ್ತಾರೆ."

ಬೇರರ್ ಬಂದು ಜೊನಾಥನ್ ಡೇವಿಡ್ ಹಾಗೂ ಮೀರ್ ಸಾಹೇಬರ ವ್ಹಿಸ್ಕಿಯ ಗ್ಲಾಸನ್ನು ತುಂಬಿಹೋದ. ಜೊನಾಥನ್ ಡೇವಿಡ್ ಒಂದು ಗುಟುಕಿನಲ್ಲಿಯೇ ಅರ್ಧ ಗ್ಲಾಸನ್ನು ಖಾಲಿಮಾಡಿ, ಒಂದು ನಿಟ್ಟುಸಿರು ಬಿಡುತ್ತ ಹೇಳಿದ, "ವೆಲ್ ಪಂಡತ್! ನನ್ನ ನಸೀಬು ಚೆನ್ನಾಗಿಲ್ಲ! ವಿಲಾಯಿತೀಗೆ ಹೋದೆ, ಅಸಲೀ ಯೂರೋಪಿಯನ್ ಹೆಂಗಸನ್ನ ಮದುವೆಯಾದೆ. ಡ್ಯಾಡಿ ನಾನು ಆಂಗ್ಲೋ-ಇಂಡಿಯನ್ ಅಂತಾನೇ ಬರಸಿದರು. ಆದರೆ ಈ ಹಂದೀಮಕ್ಕಳು, ಮೆಕ್‌ಗಿಲ್, ಕ್ಲೀಮೆಂಟ್ಸ್ ಇದಾರಲ್ಲ, ಇವರು ನನ್ನನ್ನ ನೇಟಿವ್ ಕ್ರಿಶ್ಚಿಯನ್ ಅಂತಾನೇ ಅಂತಾರೆ. ಪಂಡತ್, ಇದು ನಸೀಬು ಕೆಟ್ಟಿರೋದಲ್ಲದೆ ಮತ್ತೇನು? ನೋಡಿ, ಗಂಗಾಪ್ರಸಾದ ಬರ್‍ತಿದಾನೆ. ತುಂಬಾ ಸಂತೋಷದಲ್ಲಿರೋ ಹಾಗೆ ಕಾಣ್ತಾನೆ. ಹಲೋ ಮಿಸ್ಟರ್ ಗಂಗಾಪ್ರಸಾದ್, ಇವತ್ತು ನೀನು ಯೂರೋಪಿಯನ್ ಕ್ಲಬ್ಬಿನಲ್ಲಿ ಟೆನಿಸ್ ಆಡೋಕ್ಕೆ ಹೋಗಲಿಲ್ಲವೆ? ಹೇಳು ಮ್ಯಾನ್, ಏನು ಸಮಾಚಾರ?"

ಗಂಗಾಪ್ರಸಾದ ಹತ್ತಿರ ಬರುತ್ತ ಹೇಳಿದ, "ನಾನು ಇವತ್ತು ರಾತ್ರಿ, ಇಲ್ಲವೇ ನಾಳೆ ಬೆಳಗಿನ ಗಾಡಿಯಿಂದ ಅಲಹಾಬಾದಿಗೆ ಹೋಗಬೇಕಾಗಿದೆ. ದಿಲ್ಲೀ ದರಬಾರಿನ ವ್ಯವಸ್ಥಾಪನೆ ಕಮಿಟೀಲಿ ನನ್ನ ಹೆಸರೂ ಇದೆ. ಎರಡು ಮೂರು ತಿಂಗಳು ದಿಲ್ಲೀಲಿ ಇರಬೇಕಾಗುತ್ತೆ. ಅದಕ್ಕೆ ಬೇಕಾದ ಏರ್ಪಾಡು ಮಾಡಬೇಕಾಗಿದೆ."

ಜೊನಾಥನ್ ಡೇವಿಡ್ ಆಶ್ಚರ್ಯದಿಂದ ಗಂಗಾಪ್ರಸಾದನನ್ನು ನೋಡಿದ, "ನೀನು ತುಂಬಾ ಅದೃಷ್ಟವಂತ, ಗಂಗಾಪ್ರಸಾದ್! ಇಷ್ಟು ಜೂನಿಯರ್! ಒಟ್ಟು ಸರ್ವಿಸ್ ಎರಡು ವರ್ಷ ಮಾತ್ರ, ದಿಲ್ಲೀ ದರಬಾರಿನ ವ್ಯವಸ್ಥೆ ಮಾಡೋಕ್ಕೆ ನಿನ್ನನ್ನ ಕಳಿಸ್ತಿದಾರೆ. ಮೀರ್, ನಿನ್ನನ್ನ ಕಳಿಸ್ತಾರೆ ಅಂತ ನಾನು ಅಂದುಕೊಂಡಿದ್ದೆ. ಆದರೆ ಹೋಗ್ತಿರೋನು ಗಂಗಾಪ್ರಸಾದ!"

ಗಂಗಾಪ್ರಸಾದ ದಿಲ್ಲೀ ದರಬಾರಿಗೆ ಹೋಗುವ ಸುದ್ದಿ ಕೇಳಿ ಮೀರ್ ಜಾಫರ್‌ಅಲಿಗೆ ಆಘಾತವಾದಂತಾಯಿತು. "ಜೊನಾಥನ್ ಸಾಹೇಬ್, ಇದೆಲ್ಲಾ ಆ ಕ್ಲೀಮೆಂಟ್ಸ್‌ನ

ಖದೀಮತನ. ಈ ಹಜರತ್ ಸಾಹೇಬ ದಿನಾಗಲೂ ಅವನ ಜೊತೆ ಟೆನಿಸ್ ಆಡ್ತಾನೆ. ಅವನಿಗೆ ಖುಶಾಮತ್ ಮಾಡ್ತಾನೆ. ಇನ್ನು ಇವನನ್ನ ಕಳಿಸದೆ ನನ್ನನ್ನ ಕಳಿಸ್ತಾರೆಯೆ!"

ಕಿಶೋರೀರಮಣ ಕೂಗಿ ಹೇಳಿದ, "ಗಂಗಾಪ್ರಸಾದ, ನೀವು ಚಕ್ರವರ್ತಿಗಳನ್ನ ಭೇಟಿ ಮಾಡೇಮಾಡ್ತೀರಿ. ಅವರ ಜೊತೆ ನಮ್ಮ ಜೊನಾಥನ್ ಡೇವಿಡ್‌ರ ರೆಪ್ರೆಸೆಂಟೇಷನ್ ವಿಷಯ ಮಾತನಾಡೋದು ಮರೀಬೇಡಿ. ಜೊನಾಥನ್ ಡೇವಿಡ್ ಯೂರೋಪಿಯನ್ ಅಥವಾ ಆಂಗ್ಲೋ-ಇಂಡಿಯನ್ ಅಂತ ಒಪ್ಪಿಕೊಳ್ಳೋ ಹಾಗೆ ಆಜ್ಞೆ ಚಲಾಯಿಸಬೇಕಂತೆ ಅಂತ ಹೇಳಿ."

ಜೊನಾಥನ್ ಡೇವಿಡ್ ತುಂಬ ಗಂಭೀರನಾಗಿ ಹೇಳಿದ, "ಇವನು ಏನು ಹೇಳ್ತಾನು ಕಿಂಗ್ ಎಂಪರರ್‌ಗೆ? ಅವರ ಹತ್ತಿರ ಯಾವ ನೇಟಿವ್‌ಗೂ ಹೋಗೋಕ್ಕೆ ಬಿಡೋಲ್ಲ! ನಾನು ನಮ್ಮ ಮಿಸೆಸ್‌ನ ಅಲ್ಲಿಗೆ ಕಳಿಸ್ತೀನಿ!"

ಗಂಗಾಪ್ರಸಾದ ತೆಳ್ಳನೆಯ ಎತ್ತರವಾದ ಶರೀರದ ಯುವಕ. ಅಲಹಾಬಾದಿನಲ್ಲಿ ಬಿ. ಎ. ಪಾಸುಮಾಡಿ ಡೆಪ್ಯುಟಿ ಕಲೆಕ್ಟರ್ ಆಗಿ ಕೆಲಸಮಾಡುತ್ತಿದ್ದ. ಅವನು ಡೆಪ್ಯುಟಿ ಕಲೆಕ್ಟರ್ ಆಗುವುದಕ್ಕೆ ಜ್ವಾಲಾಪ್ರಸಾದನ ಪ್ರಯತ್ನ, ಲಕ್ಷ್ಮೀಚಂದನ ಪ್ರಭಾವಗಳ ಜೊತೆಗೆ ವೈಯಕ್ತಿಕವಾಗಿ ಅವನ ಸ್ವಂತದ ಯೋಗ್ಯತೆಯದೂ ಒಂದು ದೊಡ್ಡ ಪಾಲಿತ್ತು. ಬಿ. ಎ. ಯಲ್ಲಿ ಅವನಿಗೆ ಸಿಕ್ಕಿದ್ದುದೇನೋ ಸೆಕಂಡ್ ಡಿವಿಷನ್. ಆದರೆ ಆಟದಲ್ಲಿ, ವಿದ್ಯಾರ್ಥಿ ಜೀವನದ ಸಾಮಾಜಿಕ ಚಟುವಟಿಕೆಗಳಲ್ಲಿ ಅವನು ಸಾಕಷ್ಟು ಮುಂದಿದ್ದ. ಜೈದೇಯಿಯ ಜೊತೆ ಸಿವಿಲ್‌ಲೈನ್ಸ್‌ನ ಬಂಗಲೆಯಲ್ಲಿ ವಾಸಿಸುತ್ತಿದ್ದ ಕಾರಣ ಅವನಿಗೆ ಎಲ್ಲ ತರಹದ ಸೌಕರ್ಯಗಳೂ ಪ್ರಾಪ್ತವಾಗಿದ್ದವು. ಈ ಸೌಕರ್ಯಗಳಿಂದಾಗಿ ಗಂಗಾಪ್ರಸಾದ ಅಲಹಾಬಾದಿನ ಮೋರ್ಸ್ ಸೆಂಟ್ರಲ್ ಕಾಲೇಜಿನಲ್ಲಿ ಎಲ್ಲರಿಗಿಂತ ಹೆಚ್ಚು ಹೆಸರುವಾಸಿಯಾದ ಆಟಗಾರನಾಗಿದ್ದ. ಕ್ರಿಕೆಟ್ ಮತ್ತು ಟೆನಿಸ್, ಈ ಎರಡರಲ್ಲಿ ಅವನಿಗೆ ಅಖಿಲ ಭಾರತೀಯ ಖ್ಯಾತಿ ದೊರೆತಿತ್ತು.

ಗಂಗಾಪ್ರಸಾದ ಆ ಹೊತ್ತು ತನ್ನದೇ ಯೋಚನೆಯಲ್ಲಿದ್ದ. ಜೊನಾಥನ್ ಡೇವಿಡ್ ಆಡಿದ ಮಾತಿಗೆ ಅವನು ಬರಿಯ ನಗೆ ಸೂಸಿ, ಅವರೆಲ್ಲರನ್ನೂ ಬಿಟ್ಟು ಬ್ರಿಜ್ ಟೇಬಲ್ಲಿನ ಕಡೆ ನಡೆದ. ಗಂಗಾಪ್ರಸಾದ ಅಲ್ಲಿಂದ ಹೋದೊಡನೆಯೇ ಮೀರ್ ಜಾಫರ್‌ಅಲಿ ಹೇಳಿದ, "ನೋಡಿದಿರಾ ಪಂಡಿತ ಸೋಮೇಶ್ವರದತ್ತ ಸಾಹೇಬ್, ಈ ಹುಡುಗನ್ನ! ಏನು ದೊಡ್ಡಸ್ತಿಕೆ! ಏನು ದಿಮಾಕು! ಜಮೀನುದಾರನ ಠೀವಿ ಇದೆ ಇವನಲ್ಲಿ!" ಪಂಡಿತ ಸೋಮೇಶ್ವರದತ್ತರು ಸ್ವಲ್ಪ ಹೊತ್ತು ಸುಮ್ಮನಿದ್ದು ಉತ್ತರ ಕೊಟ್ಟರು. "ಅಪ್ಪಮಕ್ಕಳಲ್ಲಿ ಬೇಕಾದಷ್ಟು ವ್ಯತ್ಯಾಸವಿದೆ. ಆದರೆ ಹುಡುಗ ಒಳ್ಳೇ ಮನೆತನಸ್ಥ. ಇಷ್ಟನ್ನಂತೂ ನೀವು ಒಪ್ಪಲೇ ಬೇಕು, ಮೀರ್‌ಸಾಹೇಬ್. ಈ ಗಂಗಾಪ್ರಸಾದ ಧೀರ. ಸಾಹಸಿ. ಹೊಸ ಕಾಲದ ಹುಡುಗ, ಹೊಸ ಜಗತ್ತಿನಲ್ಲಿ ತುಂಬ ಮುಂದೆ ಹೋಗ್ತಾನೆ."

"ಏನು ಮುಂದೆ ಹೋಗ್ತಾನೆ, ಮಣ್ಣು. ಈಗಾಗಲೇ ಇವನ ಮೇಲೆ ಕಂಪ್ಲೇಂಟು

ಬರೋಕ್ಕೆ ಷುರುವಾಗಿದೆ. ಇವನು ಮನಸ್ಸೋ ಇಚ್ಛೆ ಖರ್ಚು ಮಾಡೋಕ್ಕೆ ಹಣ ಎಲ್ಲಿಂದ ಸಿಗುತ್ತೆ, ಹೇಗೆ ಸಿಗುತ್ತೆ ಅಂತ ದೇವರೇ ಬಲ್ಲ. ಯಾಕೆ ಅಂದರೆ ಇವನು ಲಂಚ ತಿಂತಾನೆ ಅನ್ನೋ ಕಂಪ್ಲೇಂಟ್ ಮಾತ್ರ ಬಿಲ್‌ಕುಲ್ ಇಲ್ಲ. ನಾನು ಹೇಳ್ತೀನಿ ಕೇಳಿ, ಈ ಹುಡುಗ ಯಾವತ್ತೋ ಪೇಚಿಗೆ ಸಿಕ್ಕಿಬೀಳ್ತಾನೆ! ನೀವು ತಿಳಿದವರು, ಇವರಪ್ಪನ ಸ್ನೇಹಿತರು, ನೀವು ಇವನಿಗೆ ಬುದ್ಧಿ ಹೇಳಬೇಕು," ಮಿರ್ ಜಾಫರ್‌ಅಲಿ ಹೇಳಿದ.

ಕಿಶೋರೀರಮಣ ಜೋರಾಗಿ ನಕ್ಕ, "ಯಾಕೆ, ನಿಮಗೆ ಹೊಟ್ಟೆ ಉರೀತಿದೆಯೆ, ಮಿರ್‌ಸಾಹೇಬ್? ನೀವು ನಿಮ್ಮ ಹರಕುನಾಲಿಗೆ ಇಟ್ಟುಕೊಂಡು ಸುರಕ್ಷಿತವಾಗಿರ್ತೀರಿ, ಆದರೆ ಈ ಗಂಗಾಪ್ರಸಾದ ಪೇಚಿಗೆ ಸಿಕ್ಕಿಬೀಳ್ತಾನೆ ಅಲ್ಲವೆ? ಏನು ಪಂಡಿತ್‌ಜೀ, ನಿಮ್ಮ ಅಭಿಪ್ರಾಯವೇನು?"

ಪಂಡಿತ ಸೋಮೇಶ್ವರದತ್ತರು ಗಂಭೀರರಾಗಿ ಹೇಳಿದರು, "ಡಾಕ್ಟರ್, ಮಿರ್ ಸಾಹೇಬರು ಹೇಳೋದು ಸರಿ. ಮಿರ್‌ಸಾಹೇಬ್ ಮತ್ತು ಗಂಗಾಪ್ರಸಾದರಲ್ಲಿ ಒಂದು ವ್ಯತ್ಯಾಸವಿದೆ. ಅದೇನು ಅಂದರೆ ಗಂಗಾಪ್ರಸಾದ ಸಾಹಸಿಯೂ ಹೌದು. ಇಂಗ್ಲೀಷಿನೋರಲ್ಲಿ ಅವನಿಗೆ ಯಾಕೆ ಸಲಿಗೆ ಅಂದರೆ ಅವರ ಜೊತೆ ಸರಿಸಮವಾಗಿ ಬೆರೀತಾನೆ, ಸರಿಸಮವಾಗಿ ವರ್ತಿಸ್ತಾನೆ. ಆದರೆ, ಡಾಕ್ಟರೇ, ಇದೇ ಅವನ ಅವಗುಣವೂ ಅನ್ನಿ. ಅವನು ಧೈರ್ಯವಂತನಾದ್ದರಿಂದ ಅವರನ್ನ ಸುಮ್ಮಸುಮ್ಮನೆ ಹೊಗಳಲಾರ. 'ಧೈರ್ಯ ಅಪರಾಧದ ತಾಯಿ' ಅನ್ನೋ ಮಾತು ನಿಜ. ನಮ್ಮ ಮಿರ್‌ಸಾಹೇಬರು ಬಹುಮಟ್ಟಿಗೆ ಪುಕ್ಕಲ ಜಾತಿಗೆ ಸೇರಿದವರು. ಇವರ ಸೂಪರಿಂಟೆಂಡೆಂಟರು ಇವರನ್ನ ಬೈತಾರೆ. ಆಗ ಇವರ ಮುಖದ ಮೇಲೆ ಒಂದು ನೆರಿಗೆ ಸಹ ಮೂಡೊಲ್ಲ ಅಂದರೆ ಇವರ ಧೈರ್ಯಕ್ಕೆ ಏನು ಹೇಳೋಣ! ಮಿರ್‌ಸಾಹೇಬರು ಎಲ್ಲರಿಗೂ ಬೇಕಾದವರು. ಆದರೆ ಗಂಗಾಪ್ರಸಾದನಿಗೆ ಅವನ ಅಹಂಕಾರವೇ ಮಹಾಶತ್ರು. ಗಂಗಾಪ್ರಸಾದನಲ್ಲಿ ಇನ್ನೊಂದು ಕಷ್ಟ ಅಂದರೆ, ಮಿರ್‌ಸಾಹೇಬರ ಒಳಗೂ ಹೊರಗೂ ಭೂಮ್ಯಾಕಾಶಗಳಷ್ಟು ಅಂತರ ಇದ್ದರೆ ಅವನು ಒಳಗೆ ಹೇಗೋ ಹೊರಗೂ ಹಾಗೇನೇ. ಡಾಕ್ಟರ್ ಸಾಹೇಬರೇ, ನಮ್ಮದು ಬಹುಮಟ್ಟಿಗೆ ಇಬ್ಬಂದಿ ಪ್ರಪಂಚ. ಮನುಷ್ಯ ಇಬ್ಬಂದಿಯಾಗಿದ್ದರೇನೇ ಏಳಿಗೆಗೆ ಬರೋದು."

ಮಿರ್ ಜಾಫರ್‌ಅಲಿ ಪಂಡಿತ ಸೋಮೇಶ್ವರದತ್ತರ ಮಾತನ್ನು ತಪ್ಪು ತಿಳಿಯಲಿಲ್ಲ. "ಅರೇ ಪಂಡತ್, ನೀನೂ ಮಹಾ ದೊಡ್ಡ ಮನುಷ್ಯಕಣಯ್ಯಾ! ನಡೀರಿ, ಜೊನಾಥನ್ ಸಾಹೇಬ್, ಒಂದೆರಡು ಆಟ ಆಡಿಬರೋಣ," ಎನ್ನುತ್ತ ಎದ್ದು ಹೊರಟ.

ಮಿರ್ ಜಾಫರ್‌ಅಲಿ ಜೊನಾಥನ್ ಡೇವಿಡ್‌ನ ಕೈಹಿಡಿದುಕೊಂಡು ಬ್ರಿಜ್ ರೂಮಿನೊಳಗೆ ಕಾಲಿಟ್ಟಾಗ, ಗಂಗಾಪ್ರಸಾದ ಅದೇ ತಾನೆ ಆಟ ಮುಗಿಸಿ ಏಳುತ್ತಿದ್ದ. ಅವನು ಮಿರ್‌ಸಾಹೇಬನ ಹತ್ತಿರ ಬಂದು "ಮಿರ್‌ಸಾಹೇಬ್, ಕೊಂಚ ನನ್ನ ಜತೆ ಬನ್ನಿ.

ನಿಮ್ಮ ಹತ್ತಿರ ಸ್ವಲ್ಪ ಜರೂರು ಮಾತನಾಡೋದಿದೆ. ಮಿಸ್ಟರ್ ಡೇವಿಡ್, ನಿಮ್ಮ ಸ್ನೇಹಿತರನ್ನ ಎಳಕೊಂಡು ಹೋಗ್ತಿದೀನಿ, ಕ್ಷಮಿಸಿ" ಅಂದ.

ಮೀರ್ ಜಾಫರ್‌ಅಲಿಯನ್ನು ಕರೆದುಕೊಂಡು ಗಂಗಾಪ್ರಸಾದ ಕ್ಲಬ್ಬಿನ ಕಟ್ಟಡದ ಹೊರಗಡೆ ಬಂದಾಗ ಮೀರ್‌ಸಾಹೇಬ್ ಕೇಳಿದ, "ನನ್ನನ್ನ ನಿನ್ನ ಜೊತೆ ಎಲ್ಲಿಗೆ ಕರಕೊಂಡು ಹೋಗ್ತಿದೀಯಯ್ಯ?"

"ಮಿಸ್ಟರ್ ಕ್ಲೀಮೆಂಟ್ಸರ ಬಂಗಲೇಗೆ," ಗಂಗಾಪ್ರಸಾದ ಹೇಳಿದ. "ನಿಮ್ಮನ್ನೂ ದಿಲ್ಲಿ-ದರಬಾರಿನ ಕಮಿಟೀಲಿ ಹಾಕ್ಕೊಳ್ಳಿ ಅಂತ ಅವರಿಗೆ ಹೇಳಿದ್ದೆ. ಅವರು ಅರ್ಧ ಒಪ್ಪಿಕೊಂಡಹಾಗಿತ್ತು. ಈಗ ನೀವೇ ಬಂದು ಅವರ ಜೊತೆ ಮಾತಾಡಿ. ನಿಮ್ಮನ್ನೂ ಕರಕೊಂಡು ಹೋಗೋಕ್ಕೆ ಅವರು ಒಪ್ಪಬಹುದು ಅಂತ ತೋರುತ್ತೆ."

"ಹೌದೇನಯ್ಯ?" ಮೀರ್‌ಸಾಹೇಬರು ಕೃತಜ್ಞತೆಯಿಂದ ಗಂಗಾಪ್ರಸಾದನ ಕೈ ಅದುಮುತ್ತ ಹೇಳಿದ. "ನೀನು ನನ್ನನ್ನ ದಿಲ್ಲಿ-ದರಬಾರಿಗೆ ಕಳಿಸೋ ಹಾಗೆ ಮಾಡಿದರೆ ಸಾಯೋತನಕ ನಾನು ನಿನ್ನ ಗುಲಾಮನಾಗಿರ್ತೀನಿ."

ಅವರಿಬ್ಬರೂ ಮಿಸ್ಟರ್ ಕ್ಲೀಮೆಂಟ್ಸರ ಬಂಗಲೆ ತಲಪಿದಾಗ ಅವರು ವರಾಂಡದಲ್ಲಿ ದಿಲ್ಲಿ-ದರಬಾರಿನ ಯೋಜನೆಯನ್ನು ಪರಿಶೀಲಿಸುತ್ತಿದ್ದರು. ದಿಲ್ಲಿ-ದರಬಾರಿನ ವ್ಯವಸ್ಥೆಯ ಭಾರ ಉತ್ತರ ಪ್ರದೇಶದ ಲೆಫ್ಟಿನೆಂಟ್ ಗವರ್ನರ್ ಅವರ ಮೇಲಿತ್ತು. ಮಿಸ್ಟರ್ ಕ್ಲೀಮೆಂಟ್ಸ್ ಉತ್ತರ ಪ್ರದೇಶದ ಲೆಫ್ಟಿನೆಂಟ್ ಗವರ್ನರರ ಕೃಪೆಗೆ ಪಾತ್ರರಾಗಿದ್ದರು. ಗಂಗಾಪ್ರಸಾದ, ಮೀರ್ ಜಾಫರ್‌ಅಲಿ ಕಣ್ಣಿಗೆ ಬೀಳುತ್ತಲೇ ಮಿಸ್ಟರ್ ಕ್ಲೀಮೆಂಟ್ಸ್ ಹೇಳಿದರು, "ಹಲೋ ಗಂಗಾಪ್ರಸಾದ್, ನೀನು ದಿಲ್ಲಿ ತಲಪೋದು ಯಾವಾಗ? ನಾನಂತೂ ನಾಡಿದ್ದು ಅಲ್ಲಿರ್ತೀನಿ."

"ನಾನು ನಾಳೆ ಬೆಳಗ್ಗೆ ಅಲಹಾಬಾದಿಗೆ ಹೋಗ್ತಿದೀನಿ, ಸಾರ್. ಅಲ್ಲಿಂದ ಒಂದು ವಾರ ಬಿಟ್ಟು ದಿಲ್ಲೀಲಿ ಹಾಜರಾಗ್ತೀನಿ. ಹೆಂಡತಿಮಕ್ಕಳನ್ನ ಅಲಹಾಬಾದಿಗೆ ತಲಪಿಸ ಬೇಕಲ್ಲ!"

"ಒಳ್ಳೇದು, ಒಂದು ವಾರದೊಳಗೆ ಅಲ್ಲಿದ್ದರೆ ಸರಿ. ಮೀರ್, ನೀನೇನು ಬಂದದ್ದು? ಏನಾದರೂ ವಿಶೇಷವಿತ್ತೆ?"

ಅದಕ್ಕೆ ಉತ್ತರ ಕೊಟ್ಟವನು ಗಂಗಾಪ್ರಸಾದ. "ನಾನೇ ಇವರನ್ನ ಜೊತೇಲಿ ಕರಕೊಂಡು ಬಂದೆ, ಸಾರ್. ಮೀರ್‌ಸಾಹೇಬರೂ ದಿಲ್ಲಿ-ದರಬಾರಿನ ವ್ಯವಸ್ಥೆ ಮಾಡಿ ಬರೋಕ್ಕೆ ಇಷ್ಟಪಡ್ತಾರೆ. ನೀವೇ ಖುದ್ದಾಗಿ ಬಂದು ಕ್ಯಾಪ್ಟನ್ ಸಾಹೇಬರ ಜೊತೆ ಯಾಕೆ ಮಾತಾಡಬಾರದು ಅಂದೆ! ಮೀರ್‌ಸಾಹೇಬರು ನಿಮ್ಮ ಹತ್ತಿರ ಮಾತಾ ಡೋಕ್ಕೆ ಹೆದರ್ತಾರೆ. ಅದ್ದರಿಂದ ನಾನೇ ಬಲವಂತವಾಗಿ ಕರಕೊಂಡು ಬಂದೆ."

ಗಂಗಾಪ್ರಸಾದನ ಮಾತು ಕೇಳಿ ಮಿಸ್ಟರ್ ಕ್ಲೀಮೆಂಟ್ಸ್ ನಕ್ಕರು. "ಗಂಗಾಪ್ರಸಾದ್, ನನ್ನನ್ನ ಕಂಡರೆ ಈ ಮೀರ್‌ಗೆ ಹೆದರಿಕೆಯೆ? ನೀನು ಏನು ಹೇಳ್ತಿದಿ? ದೊಡ್ಡ

ಸುವರ್ ಇವನು. ಇವನಂಥ ಖದೀಮ ನಿನಗೆಲ್ಲೂ ಸಿಗೋಲ್ಲ. ಏನು ಮೀರ್, ನಾನು ತಪ್ಪು ಹೇಳ್ತಿಲ್ಲ ಅಲ್ಲವೆ? ನೀನು 'ನಂಬರ್ ಒನ್' ಬದಮಾಶ್ ಹೌದೋ ಅಲ್ಲವೊ?"

ಮೀರ್ ಜಾಫರ್‌ಅಲಿ ತುಂಬ ನಮ್ರತೆಯಿಂದ ಹೇಳಿದ, "ಹುಜೂರರಿಗೆ ಎದುರಾಡೋ ಅಷ್ಟು ಜ಼ೂರತ್ತು ನನಗೆಲ್ಲಿ ಬರಬೇಕು? ಹಾಗೆ ಮಾತಾಡೋದು ಶಿಷ್ಟಾಚಾರವಲ್ಲ."

ಮಿಸ್ಟರ್ ಕ್ಲೀಮೆಂಟ್ಸ್ ಗಂಗಾಪ್ರಸಾದನ ಕಡೆ ನೋಡಿದರು, "ಕೇಳಿದೆಯಾ, ಗಂಗಾಪ್ರಸಾದ್! ಎಂಥ ಖದೀಮ ಇದಾನೆ ಇವನು! ಇವನನ್ನ ನೀನು ದಿಲ್ಲಿ–ದರಬಾರಿನ ವ್ಯವಸ್ಥೆ ಮಾಡೋಕ್ಕೆ ಕಳಿಸು ಅಂತಿದಿ!"

ಮೀರ್‌ಸಾಹೇಬ್ ಇದ್ದಿದ್ದೂ ನಯವಾಗಿ ಹೇಳಿದ, "ನನ್ನದು ಅಧಿಕಪ್ರಸಂಗಿತನ ಅನಿಸಿದರೆ ಕ್ಷಮಿಸಬೇಕು. 'ನಂಬರ್ ಒನ್' ಜನಗಳು ಸೇರಿಯೇ ಈ ಪೋಲಿಸ್ ಇಲಾಖೆ ಆಗಿರೋದು. ಹುಜ಼ೂರ್, ನನ್ನಂಥವರು ನಿಮ್ಮ ಸೇವೇಲಿ ಇಲ್ಲದೆ ಹೋಗಿದ್ದರೆ ಈ ಸಾಮ್ರಾಜ್ಯ ಒಂದು ದಿನವೂ ಉಳೀತಿರಲಿಲ್ಲ. ವ್ಯವಸ್ಥೆ ಏನಿದ್ದರೂ ನಾವುಗಳು ತಾನೇ ಮಾಡೋದು."

ಈ ಮಾತನ್ನು ಕೇಳಿ ಕ್ಲೀಮೆಂಟ್ಸ್ ಜೋರಾಗಿ ನಗಲಾರಂಭಿಸಿದರು. "ಸರಿಯಾಗಿ ಹೇಳಿದೆ, ಮೀರ್. ಸರಿಯಾಗಿ ಹೇಳಿದೆ! ಒಳ್ಳೇದು, ಗಂಗಾಪ್ರಸಾದ. ಮೀರ್ ಜಾಫರ್‌ಅಲಿಯ ಹೆಸರನ್ನು ಲಿಸ್ಟಿನಲ್ಲಿ ಸೇರಸ್ತೀನಿ. ಈ ಅಯೋಗ್ಯನಿಗೆ ಹೊರಡೋ ಏರ್ಪಾಡು ಮಾಡಿಕೊ ಅಂತ ಹೇಳು."

ಮೀರ್‌ಸಾಹೇಬನ ಮುಖ ಅರಳಿತು. ಅವನು ಬಗ್ಗಿ ಕ್ಲೀಮೆಂಟ್ಸ್‌ರಿಗೆ ಒಂದು ದೊಡ್ಡ ಸಲಾಮು ಮಾಡಿದ.

ಮೀರ್ ಜಾಫರ್‌ಅಲಿಯನ್ನು ವಾಪಸು ಕ್ಲಬ್ಬಿನಲ್ಲಿ ಬಿಟ್ಟು ಗಂಗಾಪ್ರಸಾದ ಮನೆ ಸೇರಿದ. ಅವನು ಅಷ್ಟು ಬೇಗ ಹಿಂದಿರುಗಿ ಬಂದದ್ದನ್ನು ನೋಡಿ ಅವನ ಹೆಂಡತಿ ರುಕ್ಮಿಣಿಗೆ ಆಶ್ಚರ್ಯವಾಯಿತು. ರುಕ್ಮಿಣಿ ನೆರೆಯ ವಕೀಲ ಶ್ರೀಕೃಷ್ಣರ ಮನೆಗೆ ಹೋಗಿ ಬರಲು ತಯಾರಿ ನಡಸಿದ್ದಳು. ಭೀಖೂ ಗಂಗಾಪ್ರಸಾದನ ಎರಡು ವರ್ಷದ ಮಗ ನವಲಕಿಶೋರನನ್ನು ವರಾಂಡದಲ್ಲಿ ಕೂರಿಸಿಕೊಂಡು ಆಡಿಸುತ್ತಿದ್ದ. ಅಡಿಗೆಯವಳು ಒಳಗೆ ಅಡಿಗೆ ಮಾಡುತ್ತಿದ್ದಳು. ಗಂಗಾಪ್ರಸಾದನನ್ನು ನೋಡಿದೊಡನೆಯೇ ಭೀಖೂ ಹೇಳಿದ, "ಇವತ್ತು ಬಲುಬೇಗ ಬಂದೆಯಲ್ಲ, ಮಗು! ರುಕ್ಮಿಣಿ ವಕೀಲಸಾಹೇಬರ ಮನೆಗೆ ಹೋಗೋಕ್ಕೆ ಸಿದ್ಧತೆ ಮಾಡಿಕೊಳ್ತಾ ಇದ್ದಳು."

ಗಂಗಾಪ್ರಸಾದನ ಮುಖದ ಮೇಲಿನ ಮುಗುಳುನಗೆಯನ್ನು ಕಂಡು ರುಕ್ಮಿಣಿಗೆ ಏನೋ ಸಂತೋಷದ ಸುದ್ದಿಯಿದೆ ಎಂದನಿಸಿತು. "ಏನು, ಬಹಳ ಸಂತೋಷವಲ್ಲಿದ್ದೀರಲ್ಲ, ಏನಾದರೂ ಬಡ್ತಿ ಗಿಡ್ತಿ ಸಿಗತೋ ಹೇಗೆ?" ಅವಳು ಕೇಳಿದಳು.

"ಬಡ್ತಿ ಅಂತಾನೆ ಇಟ್ಟುಕೋ! ದಿಲ್ಲಿ-ದರಬಾರಿನ ವ್ಯವಸ್ಥೆ ಮಾಡೋಕ್ಕೆ ದಿಲ್ಲಿಗೆ

ಹೋಗಬೇಕು ಅಂತ ಅಪ್ಪಣೆಯಾಗಿದೆ. ನಡಿ, ನೀನೂ ದಿಲ್ಲಿ-ದರಬಾರು ನೋಡುವಿಯಂತೆ! ದಿಲ್ಲಿ ತುಂಬ ಹಳೇಪಟ್ಟಣ — ಕೆಂಪುಕೋಟೆ, ಕುತುಬ್‌ಮಿನಾರ್, ಇವುಗಳ ಜೊತೇಗೆ ದಿಲ್ಲಿ-ದರಬಾರ್!"

ರುಕ್ಮಿಣಿ ನಾಲಗೆ ಕಚ್ಚುತ್ತ ಹೇಳಿದಳು, "ರಾಮ ರಾಮ! ನಿಮ್ಮ ಜೊತೆ ದಿಲ್ಲಿ ಪೇಟೇಲಿ ಅಲೆಯೋಕ್ಕೆ ಹೊರಟರೆ ಜನ ಏನಂದಾರು! ಮುಖದ ಮೇಲೆ ಈ ಎರಡು ಮೊಳದ ಮುಸುಕನ್ನೂ ಎಳಕೊಂಡು ನಿಮ್ಮ ಜೊತೆ ಹೊರಟರೆ ಜನ ನಗೋಲ್ವೆ?"

"ಅರೆ, ಮುಖಕ್ಕೆ ಮುಸುಕು ಹಾಕ್ಕೊಳ್ಳೋ ಅಗತ್ಯ ಏನಿದೆ? ಈ ಹಳೇ ಕಂದಾಚಾರಸೆಲ್ಲಾ ಬಿಡು. ಭೀಖೂ, ನಮ್ಮ ಸಾಮಾನು ಸಿದ್ಧಮಾಡು. ನಾಳೆ ಬೆಳಗ್ಗೆ ಇಲ್ಲವೇ ಮಧ್ಯಾಹ್ನದ ಗಾಡೀಲಿ ನಾವು ಹೊರಡಬೇಕಾಗಿದೆ. ಮೂರು ತಿಂಗಳು ಅಲ್ಲಿರಬೇಕಾಗುತ್ತೆ ಅಂದುಕೊ. ಚಳಿಗಾಲಕ್ಕೆ ಬೇಕಾಗೋ ಬಟ್ಟೇನೂ ಜೊತೇಲಿ ತೊಗೊಂಡು ಹೋಗೋಣ."

"ಇಲ್ಲ, ಭೀಖೂ ಕಾಕಾ. ಇವರಂತೂ ಯಾವಾಗಲೂ ಹೀಗೇ ತಲೆಬುಡವಿಲ್ಲದೆ ಮಾತಾಡ್ತಾರೆ. ದಿಲ್ಲಿ-ದರಬಾರಿನಲ್ಲಿ ಹೆಂಗಸರಿಗೇನು ಕೆಲಸ? ನೀನೇ ಹೇಳು, ಭೀಖೂ ಕಾಕಾ!" ರುಕ್ಮಿಣಿ ಭೀಖೂಗೆ ಹೇಳಿದಳು.

ಭೀಖೂ ನಕ್ಕ, "ಯಾಕಾಗಬಾರದು? ಲಂಗ ತೊಟ್ಟುಕೊಂಡು ನೀನೂ ದೊರೆಸಾನಿ ಆಗಿಬಿಡು! ಅಲ್ಲೇ ಇಂಗ್ಲೀಷ್ ಕಲಿತುಬಿಡು! ನಮ್ಮ ಮಗೂ ಆಸೇನೂ ಪೂರ್ತಿಯಾಗಲಿ. ಎಷ್ಟೇ ಆದರೂ ಇದು ಹೊಸಪ್ರಪಂಚ, ಹೊಸಹೊಸದನ್ನಕಲೀಬೇಕಾಗುತ್ತೆ."

"ರಾಮ ರಾಮ! ನೀನೂ ಹೀಗೆ ಮಾತಾಡೋಕ್ಕೆ ಶುರುಮಾಡಿದೆಯಾ, ಭೀಖೂ ಕಾಕಾ!" ರುಕ್ಮಿಣಿ ಹೇಳಿದಳು. ಆಮೇಲೆ ಗಂಗಾಪ್ರಸಾದನ ಕಡೆ ತಿರುಗಿ ಕೇಳಿದಳು, "ಮೂರು ತಿಂಗಳು ಅಲ್ಲಿರಬೇಕಾಗುತ್ತೆಯೆ? ನೀವು ಯಾವಾಗ ಅಲ್ಲಿ ತಲಪಬೇಕು?"

"ಒಂದು ವಾರದೊಳಗೆ ಅಲ್ಲಿರಬೇಕು. ಮೂರು ನಾಲ್ಕು ದಿನ ತಡವಾದರೂ ನಡೆಯುತ್ತೆ. ನೀನು ಮೂರು ತಿಂಗಳು ಇಲ್ಲಿ ಒಬ್ಬಳೇ ಹೇಗಿರ್ತಿ ಅಂತ ಯೋಚನೆಯಾಗಿದೆ," ಗಂಗಾಪ್ರಸಾದ ಹೇಳಿದ.

"ನಮ್ಮನ್ನ ಬಾಂದಾಗೆ, ನಿಮ್ಮ ತಂದೆಮನೆಗೆ ಸಾಗಹಾಕಿಬಿಡಿ. ಇಲ್ಲವೇ ಅಲಹಾಬಾದಿಗೆ ನಿಮ್ಮ ದೊಡ್ಡಮ್ಮನ ಹತ್ತಿರಕ್ಕೆ ಕಳಿಸಿಬಿಡಿ," ರುಕ್ಮಿಣಿ ಹೇಳಿದಳು. "ಅಮ್ಮಾಜೀನಾಗಲೀ ದೊಡ್ಡಮ್ಮನಾಗಲೀ ನೋಡಿ ವರ್ಷದ ಮೇಲಾಯಿತು. ದೊಡ್ಡಮ್ಮನಿಂದ ಕಾಗದ ಬಂದಿತ್ತು. ಈಚೆಗೆ ಅವರ ಮೈ ನೆಟ್ಟಗಿಲ್ಲವಂತೆ."

"ನಿನ್ನನ್ನ ಅಲಹಾಬಾದಿಗೆ ಕಳಿಸೋದು ಅಂತ ನಾನೂ ಯೋಚನೆಮಾಡ್ತಿದ್ದೆ," ಗಂಗಾಪ್ರಸಾದ ಹೇಳಿದ. "ಭೀಖುವಿಲ್ಲದೆ ಹೋದರೆ ದಿಲ್ಲೀಲಿ ನನ್ನ ಕೆಲಸ ಸಾಗೋಲ್ಲ. ಅವನನ್ನ ನನ್ನ ಜೊತೆ ಕರಕೊಂಡು ಹೋಗ್ತೀನಿ. ನಾಳೆ ಬೆಳಗಿನ ಗಾಡೀಗೆ ಅಲಹಾ

ಬಾದಿಗೆ ಹೋಗಬೇಕು, ನೀವಿಬ್ಬರೂ ಸೇರಿಕೊಂಡು ಹೊರಡೋ ಏರ್ಪಾಡು ಮಾಡಿ. ನಾನು ಬಾಂದಾಗೆ, ಅಪ್ಪನಿಗೆ, ಕಾಗದ ಬರೆದೇ ಬಿಡ್ತೀನಿ. ಅಲಹಾಬಾದಿಗೆ ಬಂದು ನಿನ್ನನ್ನ ಜೊತೇಲಿ ಕರಕೊಂಡು ಹೋಗಲಿ."

ಗಂಗಾಪ್ರಸಾದ ತಾನು ಅಲಹಾಬಾದಿಗೆ ಬರಲಿರುವ ಸುದ್ದಿ ತಿಳಿಸಿ ಆ ಕ್ಷಣ ಜೈದೇಯಿಗೆ ತಂತಿಕೊಟ್ಟ.

ಮೂರನೆಯ ದಿನ ಬೆಳಗ್ಗೆ ಗಂಗಾಪ್ರಸಾದ ಪರಿವಾರಸಮೇತ ಅಲಹಾಬಾದ್ ತಲಪಿದ. ಜೈದೇಯಿಯ ಟಾಂಗಾ ಸ್ಟೇಷನ್ನಿಗೆ ಬಂದಿತ್ತು. ಅದರಲ್ಲಿ ಸಾಮಾನು ಹೇರಿ ಎಲ್ಲರೂ ಜೈದೇಯಿಯ ಬಂಗಲೆ ತಲಪಿದರು.

ಮನೆಯಲ್ಲಿ ಜೈದೇಯಿಯೊಬ್ಬಳೇ ಇರಲಿಲ್ಲ, ಜ್ವಾಲಾಪ್ರಸಾದನೂ ಇದ್ದ. ಅವನು ಜೈದೇಯಿಯನ್ನು ಕಂಡುಹೋಗಲು ವಾರದ ರಜೆಯ ಮೇಲೆ ಅಲಹಾಬಾದಿಗೆ ಬಂದಿದ್ದ.

ಜೈದೇಯಿ ತುಂಬ ನಿಶ್ಶಕ್ತಳಾಗಿದ್ದಳು. ಮಲೇರಿಯಾ ಅವಳನ್ನು ಬಹಳವಾಗಿ ಕಾಡುತ್ತಿತ್ತು. ಅದೇ ಪಂಡಿತರ ಔಷಧಿ ನಡೆದಿತ್ತು. ಆದರೆ ಜ್ವಾಲಾಪ್ರಸಾದ ಬಂದೊಡನೆಯೇ ಪಂಡಿತರ ಔಷಧಿ ಬಿಡಿಸಿದ್ದ. ಡಾಕ್ಟರರ ಔಷಧಿಯಿಂದ ಎರಡು ದಿನದಲ್ಲಿ ಅವಳ ಜ್ವರ ಇಳಿದಿತ್ತು. ಜೈದೇಯಿಗೆ ರುಕ್ಮಿಣಿಯ ಮುಖ ಕಂಡೊಡನೆಯೇ ರೋಮಾಂಚವಾದಂತಾಯಿತು. "ಮಗು ಗಂಗಾ! ರುಕ್ಮಿಣೀನ ಕರಕೊಂಡು ಬಂದು ಬಲು ಒಳ್ಳೇ ಕೆಲಸ ಮಾಡಿದೆ. ನಾನಂತೂ ಇಲ್ಲಿ ತುಂಬಾ ಒಂಟಿಯಾಗಿದ್ದೆ. ಲಛ್ಮಿಯ ಹೆಂಡತಿಗೆ ತನ್ನ ಮಕ್ಕಳುಮರಿ, ಮನೆಗೆಲಸದ ನಡುವೆ ಇಲ್ಲೀಗೆ ಬರೋಕ್ಕೆ ಪುರಸೊತ್ತೇ ಆಗೋಲ್ಲ. ಅಲ್ಲದೆ ಅವಳು ಲಛ್ಮೀನ್ನೂ ನೋಡಿಕೋಬೇಕಲ್ಲ!"

"ನೀನು ಕಾನಪುರಕ್ಕೇ ಯಾಕೆ ಹೋಗೋಲ್ಲ, ದೊಡ್ಡಮ್ಮ?" ಗಂಗಾಪ್ರಸಾದ ಕೇಳಿದ.

"ಈಗ ಸಾಯೋ ಹೊತ್ನಲ್ಲಿ ಪ್ರಯಾಗರಾಜವನ್ನ ಬಿಟ್ಟು ಕಾನಪುರಕ್ಕೆ ಹೋಗಲೆ?" ಜೈದೇಯಿ ಮುಖದ ಮೇಲೆ ಒಂದು ಸಪ್ಪೆ ನಗು ತಂದುಕೊಂಡು ಹೇಳಿದಳು. "ಇಲ್ಲ ಮಗು, ಇನ್ನು ಏನಿದ್ದರೂ ನನ್ನ ದೇಹ ಇಲ್ಲಿ ತ್ರಿವೇಣಿತಟದಲ್ಲೇ ಬೂದಿಯಾಗುತ್ತೆ. ಅರವತ್ತು ಕಳೀತು. ಇನ್ನಿರೋದು ಒಂದೆರಡು ವರ್ಷ ಅಂದುಕೊ!" ಹೀಗೆ ಹೇಳುತ್ತ ಜೈದೇಯಿಯ ಕಣ್ಣು ತೇವವಾಯಿತು. ಅವಳು ಮಾತು ಮುಂದುವರಿಸಿದಳು. "ಲಛ್ಮಿಗೆ ತುಂಬಾ ಕೋಪ ಬಂದಿದೆ. ಕಾನಪುರಕ್ಕೆ ನಡಿ, ಕಾನಪುರಕ್ಕೆ ನಡಿ ಅಂತ ನನಗಂತಾನೆ! ನಾನು ಅವನಿಗೆಷ್ಟು ಹೇಳಿದೆ, 'ಮಗೂ, ಇಲ್ಲಿ ಅಲಹಾಬಾದಿನಲ್ಲಿ ನಿನ್ನ ಮರದ ಕಾರಖಾನೆ ಇದೆಯಲ್ಲ, ರಾಧೇನೂ, ಮಕ್ಕಳನ್ನೂ ಇಲ್ಲೇ ಕರಕೊಂಡು ಬಂದಿರು' ಅಂತ. ಆದರೆ ಕಾನಪುರ ರಾಧೆಯ ತವರು ತಾನೇ! ತವರಿನ ಮೋಹಾನ ಅವಳು ಹೇಗೆ ಬಿಟ್ಟಾಳು!" ಜೈದೇಯಿ ಒಂದು ನಿಟ್ಟುಸಿರು ಕರೆದಳು, "ಕಾನಪುರದಲ್ಲೇ ಇರಲಿ, ಅಲ್ಲೇ ಅವರು ಹೂ–ಹಣ್ಣಾಗಲಿ ಅಂತ ದೇವರನ್ನ ಕೇಳಿಕೋತೀನಿ!"

ಜೈದೇಯಿಯ ಧ್ವನಿಯಲ್ಲಿ ಒಂದು ವಿಚಿತ್ರವಾದ ವ್ಯಥೆಯಿತ್ತು, ವಿವಶತೆಯಿತ್ತು, ನೋವಿತ್ತು ಎಂಬುದು ಎಲ್ಲರಿಗೂ ಅನುಭವವಾಯಿತು. ಗಂಗಾಪ್ರಸಾದ ಹೇಳಿದ, "ದೊಡ್ಡಮ್ಮ, ಇದರಲ್ಲಿ ದುಃಖ ಪಡೋಕ್ಕೆ ಏನಿದೆ? ನೀನು ಬೇಕು ಅಂದರೆ ನಾನು ಅಲಹಾಬಾದಿಗೆ ವರ್ಗ ಮಾಡಿಸಿಕೋತೀನಿ. ಹೇಗಿದ್ದರೂ ನನ್ನದು ಸರಕಾರೀ ನೌಕರಿ, ವರ್ಗವಂತೂ ಆಗ್ತಾನೆ ಇರುತ್ತೆ. ಆಮೇಲೆ ಇಲ್ಲಿಂದ ಮತ್ತೆ ಎಲ್ಲೀಗಾದರೂ ವರ್ಗವಾಗುತ್ತೆ."

ಗಂಗಾಪ್ರಸಾದನ ಈ ಮಾತು ಕೇಳಿ ಜೈದೇಯಿಯ ಕರುಣೆಯೆಲ್ಲವೂ ಇಂಗಿ ಹೋಯಿತು. ಅವಳು ಜ್ವಾಲಾಪ್ರಸಾದನ ಕಡೆ ನೋಡುತ್ತ ಹೇಳಿದಳು, "ಬೇಡ ಮಗು, ನೀನು ಹಾಗೆಲ್ಲಾ ಮಾಡಕೂಡದು! ಹೇಗಿದ್ದರೂ ದೇವರ್‌ಜೀ ಇದಾರೆ. ಇನ್ನು ಆರೇಳು ವರ್ಷದಲ್ಲಿ ಇವರಿಗೆ ಪೆನ್‌ಶನ್ ಆಗುತ್ತೆ. ಇಲ್ಲೀಗೆ ವರ್ಗಮಾಡಿಸಿಕೊಳ್ಳಿ ಅಂತ ಇವರನ್ನ ಕೇಳಿಕೊಂಡಿದೀನಿ. ಕೆಲಸದ ಕೊನೆ ಆರೇಳು ವರ್ಷಾನ್ನ ಇಲ್ಲಿ ಅಲಹಾಬಾದಿನಲ್ಲಿ ಕಳೀಲಿ. ಮನೆ ಕಟ್ಟೋಕೆ ಇಲ್ಲೀ ಜಾಗ ಕೊಂಡುಕೊಂಡಿದಾರೆ—ಹೊಸದಾಗಿ ಆಗ್ತಿದೆಯಲ್ಲ, ಲೂಕರ್‌ಗಂಜ್ ಮೊಹಲ್ಲಾ, ಅಲ್ಲಿ! ಇಲ್ಲಿ ಬಂದರೆ ಮನೇನೂ ಕಟ್ಟಿ ಮುಗಿಸಬಹುದು."

ಗಂಗಾಪ್ರಸಾದ ಈಗ ತಂದೆಯೊಡನೆ ಮಾತಿಗೆ ತೊಡಗಿದ, "ನಾನು ಮೊನ್ನೆ ಬರೇಲಿಯಿಂದ ನಿಮಗೆ ಕಾಗದ ಹಾಕಿದ್ದೆ. ವಿಷಯ ಏನು ಅಂದರೆ ನನ್ನನ್ನ ದಿಲ್ಲಿ-ದರಬಾರಿನ ವ್ಯವಸ್ಥೆ ಮಾಡೋ ಕಮಿಟೀಲಿ ಹಾಕಿಕೊಂಡಿದಾರೆ. ಮೂರು ತಿಂಗಳು ನಾನು ಅಲ್ಲಿ ಹೋಗಿ ಇರಬೇಕಾಗುತ್ತೆ. ಭೀಖೂನೂ ನನ್ನ ಜೊತೆ ಕರಕೊಂಡು ಹೋಗ್ತಿದೀನಿ. ಅವನಿಲ್ಲದೆ ಹೋದರೆ ತುಂಬ ತೊಂದರೆಯಾಗುತ್ತೆ."

ಜ್ವಾಲಾಪ್ರಸಾದನ ಮುಖದ ಮೇಲೆ ಸಂತೋಷದ ಒಂದು ಹೊಳಪು ಮೂಡಿತು. "ಹಾಗೋ ಸಮಾಚಾರ! ಬಲು ಒಳ್ಳೇ ಸುದ್ದಿ ಕೇಳಿದ ಹಾಗಾಯಿತು! ಅದಕ್ಕೇ ನೀನು ರುಕ್ಮಿಣೀನೂ ಕರಕೊಂಡು ಬಂದಿದಿ! ಕೇಳಿದೆಯಾ ಅತ್ತಿಗೆ, ನಿನ್ನ ಮಗ ದಿಲ್ಲೀ ದರಬಾರು ಮಾಡಿಸೋಕ್ಕೆ ಹೋಗ್ತಿದಾನೆ."

ಸುದ್ದಿ ಕೇಳಿ ಜೈದೇಯಿಗೆ ಜ್ವಾಲಾಪ್ರಸಾದನಿಗಿಂತೇನೂ ಕಡಿಮೆ ಸಂತೋಷವಾಗಲಿಲ್ಲ. "ದೇವರ್‌ಜಿ, ನಾನು ಹೇಳ್ತೀನಿ ಕೇಳು. ಈ ಗಂಗಾ ಒಂದು ದಿನ ಕಲೆಕ್ಟರ್ ಆಗ್ತಾನೆ ನೋಡ್ತಿರಿ. ಒಂದು ಮಾತು, ದೇವರ್‌ಜೀ. ಸೊಸೆಮಗಳು ಈಗ ಒಂದು ತಿಂಗಳ ಮಟ್ಟಿಗಾದರೂ ನನ್ನ ಜೊತೆ ಇರ್ತಾಳೆ. ಇಲ್ಲವೆ ಹೋದರೆ, ಸ್ವಲ್ಪ ದಿನಕ್ಕೆ ದೇವರಾಣೀನೂ ಇಲ್ಲೇ ಕಳಿಸಿಕೊಡು."

"ಸೊಸೆಮಗಳನ್ನ ನನ್ನ ಜೊತೆ ಬಾಂದಾಗೆ ನಡಿ ಅಂತ ನಾನು ಯಾವಾಗ ಅಂದೆ! ಗಂಗನಿಗೆ ವಿದ್ಯಾಭ್ಯಾಸ ಮಾಡಿಸಿದೋಳು ನೀನು. ಬಲು ಅದ್ದೂರಿಯಾಗಿ ಅವನ ಮದುವೆ ಮಾಡಿದಿ. ಗಂಗನ ಮೇಲೂ, ಸೊಸೆಮಗಳ ಮೇಲೂ ನನಗಿಂತ ಹೆಚ್ಚು ನಿನಗೆ ಅಧಿಕಾರವಿದೆ!" ಜ್ವಾಲಾಪ್ರಸಾದ ನಗುತ್ತ ಉತ್ತರಕೊಟ್ಟ.

ಬಂದ ಮೂರನೆಯ ದಿನ ರಜ ಮುಗಿಯಿತಾದ ಕಾರಣ ಜ್ವಾಲಾಪ್ರಸಾದ ಬಾಂದಾಗೆ ಹೊರಟುಹೋದ. ಅವನು ಹೋದ ಎರಡು ದಿನದಲ್ಲಿ ಗಂಗಾಪ್ರಸಾದನೂ ದಿಲ್ಲಿಗೆ ಹೊರಟ. ದಿಲ್ಲಿಗೆ ಹೊರಡುವ ಮೊದಲು ಗಂಗಾಪ್ರಸಾದ ಜೈದೇಯಿಯ ಕಾಲು ಮುಟ್ಟಿ ನಮಸ್ಕಾರ ಮಾಡುತ್ತ "ದೊಡ್ಡಮ್ಮ, ನಿನ್ನ ಜೊತೆ ಒಂದು ಮಾತಾಡೋದಿತ್ತು!" ಅಂದ.

"ಹ್ಞಾ, ಹ್ಞಾ, ನಿನ್ನ ಮಾತು ಏನು ಅಂತ ನನಗೆ ಗೊತ್ತಿದೆ! ದಿಲ್ಲಿಗೆ ಹೋಗ್ತಿದಿ ಅಲ್ಲವೆ, ನಿನಗೆ ದುಡ್ಡು ಬೇಕಾಗಿದೆ. ಹೇಳು, ಎಷ್ಟು ಬೇಕು ಅಂತ."

"ದೊಡ್ಡಮ್ಮ, ಮೂರು ತಿಂಗಳು ಅಲ್ಲಿರಬೇಕು. ಇನ್ನೂ ಒಂದು ತಿಂಗಳು ಹೆಚ್ಚು ಇರಬೇಕಾಗಿ ಬಂದರೂ ಬರಬಹುದು. ಸಂಬಳವೇನೋ ಬರುತ್ತೆ..."

ಜೈದೇಯಿ ಅವನ ಮಾತಿಗೆ ಅಡ್ಡಬಂದು ಹೇಳಿದಳು, "ಹ್ಞಾ, ಹ್ಞಾ, ನಿನಗೆಷ್ಟು ಸಂಬಳ ಬರುತ್ತೆ ಅಂತ ನನಗೆ ಗೊತ್ತು; ನಿನ್ನ ಚಾಳಿಗಳೇನೇನು ಅನ್ನೋದನ್ನೂ ಲಛ್ಮೀ ಹೇಳಿದಾನೆ. ಜವಾಬ್ದಾರಿ ಆಫೀಸರ್ ಆಗಿದಿ. ಸ್ವಲ್ಪ ವಿವೇಕದಿಂದಿರಬೇಕು ನೀನು."

"ಹೌದು, ಗೊತ್ತು, ದೊಡ್ಡಮ್ಮ. ಲಛ್ಮೀ-ಅಣ್ಣನಿಗಂತೂ ಖರ್ಚು ಅಂದರೆ ಕೈ ಕಟ್ಟಿದ ಹಾಗಾಗುತ್ತೆ. ದಿಲ್ಲೀಗೆ ದೊಡ್ಡ ದೊಡ್ಡ ರಾಜಮಹಾರಾಜರು ಬರ್ತಾರೆ. ಅವರ ಜೊತೆ ಇರಬೇಕಾಗುತ್ತೆ. ಅವರ ಮುಂದೆ..." ಗಂಗಾಪ್ರಸಾದ ಹೇಳುತ್ತ ಹೇಳುತ್ತ ನಿಲ್ಲಿಸಿದ.

"ಹ್ಞಾ, ನಾನು ಬಲ್ಲೆ. ನೀನು ಯಾವ ರಾಜಮಹಾರಾಜನಿಗೆ ತಾನೇ ಕಡಿಮೆ!" ಜೈದೇಯಿ ತುಂಬ ಪ್ರೀತಿಯಿಂದ ಗಂಗಾಪ್ರಸಾದನ ತಲೆ ಸವರುತ್ತ ಹೇಳಿದಳು, "ನಿನ್ನ ಮುಂದೆ ರಾಜಮಹಾರಾಜರು ಗುಲಾಮರಾಗಿ ಕಾಣಲಿ ಅಂತ ನನ್ನಾಸೆ. ಹೇಳು, ಎಷ್ಟು ಬೇಕು? ದಿಲ್ಲಿಗೆ ಹೋಗಿ ಜರ್ಬಿನಿಂದಿರು. ನೀನು ಯಾರಿಗಿಂತಲೂ ಕೀಳು ಅಂತ ಅಂದುಕೋಬೇಡ."

"ಒಂದೈನೂರು ರೂಪಾಯಿ ಆದರೆ ಸಾಕು," ಗಂಗಾಪ್ರಸಾದ ಹೇಳಿದ.

"ಐನೂರು ರೂಪಾಯಿ ಎಲ್ಲಿ ಸಾಕಾಗುತ್ತೆ ನಿನಗೆ? ನಾನು ನಿನ್ನನ್ನ ಕಾಣೆನೆ!" ಎಂದು ಜೈದೇಯಿ ತಿಜೋರಿಯಿಂದ ನೂರು ನೂರು ರೂಪಾಯಿಗಳ ಹತ್ತುನೋಟು ತೆಗೆದು ಗಂಗಾಪ್ರಸಾದನ ಕೈಲಿಟ್ಟಳು. "ಕಡಿಮೆ ಬಿತ್ತು ಅಂದರೆ ಕೇಳಿ ತರಿಸಿಕೊ. ಮನಸ್ಸು ಚಿಕ್ಕದು ಮಾಡಿಕೊಂಡಿರಬೇಡ, ಗೊತ್ತಾಯ್ತೆ?"

ಗಂಗಾಪ್ರಸಾದ ಮುಗುಳುನಗುತ್ತ ಹೇಳಿದ, "ನೀನೆಷ್ಟು ಒಳ್ಳೆಯವಳು, ದೊಡ್ಡಮ್ಮ! ನನ್ನನ್ನ ಕೆಡಿಸೋಳು ಅಂದರೆ ನೀನೇಯೆ: ನನ್ನ ಜರ್ಬು ನೋಡಿ ಜನ ಅದೆಷ್ಟು ಹೊಟ್ಟೆಕಿಚ್ಚು ಪಡ್ತಾರೆ ಗೊತ್ತೆ?"

ಜೈದೇಯಿ ನಕ್ಕಳು, "ಒಳ್ಳೇದೇ! ನಿನಗಾಗದವರು ಹೊಟ್ಟೆ ಉರಿದುಕೊಂಡು ಸಂಕಟಪಡಲಿ! ಯಾವ ರಾಜಮಹಾರಾಜರಿಗೆ ತಾನೇ ಕಡಿಮೆ ನೀನು! ಹೌದು,

ನೀನು ಏನು ಹೇಳಿದೆ? ದಿಲ್ಲೀಗೆ ದೊಡ್ಡ ದೊಡ್ಡ ರಾಜಮಹಾರಾಜರು ಬರ್ತಾರೆ, ವಜ್ರ-ವೈಡೂರ್ಯಗಳ ಹೊಳಪಿಗೆ ದಿಲ್ಲಿ ಕಣ್ಣು ಕೋರೈಸುವ ಹಾಗಿರುತ್ತೆ ಅಂತಾನೆ? ಆದರೆ ನಿನ್ನ ಕೈ ಬೆಕೋ ಅಂತಿದೆ. ತಾಳು," ಎಂದವಳೇ ಜೈದೇಯಿ ತಿಜೋರಿ ತೆಗೆದು ಒಂದು ವಜ್ರದ ಉಂಗುರವನ್ನು ಹೊರತೆಗೆದಳು. "ಯಾವನೋ ಒಬ್ಬ ಮಹಾರಾಜ ಇವರ ಹತ್ತಿರ ಈ ಉಂಗುರಾನ ಅಡವಿಟ್ಟಿದ್ದ. ಹನ್ನೊಂದು ಗುಲಗಂಜಿ ತೂಕದ ವಜ್ರ ಇದು. ಇವರು ಐದುಸಾವಿರ ರೂಪಾಯಿ ಕೊಟ್ಟಿದ್ದರು ಅವನಿಗೆ! ಅವನು ಮತ್ತೆ ಉಂಗುರ ಬಿಡಿಸಿಕೊಳ್ಳೋಕೆ ಬರಲಿಲ್ಲ. ತೊಗೋ, ಇದನ್ನ ಹಾಕಿಕೊ. ದೊಡ್ಡ ದೊಡ್ಡ ರಾಜಮಹಾರಾಜರ ಹತ್ತಿರ ಸಹ ಇಷ್ಟು ಭಾರೀ ವಜ್ರ ಸಿಗೋಲ್ಲ."

ಉಂಗುರದ ವಜ್ರದ ಹೊಳಪಿಗೆ ಗಂಗಾಪ್ರಸಾದನ ಕಣ್ಣು ಕುಕ್ಕಿದಂತಾಯಿತು. ವಾಸ್ತವವಾಗಿ ಅವನು ಇಷ್ಟು ಭಾರೀ ವಜ್ರವನ್ನು ಹಿಂದೆಂದೂ ನೋಡಿರಲಿಲ್ಲ. ನಸು ನೀಲಿಯ ಮಿನುಗು, ತೀಕ್ಷ್ಣವಾದ ಹೊಳಪು, ಬೆಲ್ಜಿಯಮ್ಮಿನ ಸಾಣೆ, ಅಳತೆ ಕೊಟ್ಟು ಮಾಡಿಸಿದುದೋ ಎನ್ನುವಷ್ಟು ಅಚ್ಚುಕಟ್ಟಾಗಿ ಆ ಉಂಗುರ ಗಂಗಾಪ್ರಸಾದನ ಬೆರಳಿಗೆ ಹಿಡಿಯಿತು.

ಗಂಗಾಪ್ರಸಾದ ಜೈದೇಯಿಯನ್ನು ಅಪ್ಪಿಕೊಂಡ, "ದೊಡ್ಡಮ್ಮ, ದೊಡ್ಡಮ್ಮ! ನನ್ನ ತಾಯಿಗಿಂತ ಹೆಚ್ಚು ನೀನು! ನಿನ್ನಿಂದ ನನಗೆ ಅದೆಷ್ಟು ಮಮತೆ ಸಿಕ್ಕಿದೆ, ಪ್ರೀತಿ ಸಿಕ್ಕಿದೆ!" ಗಂಗಾಪ್ರಸಾದನ ಕಣ್ಣಲ್ಲಿ ನೀರು ತುಂಬಿತು.

## ಎರಡು

ಲಕ್ಷ್ಮೀಚಂದನಿಗೆ 'ಸರ್' ಟೈಟಲ್ ಸಿಗಬಹುದೆಂದು ಯಾರೂ ಕಲ್ಪನೆ ಸಹ ಮಾಡಿರಲಿಲ್ಲ.

ದಿಲ್ಲಿ-ದರಬಾರಿಗಾಗಿ ಲಕ್ಷ್ಮೀಚಂದ ಐವತ್ತುಸಾವಿರ ರೂಪಾಯಿ ಚಂದಾ ಕೊಟ್ಟಿದ್ದ. ಅಧಿಕಾರಿಗಳು ಲಕ್ಷ್ಮೀಚಂದನ ಮೇಲೆ ಹೇರಿದ ಒತ್ತಾಯವೇ ಇದಕ್ಕೆ ಕಾರಣ. ಇಡೀ ಉತ್ತರಭಾರತದಲ್ಲಿ ವಿದೇಶೀ ಬಟ್ಟೆಯ ವ್ಯಾಪಾರದಲ್ಲಿ ಲಕ್ಷ್ಮೀಚಂದನನ್ನು ಮೀರಿಸಿದವರಿರಲಿಲ್ಲ. ಆದರೆ ಅವನು ಅಷ್ಟರಿಂದ ತೃಪ್ತನಾಗಿರಲಿಲ್ಲ. ಬಿ. ಎ. ವರೆಗೆ ಇಂಗ್ಲೀಷ್ ಶಿಕ್ಷಣ ಸಂಪಾದಿಸಿದ್ದುದರಿಂದ ಅವನಿಗೆ ಸರಕಾರದೊಡನೆ ಒಳ್ಳೆಯ ಸಂಪರ್ಕವಿತ್ತು. ಅವನು ಕಾನಪುರದಲ್ಲಿ ಒಂದು ಬಟ್ಟೆಯ ಕಾರ್ಖಾನೆ, ಒಂದು ಸಕ್ಕರೆಯ ಕಾರ್ಖಾನೆ, ಎರಡು ಎಣ್ಣೆಯ ಕಾರ್ಖಾನೆಗಳನ್ನು ತೆಗೆದಿದ್ದ; ಅಲಹಾಬಾದಿನಲ್ಲಿ ದೊಡ್ಡದೊಂದು ಮರದ ಕಾರ್ಖಾನೆಯಿತ್ತು. ಇವೆಲ್ಲದರಲ್ಲೂ ಸ್ವಾಭಾವಿಕವಾಗಿ ವ್ಯಾಜ್ಯಗಳಿಲ್ಲದೆ ಇರಲಿಲ್ಲ. ಅವನು ಆಡುತ್ತಿದ್ದುದು ದುಡ್ಡಿನ ಆಟ. ಕೋಟ್ಯಂತರ ರೂಪಾಯಿಗಳ ಪ್ರಶ್ನೆ ಮುಂದಿದ್ದಾಗ ದಿಲ್ಲಿ-ದರಬಾರಿಗೆ ಐವತ್ತು ಸಾವಿರ ರೂಪಾಯಿ ಕೊಟ್ಟು ಅಧಿಕಾರಿಗಳ

ಕಣ್ಣಲ್ಲಿ ದೊಡ್ಡವನಾಗಿ ಕಾಣುವುದು ಲಕ್ಷ್ಮೀಚಂದನಿಗೆ ಶ್ರೇಯಸ್ಕರವಾಗಿತ್ತು. ಜನವರಿಯ ಮೊದಲ ವಾರದಲ್ಲಿ ಅವನ ಎರಡು ಬಹು ಹಳೆಯ ಮೊಕದ್ದಮೆಗಳು ಅಪೀಲಿಗೆ ಬಂದಿದ್ದವು. ಆ ಸಂಬಂಧದಲ್ಲಿ ಅವನು ಡಿಸೆಂಬರ್ ಕೊನೆಯ ವಾರದಲ್ಲೇ ಅಲಹಾಬಾದ್ ತಲಪಿದ. ೧೯೧೨ ರ ಜನವರಿ ಒಂದರಂದು 'ಪಯನಿಯರ್' ಪತ್ರಿಕೆಯಲ್ಲಿ ಹೊಸ ವರ್ಷದ ಪ್ರಶಸ್ತಿ ಪಡೆದವರ ಪಟ್ಟಿಯಲ್ಲಿ ತನ್ನ ಹೆಸರನ್ನು ಕಂಡು ಲಕ್ಷ್ಮೀಚಂದ ಉಬ್ಬಿ ಹೋದ.

ಲಕ್ಷ್ಮೀಚಂದನಿಗೆ ಅಭಿನಂದನೆ ಸಲ್ಲಿಸಬಂದವರು ಬೆಳಗಿನಿಂದಲೇ ಸಾಲುಗಟ್ಟಿ ನಿಂತಿದ್ದರು. ಎಲ್ಲೆಲ್ಲಿಂದಲೂ ತಂತಿಗಳು ಬರತೊಡಗಿದ್ದವು. ಜೈದೇಯಿ ಲಕ್ಷ್ಮೀಚಂದನಿಗೆ ಆರತಿ ಬೆಳಗಿ, ಗಂಗಾಸ್ನಾನ ಮಾಡಿಸಿದಳು. ಗಂಗಾಸ್ನಾನವಾದ ನಂತರ ದೇವದೇವತೆಗಳಿಗೆಲ್ಲಾ ಪೂಜೆನೈವೇದ್ಯಗಳಾದವು. ಇಷ್ಟೆಲ್ಲ ಮಾಡಿ ಮುಗಿಯುವುದರಲ್ಲಿ ಮಧ್ಯಾಹ್ನ ಕಳೆಯಿತು. ಮನೆಗೆ ಬಂದವನೇ ಲಕ್ಷ್ಮೀಚಂದ ಹೇಳಿದ, "ಅಮ್ಮಾ, ನಾನೀಗ ಮೊದಲ ಗಾಡಿ ಹಿಡಿದು ಕಾನಪುರ ತಲಪಬೇಕು. ಅಲ್ಲಿ ಎಲ್ಲರೂ ನನ್ನ ದಾರಿ ನೋಡ್ತಿರ್ತಾರೆ. ಈಗ ತಾನೇ ಕಾನಪುರಕ್ಕೆ ತಂತಿ ಕಳಿಸಿ ಬಂದಿದೀನಿ. ಇಷ್ಟು ದೊಡ್ಡ ಪ್ರಶಸ್ತಿ ಸಿಕ್ಕಿರೋವಾಗ ಕಾನಪುರದಲ್ಲಿ ಮಿಲ್ಲಿನಲ್ಲಿ ಕೆಲಸಮಾಡೋ ಸಾವಿರಾರು ಕೆಲಸಗಾರರೂ ಊರ ಜನರೂ ಮನೆಗೆ ಬರ್ತಾರೆ. ನನ್ನ ಜೊತೆ ಹೊರಟು ನೀನೂ ಒಂದು ವಾರ ಕಾನಪುರದಲ್ಲಿ ಇದ್ದು ಬರುವೆಯಂತೆ, ನಡಿ."

ಸಂಜೆಯ ಗಾಡಿ ಹಿಡಿದು ಲಕ್ಷ್ಮೀಚಂದ ಜೈದೇಯಿಯ ಜೊತೆ ಕಾನಪುರಕ್ಕೆ ಹೊರಟ.

ರಾತ್ರಿ ಒಂಬತ್ತು ಗಂಟೆಗೆ ಗಾಡಿ ಕಾನಪುರ ತಲಪಿತು. ಸ್ಟೇಷನ್ನಿನಲ್ಲಿ ಲಕ್ಷ್ಮೀಚಂದನನ್ನು ಸ್ವಾಗತಿಸುವವರ ಒಂದು ಭಾರೀ ಗುಂಪೇ ಸೇರಿತ್ತು. ಪಟ್ಟಣದ ಪ್ರಮುಖ ವ್ಯಾಪಾರಿಗಳು, ಲಕ್ಷ್ಮೀಚಂದನ ಕೆಲಸಗಾರರಲ್ಲಿ ಮುಖ್ಯರಾದವರು ಎಲ್ಲರೂ ಅಲ್ಲಿದ್ದರು. ಗಾಡಿ ನಿಂತೊಡನೆಯೇ ಜನ ಜಯಜಯಕಾರದೊಂದಿಗೆ ಲಕ್ಷ್ಮೀಚಂದನನ್ನು ಸ್ವಾಗತಿಸಿದರು, ಹೂವಿನ ಹಾರ ಹಾಕಿದರು. ಸ್ಟೇಷನ್ನಿನ ಹೊರಗೆ ಮೆರವಣಿಗೆಯ ಏರ್ಪಾಡು ನಡೆದಿತ್ತು—ಇಂಗ್ಲಿಷ್ ಬ್ಯಾಂಡು, ಗ್ಯಾಸ್‌ಲೈಟು, ಐವತ್ತಕ್ಕೂ ಹೆಚ್ಚು ಫೀಟನ್ ಗಾಡಿಗಳು ಸಿದ್ಧವಾಗಿ ನಿಂತಿದ್ದವು. ಜೈದೇಯಿ ಒಂದು ಮುಚ್ಚಿದ 'ಬಗ್ಗಿ' ಗಾಡಿಯಲ್ಲಿ ಕುಳಿತು ಬೇರೆಯಾಗಿ ಮನೆ ಸೇರಿದಳು. ಹೂವಿನಿಂದ ಅಲಂಕರಿಸಿದ್ದ ಒಂದು 'ಫೀಟನ್' ಗಾಡಿಯಲ್ಲಿ ಲಕ್ಷ್ಮೀಚಂದನನ್ನು ಕೂರಿಸಿಕೊಂಡು ಸ್ಟೇಷನ್ನಿನಿಂದ ಮೆರವಣಿಗೆ ಹೊರಟಿತು.

ರಾಧೆ ಜೈದೇಯಿಯ ಕಾಲುಮುಟ್ಟಿ ನಮಸ್ಕರಿಸಿ ಅವಳನ್ನು ಸ್ವಾಗತಿಸಿದಳು ಮನೆಯಲ್ಲಿ ಸಹ ಆಗ ಸಾಕಷ್ಟು ಗುಂಪು ಕೂಡಿತ್ತು. ಲಕ್ಷ್ಮೀಚಂದನ ನಂಟರಿಷ್ಟರ ಮನೆಯ ಹೆಂಗಸರು ಅಲ್ಲಿ ಸೇರಿದ್ದರು. ನೌಕರಚಾಕರರು ಗಡಿಬಿಡಿಯಿಂದ ಅತ್ತಿಂದಿತ್ತ ಓಡಾಡುತ್ತಿದ್ದರು. ರಾಧೆ ಕೆಲಸದ ಆಳು ಬದಲೂಗೆ ಹೇಳಿದಳು, "ನೋಡು ಬದಲೂ, ಅಮ್ಮಾಜೀನ ಅವರ ಕೊಟಡಿಗೆ ಕರಕೊಂಡು ಹೋಗು. ಮನೆಗೆಲಸಕ್ಕೆ ಭರೋಸಿ

ಇಲ್ಲೇ ಇರಲಿ!" ಆಮೇಲೆ ಅತ್ತೆಯ ಕಡೆ ತಿರುಗಿ ಹೇಳಿದಳು, "ಏನು ಹೇಳಲಿ, ಅಮ್ಮಾಜಿ? ಇವರ ಮಿಲ್ಲು ಅಂಗಡಿಗಳಲ್ಲಿ ಕೆಲಸ ಮಾಡೋರು ಪ್ರಾಣಕ್ಕೆ ತಂದಿಟ್ಟರು. ಮೆರವಣಿಗೆ ಆಗಲೇಬೇಕು ಅಂತ ಅಂದರು. ಇನ್ನೇನು ಮಾಡೋಕ್ಕಾಗುತ್ತೆ? ಇದನ್ನೆಲ್ಲಾ ಮಾಡಲೇಬೇಕಾಯಿತು! ಇವತ್ತು ಅವರಿಗೆಲ್ಲಾ ಊಟದ ಏರ್ಪಾಡು ಸಹ ಇಲ್ಲೇ. ಮುನ್ನೂರು ನಾನೂರು ಜನರ ಊಟ ಅಂತ ಇಟ್ಟುಕೊಳ್ಳಿ. ಈಗ ನಾನು ಇದೆಲ್ಲದರ ವ್ಯವಸ್ಥೆಮಾಡಬೇಕಾಗಿದೆ. ಮೆರವಣಿಗೆ ಎಷ್ಟುಹೊತ್ತಿಗೆ ಬಂದು ಸೇರುತ್ತೋ ಏನೋ. ನಡುರಾತ್ರಿಯಾದರೂ ಆಶ್ಚರ್ಯವಿಲ್ಲ. ನೀವು ಒಂದಿಷ್ಟು ಊಟಮಾಡಿ ವಿಶ್ರಾಂತಿ ತೊಗೊಳ್ಳಿ. ಎಷ್ಟು ಹೊತ್ತು ಅಂತ ಎದ್ದಿರ್ತೀರಿ!"

ಜೈದೇಯಿ ಒಮ್ಮೆ ಖಿನ್ನಳಾಗಿ ರಾಧೆಯ ಕಡೆ, ಮಗನನ್ನು ತನ್ನಿಂದ ಕಸಿದುಕೊಂಡು ಈಗ ಮನೆಯ ಯಜಮಾನಿಯಾಗಿದ್ದ ಆ ಸೊಸೆಯ ಕಡೆ, ನೋಡಿದಳು. ಆಮೇಲೆ ಒಂದು ನಿಟ್ಟುಸಿರೆಳೆದು ಎದ್ದಳು, "ನೀನು ಹೇಳೋದು ಸರಿ, ರಾಧೆ. ಎಲ್ಲರಿಗೂ ಸರಿಯಾಗಿ ಊಟ ಉಪಚಾರವಾಗಲಿ, ಎಲ್ಲರೂ ಹೋಗುವಾಗ ನನ್ನ ಮಗನ್ನ ಆಶೀರ್ವದಿಸಿ ಹೋಗಲಿ. ಈಗ ನನಗೆ ಹಸಿವಿಲ್ಲ. ತುಂಬ ಸುಸ್ತಾಗಿದೆ. ಹಾಲು ಕುಡಿದು ಮಲಕ್ಕೋತೀನಿ."

ರಾಧೆ ನಗುತ್ತ ಉತ್ತರ ಕೊಟ್ಟಳು, "ಇಲ್ಲ, ಅಮ್ಮಾಜಿ. ಒಂದಿಷ್ಟು ಮಿಠಾಯಿಯನ್ನಂತೂ ತಿನ್ನಲೇಬೇಕು. ಬಂದಿರೋರ ಊಟದ ಏರ್ಪಾಡಿನ ಬಗ್ಗೆ ನೀವು ನಿಶ್ಚಿಂತೆಯಿಂದಿರಿ. ಇಲ್ಲಂತೂ ಈ ಊಟ-ಉಪಚಾರ, ಮೆರವಣಿಗೆ ದಿನನಿತ್ಯದ ಕೆಲಸವಾಗಿಬಿಟ್ಟಿದೆ. ಇಷ್ಟು ದೊಡ್ಡ ಪಟ್ಟಾನ ಬುದ್ಧಿಸಾಮರ್ಥ್ಯಗಳಿಲ್ಲದೆ ನಡಸಿಕೊಂಡು ಬಂದಿದ್ದೀನೆಯೆ!" ಆಮೇಲೆ ಆಳಿನ ಕಡೆ ತಿರುಗಿ, "ಹೋಗು, ಒಂದಿಷ್ಟು ಮಿಠಾಯಿ, ಒಂದು ಲೋಟ ನೀರು ತೊಗೊಂಬಾ. ನೋಡು, ಅಮ್ಮಾಜಿ ಕೊಟಡೀಲಿ ತಾಮ್ರದ ಚೆಂಬಿನಲ್ಲಿ ಕುಡಿಯೋ ನೀರಿಡಬೇಕು, ಗೊತ್ತಾಯ್ತೆ?" ಅಂದಳು.

ಜೈದೇಯಿ ಒಂದಿಷ್ಟು ತಿಂಡಿ ತಿಂದು ಮಾತನಾಡದೆ ತನ್ನ ಕೋಣೆಗೆ ಹೊರಟು ಹೋದಳು. ಏಕಾಂತವಾಗಿದ್ದ ಮೂರನೆಯ ಮಹಡಿಯಲ್ಲಿ ಅವಳಿಗೆ ಕೊಟಡಿ ಬಿಟ್ಟು ಕೊಟ್ಟಿದ್ದರು. ಚೆನ್ನಾಗಿ ಸಜ್ಜುಮಾಡಿದ ವಿಶಾಲವಾದ ಕೊಟಡಿ ಅದು. ಜೈದೇಯಿ ಬರುವ ಮೊದಲೇ ಭರೋಸಿ ಅಲ್ಲಿದ್ದು ಅವಳ ಹಾಸಿಗೆ ಹಾಸಿದ್ದಳು. ಭರೋಸಿ ಜೈದೇಯಿಯ ಕಾಲೊತ್ತಲು ಷುರುಮಾಡಿದಳು. "ಬಿಡೇ, ಅಷ್ಟೊಂದೇನೂ ಸುಸ್ತಾಗಿಲ್ಲ. ನೀನು ಹೋಗಿ ಕೆಲಸಕಾರ್ಯದಲ್ಲಿ ಸೊಸೆಯಮ್ಮನೋರಿಗೆ ಸಹಾಯಮಾಡು." ಅಂದಳು ಜೈದೇಯಿ.

ಮಾರನೆಯ ದಿನ ಜೈದೇಯಿ ಸ್ನಾನಪೂಜೆಗಳನ್ನು ಮುಗಿಸಿ, ಮಹಡಿ ಇಳಿದು ಬಂದಳು. ಅಷ್ಟು ಹೊತ್ತಿಗಾಗಲೇ ಮನೆಯಲ್ಲಿ ಗಡಿಬಿಡಿ ಷುರುವಾಗಿತ್ತು. ಲಕ್ಷ್ಮೀಚಂದನ ಮಕ್ಕಳು ಅಜ್ಜಿಯ ಸುತ್ತುವರಿದರು. ಜೈದೇಯಿ ಆ ಮಕ್ಕಳೊಡನೆ ಆಡಿ ಮನಸ್ಸಿಗೆ ಸಂತೋಷ ತಂದುಕೊಂಡಳು.

ರಾಧೆಯ ತವರುಮನೆಯ ಹೆಂಗಸರು ಅಲ್ಲಿದ್ದರು, ಅವಳ ನಂಟರಿಷ್ಟರು ಅಲ್ಲಿದ್ದರು. ಆದರೆ ತನ್ನ ಅಣ್ಣನ ಪರಿವಾರದವರು ಯಾರೂ ಜೈದೇಯಿಯ ಕಣ್ಣಿಗೆ ಬೀಳಲಿಲ್ಲ. ಜೈದೇಯಿ ಸಮಯ ನೋಡಿ ರಾಧೆಯನ್ನು ಕೇಳಿದಳು, "ಬುದ್ಧೂ, ಮುನ್ನೂ ಅವರನ್ನ ಕರೆದಿತ್ತೋ ಇಲ್ಲವೋ ? ಎಲ್ಲಿ, ಅವರ ಮನೆಯವರು ಯಾರೂ ಕಾಣಿಸ್ತಿಲ್ಲ ?"

ರಾಧೆ ಈ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರ ಕೊಡಲಿಲ್ಲ, "ಅಮ್ಮಾಜಿ, ಏನೂ ಅಂತ ಅವರನ್ನ ಕರೆಯೋಣ ! ಅಲ್ಲದೆ ಯಾರನ್ನೇ ಆಗಲಿ ನಾವು ಕರೆದಿದೀವೆಲ್ಲಿ ! ಬಂದಿರೋರು ತಾವಾಗಿಯೇ ಅಭಿನಂದಿಸೋಕ್ಕೆ ಬಂದಿದಾರೆ. ಅವರ ಮನೆಯವರು ವೈಮನಸ್ಯ ತಂದುಕೊಂಡು ಅಭಿನಂದಿಸೋಕ್ಕೆ ಬರದೇ ಇದ್ದರೆ ಅದರಲ್ಲಿ ನಮ್ಮದೇನು ತಪ್ಪು, ಹೇಳಿ ?" ಹೀಗಂದು ರಾಧೆ ಬೇರೆ ಕೆಲಸದಲ್ಲಿ ಮಗ್ನಳಾದಳು.

ಬುದ್ಧೂಲಾಲ ಮುನ್ನೂಲಾಲರು ಜೈದೇಯಿಯ ಅಣ್ಣನ ಮಕ್ಕಳು. ಅವರು ಚರ್ಮದ ದಲ್ಲಾಳಿ ವ್ಯಾಪಾರ ನಡಸುತ್ತಿದ್ದರು. ಒಂದು ಕಾಲದಲ್ಲಿ ಅವರು ಕಾನಪುರದಲ್ಲಿ ದೊಡ್ಡ ವ್ಯಾಪಾರಿಗಳು. ಆದರೆ ಈಚೆಗೆ ಕೆಲವು ವರ್ಷಗಳಿಂದ ಅವರ ಸ್ಥಿತಿಗತಿ ಕೆಟ್ಟಿತ್ತು. ಲಕ್ಷ್ಮೀಚಂದ ಜೈದೇಯಿಯ ಅಣ್ಣ ಸುಖ್ಖೂಲಾಲನ ಮನೆಯಲ್ಲೇ ಇದ್ದುಕೊಂಡು ವಿದ್ಯಾಭ್ಯಾಸಮಾಡಿದ್ದ. ಮಾವ ಸುಖ್ಖೂಲಾಲ ಲಕ್ಷ್ಮೀಚಂದನನ್ನು ತನ್ನ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಸಿ ಬೆಳಸಿದ್ದ. ಸುಖ್ಖೂಲಾಲ ತೀರಿಕೊಂಡಾಗ ಬುದ್ಧೂಲಾಲನಿಗೆ ಹದಿನೆಂಟು ವರ್ಷ ವಯಸ್ಸು; ಮುನ್ನೂಲಾಲನಿಗೆ ಹದಿನೈದು. ಸುಖ್ಖೂಲಾಲ ತನ್ನ ಇಬ್ಬರು ಮಕ್ಕಳನ್ನೂ ಲಕ್ಷ್ಮೀಚಂದನ ಕೈಲಿಟ್ಟು ಕೊನೆಯುಸಿರು ಬಿಟ್ಟಿದ್ದ.

ಲಾಲಾ ಸುಖ್ಖೂಲಾಲನ ಹತ್ತಿರ ಹದಿನೈದು ಇಪ್ಪತ್ತು ಲಕ್ಷ ರೂಪಾಯಿ ನಗದು ಹಣವಿದೆಯೆಂದು ಜನ ತಿಳಿದಿದ್ದರು. ಆದರೆ ಲಕ್ಷ್ಮೀಚಂದ ಲೆಕ್ಕಾಚಾರಮಾಡಿ ನೋಡಿದಾಗ ಪಾವತಿ–ವಸೂಲಿಗಳೆಲ್ಲವೂ ಮುಗಿದು ಒಟ್ಟು ಎಪ್ಪತ್ತು ಸಾವಿರ ರೂಪಾಯಿಯಷ್ಟೇ ಮಕ್ಕಳ ಪಾಲಿಗೆ ಉಳಿದಿತ್ತು. ಸುಖ್ಖೂಲಾಲ ಸತ್ತ ಒಂದು ವರ್ಷದೊಳಗೇ ಲಕ್ಷ್ಮೀಚಂದ ಕಾನಪುರದಲ್ಲಿ ಒಂದು ಸಕ್ಕರೆ ಕಾರ್ಖಾನೆ, ಒಂದು ಎಣ್ಣೆಯ ಕಾರ್ಖಾನೆಗಳನ್ನು ತೆಗೆದಿದ್ದ. ನಂಟರಿಷ್ಟರಲ್ಲಿ ಸಾಕಷ್ಟು ಪಿಸುಮಾತು ನಡೆಯಿತು. ಸುಖ್ಖೂಲಾಲನ ಭಾಮೈದ ಗಿರಧಾರೀಲಾಲ ಹುಡುಗರಿಬ್ಬರ ಪರವಾಗಿ ಲಕ್ಷ್ಮೀಚಂದನ ಮೇಲೆ ದಾವಾ ಸಹ ಹಾಕಿದ. ಎರಡು ವರ್ಷ ಕಾಲ ವ್ಯಾಜ್ಯ ನಡೆಯಿತು. ಆ ಎರಡು ವರ್ಷಗಳಲ್ಲಿ ಬುದ್ಧೂಲಾಲ, ಮುನ್ನೂಲಾಲರ ಸ್ಥಿತಿ ಇದ್ದಿದ್ದೂ ಹದಗೆಟ್ಟಿತು. ವ್ಯಾಜ್ಯದಲ್ಲಿ ಸೋಲಾದುದನ್ನು ನೋಡಿ ಗಿರಧಾರೀಲಾಲ ಕೊನೆಯಲ್ಲಿ ರಾಜಿ ಮಾಡಿಕೊಂಡ. ಈ ವ್ಯಾಜ್ಯದಲ್ಲಿ ಲಾಲಾ ಗಿರಧಾರೀಲಾಲನಿಗೂ ಸುಮಾರು ಒಂದು ಲಕ್ಷ ರೂಪಾಯಿ ದಕ್ಕಿತು; 'ಸುಖ್ಖೂಲಾಲ–ಬುದ್ಧೂಲಾಲ ಕಂಪನಿ'ಗೆ ಒಂದು ಲಕ್ಷ ರೂಪಾಯಿ ಸಾಲ ಅಂಟಿಕೊಂಡಿತು.

ಲಕ್ಷ್ಮೀಚಂದ ವಂಚನೆ ಮಾಡಿದ್ದನೆಂದು ಜೈದೇಯಿಗೆ ಗೊತ್ತಿತ್ತು. ಗಿರಧಾರೀಲಾಲನಿಗೆ ಐವತ್ತು ಸಾವಿರ ರೂಪಾಯಿ ನಗದು ಹಣ ಕೊಟ್ಟು ಅವನನ್ನು ಈ ರಾಜಿಗೆ ಒಪ್ಪಿಸ

ಲಾಗಿತ್ತೆಂಬುದೂ ಅವಳಿಗೆ ಗೊತ್ತಿತ್ತು. ಒಂದೆರಡು ಸಲ ಅವಳು ಅಣ್ಣನ ಮಕ್ಕಳ ಪಕ್ಷ ಹಿಡಿದು ವಾದಿಸಲು ಪ್ರಯತ್ನಿಸಿದ್ದಳು. ಆದರೆ ರಾಧೆ ಲಕ್ಷ್ಮೀಚಂದರು ಆ ಮಾತನ್ನು ಮುಂದುವರಿಸಲು ಅವಕಾಶ ಕೊಡಲಿಲ್ಲ. ಜೈದೇಯಿ ಕಾನಪುರದಲ್ಲಿ ಇರಲು ಇಷ್ಟ ಪಡದಿರುವುದಕ್ಕೆ ಇದು ಒಂದು ದೊಡ್ಡ ಕಾರಣವಾಗಿತ್ತು.

ಅವತ್ತು ಸಂಜೆ ಜೈದೇಯಿ ತವರುಮನೆಗೆ ಹೋಗಿಬಂದಳು. ತನ್ನ ತಂದೆಯ ಮನೆಯ ಸ್ಥಿತಿಗತಿಯನ್ನು ನೋಡಿ ಅವಳು ಮೂಕಳಾದಳು. ತಂದೆಯ ಆ ದೊಡ್ಡ ಬಂಗಲೆ ಈಗ ಎರಡಾಗಿ ಇಬ್ಭಾಗವಾಗಿತ್ತು. ಎರಡೂ ಭಾಗಗಳ ನಡುವೆ ಒಂದು ಗೋಡೆ ಎದ್ದಿತ್ತು. ಅತ್ತಿಗೆಯೇನೋ ಜೈದೇಯಿಯನ್ನು ಸ್ವಾಗತಿಸಿದಳು. ಆದರೆ ಆ ಸ್ವಾಗತ ದಲ್ಲಿ ಸೌಹಾರ್ದವಿರಲಿಲ್ಲ, ಮಮತೆಯಿರಲಿಲ್ಲ.

ಮನೆಯಲ್ಲಿ ಒಂದು ಭಯಾನಕ ಕಲಹದ ವಾತಾವರಣವಿದ್ದುದು ಕಂಡುಬಂದಿತು. ಬುದ್ಧೂಲಾಲ, ಮುನ್ನೂಲಾಲರಲ್ಲಿ ಪಾಲಾಗಿತ್ತು. ಮುನ್ನೂಲಾಲ ಲಕ್ಷ್ಮೀಚಂದನ ಬಟ್ಟೆಮಿಲ್ಲಿನ ದಲ್ಲಾಳಿ ಕೈಗೊಂಡಿದ್ದ. ಇದಕ್ಕೆ ಬುದ್ಧೂಲಾಲನೂ ತಾಯಿಯೂ ಅಡ್ಡಿ ಮಾಡಿದ್ದರು. ವ್ಯಾಜ್ಯಕ್ಕೆ ಬಿದ್ದು 'ಸುಖ್ಖೂಲಾಲ–ಬುದ್ಧೂಲಾಲ ಕಂಪನಿ'ಯ ಸ್ಥಿತಿ ಬಹಳ ಕೆಟ್ಟಿತ್ತು. ಮುನ್ನೂಲಾಲನಿಗೆ ವ್ಯಾಜ್ಯದಿಂದ ಬೇಸರ ಬಂದಿತ್ತು. ದಲ್ಲಾಳಿಯ ಕಸುಬಿ ನಿಂದ ಅವನಿಗೆ ತಿಂಗಳಿಗೆ ಸುಮಾರು ಸಾವಿರ ರೂಪಾಯಿ ಸಂಪಾದನೆಯಾಗುತ್ತಿತ್ತು. ಆದಕಾರಣ ಅವನು ಅಣ್ಣನಿಂದ ಪಾಲು ಪಡೆದು 'ಸುಖ್ಖೂಲಾಲ–ಬುದ್ಧೂಲಾಲ ಕಂಪನಿ' ಯಿಂದ ಬೇರೆಯಾಗಿದ್ದ.

ಜೈದೇಯಿ ತನ್ನ ತವರಿನವರ ಜೊತೆ ಸುಮಾರು ಎರಡು ಮೂರು ಗಂಟೆ ಕಾಲ ಇದ್ದಳು. ಅಲ್ಲಿ ಅವಳು ಕಂಡದ್ದು ಒಂದು ಭಯಾನಕವಾದ ಕಹಿಯ ವಾತಾವರಣವನ್ನು. ಅವಳಿಗೆ ಆ ವಾತಾವರಣದಲ್ಲಿ ಉಸಿರು ಸಿಕ್ಕುಹಾಕಿಕೊಂಡಂತಾಗಿ ಅಲ್ಲಿಂದ ಬೇಗಬೇಗನೆ ಮಗನ ಮನೆಗೆ ಹಿಂದಿರುಗಿದಳು. ಅವಳು ವಾಪಸು ಬಂದಾಗ ಲಕ್ಷ್ಮೀಚಂದ ಊಟ ಮಾಡುತ್ತಿದ್ದ. ತಾಯಿಯ ಮುಖ ಕಂಡೊಡನೆಯೇ ಅವನು ನಗುತ್ತ, "ನೋಡಿ ಬಂದೆಯಾ, ನಿಮ್ಮ ಅಣ್ಣನ ಮಕ್ಕಳನ್ನ! ಈಗ ತಮ್ಮತಮ್ಮಲ್ಲೇ ವ್ಯಾಜ್ಯ ಕಾಯ್ತಿದಾರೆ. ನಾನು ಅವರಿಗೆ ಒಂದಿಷ್ಟು ಆಸರೆ ಕೊಡೋಣ ಅಂತ ಪ್ರಯತ್ನಿಸಿದರೆ ಬುದ್ಧೂ ಕೋಪಿಸಿ ಕೊಂಡ; ಅತ್ತೆಯಂತೂ ವೈರಾನೇ ಕಟ್ಟಿಕೊಂಡು ಕೂತಿದಾಳೆ. ಮುನ್ನೂಲಾಲ ಆ ಆಸರೆ ಪಡಕೊಂಡ ಅಂತ ಅವರು ಅವನಿಗೂ ವೈರಿಗಳಾಗಿದಾರೆ."

ಜೈದೇಯಿ ಇದಕ್ಕೆ ತುಂಬ ಕಠೋರವಾಗಿ ಉತ್ತರ ಕೊಡಬಹುದಿತ್ತು. ಬದಲು ಒಂದು ನಿಟ್ಟುಸಿರು ಬಿಡುತ್ತ ಹೇಳಿದಳು, "ಇದೆಲ್ಲಾ ಭಗವಂತನ ಲೀಲೆ! ಇದರಲ್ಲಿ ಯಾರು ತಾನೇ ಏನು ಮಾಡೋಕ್ಕಾಗುತ್ತೆ?"

ಜೈದೇಯಿ ಎಂದಿನಂತೆ ತನ್ನ ಅಣ್ಣನ ಮಕ್ಕಳ ಪಕ್ಷ ಹಿಡಿದು ಏನಾದರೂ ಕಟುವಾಗಿ ಮಾತನಾಡುವಳೆಂದು ಲಕ್ಷ್ಮೀಚಂದ ಭಾವಿಸಿದ್ದ. ಆದರೆ ಅವನಿಗೆ ನಿರಾಶೆಯಾಯಿತು.

ಅವನಂದ, "ಅಮ್ಮಾ, ನಾನು ಅಲಹಾಬಾದಿನ ಮರದ ಕಾರಖಾನೇನ ಮಾರಿಬಿಡ್ತೀನಿ. ಅದರಿಂದ ನನಗೆ ಒಂದು ಲಕ್ಷ ರೂಪಾಯಿ ನಗದು ನಫೆ ಆಗೋದಿದೆ."

ಜೈದೇಯಿ ಬೆಚ್ಚಿಬಿದ್ದಳು, "ಯಾಕೆ, ಆ ಕಾರ್ಖಾನೆ ಚೆನ್ನಾಗಿ ನಡೀತಿದೆಯಲ್ಲ."

"ಹೌದು, ನಡೀತಿದೆ. ಇಲ್ಲದೆ ಹೋದರೆ ಯಾರಾದರೂ ಒಂದು ಲಕ್ಷ ರೂಪಾಯಿ ಹೆಚ್ಚು ಕೊಟ್ಟು ಅದನ್ನ ಕೊಂಡುಕೊಳ್ಳೋಕೆ ಮುಂದೆ ಬರ್‍ತಿದ್ದರೆ? ಆದರೆ ಇಲ್ಲಿ ಕಾನಪುರದಲ್ಲಿದ್ದುಕೊಂಡು ಅದನ್ನ ಸರಿಯಾಗಿ ನೋಡಿಕೊಳ್ಳೋಕ್ಕಾಗೋಲ್ಲ. ಅದರ ಮೇಲೆ ಹಾಕಿರೋ ಬಂಡವಾಳ ಸುಮ್ಮನೆ ವ್ಯರ್ಥವಾಗ್ತಿದೆ. ಆ ಹಣಕ್ಕೆ ಇನ್ನೊಂದಿಷ್ಟು ಹಣ ಸೇರಿಸಿದರೆ ಇಲ್ಲೇ ಇನ್ನೊಂದು ಬಟ್ಟೆಮಿಲ್ಲು ತೆಗೀಬಹುದು. ಕಾನಪುರದಲ್ಲೇ ಆದ್ದರಿಂದ ಅದನ್ನ ಚೆನ್ನಾಗಿ ನೋಡಿಕೋಬಹುದು."

ಜೈದೇಯಿ ಅಂಜುಅಂಜುತ್ತಲೇ ಕೇಳಿದಳು, "ಅಲಹಾಬಾದಿನಲ್ಲಿರೋ ಮನೆ? ಅದನ್ನೂ ಮಾರಿಬಿಡ್ತೀಯಾ?"

ಲಕ್ಷ್ಮೀಚಂದ ನಗತೊಡಗಿದ, "ಇಲ್ಲಮ್ಮ, ಆ ಅಲಹಾಬಾದಿನ ಮನೆ ನಿನ್ನದು. ಅಲ್ಲದೆ ಅಲಹಾಬಾದ್ ನಮ್ಮ ಪ್ರಾಂತದ ರಾಜಧಾನಿ. ಅಲ್ಲಿ ಹೈಕೋರ್ಟಿದೆ. ದಿನಾ ಅಲ್ಲಿ ನಮ್ಮದು ಒಂದಲ್ಲ ಒಂದು ಮೊಕದ್ದಮೆ ನಡೀತಾನೇ ಇರುತ್ತೆ; ಅಲ್ಲಿಗೆ ಹೋಗೀ ಬಂದು ಮಾಡ್ತಿರಬೇಕಾಗುತ್ತೆ."

ಜೈದೇಯಿಗೆ ಹೋದ ಪ್ರಾಣ ಬಂದಂತಾಯಿತು. ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದಳು, "ಹಾಗಾದರೆ ಸರಿ, ಲಕ್ಷ್ಮೀ. ಆದರೆ ಇನ್ನುಮೇಲೆ ನೀನು ಅಲ್ಲಿಗೆ ಬರೋದು ಹೋಗೋದು ಕಡಿಮೆಯಾಗುತ್ತೆ. ನಾನಂತೂ ಅಲ್ಲಿ ಒಂಟಿ. ಏನು ಮಾಡಬೇಕು ಅಂತ ತಿಳಿಯೋಲ್ಲ."

ಲಕ್ಷ್ಮೀಚಂದ ಹೇಳಿದ, "ಇಲ್ಲೇ ಕಾನಪುರದಲ್ಲಿ ಬಂದಿರು ಅಂತ ನಾನೆಷ್ಟು ಹೇಳಿದೆ, ಆದರೆ ಅದು ನಿನ್ನ ಮನಸ್ಸಿಗೆ ಬರೋಲ್ಲ, ಗಂಗೆ ಇಲ್ಲಿ ಕಾನಪುರದಲ್ಲೂ ಹರೀತಾಳೆ ಅಂದಮೇಲೆ ಅಲ್ಲಿರೋ ಅವಶ್ಯಕತೆಯೇನಿದೆ? ಪ್ರಯಾಗರಾಜ ದೊಡ್ಡ ತೀರ್ಥಸ್ಥಳ ಅಂತ ಒಪ್ಪಿಕೋತೀನಿ. ಬೇಕಾದರೆ ನಿನ್ನ ಹೆಸರಿನಲ್ಲಿ ಅಲ್ಲೊಂದು ಧರ್ಮಶಾಲೆ ಕಟ್ಟಿಸ್ತೀನಿ."

ಜೈದೇಯಿ ನಕ್ಕಳು, "ಧರ್ಮಶಾಲೇನ ನಾನು ಸತ್ತಮೇಲೆ ಕಟ್ಟಿಸೋವಂತೆ..."

ಈಗ ರಾಧೆ ಬಾಯಿ ಹಾಕಿದಳು, "ಅಲ್ಲಿ ಅಮ್ಮಾಜಿ ಒಂಟಿ ಹೇಗೆ! ಆಳುಕಾಳು ಎಲ್ಲರೂ ಇದಾರೆ, ಅಷ್ಟು ದೊಡ್ಡ ಬಂಗಲೆ, ಕುದುರೆಗಾಡಿ ಎಲ್ಲಾ ಇದೆ. ಜೊತೆಗೆ ತೀರ್ಥಸ್ಥಳ, ತ್ರಿವೇಣೀ ಸಂಗಮ. ನಾವು ಹೋದಾಗ ಅಲ್ಲೇ ಇರ್ತೀವಿ. ಅಮ್ಮಾಜಿ ಕಾನಪುರದಲ್ಲಿ ಬಂದು ಇರೋಕ್ಕೆ ಇಷ್ಟಪಡದಿದ್ದರೆ ಅದರಲ್ಲಿ ಏನು ಹಾನಿಯಾಯಿತು?"

ಜೈದೇಯಿ ರಾಧೆಯ ಕಡೆ ನೋಡಿದಳು. ಆ ದೃಷ್ಟಿಯಲ್ಲಿ ದುಃಖಮಿಶ್ರಿತವಾದ ಕೃತಜ್ಞತೆಯಿತ್ತು. ಕಾನಪುರದ ಮನೆಯ ಯಜಮಾನಿ ರಾಧೆ, ಜೈದೇಯಿಯಲ್ಲ

ಎಂಬುದು ಸ್ಪಷ್ಟವಾಗಿತ್ತು. ಕಾನಪುರದಲ್ಲಿ ಬಂದು ಇರುವುದರ ಅರ್ಥವೆಂದರೆ ರಾಧೆಯ ಅಧೀನದಲ್ಲಿರುವುದು, ಮನೆಯಲ್ಲಿ ನಿರಂತರ ಕಲಹ!

ಜೈದೇಯಿ ಹೇಳಿದಳು, "ಸೊಸೆಮಗಳು ಹೇಳೋದು ಸರಿ! ಅಲ್ಲೇ ಚೆನ್ನಾಗಿದೀನಿ. ಆಳುಕಾಳು ಎಲ್ಲಾ ಇದಾರೆ ಅಲ್ಲಿ. ಇನ್ನು ಮೇಲೆ ಮೋಹಮಾಯಗಳನ್ನೆಲ್ಲಾ ಬಿಟ್ಟು, ದೇವರ ಧ್ಯಾನದಲ್ಲಿ ಮನಸ್ಸನ್ನ ತೊಡಗಿಸಬೇಕು. ಅವನು ಯಾವಾಗ ಕರಕೋತಾನೋ ಗೊತ್ತಿಲ್ಲ. ಅಲ್ಲಿ ಅಲಹಾಬಾದಿನಲ್ಲೇ ಪೂಜೆ, ಜಪ ಮಾಡಿಕೊಂಡಿರ್ತೀನಿ; ನಿನ್ನ ಏಳಿಗೆ ಯಾಗಲಿ, ನಿನ್ನ ಬದುಕು ಹೂ-ಹಣ್ಣಾಗಲಿ ಅಂತ ಪ್ರಾರ್ಥನೆ ಮಾಡಿಕೊಂಡಿರ್ತೀನಿ."

ಕಾನಪುರದಲ್ಲಿ ಒಂದು ವಾರ ಇದ್ದು ಜೈದೇಯಿ ಅಲಹಾಬಾದಿಗೆ ವಾಪಸಾದಳು. ಮಾಘಮೇಳ ತಲೆಯ ಮೇಲೆ ಬಂದು ಕೂತಿತ್ತು.

## ಮೂರು

ದಿಲ್ಲಿ-ದರಬಾರು ಮುಗಿಸಿಕೊಂಡು ಗಂಗಾಪ್ರಸಾದ ಸಂಸಾರಸಮೇತನಾಗಿ ಬರೇಲಿ ತಲಪಿದಾಗ ಅಲ್ಲಿ ಕೋಲಾಹಲವೋ ಕೋಲಾಹಲ. ಆರ್ಯಸಮಾಜದ ಮೊದಲ ಅಧಿವೇಶನ ಅಲ್ಲಿ ತುಂಬ ವಿಜೃಂಭಣೆಯಿಂದ ನಡೆದಿತ್ತು. ಪೆರೇಡ್ ಮೈದಾನದಲ್ಲಿ ವಿಶಾಲವಾದ ಚಪ್ಪರ ಹಾಕಿದ್ದರು, ದಿನವೂ ಭರ್ಜರಿ ವ್ಯಾಖ್ಯಾನ ನಡೆಯುತ್ತಿತ್ತು. ದೇಶದ ಎಲ್ಲ ಕಡೆಯಿಂದಲೂ ಒಳ್ಳೆಯ ಭಜನಮಂಡಳಿಗಳು ಬಂದಿದ್ದವು. ಈ ಅಧಿವೇಶನಕ್ಕೆ ಜೀವ ತೇಯುತ್ತಿದ್ದವರೆಂದರೆ ಆರ್ಯಸಮಾಜದ ಮಹಾ ಉಪದೇಶಕ ಸ್ವಾಮಿ ಜಟಿಲಾನಂದರು. ಅವರ ವ್ಯಾಖ್ಯಾನ ಬೆಂಕಿಯಂತಿರುತ್ತಿತ್ತು. ಸ್ವಾಮಿ ಜಟಿಲಾನಂದರು ಬೇರೆ ಬೇರೆ ಧರ್ಮದವರಿಗೆ ಶಾಸ್ತ್ರಾರ್ಥ ಮಾಡಿಬನ್ನಿರೆಂದು ಸವಾಲು ಹಾಕಿದ್ದರು. ಈ ಸವಾಲನ್ನು ಒಪ್ಪಿಕೊಂಡಿದ್ದವನೆಂದರೆ ಅಲ್ಲಾಮಾ ವಹಶಿ. ಅವತ್ತಿಗೆ ಮೂರು ದಿನಕ್ಕೆ ಅಲ್ಲಾಮಾ ವಹಿಶಿ ಹಾಗೂ ಸ್ವಾಮಿ ಜಟಿಲಾನಂದರ ಶಾಸ್ತ್ರಾರ್ಥವೆಂದು ನಿಶ್ಚಯವಾಗಿತ್ತು.

ಚಪ್ಪರದಲ್ಲಿ ಜನ ಕಿಕ್ಕಿರಿದಿದ್ದರು. ಪೋಲೀಸ್ ಸಿಪಾಯಿಗಳು ಸಾಕಷ್ಟು ಸಂಖ್ಯೆಯಲ್ಲಿ ಹಾಜರಿದ್ದರು. ಮಿಸ್ಟರ್ ಪ್ರೇಟರ್ ಶಾಸ್ತ್ರಾರ್ಥದ ನಿರ್ಣಾಯಕರೆಂದು ಗೊತ್ತಾಗಿತ್ತು. ಅವತ್ತು ಅವರ ಮನೆಗೆ ಕೆಲವರು ಅತಿಥಿಗಳು ಬಂದಿದ್ದ ಕಾರಣ ಅವರು ಸಭೆಗೆ ಬರುವುದು ಕೊಂಚ ಹೊತ್ತಾಯಿತು. ಬಂದವರೇ ಅವರು ನೇರವಾಗಿ ವೇದಿಕೆಯ ಮೇಲೆ ಹೋದರು. ವೇದಿಕೆಯ ಮೇಲೆ ಅವರೊಂದಿಗೆ ಮೀರ್ ಜಾಫರ್‌ಅಲಿ, ಪಂಡಿತ ಸೋಮೇಶ್ವರದತ್ತ ಹಾಗೂ ಮಿಸ್ಟರ್ ಜೊನಾಥನ್ ಡೇವಿಡರು ಕೂತಿದ್ದರು. ಇನ್ನೂ ಆರೇಳು ಖಾಲಿ ಕುರ್ಚಿಗಳಿದ್ದವು. ಈ ದೊಡ್ಡ ವೇದಿಕೆಗೆ ಎದುರಾಗಿ ಒಬ್ಬ ವ್ಯಕ್ತಿ ಕುಳಿತುಕೊಳ್ಳಲು ಸಾಕಾಗುವಂತಹ ಮೂರು ಚಿಕ್ಕ ಚಿಕ್ಕ ವೇದಿಕೆಗಳಿದ್ದವು. ಅವುಗಳಲ್ಲಿ ನಡುವಿನ ವೇದಿಕೆಯ

ಮೇಲೆ ಸ್ವಾಮಿ ಜಟಿಲಾನಂದರು ಕುಳಿತಿದ್ದರು. ಬಲಗಡೆಯ ವೇದಿಕೆಯಮೇಲೆ ಅಲ್ಲಾಮಾ ವಹಶಿಯೂ ಎಡಗಡೆಯದರ ಮೇಲೆ ಫಾದರ್ ಮಸೀಹರೂ ಕುಳಿತಿದ್ದರು.

ಮಿಸ್ಟರ್ ಪ್ರೇಟರರು ಎದ್ದು ಶಾಸ್ತ್ರಾರ್ಥದ ನಿಯಮಗಳೇನೆಂಬುದನ್ನು ವಿವರಿಸಿದರು. ಅಲ್ಲಾಮಾ ವಹಶಿ ಸ್ವಾಮಿ ಜಟಿಲಾನಂದರನ್ನು ಮೊದಲ ಪ್ರಶ್ನೆ ಕೇಳುವುದು, ಅದಕ್ಕೆ ಜಟಿಲಾನಂದರು ಉತ್ತರ ಕೊಡುವುದು. ಪ್ರಶ್ನೋತ್ತರದಿಂದ ನಿರ್ಣಾಯಕರಿಗೆ ತೃಪ್ತಿಯಾಗದಿದ್ದರೆ ಉತ್ತರ–ಪ್ರತ್ಯುತ್ತರಕ್ಕೆ ಅವಕಾಶ ಕೊಡಲಾಗುವುದು. ಆಮೇಲೆ ಅದೇ ಕ್ರಮದಲ್ಲಿ ಫಾದರ್ ಮಸೀಹ ಸ್ವಾಮಿ ಜಟಿಲಾನಂದರನ್ನು ಪ್ರಶ್ನೆ ಕೇಳುವರು. ಸ್ವಾಮಿ ಜಟಿಲಾನಂದರ ನಂತರ ಉತ್ತರ ಕೊಡುವ ಭಾರ ಅಲ್ಲಾಮಾ ವಹಶಿಯದು; ಮತ್ತೆ ಮೊದಲಿನ ಕ್ರಮವೇ. ಕೊನೆಯಲ್ಲಿ ಉತ್ತರ ಕೊಡುವವರು ಫಾದರ್ ಮಸೀಹ.

ಮಿಸ್ಟರ್ ಪ್ರೇಟರರ ಈ ಘೋಷಣೆಯ ನಂತರ ಚಪ್ಪರದಲ್ಲಿ ಒಂದು ಬಗೆಯ ಸ್ತಬ್ಧತೆ ಕವಿಯಿತು. ಸ್ವಾಮಿ ಜಟಿಲಾನಂದರು ಪದ್ಮಾಸನ ಹಾಕಿ ಕುಳಿತು ಓಂಕಾರ ಘೋಷಿಸಿದರು. ಅವರ ಅನುಯಾಯಿಗಳು ಹರ್ಷಧ್ವನಿ ಮಾಡಿದರು. ಅಲ್ಲಾಮಾ ವಹಶಿ ದುಂಡುದಿಂಬಿಗೆ ಒರಗಿ ಕುಳಿತಿದ್ದ. ಅವನ ಕೈಯಲ್ಲಿ ಜಪಮಾಲೆಯಿತ್ತು. ಕಣ್ಣು ಮುಚ್ಚಿತ್ತು. ಕೈಯಲ್ಲಿನ ಜಪಮಾಲೆ ಸರಸರನೆ ಸರಿಯುತ್ತಿತ್ತು. ಅಲ್ಲಾಮಾ ವಹಶಿ ಹಠಾತ್ತನೆ ಎಚ್ಚರಗೊಂಡು ಕಣ್ಣು ತೆರೆದ. ಅವನ ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದವು. ಎರಡೂ ಮೊಣಕಾಲುಗಳ ಮೇಲೆ ಕುಳಿತು, ಅಲ್ಲಾಮಾ ವಹಶಿ ಎತ್ತರದ ಧ್ವನಿಯಲ್ಲಿ ಹೇಳಿದ, "ದೇವರ ಆಜ್ಞೆ! ದೇವದೂತ ಪೈಗಂಬರರ ಇಚ್ಛೆ! ಎಲೈ, ಬೋಳುತಲೆಯ ಸ್ವಾಮಿಯೇ, ನಾನು ಹೇಳೋದು ಏನೂ ಅಂದರೆ, ನೀನು ಬರಿಯ ತಲೆಯನ್ನಷ್ಟೇ ಅಲ್ಲ, ನಿನ್ನ ಗಡ್ಡಮೀಸೇನೂ ಬೋಳಿಸಿಕೊಂಡಿದಿ. ನಿನ್ನ ದೇವರು ನಿನ್ನ ತಲೆಯ ಮೇಲೆ ಕೂದಲು ಬೆಳಸಿದ, ಮೀಸೆ ಬೆಳಸಿದ, ಗಡ್ಡ ಬೆಳಸಿದ. ಇದರ ಅರ್ಥ ಏನಾಯಿತು ಅಂದರೆ ನೀನು ನಿನ್ನ ಪರಮಾತ್ಮನನ್ನ ಮೂರ್ಖ, ತಿಳಿಗೇಡಿ ಅಂತ ತಿಳಿದಿದಿ. ಅರ್ಥಾತ್ ತಲೆ, ಗಡ್ಡ, ಮೀಸೆಗಳನ್ನ ಬೋಳಿಸಿಕೊಂಡು ನೀನು ನಿನ್ನ ದೇವರಿಗಿಂತ ಹೆಚ್ಚು ಬುದ್ಧಿವಂತ, ಕೂದಲು ಬೆಳಸಿ ಅವನು ಮೂರ್ಖತನ ಮಾಡಿದ ಅನ್ನೋದನ್ನ ತೋರಿಸಿದಿ. ಅಂದರೆ ನಿನ್ನ ಈ ಕೃತ್ಯದಿಂದ ನಿನ್ನ ದೇವರು ಮೂರ್ಖ ಅಂತ ಘೋಷಿಸಿದಿ. ಎಲೆ ತಲೆಬೋಳ ಸ್ವಾಮಿ ಮೂರ್ಖಾನಂದ, ನಿನ್ನ ದೇವರ ಮೂರ್ಖತೇನ ಈ ತರಹದ ಕೃತ್ಯಗಳಿಂದ ಬಹಿರಂಗಪಡಿಸೋದು ಶುದ್ಧ ಧರ್ಮಗೇಡಿತನವಷ್ಟೇ ಅಲ್ಲ, ಅದು ವಂಚನೆ ಕೂಡ."

ಪಂಡಿತ ಸೋಮೇಶ್ವರದತ್ತರಿಗೆ ಈ ಪ್ರಶ್ನೆ ಕೇಳಿ ರೇಗಿತು. ಅವರು ಕಲೆಕ್ಟರರಿಗೆ ಹೇಳಿದರು, "ಹುಜೂರ್, ಇದು ಪ್ರಶ್ನೆಯಲ್ಲ, ಬೈಗಳ."

ಮಿಸ್ಟರ್ ಪ್ರೇಟರ್ ನಗುತ್ತ ಮೀರ್ ಜಾಫರ್‌ಅಲಿಯ ಕಡೆ ನೋಡಿ, "ನೀನೇನು ಹೇಳ್ತಿ, ಮೀರ್?" ಅಂದರು.

"ಹುಜೂರ್ ನ್ಯಾಯ ಬಲ್ಲವರು. ಫೈಸಲು ಮಾಡೋದು ಹುಜೂರರ ಕೈಲಿದೆ. ಪ್ರಶ್ನೆ ಕೇಳಿದ ರೀತೀಲಿ ಸ್ವಲ್ಪ ತಪ್ಪಿರಬಹುದು; ಆದರೆ ಪ್ರಶ್ನೆ ಅಸಂಬದ್ಧ ಅಂತ ಅನಿಸೋಲ್ಲ. ಯಾಕೆ ಅಂದರೆ ನಿಮ್ಮನ್ನ, ನನ್ನನ್ನ ಅರ್ಥಾತ್ ನಮ್ಮೆಲ್ಲರನ್ನೂ ಪೀಡಿಸ್ತಿರೋ ಪ್ರಶ್ನೆ ಇದು."

ಮಿಸ್ಟರ್ ಪ್ರೇಟರ್ ಈಗ ಜೊನಾಥನ್ ಡೇವಿಡರ ಕಡೆ ನೋಡಿದರು, "ಏನು ಮಿಸ್ಟರ್ ಡೇವಿಡ್, ನಿಮ್ಮ ವಿಚಾರ ಏನು?"

ಜೊನಾಥನ್ ಡೇವಿಡ್ ಥಟ್ಟನೆ ಉತ್ತರ ಕೊಟ್ಟ, "ಈ ಪ್ರಶ್ನೇನ ಡಿಸ್ ಅಲೋ ಮಾಡ ಬೇಕು. ತುಂಬ ಅಸಭ್ಯವಾದ ಪ್ರಶ್ನೆ ಇದು."

ಈಗ ಮಿಸ್ಟರ್ ಪ್ರೇಟರ್ ಗಂಗಾಪ್ರಸಾದನ ಕಡೆ ತಿರುಗಿದರು. ಗಂಗಾಪ್ರಸಾದ ನಗುತ್ತ ಹೇಳಿದ, "ಪ್ರಶ್ನೆ ಸರಿಯಾಗಿದೆ, ಪ್ರಶ್ನೆ ಕೇಳಿದ ರೀತೀನೂ ಸ್ವಾಭಾವಿಕವಾಗಿಯೇ ಇದೆ."

ಸ್ವಲ್ಪ ಹೊತ್ತು ಯೋಚಿಸಿದ ಮೇಲೆ ಮಿಸ್ಟರ್ ಪ್ರೇಟರ್ ಹೇಳಿದರು, "ಪ್ರಶ್ನೆ ಕೇಳಿದ ರೀತಿ ಸರಿಯಲ್ಲ ಅಂತ ನಮಗನಿಸಿದರೂ ಕೇಳಿದ ಪ್ರಶ್ನೆ ಮಾತ್ರ ಮಹತ್ವಪೂರ್ಣ ವಾದದ್ದು. ಅಲ್ಲಾಮಾ ವಹಶಿ ಈ ಪ್ರಶ್ನೇನ ಬೈಗಳದ ಧಾಟೀಲಿ ಕೇಳಿರೋದರಿಂದ ಸ್ವಾಮಿ ಜಟಿಲಾನಂದರಿಗೆ ಬೈಗಳದ ಧಾಟೀಲೇ ಉತ್ತರ ಕೊಡೋ ಅಧಿಕಾರವಿದೆ."

ಸಭಿಕರು ಕಿವಿ ಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು. ಎಷ್ಟು ಉಚಿತವೂ ನ್ಯಾಯ ಪೂರ್ಣವೂ ಆದ ನಿರ್ಣಯ!

ಸ್ವಾಮಿ ಜಟಿಲಾನಂದರು ಈಗ ಆರ್ಭಟಿಸಿದರು, "ಮಹರ್ಷಿ ದಯಾನಂದರಿಗೆ ಜಯವಾಗಲಿ! ನಮ್ಮ ಧರ್ಮದ ಪ್ರಕಾರ ಪ್ರಪಂಚದಲ್ಲಿ ಮೂರು ತತ್ವಗಳು ಕೆಲಸ ಮಾಡುತ್ತವೆ—ಪರಮಾತ್ಮ, ಆತ್ಮ ಮತ್ತು ಪ್ರಕೃತಿ. ಎಲೈ, ಅಲ್ಲಾಮಾ (ಮಹಾ ವಿದ್ವಾಂಸ) ಅಂತ ಕರಸಿಕೊಳ್ಳೋ ವಹಶಿಯೇ, ನನ್ನ ಶರೀರ ಪ್ರಕೃತಿಯ ಅಂಶವಾಗಿದೆ, ನನ್ನ ಪ್ರಾಣ ಆತ್ಮದ ಅಂಶವಾಗಿದೆ. ಈ ಪ್ರಕೃತಿ ಹಾಗೂ ಆತ್ಮಗಳ ದಣಿ ಅಂದರೆ ಪರಮಾತ್ಮ. ಪ್ರಕೃತಿ, ಆತ್ಮಗಳನ್ನು ಸೃಷ್ಟಿಸಿದವನು ಪರಮಾತ್ಮನೇ ಆದಾಗ್ಯೂ ಅವನು ಅವಕ್ಕೆ ತಮ್ಮ ಸ್ವೇಚ್ಛೆಯಂತೆ ವರ್ತಿಸುವ ಸ್ವಾತಂತ್ರ್ಯ ಕೊಟ್ಟಿದ್ದಾನೆ. ಎಲೈ ಅಲ್ಲಾಮಾ ವಹಶೀ, ನಿನ್ನ ಪ್ರಶ್ನೆ ಒಂದು ಶುದ್ಧ ನಾಟಕವಿದ್ದಂತೆ. ಯಾಕೆಂದರೆ ಪ್ರಕೃತಿ ಅಪೂರ್ಣ ವಲ್ಲದೆ ಹೋಗಿದ್ದರೆ ನಿನಗೆ ಬಟ್ಟೆಬರೆ ಒಂದೂ ಇರುತ್ತಿರಲಿಲ್ಲ. ಪ್ರಕೃತಿ ಕಾಡನ್ನು ಸೃಷ್ಟಿಸುತ್ತೆ, ಮನುಷ್ಯ ಅದನ್ನು ಉದ್ಯಾನವನವನ್ನಾಗಿ ಮಾಡ್ತಾನೆ; ಪ್ರಕೃತಿ ಹಿಮ ಬೀಳು ವಂತೆ, ಶೀತದ ಗಾಳಿ ಬೀಸುವಂತೆ ಮಾಡಿದರೆ ಮನುಷ್ಯ ಅವುಗಳಿಂದ ರಕ್ಷಣೆ ಪಡೆಯಲು ಮನೆ ಕಟ್ಟುತ್ತಾನೆ; ಕಂಬಳಿ, ಮೆತ್ತೆ ಮಾಡಿ ಹೊದ್ದುಕೋತಾನೆ! ಈ ನಮ್ಮ ಆತ್ಮ ಪ್ರಕೃತಿಯನ್ನು ಸುಧಾರಿಸುತ್ತ ಹೋಗುತ್ತೆ, ಸರಿಪಡಿಸುತ್ತ ಹೋಗುತ್ತೆ. ಈಗ ನನ್ನ ಉತ್ತರ ಕೇಳು: ನಾನು ತಲೆ ನುಣ್ಣಗೆ ಮಾಡಿಸಿಕೊಂಡಿರುವುದು ಯಾಕೆಂದರೆ, ಗಡ್ಡ ಮೀಸೆ

ಬೋಳಿಸಿಕೊಂಡಿರುವುದು ಯಾಕೆಂದರೆ ಪ್ರಕೃತಿಯಲ್ಲಿ ನಿರರ್ಥಕವಾದುದಕ್ಕೆ ಗಂಟು ಬಿದ್ದು ದಿನವೂ ತಲೆಗೆ ಎಣ್ಣೆ ಹಚ್ಚಿಕೊಂಡು ಬಾಚಿಕೊಳ್ಳುವ, ಹಜಾಮನಿಂದ ಗಡ್ಡಮೀಸೆ ಗಳಿಗೆ ಆರೈಕೆ ಮಾಡಿಸಿಕೊಳ್ಳುವ ಗೋಳಿನಿಂದ ಮುಕ್ತನಾಗಿ ನನ್ನ ಆತ್ಮ ಪರಮಾತ್ಮನ ಕಡೆ ಗಮನಕೊಡುವಂತೆ ಮಾಡುವ ಸಲುವಾಗಿ. ಏ ಅಲ್ಲಾಮಾ, ನಿನ್ನ ದೇವರು ಬೆಟ್ಟ ಗುಡ್ಡ ಸೃಷ್ಟಿಸಿದ; ಕಾಡುಮೇಡು ಸೃಷ್ಟಿಸಿದ; ಹುಲಿ, ನರಿ, ಹಂದಿ, ಹಾವುಗಳಂತಹ ವಿಲಕ್ಷಣ ಪ್ರಾಣಿಗಳನ್ನೆಲ್ಲಾ ಸೃಷ್ಟಿಸಿದ. ಇವೆಲ್ಲವನ್ನೂ ಸೃಷ್ಟಿಸಿದ ಮೇಲೆ ನಿನ್ನನ್ನು ಸೃಷ್ಟಿಸಿ ನಿನ್ನ ದೇವರು ಪ್ರದರ್ಶಿಸಿದ ಕೋಡಂಗಿತನವನ್ನು ಎಷ್ಟು ಹೊಗಳಿದರೂ ಸಾಲದು; ದೇವರ ವಿಷಯದಲ್ಲಿ ಮೂರ್ಖತೆ ಅನ್ನೋ ಶಬ್ದ ಉಪಯೋಗಿಸೋದು ತಪ್ಪಾಗುತ್ತೆ. ಮೂರ್ಖತೆಯೇನಿದ್ದರೂ ನಿನ್ನದು ಕಣೋ, ಅಲ್ಲಾಮಾ."

ಸ್ವಾಮಿ ಜಟಿಲಾನಂದರ ಈ ಉತ್ತರ ಕೇಳಿ ಸಭೆಯಲ್ಲಿ ಒಂದು ಕಡೆ ಚಪ್ಪಾಳೆ ಗುಡುಗಿ ದರೆ ಇನ್ನೊಂದು ಕಡೆ ಗದ್ದಲವೆದ್ದಿತು, "ಹೊಡೀರೋ ಅವನನ್ನ. ಧರ್ಮಗೇಡಿ ಇದಾನೆ. ದೇವರನ್ನ ಕೋಡಂಗಿ ಅಂತಾನೆ." ಮಿಸ್ಟರ್ ಪ್ರೇಟರ್ ಎದ್ದು ಈ ಗದ್ದಲವನ್ನು ಹತೋಟಿಗೆ ತಂದರು, "ಪ್ರಶ್ನೆಗೆ ತಕ್ಕ ಉತ್ತರ. ಹೊಡಿ, ಬಡಿ ಅನ್ನೋರನ್ನ ದಸ್ತಗಿರಿ ಮಾಡಲಾಗುತ್ತೆ, ಪೋಲೀಸಿನೋರು ಇಲ್ಲೇ ಇದಾರೆ. ಈ ಪ್ರಶ್ನೇಲಿ ಸ್ವಾಮಿ ಗೆದ್ದಿದ್ದಾರೆ. ಈಗ ಫಾದರ್ ಮಸೀಹ ಜಟಿಲಾನಂದರಿಗೆ ಪ್ರಶ್ನೆ ಹಾಕ್ತಾರೆ."

ತಮ್ಮ ಕುರ್ಚಿಯ ಮೇಲೆ ನಿಶ್ಚಿಂತರಾಗಿ ಕುಳಿತು ಎಲ್ಲವನ್ನೂ ನೋಡುತ್ತಿದ್ದ ಫಾದರ್ ರಾಮ ಇಲಾಹಿ ಮಿಸ್ಟರ್ ಪ್ರೇಟರರ ಅಪ್ಪಣೆಯಂತೆ ಎದ್ದುನಿಂತರು. ಆಕಾಶದ ಕಡೆ ಕತ್ತೆತ್ತಿ ನೋಡಿ "ಓ ನನ್ನ ತಂದೆ! ಜಗತ್ತಿಗೆ ನಿನ್ನ ಪ್ರಕಾಶ ತೋರಿಸಲು ಶಕ್ತಿಕೊಡು" ಎಂದು ಒಮ್ಮೆ ಪ್ರಾರ್ಥನೆ ಮಾಡಿದರು. ಆಮೇಲೆ ಸ್ವಾಮಿ ಜಟಿಲಾನಂದರ ಕಡೆ ನೋಡಿದರು.

ಸ್ವಾಮಿ ಜಟಿಲಾನಂದರು ಫಾದರ್ ಮಸೀಹರ ಕಡೆ ಹುಲಿ ಕುರಿಯನ್ನು ನೋಡು ವಂತೆ ನೋಡುತ್ತಿದ್ದರು. ಫಾದರ್ ಮಸೀಹ ಹೇಳಿದರು, "ಆರ್ಯಸಮಾಜದಲ್ಲಿ ಮೂರ್ತಿಪೂಜೆ ನಿಷಿದ್ಧ, ದೇವಸ್ಥಾನಕ್ಕೆ ಹೋಗೋದು ತಪ್ಪೆನಿಸಿಕೊಳ್ಳುತ್ತೆ, ಸಂಧ್ಯಾ ವಂದನೆ, ಹವನ, ಯಜ್ಞಗಳನ್ನು ಮಾಡೋದೆಷ್ಟೋ ಅಷ್ಟೇ ಪೂಜೆ—ಈ ಮಾತು ಸರಿ ತಾನೆ?"

"ಪಾದರಿ ಸಾಹೇಬ್, ಪರಮಾತ್ಮ ನಿರಾಕಾರ. ನಿಮ್ಮ ಈಸಾಯಿ ಧರ್ಮವೂ ಈ ಮಾತನ್ನ ಒಪ್ಪುತ್ತೆ. ಅವನು ಎಲ್ಲೆಲ್ಲೂ ಇದಾನೆ, ಆದ್ದರಿಂದ ದೇವಸ್ಥಾನ, ಮಸೀದಿ, ಚರ್ಚು ಇವೆಲ್ಲವೂ ವ್ಯರ್ಥ. ನಮ್ಮ ಋಷಿಮುನಿಗಳು ಯಜ್ಞಮಾಡ್ತಿದ್ದರು, ಪರಮಾತ್ಮನ ಪೂಜೆಗೆ ಇದೇ ಎಲ್ಲಕ್ಕಿಂತ ಸರಿಯಾದ ವಿಧಾನ," ಸ್ವಾಮಿ ಜಟಿಲಾನಂದರು ಉತ್ತರ ಕೊಟ್ಟರು.

ಫಾದರ್ ಮಸೀಹ ಈಗ ತಮ್ಮ ಘಾತಕ ಪ್ರಹಾರ ಬೀಸಿದರು," ಸ್ವಾಮಿಜಿ,

ಹಿಂದುಗಳಲ್ಲಿ ಸತ್ತವರನ್ನು ಸುಡ್ತಾರೆ. ನಿಮ್ಮ ಯಜ್ಞಕುಂಡವೂ ಒಂದು ಚಿತೆ. ಅದರಲ್ಲಿ ಸ್ವಾಹಾ ಸ್ವಾಹಾ ಎಂದು ನಿಮ್ಮ ಪರಮಾತ್ಮನನ್ನ ದಿನವೂ ಸುಡ್ತೀರಿ ಅಂದರೆ ತಪ್ಪಲ್ಲ ತಾನೆ? ಅಂದರೆ ನೀವು ಪರಮಾತ್ಮನನ್ನ ಸತ್ತ ಹೆಣ ಅಂತ ತಿಳಿದು ಅವನನ್ನ ಸುಡೋಕ್ಕೆ ದಿನವೂ ಯಜ್ಞಮಾಡ್ತೀರಿ ಅಂತ ಅರ್ಥವಾಯಿತಲ್ಲ!"

ಫಾದರ್ ಮಸೀಹರ ಈ ಪ್ರಶ್ನೆ ಕೇಳಿ ಸ್ವಾಮಿ ಜಟಿಲಾನಂದರಿಗೆ ರೇಗಿತು. "ಏ ಪಾದರೀ, ನೀನು ಮಹಾ ಮೂರ್ಖ! ನಾವು ಹವನ, ಯಜ್ಞಗಳನ್ನ ಮಾಡೋದು ನಮ್ಮ ಆತ್ಮಾನ ಶುದ್ಧಿಮಾಡಿಕೊಳ್ಳೋಕೋಸ್ಕರ. ಅರ್ಥಾತ್ ನಮ್ಮ ಪಾಪಗಳನ್ನ ಸುಡೋಕ್ಕೋಸ್ಕರ. ಹೀಗೆ ನಮ್ಮ ಪಾಪಗಳನ್ನು ಸುಟ್ಟು ನಾವು ನಮ್ಮ ಪರಮಾತ್ಮನನ್ನ ಪೂಜಿಸ್ತೀವಿ."

ಫಾದರ್ ಮಸೀಹ ನಕ್ಕರು, "ಏ ಸ್ವಾಮಿ, ಪಾಪಕ್ಕೆ ಶರೀರವಿಲ್ಲ, ಪರಮಾತ್ಮನಿಗೆ ಶರೀರವಿಲ್ಲ. ಹವನಕುಂಡದ ಚಿತೇನಲ್ಲಿ ನಿಮ್ಮ ಪಾಪ ಸುಡುತ್ತೋ, ನಿಮ್ಮ ಪರ ಮಾತ್ಮ ಸುಡ್ತಾನೋ ಅಂತ ನಿನಗೆ ಹೇಗೆ ಗೊತ್ತಾಗುತ್ತೆ?"

ಸ್ವಾಮಿ ಜಟಿಲಾನಂದರು ಸಿಡಿದೆದ್ದರು, "ಏನು ಅಸಂಬದ್ಧವಾಗಿ ಮಾತಾಡ್ತೀಯೋ ಪಾದರಿ ಸಾಹೇಬ್! ಪರಮಾತ್ಮ ಎಲ್ಲಾದರೂ ಸುಡೋದು ಉಂಟೆ? ಅವನಿಗೆ ಮುಪ್ಪಿಲ್ಲ, ಸಾವಿಲ್ಲ. ಈ ಬುದ್ಧಿ ಇಟ್ಟುಕೊಂಡೇ ನೀನು ಬಿ. ಎ. ಪಾಸು ಮಾಡಿದೆಯಾ?"

ಫಾದರ್ ಮಸೀಹ ಉತ್ತರ ಕೊಟ್ಟರು, "ಅಸಂಬದ್ಧವಾಗಿ ಮಾತಾಡ್ತಿರೋನು ನೀನು ಕಣೋ ಸ್ವಾಮಿ! ಪಾಪಕ್ಕೆ ಶರೀರವೇ ಇಲ್ಲ ಅಂದಮೇಲೆ ಅದು ಸುಡೋ ದಾದರೂ ಹೇಗೆ? ಅಲ್ಲದೆ ಪಾಪದ ಗುಣ ಸುಟ್ಟುಹೋಗೋದಲ್ಲ. ಪಾಪ ತಾನೇ ಒಂದು ತರಹದ ಬೆಂಕಿ, ಅದರ ಜ್ವಾಲೇಲಿ ಉಳಿದದ್ದೆಲ್ಲಾ ಸುಟ್ಟುಹೋಗುತ್ತೆ. ಆದ್ದರಿಂದ ಹವನ, ಯಜ್ಞಗಳನ್ನು ಷುರುಮಾಡಿದ ನಿಮ್ಮ ಋಷಿಮುನಿಗಳೆಲ್ಲರೂ ಮೂರ್ಖರೂ ಕಾಡುಮನುಷ್ಯರೂ ಆಗಿದ್ದರು. ಏ ಸ್ವಾಮಿ, ಬೆಂಕಿಯ ಉರೀನ ಯಾರಾದರೂ ಕೈಲೆತ್ತಿ ಕೊಂಡು ತಮ್ಮ ತಂದೆತಾಯಿಗಳ ಪೂಜೆಮಾಡ್ತಾರೆಯೆ? ಆದಕಾರಣ. ಈ ಸಂಧ್ಯಾ ವಂದನೆ, ಈ ಹವನಗಳೆಲ್ಲಾ ಅಜ್ಞಾನ, ಬೂಟಾಟಿಕೆ."

ಸ್ವಾಮಿ ಜಟಿಲಾನಂದರು ಈ ಮಾತಿಗೆ ಏನಾದರೂ ಚುರುಕಾಗಿ ಉತ್ತರ ಕೊಡ ಬೇಕೆಂದು ಯೋಚಿಸುತ್ತಿದ್ದರು. ಇದಕ್ಕಾಗಿ ಅವರು ಕೆಲವು ಕ್ಷಣ ಕಣ್ಣುಮುಚ್ಚಿದರು. ಆದರೆ ಮಿಸ್ಟರ್ ಪ್ರೇಟರ್ ಇದನ್ನು ಉತ್ತರದ ಅಭಾವವೆಂದು ಬಗೆದ; ಎದ್ದು "ಈ ಪ್ರಶ್ನೆಯಲ್ಲಿ ಫಾದರ್ ಮಸೀಹ ಗೆದ್ದಿದ್ದಾರೆ. ಈಗ ಅಲ್ಲಾಮಾ ವಹಶಿಯವರ ಸರದಿ; ಅವರು ಪ್ರಶ್ನೆಗೆ ಉತ್ತರ ಕೊಡ್ತಾರೆ" ಎಂದು ಘೋಷಿಸಿದರು.

ಮಿಸ್ಟರ್ ಪ್ರೇಟರ್ ಹೀಗೆಂದೊಡನೆಯೇ ಸಭೆಯಲ್ಲಿ ಜೋರಾಗಿ ಚಪ್ಪಾಳೆ ಗುಡು ಗುಟ್ಟಿತು. ಸ್ವಾಮಿ ಜಟಿಲಾನಂದರು ಎದ್ದು, "ನಾನಿನ್ನು ಶಾಸ್ತ್ರಾರ್ಥ ಮಾಡೋಲ್ಲ.

ಇದು ಅನ್ಯಾಯ. ಈಸಾಯಿ ಧರ್ಮದ ಪರವಾಗಿ ಪಕ್ಷಪಾತ ತೋರಿಸಲಾಗಿದೆ." ಎನ್ನುತ್ತ ತಮ್ಮ ಶಿಷ್ಯರೊಂದಿಗೆ ಚಪ್ಪರ ಬಿಟ್ಟು ಹೊರಟುಹೋದರು.

ಸ್ವಾಮಿಜಿ ಹೋದೊಡನೆಯೇ "ಸ್ವಾಮಿ ಸೋತು ಓಡಿಹೋದರು; ಶಾಸ್ತ್ರಾರ್ಥ ಇಲ್ಲಿಗೆ ಮುಗಿಯಿತು" ಎಂದು ಘೋಷಿಸಲಾಯಿತು. ಶಾಸ್ತ್ರಾರ್ಥ ಹೀಗೆ ಕೊನೆಗೊಂಡಿತು.

ಗಂಗಾಪ್ರಸಾದ ಮನೆಗೆ ವಾಪಸು ಬಂದಾಗ ಅವನಿಗೆ ತಾನು ನಾಟಕಪ್ರಪಂಚದಿಂದ ಹಿಂದಿರುಗುತ್ತಿದ್ದೇನೇನೋ ಎಂದು ಅನಿಸಿತು. ಜಟಿಲಾನಂದ, ವಹಶಿ, ಮಸೀಹ, ಪ್ರೇಟರ್ ಇವರೆಲ್ಲರೂ ಸೇರಿ ಒಂದು ವಿಚಿತ್ರನಾಟಕವಾಡಿದ್ದರು.

## ನಾಲ್ಕು

ರೈಲು ಅಲಹಾಬಾದ್ ಸ್ಟೇಷನ್ನಿಗೆ ಬಂದು ಮುಟ್ಟಿದಾಗ ಗಂಗಾಪ್ರಸಾದನ ಮನಸ್ಸು ಭಾರವಾಗಿತ್ತು. ಜೈದೇಯಿಯ ಬಂಗಲೆ ತಲಪಿದಾಗ ಅವನಿಗೆ ಅಲ್ಲಿಯ ವಾತಾವರಣದಲ್ಲಿ ಯಾವುದೋ ನೋವಿದ್ದುದರ ಅನುಭವವಾಯಿತು. ವರಾಂಡದಲ್ಲಿದ್ದ ಭೀಖೂ ಗಂಗಾಪ್ರಸಾದನ ಟಾಂಗವನ್ನು ಕಂಡೊಡನೆಯೇ ಸಾಮಾನು ಇಳಿಸಲು ಓಡಿಬಂದ. "ಇಷ್ಟು ದಿನ ಎಲ್ಲಿದ್ದೆ, ಮಗು? ನಮಗೆ ನಿನ್ನ ಪತ್ತೆಯೇ ಸಿಗದೆ ಹೋಯಿತು. ಗೊತ್ತಿದ್ದಿದ್ದರೆ ಸುದ್ದಿ ಕಳಸ್ತಿದ್ದೆವು. ಲಂಬರ್‌ದಾರಿಣಿ ಯಾವಾಗಿನಿಂದ ನಿನ್ನ ಹೆಸರು ಜಪಿಸ್ತಿದಾರೋ!"

"ಯಾಕೆ, ಏನು ಸಮಾಚಾರ? ದೊಡ್ಡಮ್ಮನ ದೇಹಸ್ಥಿತಿ ನೆಟ್ಟಗಿದೆ ತಾನೆ?"

"ನಿನ್ನನ್ನ ನೋಡೋಕ್ಕೆ ಅಂತಾನೆ ತಮ್ಮ ಪ್ರಾಣ ಹಿಡಕೊಂಡು ಕೂತಿದಾರೆ, ಅಷ್ಟೇ. ಡಾಕ್ಟರು ಹೇಳಿ ಆಗಿದೆ. ನೇರವಾಗಿ ಅವರ ಕೊಟಡೀಗೆ ಹೋಗು. ಅಣ್ಣ ಆರು ದಿನದಿಂದ ಅಲ್ಲೇ ಅವರ ಕೊಟಡೀಲೆ ಕೂತಿದಾನೆ. ಲಛ್ಮೀಚಂದ ಮೊನ್ನೆ ಬಂದರು."

ಗಂಗಾಪ್ರಸಾದ ನೇರವಾಗಿ ಜೈದೇಯಿಯ ಕೊಟಡಿಗೆ ನಡೆದ.

ಜೈದೇಯಿ ಕಣ್ಣುಮುಚ್ಚಿ ಮಲಗಿದ್ದಳು. ತನ್ನೊಳಗಿನ ನೋವನ್ನು ಒತ್ತಿ ಒತ್ತಿ ಮುಖ ಬಿಗಿದುಕೊಂಡಿದೆಯೋ ಎನ್ನುವಂತೆ ಕಾಣುತ್ತಿತ್ತು. ಜ್ವಾಲಾಪ್ರಸಾದ ನಿದ್ದೆ ಮಾಡುತ್ತಿದ್ದಾನೆಯೋ ಎಂಬಂತೆ ಕಣ್ಣುಮುಚ್ಚಿ ಅವಳ ತಲೆದಸಿಯಲ್ಲಿ ಕುಳಿತಿದ್ದ. ಗಂಗಾಪ್ರಸಾದನ ಹೆಜ್ಜೆಯ ಸಪ್ಪಳ ಕೇಳಿದೊಡನೆಯೇ ಕಣ್ಣು ತೆರೆದು, "ಓ ನೀನು ಬಂದೆಯಾ! ಹಾಗಾದರೆ ಅತ್ತಿಗೆ ಹೇಳಿದ್ದು ಸುಳ್ಳಾಗಲಿಲ್ಲ. ಇವತ್ತು ನೀನು ಖಂಡಿತ ಬರ್ತಿ ಅಂತ ನಿನ್ನೆ ರಾತ್ರಿ ಹೇಳ್ತಿದ್ದಳು. ಏನು, ನೀನು ಬರೇಲೀಲಿ ಇರಲಿಲ್ಲವೇ? ನಿನಗೆ ಎರಡು ತಂತಿ ಕೊಟ್ಟಿದ್ದೆ. ಆದರೆ ನಿನ್ನಿಂದ ಯಾಕೆ ಏನೂ ಉತ್ತರ ಬರಲಿಲ್ಲ?" ಎಂದ.

"ನಾನು ಕಲಕತ್ತೆಗೆ ಹೋಗಿದ್ದೆ. ವಾರದ ಬದಲು ಹದಿನೇಳು ಹದಿನೆಂಟು ದಿನ ಆಗಿಹೋಯ್ತು."

"ನಿನ್ನೆ ರಾತ್ರಿಯಿಂದ ಪ್ರಜ್ಞೆ ತಪ್ಪಿದೆ. ಮಧ್ಯೆ ಮಧ್ಯೆ ಒಂದೊಂದು ಸಲ ಕಣ್ಣು ಬಿಟ್ಟು ನೀನು ಬಂದೆಯೋ ಇಲ್ಲವೋ ಅಂತ ಕೇಳ್ತಿರ್ತಾಳೆ." ಹೀಗಂದು ಜ್ವಾಲಾಪ್ರಸಾದ ಸ್ವಲ್ಪ ಜೋರಾಗಿ ಹೇಳಿದ, "ನೀನು ಹೇಳಿದ್ದು ನಿಜವಾಯಿತು, ಅತ್ತಿಗೆ. ಗಂಗಾ ಬಂದಿದಾನೆ."

ಜೈದೇಯಿ ಕಣ್ಣು ತೆರೆದಳು. ಕೊಂಚ ಹೊತ್ತು ಒಂದೇಸಮನೆ ಗಂಗಾಪ್ರಸಾದ ನನ್ನು ನೋಡುತ್ತಿದ್ದಳು. ಆಮೇಲೆ ಕ್ಷೀಣಸ್ವರದಲ್ಲಿ ಹೇಳಿದಳು, "ಸ್ವಲ್ಪ ಹತ್ತಿರ ಬಾ. ನಿನ್ನ ತಲೆ ಮೇಲೆ ಕೈಯಿಡ್ತೀನಿ. ಹ್ಞಾ, ಹಾಗೆ! ನೀನು ಎಲ್ಲಿ ಅಲೀತಾ ಇದ್ದೆ; ನಿನ್ನನ್ನ ನೋಡೋಕ್ಕೆ ನನ್ನ ಜೀವ ಹೊಡ್ಕೊತಾ ಇತ್ತು. ಆದರೆ ನಾನು ದೇವರ್‌ಜಿಗೆ ಹೇಳಿ ಬಿಟ್ಟಿದ್ದೆ. ಗಂಗನ ಮುಖ ನೋಡದೆ ನನ್ನ ಪ್ರಾಣ ಹೋಗೋಲ್ಲ ಅಂತ. ಅಂತೂ ಕೊನೆಗಾದರೂ ನೀನು ಬಂದೆಯಲ್ಲ, ದೇವರಿಗೆ ನನ್ನ ಮೊರೆ ಕೇಳಿಸಿತು!" ಹೀಗಂದು ಜೈದೇಯಿ ಜ್ವಾಲಾಪ್ರಸಾದನನ್ನು ಕೇಳಿದಳು, "ದೇವರ್‌ಜಿ, ಲಛ್ಮಿ ಎಲ್ಲಿದಾನೆ?"

"ಹೋಗಿ ಅರ್ಧಗಂಟೆಯಾಯಿತು. ಕಮೀಷನರ್ ಬಂಗಲೇಗೆ ಹೋಗ್ತೀನಿ ಅಂತ ಹೇಳಿ ಹೋದ. ಬೇಕೂ ಅಂದರೆ ಯಾರನ್ನಾದರೂ ಕಳಿಸಿ ಕರಸ್ತೀನಿ. ಯಾಕೆ, ಏನಾದರೂ ವಿಶೇಷವಾದ ಕೆಲಸವಿತ್ತೆ?"

"ಹ್ಞೂ, ಕೆಲಸವೇನೋ ಇದೆ. ಆದರೆ ಅವನು ಬಂದ ಮೇಲೆ ಆಗುತ್ತೆ." ಜೈದೇಯಿ ಮತ್ತೆ ಗಂಗಾಪ್ರಸಾದನ ಕಡೆ ತಿರುಗಿ ಹೇಳಿದಳು, "ಒಳ್ಳೇ ಹೊತ್ತಿಗೆ ಸರಿಯಾಗಿ ಬಂದೆ ಕಣೋ! ಒಂದು ದಿನ ತಡವಾಗಿದ್ದರೂ ನಾನು ನಿನ್ನನ್ನ ನೋಡೋಕ್ಕೆ ಆಗ್ತಿರಲಿಲ್ಲ, ನೀನು ನನ್ನನ್ನ ನೋಡೋಕ್ಕೆ ಆಗ್ತಿರಲಿಲ್ಲ."

ಗಂಗಾಪ್ರಸಾದನ ತಲೆಯ ಮೇಲೆ ಕೈಯಿಟ್ಟದ್ದರಿಂದ ತುಂಬ ಶಾಂತಿ ಸಿಕ್ಕಿತೆಂಬಂತೆ ಜೈದೇಯಿ ಕಣ್ಣುಮುಚ್ಚಿದಳು. ಅವಳ ಮುಖದ ಮೇಲಿನ ಬಿಗಿತ ಮಾಯವಾಗಿ ಅದರ ಸ್ವಾಭಾವಿಕ ಮುದ್ರೆ ಹಿಂದಿರುಗಿತ್ತು. ಜೈದೇಯಿ ಸ್ವಲ್ಪ ಹೊತ್ತಿನ ತನಕ ತನ್ನ ತಲೆಯ ಮೇಲಿಂದ ಕೈಯನ್ನೂ ತೆಗೆಯದೆ, ಏನೂ ಮಾತನಾಡದೆ ಇದ್ದುದನ್ನು ನೋಡಿ ಗಂಗಾಪ್ರಸಾದ ನಿಧಾನವಾಗಿ ತಾನೇ ಅವಳ ಕೈತೆಗೆದು ಪಕ್ಕಕ್ಕೆ ಮಾಡಿದ. "ಏನಾಯಿತು ಅಪ್ಪ? ಮತ್ತೆ ಮೂರ್ಛೆ ಹೋದಂತಿದೆ!"

"ಎರಡು ದಿನದಿಂದ ಹೀಗೇ ಮೂರ್ಛೆ ಹೋಗ್ತಿದಾಳೆ. ಇಲ್ಲಿಯವರೆಗೆ ಹೇಗೆ ಜೀವಂತವಾಗಿದಾಳೆ ಅನ್ನೋದೇ ಡಾಕ್ಟರುಗಳಿಗೆ ಆಶ್ಚರ್ಯವಾಗಿದೆ! ಹೋಗಿ ಸ್ನಾನಗೀನ ಮುಗಿಸಿ ಬಟ್ಟೆ ಬದಲಾಯಿಸಿಕೊಂಡು ಬಾ. ಅಷ್ಟು ಹೊತ್ತಿಗೆ ಮತ್ತೆ ಪ್ರಜ್ಞೆ ಬರುತ್ತೆ, ನಿನ್ನನ್ನ ನೆನಸಿಕೋತಾಳೆ. ಆಗ ಕರೀತೀನಿ."

ಕೊಟಡಿಯಿಂದ ಹೊರಬಂದು ಗಂಗಾಪ್ರಸಾದ ತನ್ನ ಹೆಡತಿ, ತಾಯಿಯರನ್ನು

ಕಂಡ. ಅವನಿಗೆ ಅವರೊಡನೆ ವಿಶೇಷವಾಗಿ ಏನೂ ಮಾತನಾಡಲಾಗಲಿಲ್ಲ. ಅಲ್ಲಿ ಒಂದು ವಿಚಿತ್ರವಾದ ಭಯದಿಂದ ಕೂಡಿದ ವಾತಾವರಣವಿತ್ತು. ಅವನು ಸ್ನಾನ, ಊಟ ಮುಗಿಸಿ ಡ್ರಾಯಿಂಗ್ ರೂಮಿನಲ್ಲಿ ಬಂದು ಕುಳಿತುಕೊಂಡ.

ಮಧ್ಯಾಹ್ನದ ಹೊತ್ತಿಗೆ ಲಕ್ಷ್ಮೀಚಂದ ಹಿಂದಿರುಗಿ ಬಂದ. ಗಂಗಾಪ್ರಸಾದನನ್ನು ನೋಡಿ, "ಓ ಬಂದೆಯಾ? ಎಲ್ಲಿದ್ದೆ ಇಷ್ಟು ದಿನ? ಎಷ್ಟು ಹುಡುಕಿಸಿದೆವು ನಿನ್ನನ್ನ. ಕಾಗದ, ತಂತಿ ಎಲ್ಲಾನೂ ಕಳಿಸಿದ್ದಾಯಿತು. ಆದರೆ ನೀನು ಪತ್ತೆಯೇ ಇಲ್ಲದ ಹಾಗೆ ಮಾಯವಾಗಿಬಿಟ್ಟಿದ್ದೆ. ಅಮ್ಮ ಒಂದೇ ಸಮನೆ ನಿನ್ನ ಹೆಸರು ಜಪಿಸ್ತಾ ಇರೋಳು. ಕಂಡಿದ್ದೆಯಾ ಅವಳನ್ನ?"

"ಹ್ಞಾ, ಕಂಡಿದ್ದೆ. ಒಂದೆರಡು ನಿಮಿಷ ಪ್ರಜ್ಞೆ ಬಂದಿತ್ತು: ಮತ್ತೆ ಮೂರ್ಛೆ ಹೋದಳು. ಏನು, ಕಾನಪುರದಿಂದ ಒಬ್ಬನೇ ಬಂದೆಯಾ? ಅತ್ತಿಗೆ, ಮಕ್ಕಳನ್ನ ಜೊತೇಲಿ ಕರಕೊಂಡು ಬರಲಿಲ್ಲವೇ? ಇಲ್ಲಂತೂ ಸ್ಥಿತಿ ಈಗಲೋ ಆಗಲೋ ಅನ್ನೋ ಹಾಗಿದೆ."

ಲಕ್ಷ್ಮೀಚಂದ ನಕ್ಕ, "ಹೌದು, ಒಬ್ಬನೇ ಬಂದಿದೀನಿ. ಒಂದೆರಡು ದಿನದಲ್ಲಿ ಮಕ್ಕಳು ಮರಿಯೂ ಬರ್‍ತಾರೆ. ಇಲ್ಲಿ ಒಂದು ವಿಚಿತ್ರಸಂಕಟದಲ್ಲಿ ಸಿಕ್ಕಿಬಿದ್ದಿದೀನಿ. ಬಂದು ಮೂರು ದಿನವಾಯಿತು. ಒಂದೆರಡು ದಿನ ಹಿಡಿಯುತ್ತೆ ಅಂದುಕೊಂಡು ಹೊರಟೆ. ಕಾನಪುರದಲ್ಲಿ ಕೆಲಸಕಾರ್ಯವೆಲ್ಲಾ ಹಾಳಾಗ್ತಿದೆ. ಇದೇ ಈಗ ಸಿವಿಲ್ ಸರ್ಜನರನ್ನು ಕಂಡಿದ್ದೆ. ಏನು ಹೇಳೋಕ್ಕೂ ಬರೋಲ್ಲ ಅಂತಾರೆ ಅವರು. ಯಾವಾಗ ಬೇಕಾದರೂ ಪ್ರಾಣ ಹೋಗಬಹುದು, ಇಲ್ಲವೇ ನಾಲ್ಕಾರು ದಿನ ಎಳೆದರೂ ಎಳೀಬಹುದು. ಏನು ಮಾಡೋದು ಅಂತ ಗೊತ್ತಾಗೋಲ್ಲ."

"ಇದರಲ್ಲಿ ಗೊತ್ತಾಗದೇ ಇರೋದು ಏನಿದೆ, ಅಣ್ಣ. ನೀನಿದ್ದೇ ತೀರಬೇಕಾಗುತ್ತೆ."

"ಹೌದು, ಇದ್ದೇ ತೀರಬೇಕಾಗುತ್ತೆ," ಲಕ್ಷ್ಮೀಚಂದ ಅನ್ಯಮನಸ್ಕನಾಗಿ ಹೇಳಿದ. "ಇನ್ನೊಬ್ಬರ ಸಾವಿಗೆ ಗಳಿಗೆ ಎಣಿಸೋದು ಎಷ್ಟು ವಿಚಿತ್ರವಾಗಿ ಕಾಣುತ್ತೆ. ಆದರೆ ನಾನೀಗ ಮಾಡ್ತಿರೋದು ಅದನ್ನೇ. ನಾನೇನು, ಈ ಮನೇಲಿರೋರೆಲ್ಲಾ ಅದನ್ನೇ ಮಾಡ್ತಿದಾರೆ. ನೀನು ಹೇಳಲೇ ಇಲ್ಲವಲ್ಲ, ಎಲ್ಲಿ ಮಾಯವಾಗಿ ಹೋಗಿದ್ದೆ ಅಂತ."

"ಕಲಕತ್ತೆಗೆ ಹೋಗಿದ್ದೆ. ಅಲ್ಲಿಂದ ಒಬ್ಬ ಸ್ನೇಹಿತರ ಕರೆ ಬಂತು . . . ಲಾಲಾ ರಾಧಾಕ್ರಿಶನ್‌ರದ್ದು. ನೀನು ಹೆಸರು ಕೇಳಿರಬಹುದೇನೋ, ಅಥವಾ ನಿನಗೆ ಪರಿಚಯ ವಿದ್ದರೂ ಇರಬಹುದು. ಅವರ ತಂದೆ ಗೋಪೀಕಿಶನ್ ಕಾನಪುರದಲ್ಲಿರ್‍ತಾರೆ."

"ಅರೇ, ಗೋಪೀಕಿಶನ್‌ರ ಮಗ ರಾಧಾಕಿಶನ್! ರಾಯ್‌ಬಹದ್ದೂರ್ ಆಗಿ ಬಿಟ್ಟಿದಾನೆ. ಕಲಕತ್ತೇಲಿ ಚಿನ್ನಬೆಳ್ಳಿಯ ಅಂಗಡಿ ಇದೆ. ತಿಳೀತು. ಅವರಲ್ಲಿಗೆ ಹೋಗಿದ್ದೆಯಾ? ಕಲಕತ್ತೆಯ ಸ್ಥಿತಿ ಹೇಗಿದೆ? ಈಗ ಅಲ್ಲಿಂದ ರಾಜಧಾನಿ ಹೊರಟು ಹೋಯಿತು."

"ರಾಜಧಾನಿ ಹೋದರೇನಂತೆ? ಅದೇ ಸಂಭ್ರಮ, ಅದೇ ಬಣ್ಣ-ಬೆಡಗು, ಎಲ್ಲಾ ಮೊದಲಿದ್ದ ಹಾಗೇ ಇದೆ. ನಾನಂತೂ ಕಲಕತ್ತೇನ ಕಂಡು ಗಾಬರಿಯಾಗಿಬಿಟ್ಟೆ."

ಲಕ್ಷ್ಮೀಚಂದ ನಕ್ಕ. "ನಿನಗೆ ಗಾಬರಿಯಾಯಿತೆ? ಆಶ್ಚರ್ಯವೇ ಸರಿ. ಹಾಗೆಲ್ಲಾ ಗಾಬರಿಯಾಗೋ ಜಾತಿಯಲ್ಲವಲ್ಲ ನಿನ್ನದು." ಬಹಳ ಹೊತ್ತಿನಿಂದ ತಾನು ಗಮನ ವಿಟ್ಟು ನೋಡುತ್ತಿದ್ದ ಗಂಗಾಪ್ರಸಾದನ ಬೆರಳಿನಲ್ಲಿದ್ದ ವಜ್ರದುಂಗುರದ ಕಡೆ ಬೊಟ್ಟು ಮಾಡಿ ಲಕ್ಷ್ಮೀಚಂದ ಕೇಳಿದ, "ಈ ಉಂಗುರ ತುಂಬ ಚೆನ್ನಾಗಿದೆ. ವಜ್ರವೂ ದೊಡ್ಡದು. ಇದನ್ನ ನಾನೆಲ್ಲೋ ನೋಡಿದಹಾಗಿದೆ. ಏನು, ಕಲಕತ್ತೇಲಿ ಕೊಂಡುಕೊಂಡೆಯಾ?"

"ಇಲ್ಲ. ದೊಡ್ಡಮ್ಮ ಕೊಟ್ಟದ್ದು ಇದು," ಗಂಗಾಪ್ರಸಾದ ಸ್ವಲ್ಪ ಅಳುಕಿನಿಂದಲೇ ಹೇಳಿದ.

ಲಕ್ಷ್ಮೀಚಂದನ ಹಣೆ ಗಂಟಿಕ್ಕಿತು. "ಅದಕ್ಕೇ ಈ ಉಂಗುರಾನ ನಾನೆಲ್ಲೋ ನೋಡಿದ ಹಾಗಿದೆ ಅಂದದ್ದು."

ಇಬ್ಬರೂ ಕೊಂಚ ಹೊತ್ತು ಮೌನವಾಗಿದ್ದರು. ಇದೇ ಹೊತ್ತಿಗೆ ಜ್ವಾಲಾಪ್ರಸಾದ ಜೈದೇಯಿಯ ಕೊಟಡಿಯಿಂದ ಹೊರಬಂದ. ಡ್ರಾಯಿಂಗ್ ರೂಮಿಗೆ ಬಂದು, "ಲಛ್ಮೀ, ಅತ್ತಿಗೆಗೆ ಪ್ರಜ್ಞೆ ಬಂದಿದೆ. ನಿನ್ನನ್ನೂ ಗಂಗನ್ನೂ ಕರೀತಿದಾಳೆ" ಅಂದ.

ವಜ್ರದ ಉಂಗುರದ ವಿಷಯ ಕೇಳಿ ಲಕ್ಷ್ಮೀಚಂದನ ಮುಖದ ಮೇಲೆ ಮೂಡಿದ್ದ ಬಿಗಿತ ಇದ್ದ ಹಾಗೆಯೇ ಇತ್ತು. ಅವನು ಎದ್ದು 'ನಡೀರಿ' ಅಂದ.

ಜೈದೇಯಿ ಬಾಗಿಲ ಕಡೆ ನೋಡುತ್ತ ಅವರ ಬರವನ್ನು ನಿರೀಕ್ಷಿಸುತ್ತಿದ್ದಳು. ಜ್ವಾಲಾಪ್ರಸಾದ ಜೈದೇಯಿಯ ತಲೆದಸಿಗಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ. ಜೈದೇಯಿಯ ಮಂಚದ ಬಳಿಯಿದ್ದ ಇನ್ನೆರಡು ಕುರ್ಚಿಗಳಲ್ಲಿ ಒಂದರ ಮೇಲೆ ಲಕ್ಷ್ಮೀಚಂದ, ಇನ್ನೊಂದರ ಮೇಲೆ ಗಂಗಾಪ್ರಸಾದ ಕುಳಿತುಕೊಂಡರು. ಜೈದೇಯಿ ಕೊಂಚ ಹೊತ್ತು ಮೌನವಾಗಿ ಅವರಿಬ್ಬರನ್ನೂ ನೋಡುತ್ತಿದ್ದಳು. ಅವಳ ಕಣ್ಣಲ್ಲಿ ನೀರು ತುಂಬಿತ್ತು. ಕ್ಷೀಣಸ್ವರದಲ್ಲಿ ಅವಳು ಹೇಳಿದಳು, "ಈಗ ನನ್ನ ಕೊನೆಗಳಿಗೆ ಹತ್ತಿರವಾಗ್ತಾ ಇದೆ! ಮಗೂ ಲಛ್ಮೀ, ನಾನು ನಿನಗೆ ಒಂದು ಮಾತು ಹೇಳಬಯಸ್ತೀನಿ. ನನ್ನ ಕೊನೆಯ ಇಚ್ಛೆ ಅದು."

"ಹ್ಞಾ ಹ್ಞಾ. ಹೇಳಮ್ಮ! ನಿನ್ನ ಕೊನೆಯ ಇಚ್ಛೆ ಪೂರ್ತಿಯಾಗುತ್ತೆ." ಲಕ್ಷ್ಮೀಚಂದ ಹೇಳಿದ.

ಜೈದೇಯಿ ಕೊಂಚ ನೆಮ್ಮದಿ ಸಿಕ್ಕಿದವಳಂತೆ ಹೇಳಿದಳು, "ನಾನು ಈ ಗಂಗನ್ನ ನಿನ್ನ ಹಾಗೇ ಸಾಕಿ ಬೆಳಸಿದೀನಿ. ಆದ್ದರಿಂದ ಇವನಿಗೂ ಏನಾದರೂ ಕೊಡಬೇಕು ಅಂತ ಆಸೆ ಇದೆ. ನಿನಗಂತೂ ರಾಜಪಟ್ಟ ಇದೆ, ಇವನು ನೌಕರಿ ಮಾಡ್ತಿದಾನೆ. ಆ ತಿಜೋರೀಲಿ ನನ್ನ ಸ್ವಂತದ್ದು ನಗದು ಹಣ, ಒಡವೆ ಏನಿದೆಯೋ ಅದನ್ನೆಲ್ಲಾ ಗಂಗನಿಗೆ ಕೊಡ್ತಿದೀನಿ. ಗಂಗ ಇನ್ನೂ ಬಂದಿರಲಿಲ್ಲ. ನಾನು ದೇವರ್‌ಜೀಗೆ ಈ ಮಾತು ಹೇಳಿದಾಗ ಮೊದಲು ನಿನ್ನನ್ನ ಕೇಳು ಅಂತ ಅಂದರು."

ಲಕ್ಷ್ಮೀಚಂದ ಒಂದು ಕರ್ಕಶವಾದ ಒಣನಗೆ ನಕ್ಕ. "ಇದಕ್ಕೇಯೋ 'ಗಂಗಾ' 'ಗಂಗಾ' ಅಂತ ಜಪಮಾಡ್ತಿದ್ದದ್ದು, ಗಂಗಾಪ್ರಸಾದ ಮೊದಲೇ ಬಂದಿದ್ದಿದ್ದರೆ ಇದನ್ನೆಲ್ಲಾ ಹೇಳೋ ಕೇಳೋ ಅಗತ್ಯವೇ ಇರ್ತಿರಲಿಲ್ಲ. ಈ ವಜ್ರದ ಉಂಗುರಾನ ಅವನಿಗೆ ನನ್ನನ್ನ ಕೇಳಿಯೇ ಕೊಟ್ಟೆಯಾ? ಒಳ್ಳೇ ತಮಾಷೆಯಾಗಿ ಮಾತನಾಡ್ತಿದಿ ಕಣಮ್ಮಾ!"

ಜೈದೇಯಿ ಕಣ್ಣು ಮುಚ್ಚಿದಳು. ಅವಳ ಮುಖದ ಮೇಲೆ ಒಂದು ಭಯಾನಕವಾದ ನೋವಿನ ಬಿಗಿತ ಕಾಣಿಸಿಕೊಂಡು ಮರೆಯಾಯಿತು. ಕೊಂಚ ಹೊತ್ತಿನ ಮೇಲೆ ಅವಳು ಕಣ್ಣುಮುಚ್ಚಿದ್ದಂತೆಯೇ ಹೇಳಿದಳು, "ನನ್ನದನ್ನ ನಾನು ಕೊಟ್ಟೆ. ಪ್ರತಿಯೊಂದಕ್ಕೂ ನಿನ್ನನ್ನ ಎಲ್ಲಿ ಕೇಳ್ತಾ ಅಲೆಯೋಕ್ಕೆ ಆಗುತ್ತೆ! ಈಗ ನೀನು ಇಲ್ಲಿ ಬಂದಿದಿ ಅಂತ ಕೇಳ್ತಿದೀನಿ!"

ಲಕ್ಷ್ಮೀಚಂದ ಹೇಳಿದ, "ನೀನು ಕೇಳಿ ಒಳ್ಳೇದು ಮಾಡಿದೆ, ಅಮ್ಮಾ! ಇಲ್ಲದೇ ಹೋಗಿದ್ದರೆ ನೀನು ಹೋದ ಮೇಲೆ ಇವರ ಸ್ಥಿತಿ ಬಲು ಕೆಟ್ಟದಾಗುತ್ತಿತ್ತು. ಕಳ್ಳತನದ ಅಪರಾಧದ ಮೇಲೆ ನಾನು ಗಂಗಾಪ್ರಸಾದನನ್ನ ದಸ್ತಗಿರಿ ಮಾಡಿಸಬಹುದಾಗಿತ್ತು. ಚಿಕ್ಕಪ್ಪನಿಗೆ ಇದು ಚೆನ್ನಾಗಿ ಗೊತ್ತು; ಅದಕ್ಕೇ ಅವರು ನನ್ನನ್ನ ಕೇಳು ಅಂತ ಸಲಹೆ ಕೊಟ್ಟದ್ದು. ಆ ಹಣದ ಮೇಲೆ ಯಾರಿಗೂ ಏನೂ ಅಧಿಕಾರವಿಲ್ಲ. ಆ ಹಣ ನನ್ನದು. ನೀನು ಗಂಗನಿಗೆ ಏನನ್ನೂ ಕೊಡೋಕ್ಕೆ ಆಗೋಲ್ಲ. ಇಷ್ಟನ್ನ ಚೆನ್ನಾಗಿ ತಿಳಕೋ! ನೀನು ಇವನಿಗೆ ವಿದ್ಯಾಭ್ಯಾಸ ಮಾಡಿಸಿದೆ. ಅದಕ್ಕೆ ಸಾವಿರಾರು ರೂಪಾಯಿ ಖರ್ಚು ಮಾಡಿದಿ. ಮೇಲೆ ಈ ವಜ್ರದ ಉಂಗುರಾನ ಕೊಟ್ಟಿದಿ. ಇವನಿಗೆ ಇನ್ನೂ ಏನೇನು ಕೊಟ್ಟಿದಿ ಅಂತ ನನಗೂ ಸ್ವಲ್ಪ ಹೇಳು!"

ಜೈದೇಯಿ ಈಗ ಕಣ್ಣು ತೆರೆದಳು, "ಮಗೂ ಲಛ್ಮೀ, ಇಷ್ಟು ಸಣ್ಣತನ ಮಾಡಬೇಡ! ಹಾಗೆ ಕೊಡೋಕ್ಕೆ ನನ್ನ ಹತ್ತಿರ ಏನು ಇಟ್ಟುಕೊಂಡಿದೀನಿ. ಇದ್ದದ್ದೆಲ್ಲಾನ್ನೂ ನಿನಗೂ ನಿನ್ನ ಹೆಂಡತಿಗೂ ಒಪ್ಪಿಸಿದೆ! ನನ್ನ ಸ್ವಂತದ್ದು ಒಂದಿಷ್ಟು ಒಡವೆ, ಒಟ್ಟು ಹತ್ತು ಹದಿನೈದು ಸಾವಿರ ರೂಪಾಯಿ ನಗದು ಹಣ ಆ ತಿಜೋರೀಲಿದೆ. ಎಲ್ಲಾ ಸೇರಿ ಅಬ್ಬಬ್ಬ ಅಂದರೆ ಇಪ್ಪತ್ತೈದು ಮೂವತ್ತು ಸಾವಿರ ರೂಪಾಯಿ ಆಗಬಹುದು. ದೇವರು ನಿನಗೆ ಕೋಟ್ಯಂತರ ರೂಪಾಯಿ ಕೊಟ್ಟಿದಾನೆ. ಇಷ್ಟು ಸ್ವಲ್ಪ ಹಣಕ್ಕೆ ಯಾಕೆ ಸಣ್ಣವನಾಗ್ತಿ?"

ಲಕ್ಷ್ಮೀಚಂದ ಸ್ವಲ್ಪ ಆವೇಶದಿಂದಲೇ ಹೇಳಿದ, "ನೀನು ಯಾವ ಕೋಟಿ ರೂಪಾಯಿಯ ಮಾತಾಡ್ತಿದೀಯೋ ಅದು ಈ ನೂರು, ಸಾವಿರ ಸೇರಿಯೇ ಆದದ್ದು, ಕಣಮ್ಮಾ! ಮಿಲ್ಲಿನಲ್ಲಿ ಸಿಗೋದು ಗಜಕ್ಕೆ ಒಂದೊಂದೇ ಕಾಸು ಫಾಯಿದೆ. ಅದೇ ಒಟ್ಟು ಸೇರಿ ಲಕ್ಷ, ಎರಡು ಲಕ್ಷ ರೂಪಾಯಿಯ ಲಾಭ ಆಗುತ್ತೆ. ನನ್ನ ಪಾಲಿನದನ್ನ ಹೇಗೆ ಬಿಟ್ಟುಬಿಡಲಿ, ಹೇಳು. ಇದುವರೆಗೆ ಆದದ್ದು ಆಯಿತು. ಇನ್ನು ಇವರಿಗೆ ಒಂದು ಬಿಡಿಗಾಸು ಕೊಡೋದಕ್ಕೂ ನಾನು ಒಪ್ಪೋನಲ್ಲ. ಇಷ್ಟನ್ನ ಸ್ಪಷ್ಟವಾಗಿ ತಿಳಕೋ."

ಲಕ್ಷ್ಮೀಚಂದನ ಈ ಆವೇಶದ ಪ್ರಭಾವ ಜೈದೇಯಿಯ ಮೇಲೆ ಬೀಳದೆ ಇರುವು

ದಾದರೂ ಹೇಗೆ! "ನೀನು ನಿಮ್ಮ ಅಪ್ಪನ ಗುಣಾನೆಲ್ಲಾ ಪಡಕೊಂಡು ಹುಟ್ಟಿದೀ ಲಚ್ಮೀ! ಆದರೆ... ಆದರೆ... ನನ್ನನ್ನ ನೀನು ತಡೀಲಾರೆ" ಎನ್ನುತ್ತ ತನ್ನ ಶಕ್ತಿ ಹೀನವಾದ ಕೈಗಳಿಂದ ತಿಜೋರಿಯ ಬೀಗದ ಕೈಯನ್ನು ಕತ್ತಿನಲ್ಲಿದ್ದ ಚಿನ್ನದ ಸರದಿಂದ ತೆಗೆದು ಗಂಗಾಪ್ರಸಾದನ ಕಡೆಗೆ ಚಾಚುತ್ತ ಹೇಳಿದಳು, "ನನ್ನದು ಏನಿದೆಯೋ ಅದನ್ನ ಇವನಿಗೆ ಕೊಡೋಕ್ಕೆ ನನಗೆ ಪೂರಾ ಹಕ್ಕಿದೆ. ನನ್ನನ್ನ ನೀನು ತಡೀಲಾರೆ. ತೊಗೋ ಗಂಗಾ, ಈ ಬೀಗದ ಕೈ." ಆದರೆ ಲಕ್ಷ್ಮೀಚಂದ ಇದೆಲ್ಲಕ್ಕೂ ಸಿದ್ಧನಾಗಿದ್ದ. ಥಟ್ಟನೆ ತಾಯಿಯ ಕೈಯಿಂದ ಬೀಗದ ಕೈ ಕಿತ್ತುಕೊಂಡು, "ದೊಡ್ಡದಾಗಿ ಗಂಗಾಪ್ರಸಾದನಿಗೆ ಬೀಗದ ಕೈ ಕೊಡೋಕ್ಕೆ ಬಂದಳು, ಸೂಳೇಮುಂಡೆ!" ಅಂದ.

ಲಕ್ಷ್ಮೀಚಂದ ಜೈದೇಯಿಗೆ ಬೈದುದನ್ನು ಕೇಳಿ ಗಂಗಾಪ್ರಸಾದನ ಚೇತನ ಜಾಗ್ರತ ವಾಯಿತು, "ದೊಡ್ಡಮ್ಮನ್ನ ಬೈಯ್ಯೋಕ್ಕೆ ನಿನಗೆ ನಾಚಿಕೆಯಾದರೂ ಆಗೋದಿಲ್ವೆ!" ಎಂದು ಅವನು ಕಿರಚಿದ.

ಈ ಹೊತ್ತಿಗೆ ಲಕ್ಷ್ಮೀಚಂದ ಪೂರ್ಣವಾಗಿ ತನ್ನ ಮೇಲಿನ ಹತೋಟಿ ಕಳೆದುಕೊಂಡಿದ್ದ. "ಬೈಯ್ಯದೆ ಬಿಡ್ತಾರೆ! ಈ ರಾಕ್ಷಸೀನ ಇನ್ನೂ ಬೈಯಬೇಕು. ಇವಳ ಗುಣಾನ ನಾನು ಕಾಣೆನೆ?"

ಜೈದೇಯಿಯ ಬಾಯಿಂದ 'ಅಯ್ಯೋ ರಾಮ!' ಎಂಬ ಒಂದು ಚೀತ್ಕಾರ ಹೊರಟಿತು. ಅವಳ ಪ್ರಜ್ಞೆ ತಪ್ಪಿತು.

ಜ್ವಾಲಾಪ್ರಸಾದ ಹುಚ್ಚನಂತೆ ಎದ್ದುನಿಂತ, "ಲಕ್ಷ್ಮೀಚಂದ್, ಈ ಕೊಟಡಿ ಬಿಟ್ಟು ಹೊರಡಾಚೆ! ಈಗಲೇ! ನಿನ್ನ ಹಣಕಾಸೆಲ್ಲಾ ಭದ್ರವಾಗಿದೆ. ಅದನ್ನ ಯಾರೂ ಮುಟ್ಟೋಲ್ಲ. ಈ ಬಡಪಾಯಿಗೆ ಶಾಂತೀಲಿ ಸಾಯೋಕ್ಕೆ ಬಿಡು. ಈ ಕೊಟಡಿ ಬಿಟ್ಟು ನಡಿ, ಗಂಗಾ! ನಡೀ ಲಕ್ಷ್ಮೀಚಂದ್! ಈ ದುರ್ಭಾಗ್ಯೆ ಶಾಂತೀಲಿ ಸಾಯಲಿ, ನಡೀರಿ ಇಲ್ಲಿಂದ!" ಜ್ವಾಲಾಪ್ರಸಾದ ಬಡಬಡಿಸತೊಡಗಿದ.

ಗಂಗಾಪ್ರಸಾದ ತಲೆ ತಗ್ಗಿಸಿಕೊಂಡು ಕೊಟಡಿ ಬಿಟ್ಟು ಹೊರಬಂದ. ಆದರೆ ಲಕ್ಷ್ಮೀಚಂದನ ಅಂತರ್ಯದಲ್ಲಿ ಹಿಂಸಾಪ್ರವೃತ್ತಿ ಜಾಗ್ರತವಾಗಿತ್ತು. "ಆಗಲಿ ಹೋಗ್ತೀನಿ ಈ ಮನೇದು ಏನಾದರೂ ಒಂದು ಸಾಮಾನು ಆ ಕಡೆಯಿಂದ ಈ ಕಡೆಗೆ ಅದಲು ಬದ ಲಾದರೂ ಸರಿಯೆ, ಅಪ್ಪಮಕ್ಕಳಿಬ್ಬರೂ 'ದೊಡ್ಡಮನೆ' ಹವಾ ಕುಡೀಬೇಕಾಗುತ್ತೆ, ನೆನಪಿರಲಿ!" ಎನ್ನುತ್ತ ದಡದಡನೆ ಕೊಟಡಿ ಬಿಟ್ಟು ಹೊರಬಂದ.

ಈ ಮಾತುಕತೆ ಕೇಳಿ ಮನೆಯ ಆಳುಕಾಳುಗಳೆಲ್ಲರೂ ಕೊಟಡಿಯ ಬಳಿ ಮುತ್ತಿ ಕೊಂಡರು. ಆ ಸಾವಿನ ಮನೆಯಲ್ಲಿ ಎಲ್ಲೆಲ್ಲೂ ಹಿಂಸೆಯ ಭಯಾನಕತೆ ಆವರಿಸಿ ಕೊಂಡಿತ್ತು. ಜ್ವಾಲಾಪ್ರಸಾದ ಮರ್ಮಾಘಾತವಾದವನಂತೆ ಕುರ್ಚಿಯ ಮೇಲೆ ಕುಳಿತು ಕೊಂಡು, "ಅತ್ತಿಗೆ, ಕಣ್ಣುತೆಗಿ! ಅವರೆಲ್ಲಾ ಹೋದರು" ಎಂದು ಕಿರಚಿದ.

ಆದರೆ ಜೈದೇಯಿ ತೆಪ್ಪಗೆ ನಿರ್ಜೀವಳಂತೆ ಮಲಗಿದ್ದಳು. ಯಾವದೋ ಭಯಾನಕ

ವಾದ ಮಾನಸಿಕ ನೋವಿನಿಂದ ಅವಳ ಮುಖ ವಿಕಾರವಾಗಿ ಗಂಟು ಕಟ್ಟಿತ್ತು. ಜೈದೇಯಿಯ ಈ ಅವಸ್ಥೆಯನ್ನು ಕಂಡು ಜ್ವಾಲಾಪ್ರಸಾದನ ಕಣ್ಣಲ್ಲಿ ನೀರು ತುಂಬಿತು. ಕೈಜೋಡಿಸಿ, ತಾರಸಿಯ ಕಡೆ ನೋಡುತ್ತ ಅವನು ಬಡಬಡಿಸತೊಡಗಿದ, "ಹೇ ದೇವರೆ! ಅತ್ತಿಗೆ ಏನಾದರೂ ಪಾಪ ಮಾಡಿದ್ದರೆ ಅದಕ್ಕೆ ಶಿಕ್ಷೇನ ನನಗೆ ಕೊಡು! ಇವಳ ನೋವನ್ನ ದೂರ ಮಾಡು, ದೇವರೇ! ಇವಳನ್ನ ಆದಷ್ಟು ಬೇಗ ನಿನ್ನ ಆಶ್ರಯಕ್ಕೆ ಕರಕೋ."

ಜೈದೇಯಿಯ ಮುಖದ ಮೇಲಿನ ಬಿಗಿತ ಸ್ವಲ್ಪಸ್ವಲ್ಪವಾಗಿ ದೂರವಾಯಿತು. ಆದರೆ ಅವಳು ಹಾಗೆಯೇ ಪ್ರಜ್ಞೆ ತಪ್ಪಿ ಬಿದ್ದಿದ್ದಳು.

ಸಂಜೆ ಆರಕ್ಕೆ ಡಾಕ್ಟರು ಬಂದರು. ಜೈದೇಯಿಯನ್ನು ಪರೀಕ್ಷಿಸಿ ಹೇಳಿದರು, "ದೇಹಸ್ಥಿತಿ ಬಹಳ ಇಳಿಮುಖವಾಗಿದೆ, ಇವರು ಪ್ರಜ್ಞೆ ತಪ್ಪೋದು ಇದೇ ಕೊನೆಯ ಸಲ ಅಂತ ಕಾಣುತ್ತೆ. ಔಷಧಿ ನಿಲ್ಲಿಸಿಬಿಡಿ. ಬರೀ ನೀರು ಕುಡಿಸ್ತಿರಿ."

"ಡಾಕ್ಟರ್ ಸಾಹೇಬ್, ಮೂರು ದಿನದಿಂದ ಇವರು ಬದುಕಿರೋದು ಬರೀ ನೀರಿನ ಮೇಲೇನೆ. ನೀವು ಔಷಧೀನ ಬಿಡಿಸಿ ಎಷ್ಟೋ ದಿನವಾಯ್ತಲ್ಲ," ಜ್ವಾಲಾಪ್ರಸಾದ ಹೇಳಿದ.

"ಹೌದಲ್ಲ! ನಾನು ಮರತೇಬಿಟ್ಟಿದ್ದೆ! ಇವರು ಇಲ್ಲೀವರೆಗೆ ಹೇಗೆ ಜೀವಂತ ವಾಗಿದಾರೆ ಅನ್ನೋದೇ ಆಶ್ಚರ್ಯ!"

ಡಾಕ್ಟರರು ಹೊರಬರುತ್ತಿರುವಾಗ ಲಕ್ಷ್ಮೀಚಂದ ಹೇಳಿದ, "ಡಾಕ್ಟರ್ ಸಾಹೇಬ್, ನಾನು ಮೂರು ದಿನದಿಂದ ಇಲ್ಲಿ ಕೊಳೀತಿದೀನಿ. ನನ್ನ ಕೆಲಸಕಾರ್ಯಕ್ಕೆಲ್ಲಾ ಅಡಚಣೆ ಯಾಗ್ತಿದೆ. ಹೀಗೇ ಎಲ್ಲೀತನಕ ಇರುತ್ತೆ ಈ ಸ್ಥಿತಿ?"

ಡಾಕ್ಟರರು ಕೊಂಚ ಬಿರುಸಾಗಿಯೇ ಉತ್ತರಕೊಟ್ಟರು, "ನಾಳೆ ಹೊತ್ತಿಗೆ ಅಂತ್ಯ ಕ್ರಿಯೆ ಮುಗಿಸಿ ನೀವು ಕಾನಪುರಕ್ಕೆ ವಾಪಸು ಹೋಗೋಕ್ಕಾಗುತ್ತೆ ಅಂತ ತೋರುತ್ತೆ."

ಡಾಕ್ಟರರ ಬಿರುಸುಮಾತನ್ನು ಕೇಳಿ ಲಕ್ಷ್ಮೀಚಂದ ನಕ್ಕ. ಆ ನಗೆಯಲ್ಲಿ ಕಹಿ ತುಂಬಿತ್ತು. "ನಾನು ಕಾನಪುರಕ್ಕೆ ಹೋಗೋ ಪ್ರಶ್ನೆಯೇ ಏಳೋಲ್ಲ, ಡಾಕ್ಟರೇ. ನಾನು ಇದ್ದು ಇಲ್ಲಿಯ ಕೆಲಸ ಕಾರ್ಯಾನೆಲ್ಲಾ ನೋಡಿಕೋಬೇಕಾಗುತ್ತೆ. ಅದನ್ನೆಲ್ಲಾ ಮುಗಿ ಸೋಕ್ಕೆ ಹದಿನೈದು ಇಪ್ಪತ್ತು ದಿನವಾದರೂ ಹಿಡಿಯುತ್ತೆ. ಪ್ರಶ್ನೆ ಅಂದರೆ ಉಳಿದವರು ಹೋಗೋದು. ನನಗೆ ಅವರ ಬಗ್ಗೆ ಚಿಂತೆಯಾಗಿದೆ!"

ಲಕ್ಷ್ಮೀಚಂದ ಜ್ವಾಲಾಪ್ರಸಾದರು ಡಾಕ್ಟರರನ್ನು ಕಳಿಸಿಬಂದರು. ಡಾಕ್ಟರರು ಹೋದ ಮೇಲೆ ಲಕ್ಷ್ಮೀಚಂದ ಜ್ವಾಲಾಪ್ರಸಾದನಿಗೆ ಹೇಳಿದ, "ಕೋಪದಲ್ಲಿ ನಾನು ಏನಾದರೂ ಅಂದಿದ್ದರೆ ತಪ್ಪುತಿಳಕೋಬೇಡಿ. ನೀವೇ ಯೋಚಿಸಿ, ಯಾರಾದರೂ ತಮ್ಮ ಮುಂದಿರೋ ಬಡಿಸಿದ ತಟ್ಟೇನ ಇನ್ನೊಬ್ಬರು ತೊಗೊಂಡು ಹೋಗೋಕ್ಕೆ ಬಿಡ್ತಾರೆಯೆ? ಹೌದು, ಇನ್ನೂ ಒಂದು ಮಾತು! ನಾನು ನನ್ನ ಗುಮಾಸ್ತರಿಗೂ ಪ್ರೈವೇಟ್ ಸೆಕ್ರೆಟರಿಗೂ ತಂತಿ ಕೊಟ್ಟಿದೀನಿ. ಅವರು ನನ್ನ ಹೆಂಡತಿಮಕ್ಕಳನ್ನು ಕರಕೊಂಡು ಒಂದೆರಡು ದಿನದಲ್ಲಿ ಬರ್ತಾರೆ. ನಿಮಗೆ ಅದರಿಂದ ಒಂದು ಸ್ವಲ್ಪ ಕಷ್ಟವಾಗೋದು ಖಂಡಿತ. ಆದರೆ ಏನು

ಮಾಡಲಿ, ನಿರ್ವಾಹವಿಲ್ಲ. ನಾವೆಲ್ಲಾ ಇಲ್ಲಿ ಹದಿನೈದು ದಿನ ತಿಂಗಳು ಇದ್ದೇ ತೀರ ಬೇಕಾಗುತ್ತೆ."

ಜ್ವಾಲಾಪ್ರಸಾದ ಆಕಾಶದ ಕಡೆ ನೋಡುತ್ತ ಹೇಳಿದ, "ಎಲ್ಲರಿಗೂ ಬರಹೇಳಿ ಒಳ್ಳೇದು ಮಾಡಿದೆ. ಅತ್ತಿಗೇಗೆ ಇವತ್ತು ರಾತ್ರಿಯೇ ಕೊನೆ ಅಂತ ತೋರುತ್ತೆ. ಬೆಳಕು ಹರಿಯೋ ಹೊತ್ತಿಗೆ ಎಲ್ಲಾ ಮುಗಿದಿರುತ್ತೆ." ಜ್ವಾಲಾಪ್ರಸಾದ ಜೈದೇಯಿಯ ಕೊಟಡಿಯೊಳಕ್ಕೆ ನಡೆದ.

ಮಧ್ಯಾಹ್ನದ ದುಃಖದ ಪ್ರಸಂಗದ ನಂತರ ಪೇಟೆಯ ಕಡೆ ಹೊರಟು ಹೋಗಿದ್ದ ಗಂಗಾಪ್ರಸಾದ ರಾತ್ರಿ ಒಂಬತ್ತು ಗಂಟೆಗೆ ಹಿಂದಿರುಗಿ ಬಂದ. ಬಂದವನೇ ನೇರವಾಗಿ ಜೈದೇಯಿಯ ಕೊಟಡಿಗೆ ಹೋದ. ಜೈದೇಯಿ ಅವನು ಹೋಗುವಾಗ ಹೇಗಿದ್ದಳೋ ಹಾಗೆಯೇ ಪ್ರಜ್ಞೆ ತಪ್ಪಿ ಮಲಗಿದ್ದಳು. ಜ್ವಾಲಾಪ್ರಸಾದ ಅವಳ ತಲೆದಸಿಯಲ್ಲಿ ಕುರ್ಚಿಯ ಮೇಲೆ ಪ್ರತಿಮೆಯಂತೆ ಮೌನವಾಗಿ ಕಣ್ಣುಮುಚ್ಚಿ ಕುಳಿತಿದ್ದ. ಜ್ವಾಲಾ ಪ್ರಸಾದ ಹೇಳಿದ, "ಕೂತುಕೋ ಗಂಗಾ! ಇವತ್ತಿನ ರಾತ್ರಿ ಎಷ್ಟು ದೀರ್ಘವಾದ ರಾತ್ರಿ! ಎಂಥ ಭಯಾನಕವಾದ ರಾತ್ರಿ!"

"ಮೂರು ದಿನದಿಂದ ನೀವು ಒಂದೇ ಸಮನೆ ಜಾಗರಣೆ ಮಾಡ್ತಿದೀರಿ, ಅಪ್ಪಾ. ಸ್ವಲ್ಪ ಮಲಕ್ಕೊಳ್ಳಿ. ನೀವು ಮಲಗಿ ಏಳೋತನಕ ನಾನು ಕೂತಿರ್ತೀನಿ," ಗಂಗಾಪ್ರಸಾದ ಹೇಳಿದ.

ಜ್ವಾಲಾಪ್ರಸಾದ ನಕ್ಕ, "ಇನ್ನೊಂದು ರಾತ್ರಿ! ಇದೇ ಕೊನೇ ರಾತ್ರಿ ತಾನೇ. ಇವತ್ತೂ ಜಾಗರಣೆ ಮಾಡಿಬಿಡ್ತೀನಿ. ಗಂಟೆ ಎಷ್ಟಾಯ್ತು?"

"ಒಂಬತ್ತಾಗಿ ಹತ್ತು ನಿಮಿಷ," ಗಂಗಾಪ್ರಸಾದ ಗಡಿಯಾರ ನೋಡುತ್ತ ಹೇಳಿದ.

"ನಡಿ, ಹೋಗಿ ಊಟಮಾಡು! ನೋಡು, ಲಕ್ಷ್ಮೀಚಂದನ ಮಾತಿಗೆ ಗಮನ ಕೊಡಬೇಡ. ಪ್ರತಿಯೊಬ್ಬ ಮನುಷ್ಯನೂ ಅವನವನ ಮೂಲಭೂತ ಪ್ರವೃತ್ತಿಗೆ ತಕ್ಕಂತೆ ನಡಕೋತಾನೆ. ಈ ಲಕ್ಷ್ಮೀಚಂದ, ಅವನ ತಂದೆ ಪ್ರಭುದಯಾಳರಲ್ಲಿ ಏನೂ ವ್ಯತ್ಯಾಸವಿಲ್ಲ, ಯಾವ ತರಹದ ವ್ಯತ್ಯಾಸವೂ ಇಲ್ಲ."

ಜೈದೇಯಿ ಈ ಮಾತನ್ನು ಕೇಳುತ್ತಿದ್ದವಳಂತೆ ಅದೇ ಹೊತ್ತಿಗೆ ಕಣ್ಣು ತೆರೆದು ಹೇಳಿದಳು, "ಸರಿಯಾಗಿ ಹೇಳಿದೆ, ದೇವರ್‌ಜಿ. ಅಪ್ಪಮಕ್ಕಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ನನ್ನ ಹೊಟ್ಟೇಲಿ ಹುಟ್ಟಿದವನಲ್ಲವೇ ಅಂದುಕೊಂಡಿದ್ದೆ. ಆದರೆ ಅವನಲ್ಲಿ ಅದರಿಂದ ಯಾವ ಬಗೆಯ ವ್ಯತ್ಯಾಸವು ಆಗಿಲ್ಲ.

ಜೈದೇಯಿಯ ಮಾತಿನ ನಿಶ್ಶಕ್ತಿಯೆಲ್ಲವೂ ಕಳೆಯುತ್ತ ಬಂದಿತ್ತು. ಮುಖದ ಮೇಲಿನ ಬಿಗಿತ ಸಹ ಸಂಪೂರ್ಣವಾಗಿ ಮಾಯವಾಗಿತ್ತು. ಜ್ವಾಲಾಪ್ರಸಾದ ಕೇಳಿದ, "ಈಗ ದೇಹಸ್ಥಿತಿ ಹೇಗಿದೆ, ಅತ್ತಿಗೆ?"

"ತುಂಬ ಚೆನ್ನಾಗಿದೆ, ದೇವರ್‌ಜಿ. ನನ್ನ ಕಾಹಿಲೆಯೆಲ್ಲಾ ದೂರವಾಯ್ತೇನೋ

ಅನ್ನೋ ಹಾಗಿದೆ. ಮಗು ಗಂಗಾ, ನೀನು ಇಲ್ಲಿಗೆ ಬರೋದು ತುಂಬಾ ತಡವಾಯಿತು ...ಎಲ್ಲಾ ಭಾಗ್ಯದಲ್ಲಿ ಬರೆದ ಹಾಗೆ ನಡೆಯುತ್ತೆ! ಹೋಗಿ ಒಂದಿಷ್ಟು ಊಟಗೀಟ ಮಾಡು. ಅಲ್ಲೀವರೆಗೆ ನಾನು ದೇವರ್‌ಜಿ ಹತ್ತಿರ ಕೊಂಚ ಮಾತಾಡ್ತೀನಿ."

"ಒಳ್ಳೇದು ದೊಡ್ಡಮ್ಮ, ನಾನು ಊಟಮಾಡಿ ಬರ್ತೀನಿ," ಗಂಗಾಪ್ರಸಾದ ಹೊರ ಹೋದ.

ಜೈದೇಯಿ ನಕ್ಕಳು, "ಊಟಮಾಡಿ ಬರ್ತಾನಂತೆ...ನಾನು ಅಲ್ಲೀವರೆಗೆ ಕಾದು ಕೊಂಡು ಕೂತಿರ್ತೀನಿ ಅಲ್ಲವೆ?"

ಸ್ವಲ್ಪ ಹೊತ್ತು ಬಿಟ್ಟು ಜೈದೇಯಿ ಮತ್ತೆ ಹೇಳಿದಳು, "ತುಂಬಾ ಬಾಯಾರಿದೆ, ದೇವರ್‌ಜಿ. ಸ್ವಲ್ಪ ಗಂಗಾಜಲ ಕುಡಿಸು. ಗಂಗಾಜಲದಲ್ಲಿ ಒಂದೆರಡು ತುಲಸೀ ದಳಾನೂ ಹಾಕು. ಯಾರು ಬಲ್ಲರು, ಇದೇ ಕೊನೆ ಬಾಯಾರಿಕೆಯೇನೋ."

ಜ್ವಾಲಾಪ್ರಸಾದ ಬೆಳ್ಳಿಯ ಸ್ಥಾಲಿಯಲ್ಲಿ ತುಳಸೀದಳ ಹಾಕಿ ಗಂಗಾಜಲ ತಂದ.

"ದೇವರ್‌ಜಿ, ನನಗೆ ಊರೆಕೊಟ್ಟು ಕೂರಿಸಿಕೊ. ಕೊನೇ ಸಲ ಗಂಗಾಜಲ ಕುಡಿಯೋದು, ಮಲಕ್ಕೊಂಡು ಯಾಕೆ ಕುಡೀಲಿ!"

ಜ್ವಾಲಾಪ್ರಸಾದ ಜೈದೇಯಿಗೆ ಊರೆಕೊಟ್ಟು ಕೂರಿಸಿಕೊಂಡ. ಅವಳು ಒಂದು ಗುಟುಕು ಗಂಗಾಜಲ ಕುಡಿದು ಒಮ್ಮೆ ಮೆಲ್ಲಗೆ ಬಿಕ್ಕಿದಳು.

"ನನ್ನನ್ನ ನೆಲದ ಮೇಲೆ ಮಲಗಿಸು, ದೇವರ್‌ಜಿ. ಇನ್ನೇನು ಹೋಗ್ತಿದೀನಿ."

ಜ್ವಾಲಾಪ್ರಸಾದ ಜೈದೇಯಿಯನ್ನು ಮಂಚದಿಂದ ಮೇಲೆತ್ತಿ ತನ್ನ ಮಡಿಲಿನಲ್ಲಿ ಎತ್ತಿಕೊಂಡಂತೆಯೇ ಅವಳು ಒಮ್ಮೆ ದೀರ್ಘವಾಗಿ ಬಿಕ್ಕಳಿಸಿದಳು. ಅವಳ ಪ್ರಾಣ ಹಾರಿಹೋಯಿತು.

## ಐದು

"ಓ ನೀನು?" ಜ್ಞಾನಪ್ರಕಾಶನನ್ನು ಕಂಡು ಜ್ವಾಲಾಪ್ರಸಾದ ಆಶ್ಚರ್ಯದಿಂದ ಕೇಳಿದ.

"ಹೌದಣ್ಣ, ನಾನೇ! ಭಾನುವಾರ ಜಹಜಿನಲ್ಲಿ ಮುಂಬಯಿಗೆ ಬಂದಿಳಿದೆ. ಸೋಮವಾರ ಅಲ್ಲಿಂದ ರೈಲು ಹತ್ತಿ ಇದೇ ಈಗ ಅಲಹಾಬಾದಿಗೆ ಬಂದು ಮುಟ್ಟಿದೆ. ಸ್ಟೇಷನ್ನಿನಿಂದ ನೇರವಾಗಿ ಇಲ್ಲಿಗೆ ಬರ್ತಿದೀನಿ."

"ನೀನು ಬರೋದನ್ನ ತಿಳಿಸಿ ತಂತಿ ಕೊಟ್ಟಿದ್ದರೆ ನಾನೇ ಸ್ಟೇಷನ್ನಿಗೆ ಬಂದಿರ್ತಿದ್ದೆ." ಜ್ವಾಲಾಪ್ರಸಾದ ಆಳನ್ನು ಕೂಗುತ್ತ ಹೇಳಿದ, "ಗಿರಧಾರೀ, ಟಾಂಗಾದಿಂದ ಸಾಮಾನು ಇಳಿಸು. ಜ್ಞಾನಪ್ರಕಾಶ ಬಂದಿದಾನೆ ಅಂತ ಮನೇಲಿ ತಿಳಿಸು."

ಜ್ಞಾನಪ್ರಕಾಶ ಜ್ವಾಲಾಪ್ರಸಾದನ ಸೋದರಮಾವ ಮುನಿಷಿ ರಾಮುಸಹಾಯನ ಕಿರಿಯ ಮಗ. ಅವನು ೧೯೧೨ ರಲ್ಲಿ ಬ್ಯಾರಿಸ್ಟರ್ ಆಗಿಬರುವ ಆಸೆಯಿಂದ ಇಂಗ್ಲಂಡಿಗೆ ಹೋಗಿದ್ದ. ಅವನು ಇಂಗ್ಲಂಡಿನಲ್ಲಿರುವಾಗಲೇ ತಂದೆ ರಾಮುಸಹಾಯ ತೀರಿಕೊಂಡಿದ್ದ; ತಾಯಿಯಂತೂ ಅವನು ಇಂಗ್ಲಂಡಿಗೆ ಹೋಗುವ ಮೊದಲೇ ಕಣ್ಣುಮುಚ್ಚಿದ್ದಳು. ಅಣ್ಣ ಸತ್ಯಪ್ರಕಾಶ ರಾಜಪುರದಲ್ಲಿ ಜಮೀನುದಾರಿಕೆ ನೋಡಿಕೊಳ್ಳುತ್ತಿದ್ದ. ಅಣ್ಣ ತಮ್ಮಂದಿರಿಬ್ಬರ ಸ್ವಭಾವದಲ್ಲಿ ಭೂಮ್ಯಾಕಾಶಗಳ ಅಂತರವಿತ್ತು. ಈ ಕಾರಣದಿಂದಾಗಿ ಜ್ಞಾನಪ್ರಕಾಶನಿಗೆ ತನ್ನ ಮನೆಯವರೊಂದಿಗೆ ಯಾವೊಂದು ಸಂಪರ್ಕವೂ ಉಳಿದಿರಲಿಲ್ಲ. ಎಂತಲೇ ಅವನು ಮುಂಬಯಿಯಿಂದ ನೇರವಾಗಿ ಅಲಹಾಬಾದಿಗೆ ಬಂದಿದ್ದ. ಅವನಿಗೆ ಅಲ್ಲೇ ವಕೀಲವೃತ್ತಿ ಕೈಗೊಂಡು ನೆಲಸುವ ಇಚ್ಛೆಯಿತ್ತು.

ಸಾಮಾನು ಇಳಿಸಿಯಾದ ಮೇಲೆ ಜ್ವಾಲಾಪ್ರಸಾದ ಮತ್ತು ಜ್ಞಾನಪ್ರಕಾಶರು ಡ್ರಾಯಿಂಗ್ ರೂಮಿನಲ್ಲಿ ಬಂದು ಕುಳಿತರು. " ರಾಜಪುರಕ್ಕೆ ಹೋಗೋಲ್ಲವೆ? ನೀನು ಬರೋ ಸುದ್ದೀನ ಸತ್ಯಪ್ರಕಾಶನಿಗೆ ತಿಳಿಸಿರಬೇಕು," ಜ್ವಾಲಾಪ್ರಸಾದ ಕೇಳಿದ.

ಜ್ಞಾನಪ್ರಕಾಶ ನಗುತ್ತ ಹೇಳಿದ, " ಇಂಗ್ಲೆಂಡ್ ಬಿಡೋಕ್ಕೆ ಮುಂಚೆ ಇನ್ನು ದುಡ್ಡು ಕಳಿಸಬೇಡ ಅಂತ ಅಣ್ಣನಿಗೆ ಬರೆದಿದ್ದೆ. ಈಗಲೇ ರಾಜಪುರಕ್ಕೆ ಹೋಗೋ ಇರಾದೆಯೇನೂ ಇಲ್ಲ. ಈಗ ಅಲಹಾಬಾದಿನಲ್ಲಿ ತಳ ಊರಬೇಕಾಗಿದೆ. ಹೈಕೋರ್ಟಿನಲ್ಲಿ ಎನ್‌ರೋಲ್ ಮಾಡಿಸಿಕೋಬೇಕಾಗಿದೆ. ಈಗಲೇ ಮನೆಗೆ ಹೋದರೆ ಇಲ್ಲದ ರಂಪವಾಗುತ್ತೆ. ವಿಲಾಯಿತಿಯಿಂದ ಬಂದಿದಿ, ಪ್ರಾಯಶ್ಚಿತ್ತ ಮಾಡಿಕೊ, ಅದು ಮಾಡಿಕೊ, ಇದು ಮಾಡಿಕೊ ಅಂತೆಲ್ಲಾ ಜನ ಹೇಳ್ತಾರೆ. ಯಾರು ಈ ಗೋಳುಕರೇಲಿ ಹೋಗಿ ಸಿಕ್ಕಿಬೀಳೋರು ! "

ಜ್ವಾಲಾಪ್ರಸಾದ ನಗತೊಡಗಿದ, " ಹೌದು, ಅದೇನೋ ಸರಿ. ಹಳ್ಳಿಯ ಕಡೆ ಈ ಗೊಡ್ಡುತನ ಇನ್ನೂ ತುಂಬಿಕೊಂಡಿದೆ. ನನಗೆ ಸತ್ಯಪ್ರಕಾಶನನ್ನ ಕಂಡರೆ ಆಶ್ಚರ್ಯವಾಗುತ್ತೆ. ಈ ಗೊಡ್ಡುತನದಲ್ಲಿ ದೊಡ್ಡ ದೊಡ್ಡ ಬ್ರಾಹ್ಮಣರನ್ನೂ ಮೀರಿಸ್ತಾನೆ ಅವನು." ಕೊಂಚ ಮೌನವಾಗಿದ್ದು ಜ್ವಾಲಾಪ್ರಸಾದ ಮತ್ತೆ ಹೇಳಿದ, " ನೀನು ಇಂಗ್ಲಂಡಿನಲ್ಲಿ ತುಂಬಾ ದಿನ ಮಾಡಿಬಿಟ್ಟೆ. ನಿನ್ನನ್ನ ನೋಡಬೇಕು ಅಂತ ಮಾವ ಅದೆಷ್ಟು ಒದ್ದಾಡಿದರೋ ! "

ಜ್ಞಾನಪ್ರಕಾಶ ಕೊಂಚ ಗಂಭೀರನಾಗಿ ಹೇಳಿದ, " ನೀನೇ ಯೋಚಿಸು, ನಾನೇನು ಮಾಡೋಕ್ಕೆ ಆಗ್ತಿತ್ತು. ನಾನು ಇಂಗ್ಲಂಡ್ ತಲಪೋಕ್ಕಿಲ್ಲ, ಯುದ್ಧ ಷುರುವಾಯ್ತು. ಯುದ್ಧ ನಡೀತಿರುವಾಗ ಹೇಗೆ ವಾಪಸು ಬರೋದು ? ಯುದ್ಧ ಮುಗಿದಾಗ ನಾನು ಅಮೇರಿಕದಲ್ಲಿದ್ದೆ, ಅಲ್ಲಿಂದ ಇಂಗ್ಲಂಡಿಗೆ ಹಿಂದಿರುಗಿದರೆ ಲಂಡನಿನಲ್ಲಿ ಹಿಂದುಸ್ತಾನದ ರಾಜಕೀಯ ಚಳವಳಿ ಷುರುವಾಯಿತು. ಹಿಂದುಸ್ತಾನದಿಂದ ಒಂದಾದ ಮೇಲೆ ಒಂದರಂತೆ ಅಲ್ಲಿಗೆ ನಿಯೋಗಗಳು ಬರೋಕ್ಕೆ ಷುರುವಾದವು. ಇಂಗ್ಲಂಡ್ ಬಿಟ್ಟು ಬರೋಕ್ಕೆ ಮನಸ್ಸಾಗಲಿಲ್ಲ."

"ಈ ರಾಜಕೀಯ ಚಟುವಟಿಕೆ ಇನ್ನುಮೇಲೆ ಇದ್ದಿದ್ದೂ ಜಾಸ್ತಿಯಾಗುತ್ತೆ. ಹೋಗಲಿ, ನೀನು ಅಲ್ಲೇ ಉಳೀದೇ ವಾಪಸು ಬಂದೆಯಲ್ಲ, ಅದೇ ದೊಡ್ಡಮಾತು! ನೀನು ಕಿರಿಸ್ತಾನನಾಗಿಬಿಟ್ಟಿದಿ, ಯಾವಳೋ ದೊರೆಸಾನೀನ ಮದುವೆ ಮಾಡಿಕೊಂಡಿದಿ ಅಂತ ಸತ್ಯಪ್ರಕಾಶ ಅಂದುಕೊಂಡಿದ್ದ! ನಿನ್ನ ಬಗ್ಗೆ ಅಂಥದ್ದೇನೋ ಸುದ್ದಿ ಎದ್ದಿತ್ತು, ನಾನೂ ಕೇಳಿದ್ದೆ."

"ಹೌದು, ಸುದ್ದಿಗಳು ಏಳುತ್ತವೆ. ಸುಳ್ಳುಸುದ್ದಿ, ಸತ್ಯವಾದ ಸುದ್ದಿ ಎಲ್ಲಾ ತರಹದ್ದೂವೇ. ನಿಜ ಹೇಳಬೇಕು ಅಂದರೆ ನಾನು ಕ್ರಿಶ್ಚಿಯನ್ ಆಗಲಿಲ್ಲ. ಅಲ್ಲಿಯ ಪಾದ್ರಿಗಳಿಗೆ ಯಾರನ್ನೂ ಕ್ರಿಶ್ಚಿಯನ್–ಗ್ರಿಶ್ಚಿಯನ್ ಮಾಡೋಕ್ಕೆ ಆಸಕ್ತಿಯಿಲ್ಲ. ಆ ರಗಳೆಯೆಲ್ಲಾ ಏನಿದ್ದರೂ ಇಲ್ಲಿ ಹಿಂದೂಸ್ತಾನದಲ್ಲೇ. ಇನ್ನು ಮದುವೆಯ ಮಾತು. ಅದು ಸಾಕಷ್ಟು ದೂರ ಸಾಗಿದ್ದದ್ದು ಮುರಿದುಬಿತ್ತು. ಯಾವಳ ಜೊತೆ ಮದುವೆಯ ಮಾತು ನಡಸಿದ್ದನೋ ಅವಳಿಗೆ ಮೊದಲೇ ಮದುವೆ ಗೊತ್ತಾಗಿದ್ದು ಅವಳ ಕೈ ಹಿಡಿಯ ಬೇಕಾಗಿದ್ದೋನು ಯುದ್ಧದಲ್ಲಿ ಸತ್ತುಹೋದ ಅಂತ ವರ್ತಮಾನ ಬಂದಿತ್ತು. ಆದರೆ ಅವನು ಸತ್ತಿರಲಿಲ್ಲ, ಬಂದಿಯಾಗಿದ್ದ. ೧೯೧೯ ರ ಫೆಬ್ರುವರಿ ಎಂಟನೆಯ ತಾರೀಕು, ನಮ್ಮ ಮದುವೆ ಗೊತ್ತಾಗಿದ್ದ ದಿನಕ್ಕೆ ಸರಿಯಾಗಿ ಒಂದು ವಾರ ಮುಂಚೆ, ಇಂಗ್ಲೆಂಡಿಗೆ ಹಿಂದಿರುಗಿ ಬಂದ. ಸರಿ, ನನ್ನ ಮದುವೆಯ ಕತೆ ಅಲ್ಲೀಗೆ ಮುಗೀತು!"

ಜ್ವಾಲಾಪ್ರಸಾದ ಸಂತೋಷಸೂಚಕವಾಗಿ ಒಮ್ಮೆ ನೀಳವಾಗಿ ಉಸಿರೆಳೆದುಕೊಂಡ. "ಹೋಗಲಿ ಬಿಡು, ಒಳ್ಳೇದೇ ಆಯಿತು. ದೇವರು ಮಾಡೋದೆಲ್ಲಾ ಸರಿಯಾಗಿಯೇ ಮಾಡ್ತಾನೆ. ಈಗ ಬಂದಿದಿ, ವಕೀಲಿ ಷುರುಮಾಡು. ಹಲವಾರು ಕಡೆಯಿಂದ ನಿನ್ನ ಮದುವೆಯ ಮಾತು ಬಂದಿದೆ. ವಿಲಾಯಿತಿಗೆ ಹೋಗಿ ಬಂದಿರೋನು, ನೀನೇ ಖುದ್ದಾಗಿ ಹುಡುಗೀನ ಆರಿಸು. ಅಂದಹಾಗೆ ಇವತ್ತು ಬೆಳಗ್ಗೆ ತಾನೇ ಬನಾರಸ್ಸಿನ ರಾವ್ ಬಹದ್ದೂರ್ ಕನ್ಹೈಯಾಲಾಲ ನಿನ್ನ ವಿಷಯ ಕೇಳಿಕೊಂಡು ಹೋದರು. ಹುಡುಗಿ ಲಕ್ಷಣವಾಗಿದಾಳೆ, ಎಂಟ್ರೆನ್ಸ್‌ನಲ್ಲಿ ಓದ್ತಾ ಇದಾಳೆ. ನಾನು ಅವಳನ್ನ ನೋಡಿದೀನಿ. ಅವರಲ್ಲಿ ಪರದೆ–ಗಿರದೆ ಅಂತ ಯಾವ ಪದ್ಧತಿಯೂ ಇಲ್ಲ. ಅವರ ಮಗಳ ಸೌಭಾಗ್ಯ ದಿಂದಾಗಿ ನೀನು ಹಿಂದಿರುಗಿ ಬಂದಿದಿ ಅಂತ ಅವರಿಗೆ ಸುದ್ದಿ ತಿಳಸ್ತೀನಿ."

"ಆದರೆ ನಾನು ನಾಳೆ ಅಮೃತಸರಕ್ಕೆ ಹೋಗ್ತಿದೀನಿ. ಇವತ್ತು ಡಿಸೆಂಬರ್ ಇಪ್ಪತ್ತೆರಡು. ಇಪ್ಪತ್ನಾರರಿಂದ ಅಲ್ಲಿ ಕಾಂಗ್ರೆಸ್ ಷುರುವಾಗುತ್ತೆ."

"ಏನು, ನೀನು ಕಾಂಗ್ರೆಸಿಗೆ ಅವಶ್ಯವಾಗಿ ಹೋಗಲೇಬೇಕೆ?" ಜ್ವಾಲಾಪ್ರಸಾದ ಕೇಳಿದ.

"ಜಗತ್ತಿನಲ್ಲಿ ಅವಶ್ಯ ಅನ್ನೋದು ಯಾವುದೂ ಇಲ್ಲ. ಆದರೆ ನಮ್ಮ ದೇಶದಲ್ಲಿ ಏನೊಂದು ಹೊಸ ಚೇತನ ಮೂಡಿದೆ ಅದರ ದರ್ಶನ ಮಾಡಿಬರಬೇಕು ಅಂತ ಅನ್ನಿಸಿದೆ. ಜಲಿಯನ್‌ವಾಲಾಬಾಗಿನ ಹತ್ಯಾಕಾಂಡವಾಗಿದ್ದದ್ದು ಈಗ ಕಾಂಗ್ರೆಸ್ ನಡೀಲಿರೋ ಇದೇ ಅಮೃತಸರದಲ್ಲಿ. ನನ್ನ ಸಲಹೆ ಅಂದರೆ ನೀನೂ ನನ್ನ ಜೊತೆ ಬಾ."

ಜ್ವಾಲಾಪ್ರಸಾದ ನಾಲಿಗೆ ಕಚ್ಚಿ ಹೇಳಿದ, "ಇಲ್ಲಪ್ಪ, ನನ್ನ ಪೆನ್‌ಷನ್ ಭದ್ರ ವಾಗಿರೋಕ್ಕೆ ಬಿಡು! ಈ ರಾಜಕೀಯ ಚಳವಳಿಗಳು ಬರುತ್ತವೆ, ಹೋಗುತ್ತವೆ. ಈ ಬ್ರಿಟಿಷ್ ಸರಕಾರ ಇದ್ದಹಾಗೇ ಇರುತ್ತೆ. ನಾನು ಪೆನ್‌ಷನ್ ಯಾಕೆ ಕಳಕೊಳ್ಳಲಿ?"

ಗೋಡೆಯ ಗಡಿಯಾರ ಹತ್ತು ಹೊಡೆಯಿತು. "ಅರೆ, ಹತ್ತು ಹೊಡೀತೆ! ಏಳು, ಹೋಗಿ ಊಟ ಮಾಡೋಣ! ನಿನ್ನ ಹಾಸಿಗೆ ಹಾಸಿಯಾಗಿದೆ ಅಂತ ಕಾಣುತ್ತೆ. ಆಮೇಲೆ ಚೆನ್ನಾಗಿ ನಿದ್ರೆ ಮಾಡು. ಇವತ್ತಿನ್ನೂ ತಾರೀಕು ಇಪ್ಪತ್ತೆರಡು, ನಾಳೆ ಇಪ್ಪತ್ತ ಮೂರು. ನೀನು ಇಲ್ಲಿಂದ ಇಪ್ಪತ್ತನಾಲ್ಕಕ್ಕೆ ಹೊರಟರೂ ಇಪ್ಪತ್ತೈದರ ಬೆಳಗ್ಗೆ ಅಮೃತ ಸರ ತಲಪ್ತಿ. ಕಾಂಗ್ರೆಸ್ ಷುರುವಾಗೋದು ಇಪ್ಪತ್ತಾರರಿಂದ. ನಾಳೆಯೇ ಹೊರ ಡೋಕ್ಕೆ ಏನು ಅವಸರ, ನಾಳೆಯೆಲ್ಲಾ ವಿಶ್ರಾಂತಿ ತೊಗೊಳ್ಳುವೆಯಂತೆ!"

ಜ್ವಾಲಾಪ್ರಸಾದನಿಗೆ ಪೆನ್‌ಷನ್ ಆಗಿ ಎರಡು ವರ್ಷವಾಗಿತ್ತು. ಜಾರ್ಜ್‌ಟೌನಿನಲ್ಲಿ ಸ್ವಂತ ಮನೆ ಕಟ್ಟಿಕೊಂಡಿದ್ದ.

ಮರುದಿನ ಬೆಳಗ್ಗೆ ಜ್ಞಾನಪ್ರಕಾಶ ನಿದ್ರೆ ಮುಗಿಸಿ ಎದ್ದಾಗ ಒಂಬತ್ತು ಹೊಡಿದಿತ್ತು. ಹೊರಗೆ ಮಂಜು ಕವಿದುಕೊಂಡು ಇನ್ನೂ ಕತ್ತಲೇನೋ ಎನ್ನುವಂತಿತ್ತು. ಅವನು ಎದ್ದು ಬೇಗಬೇಗ ಸಿದ್ಧನಾಗಿ ಬಟ್ಟೆ ಹಾಕಿಕೊಂಡ. ಹೊರಗೆ ತಂಡಿಯ ಗಾಳಿ ಜೋರಾಗಿ ಬೀಸುತ್ತಿತ್ತು, ಆದರೆ ಜ್ಞಾನಪ್ರಕಾಶನ ಮನಸ್ಸಿನಲ್ಲಿ ಯಾವುದೋ ಒಂದು ಹುಮ್ಮಸ್ಸಿತ್ತು, ಸ್ಫೂರ್ತಿಯಿತ್ತು. ಜ್ವಾಲಾಪ್ರಸಾದ ವರಾಂಡದಲ್ಲಿ ಬಟ್ಟೆ ತೊಟ್ಟು ಸಿದ್ಧನಾಗಿ ಕುಳಿತಿದ್ದ. ಅವನ ಟಾಂಗಾ ಪೋರ್ಟಿಕೋದಲ್ಲಿ ತಯಾರಾಗಿ ನಿಂತಿತ್ತು. ಜ್ಞಾನಪ್ರಕಾಶನನ್ನು ನೋಡಿ ದವನೇ ಅವನು ಹೇಳಿದ, "ತುಂಬ ಹೊತ್ತು ಮಲಗಿದ್ದೆಯಲ್ಲ. ಏಳು, ತಿಂಡಿ ತಿನ್ನು. ಇದೇ ಈಗ ಗಂಗನ ತಂತಿ ಬಂತು. ಅವನನ್ನು ಕರಕೊಂಡು ಬರೋಕ್ಕೆ ಸ್ಟೇಷನ್ನಿಗೆ ಹೋಗಬೇಕು. ಕ್ರಿಸ್‌ಮಸ್ ರಜಾ ತಾನೇ ಈಗ! ಗಾಡಿ ಹನ್ನೊಂದಕ್ಕೆ ಬರುತ್ತೆ."

ಜ್ಞಾನಪ್ರಕಾಶ ಕುಳಿತುಕೊಳ್ಳುತ್ತ ಹೇಳಿದ, "ಒಳ್ಳೇದೇ ಆಯಿತು. ಅಮೃತ ಸರಕ್ಕೆ ಹೋಗೋಕ್ಕೆ ಮುಂಚೆ ಅವನ ಭೇಟಿಯಾದ ಹಾಗಾಯಿತು. ಈಗ ಎಲ್ಲಿ ಕೆಲಸ ಅವನಿಗೆ? ಹೇಗಿದಾನೆ?"

"ಜೌನ್‌ಪುರದಲ್ಲಿದಾನೆ. ಅಲ್ಲಿಂದಲೇ ಬರ್‍ತಿರೋದು. ಕಂಡ ಮೇಲೆ ನೀನೇ ಕೇಳುವಿಯಂತೆ, ಹೇಗಿದಾನೆ ಅಂತ."

"ಒಬ್ಬನೇ ಬರ್‍ತಿದಾನೋ, ಅವನ ಮನೆಯವರೂ ಬರ್‍ತಿದಾರೆಯೋ?"

"ಹೌದು, ನಿನ್ನೆ ನಿನಗೆ ಹೇಳೋದೇ ಮರೀತು. ಅವನ ಮಕ್ಕಳುಮರಿಯೆಲ್ಲಾ ಈಗ ಇಲ್ಲೇ ಇದಾರೆ. ಅವನ ಮಗ ಇಲ್ಲಿ ಓದತಾ ಇದಾನೆ. ಹೆಂಡತೀನೂ ಇಲ್ಲಿ ಬಂದು ತಿಂಗಳಾಯಿತು. ಹೆಂಡತಿಯೇನು, ಸಾಕ್ಷಾತ್ ಲಕ್ಷ್ಮೀ ಅವಳು!"

ಜ್ಞಾನಪ್ರಕಾಶ ನಕ್ಕ, "ಹೋಗಲಿ ಬಿಡಿ, ನಿಮ್ಮ ಏಕಾಕಿತನವೂ ಕಳೆದಹಾಗಾಯಿತು.

ಒಳ್ಳೇದು, ನಾನೂ ನಿಮ್ಮ ಜೊತೆ ಸ್ಟೇಷನ್ನಿಗೆ ಬರ್‍ತೀನಿ. ಅಲ್ಲಿಂದ ಹಾಗೇ ಪೇಟೇಕಡೆಗೆ ಹೋಗಿಬರ್‍ತೀನಿ."

ಜ್ಞಾನಪ್ರಕಾಶ ವಯಸ್ಸಿನಲ್ಲಿ ಗಂಗಾಪ್ರಸಾದನಿಗಿಂತ ಸುಮಾರು ಮೂರು ವರ್ಷ ದೊಡ್ಡವನಾದರೂ ಅವರ ನಡುವೆ ಒಂದು ತರಹೆಯ ಆತ್ಮೀಯತೆ ಬೆಳೆದಿತ್ತು. ಜ್ಞಾನ ಪ್ರಕಾಶನೂ ಅಲಹಾಬಾದಿನ ಮೋರ್ ಸೆಂಟ್ರಲ್ ಕಾಲೇಜಿನಿಂದಲೇ ಬಿ.ಎ. ಎಲ್‌ಎಲ್.ಬಿ. ಪಾಸುಮಾಡಿದ್ದ. ಗಂಗಾಪ್ರಸಾದನ ಜೊತೆ ಅವನು ಸಾಕಷ್ಟು ಓಡಾಡಿದ್ದ. ಜ್ಞಾನ ಪ್ರಕಾಶನನ್ನು ಕಂಡೊಡನೆಯೇ ಗಂಗಾಪ್ರಸಾದನ ಮುಖ ಕಳೆಗೊಂಡಿತು. ತಂದೆಯ ಕಾಲುಮುಟ್ಟಿ ನಮಸ್ಕಾರಮಾಡಿ, ಜ್ಞಾನಪ್ರಕಾಶನನ್ನು ಅಪ್ಪಿಕೊಳ್ಳುತ್ತ ಅವನು ಹೇಳಿದ, "ಓ ಚಿಕ್ಕಪ್ಪಣ್ಣ, ನೀನು ಸರಿಯಾಗಿ ಸಿಕ್ಕಿದೆ! ವಿಲಾಯಿತೀಲಿ ತುಂಬ ಮಜ ಹೊಡೆದೆ ಅಂತ ಕಾಣುತ್ತೆ. ಅಲ್ಲ, ನಮ್ಮನ್ನ ಮರೆತೇ ಬಿಡೋದೆ? ಚಿಕ್ಕಮ್ಮಣ್ಣಿ ಯೋರನ್ನ ಕರಕೊಂಡು ಬಂದಿದೀಯೋ ಇಲ್ಲವೋ ಹೇಳು?"

ಜ್ಞಾನಪ್ರಕಾಶ ತುಟಿಯ ಮೇಲೆ ಬೆರಳಿಡುತ್ತ, "ಈ ಪ್ರಶ್ನೆಗಳನ್ನೆಲ್ಲಾ ಒಂದೇ ಸಲ ಕೇಳಿಬಿಡೋದೆ? ಮನೆಗೆ ನಡಿ. ಅಲ್ಲಿ ಗುಟ್ಟಾಗಿ ಮಾತನಾಡೋಣಂತೆ. ಎಲ್ಲಾನೂ ಹೇಳ್ತೀನಿ. ಇನ್ನೂ ನಿನ್ನೆ ರಾತ್ರಿ ತಾನೇ ಹಿಂದಿರುಗಿ ಬಂದಿದೀನಿ. ನೀವಿಬ್ಬರೂ ಮನೆಗೆ ನಡೀರಿ. ನಾನು ಒಂದು ಒಂದೂವರೆ ಗಂಟೇಲಿ ವಾಪಸು ಬರ್‍ತೀನಿ. ಊಟ ಮಾಡಿ ತಿರುಗಾಡಿ ಕೊಂಡು ಬರೋಕ್ಕೆ ಹೋಗೋಣ. ಆಗ ನಿನ್ನದೆಲ್ಲಾನ್ನೂ ನನಗೆ ಹೇಳೋವೆಯಂತೆ; ನನ್ನದೆಲ್ಲಾ ನಿನಗೆ ಹೇಳ್ತೀನಿ."

ಸುಮಾರು ಒಂದು ಗಂಟೆಯ ಹೊತ್ತಿಗೆ ಜ್ಞಾನಪ್ರಕಾಶ ಮಿತ್ರರನ್ನೆಲ್ಲಾ ಭೇಟಿ ಮಾಡಿ ಮನೆಗೆ ಹಿಂದಿರುಗಿದ. ಜ್ವಾಲಾಪ್ರಸಾದ ಗಂಗಾಪ್ರಸಾದರು ಅವನ ದಾರಿ ಕಾಯುತ್ತಿದ್ದರು. ಊಟ ಮುಗಿಸಿ ಗಂಗಾಪ್ರಸಾದ ಜ್ಞಾನಪ್ರಕಾಶರು ತಿರುಗಾಡಿಕೊಂಡು ಬರಲು ಹೊರಟರು. ಗವರ್ನ್‌ಮೆಂಟ್ ಹೌಸ್ ದಾಟಿ ಆಲ್‌ಫ್ರೆಡ್ ಪಾರ್ಕಿಗೆ ಕಾಲಿಡುವಾಗ ಜ್ಞಾನಪ್ರಕಾಶ ಕೇಳಿದ, "ಹ್ಞಾ ಗಂಗಾ, ಹೇಳು, ಯಾವ ಕಡೆ ಹೋಗೋಣ? ಎಷ್ಟು ದಿನಕ್ಕೋಸ್ಕರ ಬಂದಿದಿ ಇಲ್ಲಿ?"

"ಎರಡನೆ ತಾರೀಕು ಆಫೀಸ್ ಷುರುವಾಗುತ್ತೆ. ಅವತ್ತು ಮಧ್ಯಾಹ್ನದ ಹೊತ್ತಿಗೆ ಜೌನ್‌ಪುರ ತಲಪಬೇಕು. ಅಲ್ಲಿಯವರೆಗೆ ನಾನು ಸ್ವತಂತ್ರ. ಹಾಗೆ ನೋಡಿದರೆ ರಜಾದಿನ ದಲ್ಲಿ ಸಹ ನಾನು ಜಿಲ್ಲೆ ಬಿಟ್ಟು ಬರಕೂಡದು. ಆದರೆ ನನ್ನ ಕಂಡರೆ ಕಲೆಕ್ಟರಿಗೆ ತುಂಬಾ ಮಮತೆ. ಅವರು ಅಪ್ಪಣೆ ಕೊಟ್ಟಿದಾರೆ. ಈಗ ನಿನ್ನದೇನು ಕಾರ್ಯಕ್ರಮ ಹೇಳು."

"ನನ್ನ ಕಾರ್ಯಕ್ರಮವಂತೂ ತುಂಬಾ ಸರಳ, ನೇರ. ಇವತ್ತು ಸಂಜೆ ಹೊತ್ತಿಗೆ ಒಂದು ಬಂಗಲೆ ಬಾಡಿಗೆಗೆ ತೊಗೋಬೇಕಾಗಿದೆ. ಈಗ ತಾನೇ ಕೆಲವಾರು ಬಂಗಲೆ ನೋಡಿಕೊಂಡು ಬಂದಿದೀನಿ. ನಾಳೆ ಬೆಳಗಿನ ಗಾಡೀಲಿ ಅಮೃತಸರಕ್ಕೆ ಹೋಗ ಬೇಕಾಗಿದೆ. ಕಾಂಗ್ರೆಸ್ ನಡೆಯುತ್ತೆ ಅಲ್ಲಿ. ಆ ಕಾಂಗ್ರೆಸ್ ನೋಡಬೇಕು ಅನ್ನಿಸಿದೆ."

ಗಂಗಾಪ್ರಸಾದ ಸ್ವಲ್ಪ ಗಂಭೀರನಾಗಿ ಹೇಳಿದ. "ಚಿಕ್ಕಪ್ಪಣ್ಣ, ನನ್ನ ಮಾತು ಕೇಳೋದಾದ್ರೆ ಈ ಕಾಂಗ್ರೆಸ್-ಗೀಂಗ್ರೆಸ್‌ನಿಂದೆಲ್ಲಾ ದೂರ ಇರು. ಅದರಲ್ಲಿ ಏನೂ ಇಲ್ಲ!"

ಜ್ಞಾನಪ್ರಕಾಶ ಜೋರಾಗಿ ನಗತೊಡಗಿದ. "ನೀನು ಹೀಗೆ ಹೇಳ್ತಿ ಅಂತ ಗೊತ್ತಿತ್ತು, ಮಗು! ಡಿಪ್ಟಿ ಕಲೆಕ್ಟರ್ ತಾನೇ ನೀನು! ಸುಖಜೀವನ, ಮಜಾ ಹೊಡೀತಿದಿ. ಆದರೆ ಇಂಗ್ಲಂಡಿನಿಂದ ಹಿಂತಿರುಗಿ ಬಂದಿದೀನಿ, ನನ್ನನ್ನ ಕೇಳು. ನಾವು ಗುಲಾಮರು, ಅನಾಗರಿಕರು, ಅಸ್ಪೃಶ್ಯರು. ನೀನು ಇದನ್ನೆಲ್ಲಾ ಅನುಭವಿಸಿಲ್ಲ. ಯಾಕೆ ಅಂದರೆ ಹಿಂದುಸ್ತಾನದಿಂದ ಹೊರಗೆ ಹೋಗಿ ಇದನ್ನೆಲ್ಲಾ ಅನುಭವಿಸೋ ಅವಕಾಶ ಸಿಕ್ಕಿಲ್ಲ ನಿನಗೆ. ನಿನ್ನನ್ನು ಲಕ್ಷಾಂತರ ಜನರ ಭಾಗ್ಯವಿಧಾತನನ್ನಾಗಿ ಮಾಡಿ, ಅಧಿಕಾರಮದ ದಲ್ಲಿ ಬೊಂಬೆಯನ್ನಾಗಿ ಮಾಡಿಟ್ಟಿದಾರೆ."

"ಚಿಕ್ಕಪ್ಪಣ್ಣ, ನೀನು ಹೇಳೋದೇನೋ ಸರಿ . . . ಆದರೆ . . . ಆದರೆ . . . ನಾನಿರೋ ಸ್ಥಿತಿಯ ಬಗ್ಗೆ ನನಗೆ ದೂರುವಂಥಾದ್ದು ಏನಿದೆ? ನನ್ನ ಮಾತೇಕೆ, ದೇಶದಲ್ಲಿ ಯಾರಿಗೆ ತಾನೆ ದೂರುವಂಥ ಸ್ಥಿತಿ ಬಂದಿದೆ? ಒಂದಂತೂ ಖಂಡಿತ. ನಮ್ಮ ಪ್ರಾಣ, ನಮ್ಮ ಆಸ್ತಿಪಾಸ್ತಿ ಸುರಕ್ಷಿತವಾಗಿದೆ. ಪ್ರತಿಯೊಂದೂ ಸರಿಯಾಗಿ ನಡೀತಿದೆ. ಮೇಲೆ ಇದು ಬ್ರಿಟಿಷ್ ಸಾಮ್ರಾಜ್ಯ! ಎಂಥ ಶಕ್ತಿಶಾಲಿ ಸಾಮ್ರಾಜ್ಯ ಅದು! ಪ್ರಪಂಚದ ಐದನೇ ಒಂದು ಭಾಗ ಆ ಸಾಮ್ರಾಜ್ಯಕ್ಕೆ ಒಳಪಟ್ಟಿದೆ. ಈ ಬ್ರಿಟಿಷ್ ಸಾಮ್ರಾಜ್ಯ ಜರ್ಮನೀನ ತುಳಿದುಹಾಕಿಬಿಟ್ಟಿದೆ."

"ಹೌದು, ಜರ್ಮನೀನ ತುಳಿದುಹಾಕಿಬಿಟ್ಟಿದೆ, ನಿಜ! ಆದರೆ ಜರ್ಮನೀನ ಸೋಲಿಸಿದವರು ಯಾರು ಅಂತ ನೀನು ಯೋಚಿಸಿದೀಯಾ? ಈ ಮಹಾಯುದ್ಧ ದಲ್ಲಿ ಎಷ್ಟು ಜನ ಹಿಂದುಸ್ತಾನದವರು ಸತ್ತಿದಾರೆ ಅಂತ ಗೊತ್ತೆ? ಇಂಗ್ಲಿಷರ ಯುದ್ಧಾನ ಹಿಂದುಸ್ತಾನದವರು ಕಾದಿದಾರೆ. ಗೂರ್ಖರು, ಸಿಖ್ಖರು, ಪಠಾಣರು, ಬಲೋಚಿಗಳು, ರಾಜಪೂತರು, ಗಢವಾಲಿಗಳು, ಮರಾಠಿಗಳು—ಇಡೀ ಹಿಂದುಸ್ತಾನದಿಂದ ಸೈನಿಕರು ಹೋಗಿದ್ದರು. ಹಿಂದುಸ್ತಾನದವರ ಫೌಜೇ ಐವತ್ತು ಲಕ್ಷದಷ್ಟಿತ್ತು. ಅಂತಾನೇ ಜರ್ಮನಿ ಸೋತದ್ದು. ಗಂಗಾ, ಈಗ ಇದನ್ನೆಲ್ಲಾ ಮಾತಾಡಿ ಪ್ರಯೋಜನವಿಲ್ಲ. ನಮಗೆ ಡೊಮಿನಿಯನ್ ಸ್ಟೇಟಸ್ ಸಿಗಲೇಬೇಕು."

ಆಲ್‌ಫ್ರೆಡ್ ಪಾರ್ಕ್ ದಾಟಿ ಇಬ್ಬರೂ ಪಟ್ಟಣದ ಕಡೆಗೆ ಹೋಗುವ ಮುಖ್ಯ ರಸ್ತೆಗೆ ಬಂದಿದ್ದರು. ಆದರೆ ಪಟ್ಟಣದ ಕಡೆಗೆ ಹೋಗದೆ ಸಿವಿಲ್ ಲೈನ್ಸ್‌ನ ಕಡೆಗೆ ತಿರುಗಿದರು. ಗಂಗಾಪ್ರಸಾದ ಒಂದು ನಿಟ್ಟುಸಿರು ಬಿಟ್ಟು ಹೇಳಿದ, "ನೀನು ಅನ್ನೋದು ಸರಿ, ಚಿಕ್ಕಪ್ಪಣ್ಣ. ನನ್ನನ್ನೇ ನೋಡು. ಡಿಪ್ಟಿ ಕಲೆಕ್ಟರ್ ಆಗಿರೋದರಲ್ಲೇ ಜೀವನ ಕಳೆದುಹೋಗುತ್ತೆ ಅಂತ ಕಾಣುತ್ತೆ. ಹೆಚ್ಚು, ತೀರಾ ಹೆಚ್ಚು ಅಂದರೆ ನಾನು ಪ್ರಾಯಶಃ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆಗಬಹುದು. ಅದೇ ಒಬ್ಬ ಇಂಗ್ಲಿಷಿ

ರೋನು, ಇನ್ನೂ ಹುಡುಗ, ಬಂದ ತಕ್ಷಣ ನನ್ನ ಆಫೀಸರ್ ಆಗಿ ಮೇಲೆ ಕೂರ್ತ್ತಾನೆ, ನನ್ನ ಮೇಲೆ ಅಧಿಕಾರ ಮಾಡೋಕ್ಕೆ ಷುರು ಮಾಡ್ತಾನೆ. ಡೊಮಿನಿಯನ್ ಸ್ಟೇಟಸ್ ಸಿಕ್ಕಿದರೆ ಒಂದಿಷ್ಟು ಬಡ್ತಿಯ ಕನಸನ್ನಾದರೂ ಕಾಣಬಹುದು, ಚಿಕ್ಕಪ್ಪಣ್ಣ."

"ಈಗ ಬಂದೆ, ದಾರೀಗೆ," ಜ್ಞಾನಪ್ರಕಾಶ ನಕ್ಕ. "ಹಾಗಾದರೆ ಬರ್ತೀಯಾ, ನನ್ನ ಜೊತೆ ಅಮೃತಸರಕ್ಕೆ."

ಗಂಗಾಪ್ರಸಾದ ಬೆಚ್ಚಿದ, "ಎಚ್ಚರವಾಗಿದಿ ತಾನೇ ನೀನು! ನನ್ನನ್ನ ಅಮೃತ ಸರದ ಕಾಂಗ್ರೆಸಿಗೆ ಬಾ ಅಂತೀಯಲ್ಲ? ಸರಕಾರಕ್ಕೆ ಸುಳುವು ಸಿಕ್ಕಿದರೆ ಬಡ್ತಿಗಿಡ್ತಿಯೆಲ್ಲಾ ಎಂದೆಂದಿಗೂ ಬಂದ್ ಅಂದುಕೋ. ಈಚೆಗೆ ಸಿ.ಐ.ಡಿ.ಗಳು ಗಸ್ತು ಹೊಡೆಯೋದು ಗೊತ್ತಿದೆ ತಾನೆ!"

"ಅರೆ, ಈ ಸಿ.ಐ.ಡಿ. ಕಥೇನ ಯಾರಿಗೆ ಹೇಳ್ತಿ, ಬಿಡು. ನನ್ನ ಹೆಸರು ಜ್ಞಾನ ಪ್ರಕಾಶ, ನಿನ್ನ ಹೆಸರು ರಾಮಪ್ರಕಾಶ ಅಂತ ಇಟ್ಟುಕೊ. ಅಂದರೆ ನೀನು ನನ್ನ ತಮ್ಮ. ಅಪರಿಚಿತ ಜನರ ಮಧ್ಯದಲ್ಲಿ ನನ್ನನ್ನೂ ನಿನ್ನನ್ನೂ ಯಾರು ಕೇಳ್ತಾರೆ? ಸಿ.ಐ.ಡಿ.ಗಳು ತಿರುಗೋದು ಮುಖಂಡರ ಹಿಂದೆ. ಹಿಂದುಸ್ತಾನದಲ್ಲಿ ಗುಪ್ತಚಾರರು ಎಂಥ ಕತ್ತೆಗಳು ಅನ್ನೋದು ನಿನಗೆ ಚೆನ್ನಾಗಿ ಗೊತ್ತೇ ಇದೆ. ಅಲ್ಲದೆ ಪಂಜಾಬ್ ಪೋಲೀಸಿನೋರಿಗೆ ನಾನೂ ನೀನೂ ಏನು ಗೊತ್ತು? ನಡಿ, ನನ್ನ ಜೊತೆ. ಅಲ್ಲಿ ಏನೇನಾಗುತ್ತೆ ನೋಡು. ದೇಶದ ಮುಖಂಡರನ್ನೆಲ್ಲಾ ನೋಡಬಹುದು. ಮುಖ್ಯವಾಗಿ ಮಿಸ್ಟರ್ ಗಾಂಧೀನ. ಯಾವುದಾದರೂ ಕಾಂಗ್ರೆಸಿಗೆ ಹೋಗಿದೀಯಾ?"

"ಇಲ್ಲಿಯವರೆಗೆ ಹೋಗಿಲ್ಲ. ಆದರೆ ಚಿಕ್ಕಪ್ಪಣ್ಣ, ಈ ಸಲ ನನಗೆ ತುಂಬಾ ಆಸೆ ಹುಟ್ಟಿಸ್ತಿದಿ, ನಿನ್ನ ಜೊತೆ ಬರಬೇಕು ಅಂತ ಮನಸ್ಸಾಗುತ್ತೆ. ಆದರೆ ಅಪ್ಪನಿಗೆ ನಮ್ಮ ಪ್ರೋಗ್ರಾಮ್ ಗೊತ್ತಾಗಬಾರದು. ಅಂದರೆ ಅವರಿಗೆ ಏನಾದರೂ ನೆಪ ಹೇಳ ಬೇಕಾಗುತ್ತೆ, ಸುಳ್ಳು ಹೇಳಬೇಕಾಗುತ್ತೆ! ಏನೇ ಆಗಲಿ, ಅವರು ನನ್ನನ್ನ ಕಾಂಗ್ರೆಸ್ಸಿಗೆ ಹೋಗೋಕ್ಕೆ ಬಿಡೋಲ್ಲ. ಇದು ಚೆನ್ನಾಗಿ ತಿಳಿದಿರಲಿ."

"ಅದೇನು ಮಹಾ ಕಷ್ಟ! ನೀನು ಇನ್ನೂ ಅಣ್ಣನಿಗೆ ನಿನ್ನ ಕಾರ್ಯಕ್ರಮ ಏನೂ ಅಂತ ತಿಳಿಸಿಲ್ಲ. ಬೇಗ ಆಗ್ರಾ, ಮಥುರಾ, ಅಲಿಗಢ್ ಇಲ್ಲವೇ ಮೀರಟ್ಟಿಗೆ ಹೋಗೋ ಒಂದು ಕಾರ್ಯಕ್ರಮ ಹಾಕು. ಅಲಿಗಢ್‌ನಲ್ಲಿ ಯಾವನೋ ಹಳೆಯ ಸ್ನೇಹಿತ ಇದಾನೆ ಅಂದುಕೊ."

"ಹೌದು, ಅಲಿಗಢ್‌ನಲ್ಲಿ ಪಂಡಿತ ಸೋಮೇಶ್ವರದತ್ತ ಇದಾರೆ. ಅಪ್ಪನಿಗೆ ಅವರ ಪರಿಚಯವೂ ಇದೆ," ಗಂಗಾಪ್ರಸಾದ ಹೇಳಿದ.

"ಉಹ್ಞೂ, ಪಂಡಿತರಿಂದ ಕೆಲಸವಾಗೋಲ್ಲ. ಯಾಕೆಂದರೆ ಅಣ್ಣನಿಗೆ ಅವರು ಗೊತ್ತು, ಸುಳ್ಳೆಲ್ಲಾ ಹೊರಬೀಳುತ್ತೆ. ಅಣ್ಣನಿಗೆ ಗೊತ್ತಿಲ್ಲದೆ ಇರೋರು ಯಾರಾದರೂ ಆಗಬೇಕು."

ಗಂಗಾಪ್ರಸಾದ ಸ್ವಲ್ಪ ಯೋಚಿಸಿ ಹೇಳಿದ, "ಮೀರಟ್ಟಿನಲ್ಲಿ ಕೃಷ್ಣಚಂದ್ರ ಮಿಶ್ರ ಇದಾರೆ, ಅಸಿಸ್ಟೆಂಟ್ ಸರ್ಜನ್ !"

"ಸರಿ ! ಅಂದರೆ ನೀನು ಆ ಶ್ರೀಕೃಷ್ಣಚಂದ್ರರ ಮಗನ ಚೌಲಕ್ಕೋ ಕಿವಿಚುಚ್ಚಿಗೋ ಹೋಗ್ತಿದಿ ಅನ್ನು !"

"ಉಹ್ಞೂ, ಪುಷ್ಯಮಾಸದಲ್ಲಿ ಈ ಶುಭಕಾರ್ಯಗಳೊಂದೂ ನಡೆಯೋಲ್ಲ," ಗಂಗಾಪ್ರಸಾದ ಹೇಳಿದ.

"ವಿಚಿತ್ರ ಸಂಕಟದಲ್ಲಿ ಸಿಕ್ಕಿಸಿದೆ ನೀನು ! ಒಳ್ಳೇದು, ಪುಷ್ಯಮಾಸದಲ್ಲಿ ಜನ ಸಾಯಬಹುದು ತಾನೇ. ಅವರ ತಂದೆ ತೀರಿಕೊಂಡಿದಾರೆ, ಶೋಕಸಮಾಧಾನ ಹೇಳೋಕ್ಕೆ ಹೋಗಿದಿ ಅಂದುಕೊ. ಇದರಲ್ಲಿ ಯಾರೂ ತಪ್ಪು ತೆಗೆಯೋ ಹಾಗಿಲ್ಲವಲ್ಲ !"

"ಹೋ, ಅವರ ತಂದೆ ಸತ್ತು ಮೂರು ವರ್ಷವಾಯಿತು."

"ಸರಿ ! ಅವರ ತಂದೆ ಸತ್ತು ವರ್ಷವಾಯಿತು, ವರ್ಷದ ತಿಥಿಗೆ ಹೋಗ್ತಿದೀನಿ ಅನ್ನು. ಇಪ್ಪತ್ತಾರನೆ ತಾರೀಕು ತಿಥಿ. ಇಪ್ಪತ್ತೇಳಕ್ಕೆ ಅವರು ಹೋಗೋಕ್ಕೆ ಬಿಡೋಲ್ಲ, ಬಹಳ ದಿನದ ಮೇಲೆ ಭೇಟಿಯಾಗ್ತಿರೋದರಿಂದ. ಅಲ್ಲಿ ಇಪ್ಪತ್ತೆಂಟಕ್ಕೆ ಬಿಟ್ಟು ಇಪ್ಪತ್ತೊಂಬತ್ತಕ್ಕೆ ಇಲ್ಲಿರಬಹುದು. ಪ್ರಯಾಣದಲ್ಲಿ ಸಹ ಒಂದೆರಡು ದಿನ ನಿಧಾನ ವಾಗಬಹುದು."

ಡಿಸೆಂಬರ್ ಇಪ್ಪತ್ತೈದರ ಬೆಳಗ್ಗೆ ಜ್ಞಾನಪ್ರಕಾಶ ಗಂಗಾಪ್ರಸಾದರಿಬ್ಬರೂ ಸ್ಟೇಷನ್ ತಲಪಿದರು. ಜ್ಞಾನಪ್ರಕಾಶ ಅಮೃತಸರಕ್ಕೆ ಎರಡು ಥರ್ಡ್ ಕ್ಲಾಸ್ ಟಿಕೆಟ್ ಕೊಂಡು ಕೊಂಡ. ಗಂಗಾಪ್ರಸಾದ ಆಶ್ಚರ್ಯದಿಂದ ಕೇಳಿದ, "ಏನು, ಥರ್ಡ್‌ಕ್ಲಾಸಿನಲ್ಲಿ ಹೋಗೋದೆ, ಚಿಕ್ಕಪ್ಪಣ್ಣ ? ಗುಂಪು ನೋಡು, ಹೇಗಿದೆ. ಜೊತೆಗೆ ದೂರದ ಪ್ರಯಾಣ ಬೇರೆ."

"ಹೌದು, ಮಗು ! ಥರ್ಡ್‌ಕ್ಲಾಸ್ ಟಿಕೆಟ್ ಯಾಕೆ ತೊಗೊಂಡೇ ಅಂದರೆ ಆರಾಮ ವಾಗಿ ಮಲಕ್ಕೊಂಡು ಹೋಗಬಹುದು. ಇಂಟರ್ ಕಿಕ್ಕಿರಿದು ತುಂಬಿರುತ್ತೆ. ಸೆಕಂಡ್ ಕ್ಲಾಸಿನಲ್ಲಿ ಜಾಗ ಸಿಗುತ್ತೆ ಅನ್ನೋ ನಂಬಿಕೆ ಇಲ್ಲ. ಮುಖಂಡರ ಗುಂಪಿಗೆ ಗುಂಪೇ ಅಮೃತಸರಕ್ಕೆ ಹೊರಟಿದೆ. ಫಸ್ಟ್ ಕ್ಲಾಸಂತೂ ನಮ್ಮ ಯೋಗ್ಯತೇಗೆ ಮೀರಿದ್ದು. ಅಲ್ಲದೆ, ಫಸ್ಟ್ ಕ್ಲಾಸಲ್ಲಿ ಹೋಗೋಣ, ಯಾವನಾದರೂ ಸಿಡುಕುಮೋರೆಯ ಇಂಗ್ಲಿಷ ರೋನು ನಮ್ಮ ಸಾಮಾನು ಕಿತ್ತು ಹೊರಗೆ ಹಾಕಲಿ, ಇಲ್ಲವೇ ನಮ್ಮನ್ನ ಹೊಡೀಲಿ !— ಈಗ ಅದಕ್ಕೆಲ್ಲಾ ಸಮಯವಲ್ಲ. ಥರ್ಡ್ ಕ್ಲಾಸಿನಲ್ಲಿ ಆರಾಮವಾಗಿ ಮಲಕ್ಕೊಂಡು ಹೋಗೋಣಂತೆ."

# ಆರು

ಛಿನಕಿಯ ಶವಸಂಸ್ಕಾರ ಮುಗಿಸಿ ಭೀಖೂ ತ್ರಿವೇಣಿಯಿಂದ ವಾಪಸು ಬಂದಾಗ ರಾತ್ರಿಯಾಗಿತ್ತು. ಛಿನಕಿಯ ಚಿತೆಗೆ ಬೆಂಕಿ ತಾಕಿದೊಡನೆಯೇ ಜ್ವಾಲಾಪ್ರಸಾದ ಮನೆಗೆ ಹಿಂದಿರುಗಿದ. ಆದರೆ ಭೀಖೂ ತನ್ನ ಜಾತಿಯ ಜನರೊಂದಿಗೆ ಕೊನೆಯುವರೆಗೂ ಇರಬೇಕಾಗಿ ಬಂತು. ಅವತ್ತು ಬೆಳಗಿನಿಂದಲೇ ಮಳೆ ಸುರಿಯುತ್ತಿತ್ತು. ನಡುನಡುವೆ ಜಡಿ ಮಳೆಯೂ ಹೊಡೆದಿತ್ತು. ಜ್ವಾಲಾಪ್ರಸಾದ ಅನ್ಯಮನಸ್ಕನಾಗಿ ಯಮುನಾ ಹಾಗೂ ಮಕ್ಕಳ ಜೊತೆ ಹೊರಗಿನ ವರಾಂಡದಲ್ಲಿ ಕೂತಿದ್ದ. ಮನೆಯಲ್ಲಿ ಶೋಕದ ವಾತಾವರಣ ಹರಡಿತ್ತು. ಭೀಖೂ ಬಂದವನೇ ಜ್ವಾಲಾಪ್ರಸಾದನಿಗೆ ಹೇಳಿದ, "ಇನ್ನೆಲ್ಲಾ ಮುಗೀತು. ನೀವು ಹೋಗಿ ಅಡಿಗೆ ಊಟದ ಏರ್ಪಾಡು ಮಾಡಿ. ಮಕ್ಕಳ ಕಡೆ ಗಮನ ಕೊಡಿ."

"ನೀನು ?" ಜ್ವಾಲಾಪ್ರಸಾದ ಕೇಳಿದ.

"ಇವತ್ತು ನನಗೆ ಉಪವಾಸ. ಹೋಗಿ ಹೊರಗಿನ ಕೋಣೇಲಿ ಮಲಕ್ಕೋತೀನಿ."

"ಹೊರಗಿನ ಕೋಣೇಲಿ ಎಲ್ಲಿ ಮಲಕ್ಕೊತಿ, ಭೀಖೂ? ಛಿನಕೀಚಾಚಿಯ ಕೋಣೇಲೇ ನೀನು ಮಲಕ್ಕೋಬೇಕು. ರಾತ್ರಿ ಅಲ್ಲಿ ದೀಪ ಹಚ್ಚಿಡಬೇಕು. ಛಿನಕಿ ಏನೇನು ಬಿಟ್ಟು ಹೋಗಿದಾಳೋ ಅದನ್ನೆಲ್ಲಾ ನೋಡಿ ನಿನ್ನ ವಶಕ್ಕೆ ತೊಗೊ. ನೀನು ಬಂದಾಗ ಅವಳಿಗೆ ಪ್ರಜ್ಞೆ ಇರಲಿಲ್ಲ. ಪ್ರಜ್ಞೆ ಇರೋ ತನಕ ನಿನ್ನನ್ನೇ ಜ್ಞಾಪಿಸಿಕೊಳ್ತಿದ್ದಳು. ತನ್ನ ದುಡ್ಡುಕಾಸನ್ನೆಲ್ಲಾ ನಿನಗೆ ಒಪ್ಪಿಸಿಕೊಡಬೇಕು ಅಂತ ಅಂದುಕೊಂಡಿದ್ದಳು."

"ಯಾವ ದುಡ್ಡುಕಾಸಣ್ಣ. ಇರೋದೇನಿದ್ದರೂ ನಿನ್ನದೇಯೇ. ನೀನೇ ಇಟ್ಟುಕೊ. ನನಗಂತೂ ಹಿಂದಿಲ್ಲ, ಮುಂದಿಲ್ಲ. ಗಂಗಾ ಒಬ್ಬ ಇದಾನೆ. ಅವನು ನಿನ್ನ ಮಗನೇಯೇ," ಭೀಖೂ ಹೇಳಿದ.

"ಇಲ್ಲ, ಭೀಖೂ, ನೀನಿರೋವರೆಗೆ ಆ ದುಡ್ಡುಕಾಸು ನಿನ್ನದು. ನನಗೆ ತಿಳಿದ ಮಟ್ಟಿಗೆ ಛಿನಕಿಚಾಚಿ ಹತ್ತಿರ ಸಾವಿರ ರೂಪಾಯಿನಷ್ಟು ನಗದು ಹಣ, ನಾನೂರು ರೂಪಾಯಿನಷ್ಟು ಒಡವೆ ಇತ್ತು. ಭೀಖೂಗೆ ಮದುವೆಯಾದರೆ ಎಲ್ಲಾನ್ನೂ ಸೊಸೇಗೆ ಒಪ್ಪಿಸೋದು ಅಂತ ಸದಾ ಹೇಳೋಳು. ಸಾಯೋ ಕ್ಷಣದವರೆಗೆ ಭೀಖೂಗೆ ಇನ್ನಾದರೂ ಮದುವೆಮಾಡಿಕೊ ಅಂತ ಹೇಳು ಅಂತಿದ್ದಳು."

ಭೀಖೂ ನಕ್ಕ, "ಇನ್ನು ಮದುವೆ ಆಗೋದು ಸಾವಿನ ಜೊತೇಗೇ, ಅಣ್ಣ. ವಯಸ್ಸು ಐವತ್ತರ ಮೇಲಾಯಿತು. ಇದುವರೆಗೆ ಇಲ್ಲದ ಮದುವೆ ಇನ್ನು ಆಗುತ್ತೆಯೆ ? ಮದುವೆಯೇ ಇಲ್ಲ ಅಂದಮೇಲೆ ಇನ್ನು ಮನೆಯೆಲ್ಲಿ, ಮಕ್ಕಳೆಲ್ಲಿ ? ಗಂಗನ ಜೊತೆ ಇದ್ದುಕೊಂಡು ಆಯುಷ್ಯ ಕಳೀತೀನಿ." ಕೊಂಚಹೊತ್ತು ಮೌನವಾಗಿದ್ದು ಭೀಖೂ ಮತ್ತೆ ಹೇಳಿದ, "ಅಣ್ಣ ತಪ್ಪು ತಿಳಕೊಳ್ಳದಿದ್ದರೆ ಒಂದು ಮಾತು ಹೇಳಲೆ ?"

"ಹ್ಞಾ ಹ್ಞಾ, ಹೇಳು, ತಪ್ಪುತಿಳಕೊಳ್ಳೋದು ಏನಿದೆ?"

"ನೀನು, ಅತ್ತಿಗೆ ಇಬ್ಬರೂ ಗಂಗನ ಜೊತೆಯೇ ಯಾಕೆ ಬಂದಿರಬಾರದು ಅಂತೀನಿ. ಗಂಗನ ಹೆಂಡತಿ ವರ್ಷದಲ್ಲಿ ಆರುತಿಂಗಳು ಇಲ್ಲಿ ನಿಮ್ಮ ಜೊತೆ ಅಲಹಾಬಾದಿನಲ್ಲಿ ಇರ್‍ತಾಳೆ. ಗಂಗನ್ನ ಒಂಟಿ ಇರೋಕ್ಕೆ ಬಿಡೋದು ಸರಿಯಲ್ಲ. ನೀವು ಬಂದು ಅವನ ಜೊತೆ ಇದ್ದರೆ ಅವನು ಸ್ವಲ್ಪ ಮರ್ಯಾದೇಲಿ ಇರ್‍ತಾನೆ."

ಈಚೀಚೆಗೆ ಜ್ವಾಲಾಪ್ರಸಾದನಿಗೆ ಮಗ ಗಂಗಾಪ್ರಸಾದನ ವಿಷಯದಲ್ಲಿ ಎಲ್ಲೂ ಒಳ್ಳೆಯ ಸುದ್ದಿ ಕೇಳಿಬರುತ್ತಿರಲಿಲ್ಲ. ಈಗ ಅವನ ನೈತಿಕ ದೌರ್ಬಲ್ಯಗಳ ಚರ್ಚೆ ಸ್ಥಳೀಯ ಆಫೀಸರುಗಳ ವರ್ತುಳದಿಂದ ಮೇಲೇರಿ ಪ್ರಾಂತೀಯ ಆಫೀಸರುಗಳ ಮಧ್ಯೆ ನಡೆಯ ತೊಡಗಿತ್ತು. ಜ್ವಾಲಾಪ್ರಸಾದ ಗಂಗಾಪ್ರಸಾದನಿಗೆ ಬುದ್ಧಿಹೇಳಲು ಎಷ್ಟೋ ಪ್ರಯತ್ನ ಪಟ್ಟಿದ್ದ. ಆದರೆ ಗಂಗಾಪ್ರಸಾದನ ಮೇಲೆ ಇದರಿಂದ ಯಾವ ಪ್ರಭಾವವೂ ಆಗಿರಲಿಲ್ಲ.

"ಭೀಖೂ ಹೇಳೋದು ಸರಿ!" ಯಮುನಾ ಹೇಳಿದಳು, "ನಾವು ನಮ್ಮ ಮಗ ನಿಂದ ಬೇರೆಯಾಗಿರೋದಕ್ಕೆ ಇಲ್ಲಿ ಅಲಹಾಬಾದಿನಲ್ಲಿ ಅಂಥಾದ್ದೇನು ಕೊಳ್ಳೆ ಹೋಗ್ತಿದೆ! ಈ ಮನೇನ ಬಾಡಿಗೆಗೆ ಕೊಟ್ಟುಬಿಡೋಣ. ತಿಂಗಳಿಗೆ ಐವತ್ತು ಅರವತ್ತು ರೂಪಾಯಿ ಸಂಪಾದನೆಯಾಗುತ್ತೆ. ಎರಡೆರಡು ಸಂಸಾರ ನಡಸೋ ಖರ್ಚೂ ಉಳಿಯುತ್ತೆ. ಬಂದು ಜೌನ್‌ಪುರದಲ್ಲೇ ಇರಿ ಅಂತ ಸೊಸೇನೂ ಎಷ್ಟೋ ಸಲ ಹೇಳಿದಾಳೆ. ದೊಡ್ಡ ಬಂಗಲೆ, ಒಬ್ಬಂಟಿಯಾಗಿ ಇರೋಕ್ಕೆ ಅವಳಿಗೆ ಮನಸ್ಸು ಬರೋಲ್ಲ. ಅವಳ ಮಾತನ್ನ ಒಂದೇ ಸಮನೆ ತಳ್ಳಿ ಹಾಕ್ತಾ ಬಂದಿದೀವಿ. ಅವಳು ಹೇಳೋದು ಸರಿ ಅಂತ ಈಗ ಅರ್ಥವಾಗ್ತಿದೆ."

"ಒಳ್ಳೇದು, ಯೋಚನೆ ಮಾಡ್ತೀನಿ," ಜ್ವಾಲಾಪ್ರಸಾದ ಉತ್ತರ ಕೊಟ್ಟ.

"ಇದರಲ್ಲಿ ಯೋಚನೆ ಮಾಡೋಕ್ಕೇನಿದೆ, ಅಣ್ಣ? ನೀವು ಜೌನ್‌ಪುರಕ್ಕೆ ಬಂದು ಇರಲೇಬೇಕು. ಹಾಗೆ ಮಾಡಿದರೇನೇಯೇ ಗಂಗನ ಉದ್ಧಾರ, ನಮ್ಮ ಮನೆತನದ ಉದ್ಧಾರ. ಗಂಗಾ ಹಿಂದುಮುಂದು ನೋಡದೆ ಹಣ ಉಡಾಯಿಸ್ತಿದಾನೆ. ಎರಡು ಮೂರು ಸಾವಿರ ರೂಪಾಯಿ ಸಾಲ ಆಗಿದೆ ಅಂತ ಕೇಳಿದೀನಿ!"

ಜ್ವಾಲಾಪ್ರಸಾದ ಗಾಬರಿಯಿಂದ ಬೆಚ್ಚಿದ, "ಏನಂದೆ? ಸಾಲ ಮಾಡಿದಾನೆಯೆ? ಸಾಲ ಹೇಗಾಯ್ತು?"

"ನಾನು ಇದನ್ನೆಲ್ಲಾ ನಿನಗೆ ಹೇಳಿದೆ ಅಂತ ಗಂಗನಿಗೆ ಹೇಳಬೇಡ. ಅವನಿಗೆ ತಿಳಿದರೆ ನನ್ನನ್ನ ಇರಗೊಡಿಸೋಲ್ಲ. ಏನು ಹೇಳಲಣ್ಣ, ಗಂಗನ ಕಂಡರೆ ಭಯವಾಗುತ್ತೆ. ಅವನು ಒಬ್ಬ ಸೂಳೇನ ಇಟ್ಟುಕೊಂಡಿದಾನೆ, ಅವಳ ಮೇಲಿನ ಖರ್ಚು; ದಿನಾ ಕುಡೀ ತಾನೆ, ಆ ಕುಡಿತದ ಖರ್ಚು. ನೀನೇ ಯೋಚಿಸು, ಸಾಲ ಆಗದೆ ಇನ್ನೇನು!"

ಜ್ವಾಲಾಪ್ರಸಾದ ಮೂಕನಂತಾದ, "ವಿಷಯ ಇಲ್ಲೀತನಕ ಹೋಯ್ತು!" ಮತ್ತೆ ಯಮುನಳ ಕಡೆ ತಿರುಗಿ, "ನಿನ್ನ ಸೊಸೆ ನಿನಗೆ ಇದೊಂದನ್ನೂ ಹೇಳಿರಲಿಲ್ಲವೆ?"

ಯಮುನಳ ಕಣ್ಣಲ್ಲಿ ನೀರು ತುಂಬಿತು, "ಬಾಯಿಬಿಟ್ಟು ಏನನ್ನೂ ಹೇಳೋಲ್ಲ. ಆದರೆ ಅವಳ ಮುಖದ ಗೆಲುವೇ ಮಾಯವಾಗಿದೆ. ಅವಳಿಗೆ ಜೌನ್‌ಪುರದಲ್ಲಿ ಇರೋಕ್ಕೆ ಯಾಕೆ ಇಷ್ಟವಿಲ್ಲ ಅಂತ ಈಗ ಅರ್ಥವಾಗ್ತಿದೆ!"

ಜ್ವಾಲಾಪ್ರಸಾದ ಥಟ್ಟನೆ ಮೈಕೊಡವಿಕೊಂಡವನಂತೆ ಹೇಳಿದ, "ಇಲ್ಲ, ಇಲ್ಲ. ನಾವು ಅಲ್ಲೇ ಹೋಗಿ ಇರಬೇಕು. ಜೌನ್‌ಪುರಕ್ಕೆ ಹೋಗಿದ್ದರೇನೇ ಇದನ್ನ ಸರಿ ಮಾಡೋಕ್ಕೆ ಆಗೋದು. ನಾಳೆ ಜ್ಞಾನಪ್ರಕಾಶನ ಜೊತೆ ಮಾತಾಡಿ ಅವನ ಸಲಹೆ ತೊಗೋತೀನಿ."

ಈಚೆಗೆ ಎರಡು ಮೂರುದಿನಗಳಿಂದ ಜ್ಞಾನಪ್ರಕಾಶ ತುಂಬ ಗಡಿಬಿಡಿಯಲ್ಲಿದ್ದ. ಕಲಕತ್ತೆಯ ಕಾಂಗ್ರೆಸ್ಸಿನ ತಯಾರಿ ಜೋರಾಗಿ ನಡೆದಿತ್ತು. ಮೊದಲ ಬಾರಿಗೆ ದೇಶದ ಚೇತನ ಒಂದು ಸಕ್ರಿಯ ಆಂಧೋಳನದ ಕಡೆಗೆ ತಿರುಗಿತ್ತು. ಜ್ಞಾನಪ್ರಕಾಶನೂ ಆ ಚೇತನದ ಒಂದು ಅಂಶವಾಗಿದ್ದ. ಇಷ್ಟು ಸ್ವಲ್ಪ ಸಮಯದಲ್ಲಿಯೇ ಗಾಂಧೀಜಿಯ ಅನುಯಾಯಿಗಳಲ್ಲಿ ಜ್ಞಾನಪ್ರಕಾಶನದೂ ಒಂದು ಪ್ರಮುಖ ಸ್ಥಾನವಾಗಿತ್ತು. ಜ್ವಾಲಾ ಪ್ರಸಾದ ಜ್ಞಾನಪ್ರಕಾಶನ ಮನೆ ತಲಪಿದಾಗ ಅವನು ಪಟ್ಟಣದ ಕೆಲವು ಪ್ರಮುಖ ಕಾಂಗ್ರೆಸ್ಸಿಗರೊಡನೆ ಚರ್ಚೆಮಾಡುತ್ತ ಕುಳಿತಿದ್ದ. ಜ್ಞಾನಪ್ರಕಾಶ ಹೇಳುತ್ತಿದ್ದ, "ಬ್ರಿಟಿಷ್ ಸಾಮ್ರಾಜ್ಯ ನಿಂತಿರೋದು ವಿದ್ಯಾವಂತ ಮಧ್ಯಮವರ್ಗದವರಾದ ನಮ್ಮ ಮೇಲೆ. ಜಮೀನ್ದಾರರ ವಿಷಯ ಅಂದರೆ ಅವರು ಯಾವಾಗಲೂ ರಾಜರ ಗುಲಾಮರಾಗಿದ್ದು ಕೊಂಡು, ಅವರ ನಿರಂಕುಶ ಪ್ರಭುತ್ವಕ್ಕೆ ಸಹಾಯಕರಾಗಿ, ಬಡ ಅವಿದ್ಯಾವಂತ ಜನತೆಯ ಮೇಲೆ ದಬ್ಬಾಳಿಕೆ ಮಾಡಿಕೊಂಡು ಬಂದಿದಾರೆ, ಅತ್ಯಾಚಾರ ನಡಸ್ತಿದಾರೆ. ಒಂದಂತೂ ಸ್ಪಷ್ಟ, ಈ ಜಮೀನ್ದಾರರು ಯಾವಾಗಲೂ ಬ್ರಿಟಿಷ್ ಪ್ರಭುತ್ವದ ಪಕ್ಷ ವಹಿಸೋರೇ."

ರಾಜಬಿಹಾರಿಗೆ ಜ್ಞಾನಪ್ರಕಾಶನ ಮಾತು ಹಿಡಿಸಲಿಲ್ಲ. ಅವನು ಸ್ವತಃ ಒಬ್ಬ ದೊಡ್ಡ ಜಮೀನುದಾರ. ಅವನು ಸಿಡಿದೆದ್ದು ಹೇಳಿದ, "ನೀವೇನು ಹೇಳ್ತೀರಿ. ೧೮೫೭ ರ ದಂಗೆ ರಾಜರು, ಜಮೀನುದಾರರು ಮಾಡಿದ ದಂಗೆ ಅಲ್ಲವೆ? ಇತಿಹಾಸಾನ ತಪ್ಪಾಗಿ ತೋರಿಸೋಕ್ಕೆ ಪ್ರಯತ್ನಿಸ್ತಿದೀರಿ."

ಜ್ಞಾನಪ್ರಕಾಶ ಶಾಂತವಾಗಿ ಉತ್ತರ ಕೊಟ್ಟ, "ರಾಜಬಿಹಾರಿಜಿ, ಐತಿಹಾಸಿಕ ಘಟನೆ ಗಳ ವಿಶ್ಲೇಷಣೇಲಿ ಸರಿ–ತಪ್ಪು ಆಗಬಹುದು; ಆದರೆ ಇತಿಹಾಸ ಮಾತ್ರ ಯಾವಾಗಲೂ ಸತ್ಯವೇ. ೧೮೫೭ ರ ಪಿತೂರಿ, ವಿದ್ರೋಹ, ಕ್ರಾಂತಿ—ಅದನ್ನ ಏನಂತ ಬೇಕಾದರೂ ಕರೀರಿ—ಅದಕ್ಕೆ ಏನು ಗತಿಯಾಯಿತು ಅಂತ ನಿಮಗೆ ಗೊತ್ತೇ ಇದೆ. ಜನತೆ ಅದರಲ್ಲಿ ಯಾವ ಆಸಕ್ತೀನೂ ವಹಿಸಲಿಲ್ಲ; ಅದು ಅಸಫಲವಾಯಿತು. ಅಲ್ಲದೇ ೧೮೫೭ ರ ತಕ್ಕಡೀಲಿ ವರ್ತಮಾನ ಕಾಲಾನ ಅಳೆಯಬಾರದು. ಇತಿಹಾಸದ ಪುಟಗಳಿಂದ ನಮಗೆ ಪಾಠ ಸಿಗುತ್ತೆ ಅಂತ ತಿಳಿಯೋದು ದೊಡ್ಡ ಭ್ರಮೆ. ಇತಿಹಾಸ ಸತ್ತುಹೋಗಿದೆ. ಒಂದೊಂದು ಕ್ಷಣಕ್ಕೂ ಪರಿಸ್ಥಿತಿ ಬದಲಾಗ್ತಾ ಇರುತ್ತೆ; ಮೌಲ್ಯಗಳು ಬದಲಾಗ್ತಾ

ಇರುತ್ತವೆ. ಇದೆಲ್ಲಕ್ಕಿಂತ ಮುಖ್ಯವಾದದ್ದು ಅಂದರೆ ಮನುಷ್ಯನ ಚೇತನ ವಿಕಾಸವಾಗ್ತಾ ಇರುತ್ತೆ."

ಜ್ಞಾನಪ್ರಕಾಶನ ಈ ತತ್ವದಿಂದ ಜಯನಾಥ ಪಾಂಡೆಗೆ ಬೇಸರ ಬಂದಿತು. ಅವನಂದ "ಇರಲಿ, ಈ ಸಿದ್ಧಾಂತ–ಗಿದ್ಧಾಂತದ ರಗಳೆಯೆಲ್ಲಾ ಬಿಡಿ. ಮುಖ್ಯವಾದ ಮಾತಿಗೆ ಬನ್ನಿ! ವಕೀಲಿ ಬಿಡಬೇಕು, ಸ್ಕೂಲೂಕಾಲೇಜು ಬಿಡಬೇಕು, ಕೌನ್ಸಿಲ್ಲಿಗೆ ಬಹಿಷ್ಕಾರ ಹಾಕಬೇಕು, ಬಿರುದು, ಪದವಿಗಳನ್ನ ತ್ಯಜಿಸಬೇಕು—ಇವೆಲ್ಲದರಿಂದ ಸ್ವರಾಜ್ಯ ಸಿಗುತ್ತೆ ಅಂತ ನೀವು ಪ್ರಾಮಾಣಿಕವಾಗಿ ನಂಬ್ತೀರಾ?"

ಜ್ಞಾನಪ್ರಕಾಶ ಉತ್ತರಕೊಟ್ಟ, "ಇದನ್ನೆಲ್ಲಾ ನಾವು ಸರಿಯಾಗಿ ಮಾಡಿದ್ದಾದರೆ ಸಿಗಬಹುದು. ನೀವೇ ಯೋಚಿಸಿ. ಕೇವಲ ಎರಡು ಲಕ್ಷ ಜನ ಇಂಗ್ಲೀಷಿನೋರು ಮೂವತ್ತುಮೂರು ಕೋಟಿ ಭಾರತೀಯರ ಮೇಲೆ ಅಧಿಕಾರ ಮಾಡ್ತಾ ಇದಾರೆ. ಅವರಲ್ಲಿ ಒಂದೂಕಾಲು, ಒಂದೂವರೆ ಲಕ್ಷದಷ್ಟು ಇಂಗ್ಲೀಷಿನೋರು ಫೌಜಿನಲ್ಲಿದಾರೆ; ಉಳಿದ ಐವತ್ತು ಸಾವಿರ ಜನರಷ್ಟೇ ಹಿಂದೂಸ್ತಾನದ ರಾಜ್ಯಾಡಳಿತ ನೋಡಿಕೋತಿದಾರೆ. ಇದು ಹೇಗೆ ಸಾಧ್ಯ ಅನ್ನೋದು ನಮ್ಮ ಮುಂದಿರೋ ಮಹತ್ವದ ಪ್ರಶ್ನೆ. ಇದು ಸಾಧ್ಯವಾಗಿರೋದು ಹೇಗೆ ಅಂದರೆ ಇಂಗ್ಲಿಷ್ ಶಿಕ್ಷಣ ಪಡೆದ ಹತ್ತಿಪ್ಪತ್ತು ಲಕ್ಷ ಜನ ಭಾರತೀಯರು ಬ್ರಿಟಿಷ್ ಸರಕಾರದ ನೌಕರಿ ಮಾಡಿಕೊಂಡು ಇಡೀ ದೇಶದ ಜನರನ್ನ ಅವರ ಗುಲಾಮರನ್ನಾಗಿ ಇಟ್ಟಿರೋದರಲ್ಲಿ ಸಹಾಯ ಮಾಡ್ತಿದಾರೆ. ಇವರು ಬ್ರಿಟಿಷ ರಿಗೆ ಸಹಕಾರ ಕೊಡೋದನ್ನ ನಿಲ್ಲಿಸಿದರೆ ಅವರು ಹಿಂದೂಸ್ತಾನದ ಮೇಲೆ ಅಧಿಕಾರ ನಡಸೋದು ಸಾಧ್ಯವಾಗೋಲ್ಲ; ಅಷ್ಟೇ ಅಲ್ಲ; ಅವರು ಹಿಂದೂಸ್ತಾನದಲ್ಲಿರೋದಕ್ಕೂ ಸಾಧ್ಯವಾಗೋಲ್ಲ."

ರಾಜಬಿಹಾರಿ ಸಿಟ್ಟಿನಿಂದ ಹೇಳಿದ, "ಸರಕಾರೀ ನೌಕರಿ ಮಾಡ್ತಿರೋ ಭಾರತೀಯ ರೆಲ್ಲಾ ನೌಕರಿ ಬಿಟ್ಟುಬಿಟ್ಟರೆ ಸ್ವರಾಜ್ಯ ಸಿಕ್ಕಿಬಿಡುತ್ತೆಯೇ ಅನ್ನೋದು ಪ್ರಶ್ನೆ. ಸರಕಾರೀ ನೌಕರರು ಮಜಾ ಹೊಡೀತಾರೆ, ದೊಡ್ಡ ದೊಡ್ಡ ಸಂಬಳ ತೊಗೋತಾರೆ. ಅವರು ಈ ಸ್ವಾತಂತ್ರ್ಯ ಆಂಧೋಳನದಲ್ಲಿ ಸಹಕಾರ ಕೊಡೋರಲ್ಲ. ಇನ್ನು ಉಳಿದವರು ಅಂದರೆ ವಕೀಲರು, ಮೇಷ್ಟರು, ವಿದ್ಯಾರ್ಥಿಗಳು! ವಕೀಲರು ವಕೀಲವೃತ್ತಿ ಬಿಡ ಬೇಕು, ವಿದ್ಯಾರ್ಥಿಗಳು ಓದೋದು ಬಿಟ್ಟು ಅವಿದ್ಯಾವಂತರಾಗಬೇಕು! ಒಳ್ಳೇದು ಜ್ಞಾನಪ್ರಕಾಶ್‌ಜೀ, ನೀವು ನಿಮ್ಮ ವಕೀಲವೃತ್ತಿ ಬಿಡೋಕ್ಕೆ ತಯಾರುಮಾಡಿಕೊಳ್ಳಿ!"

ಲಾಲಾ ಶೀತಲಪ್ರಸಾದ ನಕ್ಕ, "ವಕೀಲಿ ಬಿಡೋದಕ್ಕೆ ಇವರು ಷುರು ಮಾಡಿದಾ ರೆಲ್ಲಿ! ಅದೇನೇ ಇರಲಿ, ನಾವೆಲ್ಲರೂ ಗಾಂಧೀಜಿಯ ಪಕ್ಷ ವಹಿಸಬೇಕು ಅಂತ ನಾನು ಅಂತೀನಿ. ಈ ಅಸಹಕಾರ ಚಳವಳಿ ಒಂದು ಸಲ ಷುರುವಾದರೆ ಬ್ರಿಟಿಷ್ ಸರಕಾರ ಒಪ್ಪಂದ ಮಾಡಿಕೊಳ್ಳುತ್ತೆ ಅಂತ ನನಗೆ ಪೂರ್ಣ ವಿಶ್ವಾಸವಿದೆ. ಜ್ಞಾನಪ್ರಕಾಶರ ಈ ಮಾತು ಸರಿ ಅಂತ ತೋರುತ್ತೆ. ಅಸಹಕಾರ ಚಳವಳಿ ಪೂರ್ತಿಯಾಗಿ ಯಶಸ್ವಿ

ಯಾದರೆ ಈ ಎರಡು ಲಕ್ಷ ಜನ ಬ್ರಿಟಿಷರು ಮಾರನೇ ದಿನವೇ ಜಹಜು ಹತ್ತಿ ಹೊರಡ್ತಾರೆ."

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು. ಆಮೇಲೆ ಜ್ಞಾನಪ್ರಕಾಶ ಹೇಳಿದ, "ಅಸಹಕಾರ ಒಂದು ರೀತೀಲಿ ಷುರುವಾಗಿ ಬಿಟ್ಟಿದೆ. ಈ ಅಸಹಕಾರ ಚಳವಳಿಗೆ ಖಿಲಾಫತ್ ಚಳವಳಿಯಿಂದ ತುಂಬಾ ಪುಷ್ಟಿ ದೊರೆತಿದೆ. ದೇಶದ ಮುಸಲಮಾನರಲ್ಲಿ ಈ ಹೊತ್ತು ಬ್ರಿಟಿಷರ ವಿರುದ್ಧ ತೀವ್ರವಾದ ಭಾವನೆ ಹುಟ್ಟಿಕೊಂಡಿದೆ. ಮದರಾಸಿನಲ್ಲಿ ನಡೆದ ಖಿಲಾಫತ್ ಪರಿಷತ್ತಿನಲ್ಲಿ ದೇಶದ ಮುಸಲಮಾನರೆಲ್ಲಾ ಅಸಹಕಾರ ಚಳ ವಳಿಯ ಸಿದ್ಧಾಂತವನ್ನ ಒಪ್ಪಿಕೊಂಡಿದಾರೆ. ಮುಸಲಮಾನರು ಮೂಲತಃ ಈ ದೇಶದ ನಿವಾಸಿಗಳು; ಇದನ್ನ ಅವರೂ ಬಲ್ಲರು. ಇದೇ ತಾನೇ ಸುದ್ದಿ ಬಂದಿದೆ: ಬ್ರಿಟಿಷ್ ಆಡಳಿತಾನ ವಿರೋಧಿಸಿ ಹಿಂದುಸ್ತಾನ ಬಿಟ್ಟು ಆಫ್‌ಗಾನಿಸ್ತಾನದಲ್ಲಿ ನೆಲ ಸೋಕ್ಕೆ ಹೊರಟಿದ್ದ ಸಾವಿರಾರು ಮುಸಲಮಾನರಿಗೆ ಆಫ್‌ಗಾನಿಸ್ತಾನದ ಸರಕಾರ ಗಡಿಯೊಳಗೆ ಬರೋಕ್ಕೆ ಸಹ ಅವಕಾಶ ಕೊಡಲಿಲ್ಲವಂತೆ. ಅಸಹಕಾರ ಷುರು ಮಾಡೋಕ್ಕೆ ಇದಕ್ಕಿಂತ ಒಳ್ಳೇ ಅವಕಾಶ ಬೇಕೆ, ನೀವೇ ಯೋಚಿಸಿ! ಬಹಳ ಕಷ್ಟ ದಿಂದ ಈಗ ಹಿಂದೂ-ಮುಸಲಮಾನರ ಒಗ್ಗಟ್ಟು ಸಾಧ್ಯವಾಗಿದೆ. ನಾವು ಈ ಸದವ ಕಾಶದ ಲಾಭ ಪಡೀಬೇಕು, ಹಿಂದೂ-ಮುಸಲಮಾನರ ಒಗ್ಗಟ್ಟನ್ನ ಬುಡದಿಂದ ಗಟ್ಟಿ ಮಾಡಬೇಕು."

"ಹೌದು, ಈಗ ಒಗ್ಗಟ್ಟಿದೆ ಅನ್ನೋದು ನಿಜ. ಆದರೆ ಅದು ಕೇವಲ ಬ್ರಿಟಿಷ ರನ್ನ ವಿರೋಧಿಸೋಕ್ಕೆ ಎಷ್ಟೋ ಅಷ್ಟೇ. ಅದರಾಚೆ ಯಾವ ಒಗ್ಗಟ್ಟೂ ನನಗೆ ಕಂಡು ಬಂದಿಲ್ಲ," ರಾಜಬಿಹಾರಿ ಹೇಳಿದ. "ಮುಸಲಮಾನರು ನಿಮ್ಮ ಪಕ್ಷದಲ್ಲಿರೋದಕ್ಕೆ ಕಾರಣ ಅಂದರೆ ತುರ್ಕಿಯ ವಿಷಯದಲ್ಲಿ ಬ್ರಿಟಿಷರು ಕೊಟ್ಟ ಮಾತನ್ನು ಮುರಿ ದದ್ದು."

ರಾಜಬಿಹಾರಿಯ ಈ ವ್ಯಂಗ್ಯವನ್ನು ಕೇಳಿ ಜ್ಞಾನಪ್ರಕಾಶ ನಗತೊಡಗಿದ.

"ರಾಜಬಿಹಾರಿಜೀ, ಕಾರಣದ ಕಡೆ ಗಮನ ಕೊಡಬೇಡಿ. ಕಾರಣ ಅನ್ನೋದು ಯಾವಾಗಲೂ ಕಳೆದುಹೋದ ಮಾತು. ಈ ಹೊತ್ತು ಸತ್ಯ ಏನಪ್ಪಾ ಅಂದರೆ ಹಿಂದೂ-ಮುಸಲಮಾನರು ಬ್ರಿಟಿಷರ ವಿರುದ್ಧ ಒಗ್ಗಟ್ಟಾಗಿದಾರೆ. ಅವರವರ ವಿರೋಧಕ್ಕೆ ಕಾರಣ ಬೇರೆಬೇರೆಯೇ ಇರಬಹುದು. ಆದರೆ ಈ ವಿರೋಧ, ಅಸಂತೋಷಗಳಿಂದ ಹುಟ್ಟಿದ ವಿದ್ರೋಹ, ಕ್ರಾಂತಿಗಳೇ ಹಿಂದೂ-ಮುಸಲಮಾನರ ನಡುವಿನ ಭೇದಭಾವಾನ ಒಟ್ಟಿಗೆ ಒಂದೇ ಸಲಕ್ಕೆ ಅಳಿಸಿಹಾಕಿಬಿಡುತ್ತೆ. ನಾವೆಲ್ಲರೂ ಒಕ್ಕೊರಲಿನಿಂದ ಗಾಂಧೀಜಿಗೆ ಬೆಂಬಲ ಕೊಡಬೇಕು."

ರಾಜಬಿಹಾರಿ ನಗಲಾರಂಭಿಸಿದ, "ನಾವು ಕಣ್ಣುಮುಚ್ಚಿಕೊಂಡು ಗಾಂಧೀಜಿಗೆ ಬೆಂಬಲ ಕೊಡ್ತೀವಿ. ನೀವು ನಂಬಿ, ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ನನ್ನ ಮತ ಗಾಂಧೀಜಿಯ

ನಿಲುವಳಿಯ ಪರವಾಗಿರುತ್ತೆ. ಪ್ರತಿಯೊಬ್ಬರೂ ಗಾಂಧೀಜೀನ ಹಿಂಬಾಲಿಸ್ತಾರೆ ಅಂತ ನಾನಂದುಕೊಂಡಿದೀನಿ."

ಅಲ್ಲಿದ್ದವರೆಲ್ಲರೂ ಒಂದಾಗಿ ಗಾಂಧೀಜಿಯ ಪರ ತಮ್ಮ ಭಕ್ತಿಪ್ರದರ್ಶನ ಮಾಡಿದರು.

ಅವರೆಲ್ಲರೂ ಹೋದ ಮೇಲೆ ಜ್ಞಾನಪ್ರಕಾಶ ಜ್ವಾಲಾಪ್ರಸಾದನನ್ನು ಕೇಳಿದ, "ಯಾಕಣ್ಣ, ಏನೋ ತುಂಬಾ ಚಿಂತೇಲಿರೋ ಹಾಗಿದೆಯಲ್ಲ?"

ಜ್ವಾಲಾಪ್ರಸಾದ ನಿಟ್ಟುಸಿರು ಬಿಡುತ್ತ ಹೇಳಿದ, "ಜ್ಞಾನೂ, ಗಂಗಾ ಕೈಬಿಟ್ಟು ಹೋಗ್ತಿದಾನೆ. ಅವನನ್ನ ಹೇಗೆ ಉಳಿಸೋದು ಅಂತ ನಿನ್ನ ಜೊತೆ ಆಲೋಚನೆ ಮಾಡೋಕ್ಕೆ ಬಂದಿದೀನಿ." ಹೀಗಂದು ಜ್ವಾಲಾಪ್ರಸಾದ ಇದ್ದ ಸ್ಥಿತಿಯನ್ನು ಜ್ಞಾನ ಪ್ರಕಾಶನಿಗೆ ತಿಳಿಸಿದ.

ಜ್ವಾಲಾಪ್ರಸಾದ ಹೇಳಿದ್ದನ್ನು ಕೇಳಿ ಜ್ಞಾನಪ್ರಕಾಶನ ಮುಖದ ಮೇಲೆಯೂ ಚಿಂತೆಯ ಮಬ್ಬುಗೆರೆ ಮೂಡಿತು. "ಹಾಗಾದರೆ ಈ ಭಯ ನಿನಗೂ ಇತ್ತು ಅನ್ನು! ಅಧಿಕಾರ ಐಶ್ವರ್ಯಗಳಿಗೆ ಒಂದು ಶಾಪ ಅಂಟಿಕೊಂಡಿರುತ್ತೆ. ಅದೇನೂ ಅಂದರೆ ಮನುಷ್ಯ ಅವುಗಳ ಮದದಲ್ಲಿ ತನ್ನ ಸಂಯಮ ವಿವೇಕಗಳನ್ನ ಕಳಕೋತಾನೆ, ನೀತಿಗೆಡ್ತಾನೆ. ಹಾಗಾದರೆ ಈಗ ಏನು ಮಾಡಬೇಕು ಅಂತ ಯೋಚಿಸಿದಿ?"

"ನನಗೊಂದೂ ಹೊಳೀತಿಲ್ಲ, ಜ್ಞಾನೂ! ನಾವೆಲ್ಲರೂ ಹೋಗಿ ಜೌನ್‌ಪುರದಲ್ಲಿ ಗಂಗನ ಜೊತೆ ಇರಬೇಕು ಅಂತ ಭೀಖೂ ಹೇಳ್ತಾನೆ. ನಿಮ್ಮ ಅತ್ತಿಗೇಗೂ ಭೀಖೂ ಸಲಹೆ ಹಿಡಿಸಿದೆ. ಜೌನ್‌ಪುರಕ್ಕೆ ಹೋಗಿರೋಕ್ಕೆ ನನಗೆ ಅದೇಕೆ ಮನಸ್ಸು ಒಪ್ಪೋಲ್ಲವೋ ಕಾಣೆ. ಗಂಗ ಯಾವಾಗಲೂ ಉಪಚಾರಕ್ಕೆ ಸಹ ನಮಗೆ ಜೌನ್‌ಪುರಕ್ಕೆ ಬಂದಿರಿ ಅಂತ ಅಂದಿಲ್ಲ. ಅವನು ನಮ್ಮಿಂದ ದೂರ ಇರೋಕ್ಕೆ ಇಷ್ಟಪಡ್ತಾನೆ ಅಂತ ಈಗ ತೋರ್ತಿದೆ."

ಜ್ಞಾನಪ್ರಕಾಶ ಸ್ವಲ್ಪ ಯೋಚಿಸಿ ಹೇಳಿದ, "ಅಣ್ಣಾ, ನೀನು ಮನೆಯ ಯಜಮಾನ. ಗಂಗಾಪ್ರಸಾದನ ತಂದೆ ನೀನು. ನೀನಾಗಿಯೇ ಆಸಕ್ತಿ ವಹಿಸಿ ಹೆಜ್ಜೆ ಮುಂದಿಡಬೇಕು. ಗಂಗಾಪ್ರಸಾದ ಕರೀಲಿ ಅಂತ ನೀನು ಯಾಕೆ ನಿರೀಕ್ಷೆ ಮಾಡ್ತಿದಿ ಅಂತ ನನಗೆ ಗೊತ್ತಾಗೋಲ್ಲ!"

"ನನ್ನ ಬಗ್ಗೆ ಅವನೀಗ ಇಟ್ಟುಕೊಂಡಿರೋ ಭಾವನೆ, ಮರ್ಯಾದೆ ಕೆಡದೆ ಹಾಗೇ ಖಾಯಂ ಆಗಿರಲಿ ಅಂತ. ಅಲ್ಲಿ ಹೋಗಿ ಅವನ ಜೊತೆ ಘರ್ಷಣೆ ಷುರುವಾದರೆ ನನ್ನ ಬಗ್ಗೆ ಅವನಿಗಿರೋ ಭಾವನೆ, ಮರ್ಯಾದೆಗಳನ್ನ ಕಳಕೋತೀನಿ. ಅವನ್ನ ಕಳ ಕೊಳ್ಳೋದು ಅಂದರೆ ಮಗನನ್ನೇ ಕಳಕೊಂಡೆ ಅಂತ ಅರ್ಥ." ಜ್ವಾಲಾಪ್ರಸಾದ ಬಹು ಖಿನ್ನನಾಗಿ ಹೇಳಿದ.

"ಆದರೆ ಹೀಗಿದ್ದು, ಅವನಿಗೆ ಆಸರೆ ಅವಲಂಬನೆಗಳಿಲ್ಲದ ಹಾಗೆ ಮಾಡಿ ಅವನನ್ನ ಉಳಿಸಿಕೊಳ್ಳೋದು ಸಾಧ್ಯವೆ, ಅಣ್ಣಾ? ನಿನ್ನ ಮುಂದಿರೋದು ಅವನನ್ನ ಉಳಿಸೋ

ಪ್ರಶ್ನೆ, ಸಾವು ಬದುಕಿನ ಪ್ರಶ್ನೆ. ಅವನು ಎಷ್ಟು ಕೆಡೋಕ್ಕೆ ಸಾಧ್ಯವೋ ಅಷ್ಟು ಕೆಟ್ಟಿದಾನೆ. ನೀನು ಹೋಗಿ ಅಲ್ಲಿರೋದರಿಂದ ಸ್ಥಿತಿ ಖಂಡಿತ ಸುಧಾರಿಸುತ್ತೆ. ನಾನು ಎರಡು ಮೂರು ದಿನದಲ್ಲಿ ಕಲಕತ್ತೆಗೆ ಹೋಗ್ತಿದೀನಿ. ಇವತ್ತು ಆಗಸ್ಟ್ ಹತ್ತೊಂಬತ್ತು. ಸೆಪ್ಟೆಂಬರ್ ನಾಲ್ಕರಿಂದ ಅಲ್ಲಿ ಕಾಂಗ್ರೆಸ್ಸಿನ ಒಂದು ಮಹತ್ವದ ಅಧಿವೇಶನ ನಡೆಯೋದಿದೆ. ನಾವು ಇಷ್ಟು ಹೊತ್ತು ಚರ್ಚೆ ಮಾಡ್ತಾ ಇದ್ದದ್ದು ಆ ಸಂಬಂಧವಾಗಿಯೇ. ಸೆಪ್ಟೆಂಬರ್ ಹತ್ತು ಇಲ್ಲವೇ ಹನ್ನೊಂದಕ್ಕೆ ನಾನು ಕಲಕತ್ತೆಯಿಂದ ನೇರವಾಗಿ ಜೌನ್‌ಪುರಕ್ಕೆ ಬರ್ತೀನಿ. ನೀನು ಒಂದು ವಾರದೊಳಗೆ ಸಂಸಾರಾನೂ ಕರಕೊಂಡು ಅಲ್ಲೀಗೆ ಹೊರಟುಬಿಡು."

"ಆಮೇಲೆ ಇಲ್ಲಿ? ಈ ಅಲಹಾಬಾದಿನ ಬಂಗಲೆ... ಇದರ ಗತಿ?"

"ಬಂಗಲೇನ ಯಾರಿಗಾದರೂ ಬಾಡಿಗೆಗೆ ಕೊಡು. ನನ್ನ ಸ್ನೇಹಿತರು, ಮನ ಮೋಹನ ಬ್ಯಾನರ್ಜಿ, ಒಂದು ಮನೆ ಹುಡುಕ್ತಿದಾರೆ. ಎಪ್ಪತ್ತು ಎಂಬತ್ತು ರೂಪಾಯಿ ನಲ್ಲಿ ಅವರಿಗೊಂದು ಬಂಗಲೆ ಬೇಕಾಗಿದೆ. ನೀನು ಹ್ಞೂ ಅಂದರೆ ಅವರ ಜೊತೆ ಮಾತಾಡ್ತೀನಿ."

ಕುಗ್ಗಿದ ಧ್ವನಿಯಲ್ಲಿ ಜ್ವಾಲಾಪ್ರಸಾದ ಹೇಳಿದ, "ಇಲ್ಲ, ಬಾಡಿಗೆಗೆ ಕೊಡೋಕ್ಕೆ ಅಂತ ನಾನು ಮನೆ ಕಟ್ಟಲಿಲ್ಲ. ನೀನೇ ಯಾಕೆ ಈ ಬಂಗಲೇಲಿ ಬಂದಿರಬಾರದು? ನಿನ್ನ ಸ್ವಂತ ಮನೆ ಕಟ್ಟಿ ಮುಗಿಸೋಕ್ಕೆ ಇನ್ನೂ ಒಂದು ವರ್ಷವಾದರೂ ಹಿಡಿಯುತ್ತೆ. ಅಲ್ಲೀವರೆಗೆ ನೀನು ನಮ್ಮ ಬಂಗಲೇಲಿ ಬಂದಿರು. ಈಗಿರೋ ಬಂಗಲೇನ ಮನಮೋಹನ ಬ್ಯಾನರ್ಜಿಗೆ ಕೊಟ್ಟುಬಿಡು."

ಜ್ವಾಲಾಪ್ರಸಾದ ಮನೆಗೆ ಹಿಂದಿರುಗುವಾಗ ಅವನಿಗೆ ತಾನು ಬಲಾತ್ಕಾರದಿಂದ ಕಾಲೆಳೆದುಕೊಂಡು ಹೋಗುತ್ತಿದ್ದೇನೆಯೋ ಎಂದು ತೋರಿತು. ಈಗ ನಡೆದಿರುವು ದೆಲ್ಲವೂ ಏನು, ಯಾಕೆ, ಹೇಗೆ ಎಂಬುದೊಂದೂ ಅವನಿಗೆ ತಿಳಿಯದಂತಾಗಿತ್ತು. ಮನೆಯಲ್ಲಿ ಎಲ್ಲೆಲ್ಲೂ ಒಂದು ಬಗೆಯ ವಿಚಿತ್ರವಾದ ಖಿನ್ನತೆಯ ವಾತಾವರಣ ಕವಿದಿತ್ತು. ಜ್ವಾಲಾಪ್ರಸಾದ ಮನೆಗೆ ಬಂದವನೇ ಗಂಗಾಪ್ರಸಾದನಿಗೆ ತಾನು ಸಂಸಾರಸಮೇತ ಜೌನ್‌ಪುರಕ್ಕೆ ಬರಲಿರುವ ಇಚ್ಛೆ ತಿಳಿಸಿ ಕಾಗದ ಬರೆದ.

ಕಾಗದ ಬರೆದ ನಾಲ್ಕನೆಯ ದಿನಕ್ಕೇ ಗಂಗಾಪ್ರಸಾದನ ಉತ್ತರ ಬಂತು. ಗಂಗಾ ಪ್ರಸಾದ ತಂದೆಯ ವಿಚಾರವನ್ನು ಸ್ವಾಗತಿಸಿದ್ದ. ಜೊತೆಗೇ ಸದ್ಯದಲ್ಲಿ ತನಗೆ ಬೇರೆಲ್ಲಿ ಗಾದರೂ ವರ್ಗವಾಗುವ ಸಂಭವವಿದೆಯೆಂದೂ ಸೂಚಿಸಿದ್ದ. ಅವನ ಮಾತಿನಲ್ಲಿ ಜ್ವಾಲಾಪ್ರಸಾದನಿಗೆ ಯಾವ ಬಗೆಯ ಒತ್ತಾಯವೂ ಕಂಡುಬರಲಿಲ್ಲ. ಆದರೂ ಒಂದು ವಾರ ಬಿಟ್ಟು ಯಮುನಾ, ರುಕ್ಮಿಣಿ ಹಾಗೂ ಗಂಗಾಪ್ರಸಾದನ ಇಬ್ಬರು ಮಕ್ಕ ಳನ್ನೂ ಕರೆದುಕೊಂಡು ಜ್ವಾಲಾಪ್ರಸಾದ ಜೌನ್‌ಪುರಕ್ಕೆ ಹೊರಟ. ಭೀಖೂ ಮೂರು ದಿನ ಮೊದಲೇ ಅಲ್ಲಿಗೆ ಹೋಗಿದ್ದ.

ಜ್ವಾಲಾಪ್ರಸಾದ ಹಾಗೂ ಇಡೀ ಸಂಸಾರ ಜೌನ್‌ಪುರಕ್ಕೆ ಬಂದಮೇಲೆ ಗಂಗಾಪ್ರಸಾದನ ಜೀವನ ಒಂದು ವ್ಯವಸ್ಥೆಗೆ ಬಂದಿತು. ಈಗ ಅವನ ಹೆಚ್ಚಿನ ಸಮಯ ಮನೆಯಲ್ಲೇ ಕಳೆಯುತ್ತಿತ್ತು. ಮದ್ಯದ ಬಗ್ಗೆ ಹೇಳುವುದಾದರೆ ಈಗ ಅವನು ಎಲ್ಲೋ ಒಮ್ಮೊಮ್ಮೆ ಸ್ನೇಹಿತರು ಬಂದಾಗ ಅವರ ಜೊತೆ ಕುಡಿಯುತ್ತಿದ್ದ. ಜ್ವಾಲಾಪ್ರಸಾದನಿಗೆ ಗಂಗಾ ಪ್ರಸಾದನ ಜೀವನಗತಿಯನ್ನು ಕಂಡು ಒಂದು ಬಗೆಯ ಸಂತೋಷವಾಯಿತು. ಅವನಿಗೆ ತಾನು ಜೌನ್‌ಪುರಕ್ಕೆ ಬಂದದ್ದು ಒಳ್ಳೆಯದಾಯಿತು ಎಂದು ಅನ್ನಿಸಿತು. ರುಕ್ಮಿಣಿಯ ಮುಖದ ಮೇಲೂ ಸಂತೋಷ ಮೂಡಿತು. ಮನೆಯಲ್ಲಿ ಸುಖಸಂತೋಷದ ವಾತಾ ವರಣ ಕಾಣಿಸಿಕೊಂಡಿತು. ಆದರೆ ಗಂಗಾಪ್ರಸಾದನ ಮುಖದ ಮೇಲೆ ಮಾತ್ರ ಒಂದು ವಿಚಿತ್ರವಾದ ಬಿಗಿತ ಕಾಣುತ್ತಿತ್ತು. ಅವನ ಬುದ್ಧಿ ಮನಸ್ಸುಗಳ ಮೇಲೆ ಯಾವದೋ ದೊಡ್ಡ ಹೊರೆ ಬಿದ್ದಿದೆಯೇನೋ ಎನ್ನುವಂತಿತ್ತು ಆ ಮುಖ. ಗಂಗಾಪ್ರಸಾದನ ಆ ಗಂಭೀರ ಮುಖಮುದ್ರೆಯನ್ನು ಕಂಡು ಜ್ವಾಲಾಪ್ರಸಾದನಿಗೂ ಆಶ್ಚರ್ಯವಾಗದೆ ಇರಲಿಲ್ಲ. ಆದರೆ ಆ ಸಂಬಂಧವಾಗಿ ಗಂಗಾಪ್ರಸಾದನೊಡನೆ ಏನನ್ನು ಮಾತನಾಡು ವುದೂ ಅವನಿಗೆ ಉಚಿತ ಕಾಣಲಿಲ್ಲ. ಈ ಬಿಗಿತ ಸ್ಥಿರವಲ್ಲ, ಅದು ಬರುಬರುತ್ತ ದೂರವಾಗುತ್ತದೆಂದು ಅವನಿಗೆ ಗೊತ್ತಿತ್ತು.

ಅವತ್ತು ಭಾನುವಾರ. ಯಾರೋ ಸ್ನೇಹಿತರನ್ನು ನೋಡಿಬರಲು ಗಂಗಾಪ್ರಸಾದ ಶನಿವಾರ ಸಂಜೆಯೇ ಬನಾರಸಿಗೆ ಹೊರಟುಹೋಗಿದ್ದ. ಜ್ವಾಲಾಪ್ರಸಾದ ಮೊಮ್ಮಗ ನವಲನನ್ನು ವರಾಂಡದಲ್ಲಿ ಕೂರಿಸಿಕೊಂಡು ಓದಿಸುತ್ತಿದ್ದ. ನವಲ್ ಸುಮಾರು ಹದಿಮೂರು ವರ್ಷದ ಹುಡುಗ, ಎಂಟನೇ ಕ್ಲಾಸಿನಲ್ಲಿ ಕಲಿಯುತ್ತಿದ್ದ. ನವಲನ ತಂಗಿ ವಿದ್ಯಾ ಹತ್ತಿರ ಕುಳಿತುಕೊಂಡು ಸ್ಲೇಟಿನ ಮೇಲೆ ಲೆಕ್ಕ ಮಾಡುತ್ತಿದ್ದಳು.

ಮಧ್ಯಾಹ್ನವಾಯಿತು. ಜ್ವಾಲಾಪ್ರಸಾದ ಮಕ್ಕಳಿಗೆ ಓದಿಸುವುದನ್ನು ನಿಲ್ಲಿಸಿದ. ಅಕ್ಟೋಬರ್ ತಿಂಗಳ ಎರಡನೆಯ ವಾರ, ಆದರೂ ಬೇಗೆ ಮಾತ್ರ ಇನ್ನೂ ಇದ್ದ ಹಾಗೆಯೇ ಇತ್ತು. ಜ್ವಾಲಾಪ್ರಸಾದ ಸ್ನಾನಮಾಡಿ ಬರಲು ಬಾವಿಯ ಕಡೆ ಹೊರಟಿದ್ದ. ಅಷ್ಟರಲ್ಲಿ ಬಂಗಲೆಯ ಕಡೆ ಒಂದು ಟಾಂಗಾ ಬರುತ್ತಿರುವುದು ಕಾಣಿಸಿತು. ಟಾಂಗಾದಲ್ಲಿ ಜ್ಞಾನ ಪ್ರಕಾಶ ಕುಳಿತಿದ್ದ. ಜ್ವಾಲಾಪ್ರಸಾದನ ಕಾಲು ತಡೆಯಿತು. ಜ್ವಾಲಾಪ್ರಸಾದ ಟಾಂಗಾದ ಕಡೆ ಹೆಜ್ಜೆ ಹಾಕುತ್ತ, "ಅರೆ ಜ್ಞಾನು, ನೀನು ?" ಎಂದ.

ಸಾಮಾನು ಇಳಿಸಿ ಬಂದು ಜ್ವಾಲಾಪ್ರಸಾದ ಜ್ಞಾನಪ್ರಕಾಶನ ಜೊತೆ ವರಾಂಡದಲ್ಲಿ ಕುಳಿತುಕೊಂಡ. "ಸೆಪ್ಟೆಂಬರ್ ಹತ್ತು, ಹನ್ನೊಂದಕ್ಕೆ ಬರ್ತೀನಿ ಅಂದಿದ್ದೆ. ಈಗ ದಸರಾ ಮುಗಿಸಿ ಬರ್‍ತಿದಿ !"

"ಹೌದು, ಕಲಕತ್ತೆಯ ದುರ್ಗಾಪೂಜೆ ಬಹಳ ಪ್ರಸಿದ್ಧವಾದದ್ದು. ಕಾಂಗ್ರೆಸ್ ಮುಗಿದ ಮೇಲೆ ಅಲ್ಲೇ ಸ್ವಲ್ಪ ದಿನ ಉಳಕೊಂಡೆ. ಅಲ್ಲದೆ ಬಂಗಾಳಿಗಳಲ್ಲಿ ಈಗ ರಾಜಕೀಯ ಅಸ್ತವ್ಯಸ್ತತೆ ತುಂಬಾ ಇದೆ. ತಮ್ಮ ಸೋಲಾದ ಮೇಲೆ ಬಂಗಾಳದ ಕಾಂಗ್ರೆಸಿಗರು

ಕಾಂಗ್ರೆಸ್ಸಿನೊಳಗೇ ಬೇರೆ ಪಕ್ಷ ಕಟ್ಟೋಕೆ ತಯಾರಿ ನಡಸಿದಾರಲ್ಲವೆ? ಆದ್ದರಿಂದ ಅಲ್ಲೇ ಇದ್ದು ಅದನ್ನೆಲ್ಲಾ ನೋಡ್ತಿದ್ದೆ. ಈಗ ಕಲಕತ್ತದಿಂದ ನೇರವಾಗಿ ಬರ್ತಿದೀನಿ. ದಾರೀಲಿ ಬನಾರಸ್ಸಿನಲ್ಲಿ ಒಂದು ರಾತ್ರಿ ಇದ್ದು ಇವತ್ತು ಬೆಳಗ್ಗೆ ಅಲ್ಲಿಂದ ಹೊರಟೆ. ನಿನ್ನೆ ರಾತ್ರಿ ಬನಾರಸ್ಸಿನಲ್ಲಿ ಸಂಯುಕ್ತಪ್ರಾಂತದ ಕಾರ್ಯಕರ್ತರ ಒಂದು ಸಭೆ ಇತ್ತು. ಅದಕ್ಕೋಸ್ಕರ ಅಲ್ಲಿ ಇಳಿಯಬೇಕಾಯಿತು.

"ಗಂಗಾನೂ ನಿನ್ನೆ ರಾತ್ರಿ ಯಾರೋ ಸ್ನೇಹಿತರನ್ನ ನೋಡೋಕ್ಕೆ ಅಂತ ಬನಾರಸ್ಸಿಗೆ ಹೋದ. ನಾಳೆ ಬೆಳಗ್ಗೆ ವಾಪಸು ಬರ್‍ತಾನೆ."

"ಗಂಗಾ ಬನಾರಸ್ಸಿಗೆ ಹೋದ! ನನ್ನ ಕಣ್ಣು ನನಗೆ ಮೋಸಮಾಡ್ತಿಲ್ಲ ತಾನೇ," ಜ್ಞಾನಪ್ರಕಾಶ ತನಗೆ ತಾನೇ ಹೇಳಿಕೊಳ್ಳುವವನಂತೆ ಮೆಲ್ಲಗೆ ಹೇಳಿದ.

"ಏನು, ನೀನು ಗಂಗನ್ನ ನೋಡಿದ್ದೆಯಾ?" ಜ್ವಾಲಾಪ್ರಸಾದ ಕೇಳಿದ.

"ಹೌದು, ನೋಡಿದ್ದೆ, ದೂರದಿಂದ. ಜುಬ್ಬ-ಕಚ್ಚೆಪಂಚೆ ಉಟ್ಟಿದ್ದ. ಆದ್ದರಿಂದ ಸರಿಯಾಗಿ ಗುರುತಿಸೋಕ್ಕೆ ಆಗಲಿಲ್ಲ. ಅಲ್ಲದೆ ರಾತ್ರಿ ಹೊತ್ತು ಬೇರೆ. ಬೆಳಕು ಸಹ ಕಡಿಮೆ ಇತ್ತು. ಅದಕ್ಕೇ ನನ್ನ ಕಣ್ಣು ನನಗೆ ಮೋಸಮಾಡಿತೋ ಹೇಗೆ ಅಂತ ಅಂದದ್ದು. ಹೋಗಲಿ ಬಿಡು, ಹೇಳು, ಇಲ್ಲಿ ಎಲ್ಲ ಹೇಗೆ ನಡೆದಿದೆ?"

"ವಿಶೇಷವೇನೂ ಕಾಣಿಸೋಲ್ಲ. ಹೊತ್ತಿಗೆ ಸರಿಯಾಗಿ ಇಲ್ಲಿಂದ ಹೋಗ್ತಾನೆ, ಹೊತ್ತಿಗೆ ಸರಿಯಾಗಿ ಬರ್‍ತಾನೆ. ತುಂಬ ನಿಯಮ, ನಡವಳಿಕೇಲಿ ಇದಾನೆ. ಅಷ್ಟೇ ಅಲ್ಲ, ಮನೇಲಿ ಪ್ರತಿಯೊಬ್ಬರಿಗೂ ಗಮನ ಕೊಡ್ತಾನೆ," ಹೀಗೆ ಹೇಳುತ್ತ ಹೇಳುತ್ತ ಜ್ವಾಲಾಪ್ರಸಾದನ ಮುಖದ ಮೇಲಿನ ಸಂತೋಷದ ಛಾಯೆ ಸ್ಪಷ್ಟವಾಯಿತು.

ಜ್ಞಾನಪ್ರಕಾಶ ಹೇಳಿದ, "ನಾನು ಏನು ಹೇಳಿದ್ದೆ? ನೀವುಗಳು ಇಲ್ಲಿ ಬಂದದ್ದರಿಂದ ಲಾಭವೇ ಆಯಿತು. ನನಗೂ ಸಂತೋಷವೇ. ಆದರೆ ನೀನು ಯಾಕೋ ಚಿಂತೇಲಿರೋ ಹಾಗೆ ಕಾಣುತ್ತಲ್ಲ, ಏನು ಸಮಾಚಾರ?"

"ರುಕ್ಮಿಣೀಗೆ ಬೆಳಗಿನಿಂದ ನೋವು ಷುರುವಾಗಿದೆ. ಗಂಗಾ ಊರಲ್ಲಿಲ್ಲ. ಅವಳಿಗೆ ದಿನವಾಗಿದೆ. ಸೂಲಗಿತ್ತೀನ ಕರಕೊಂಡು ಬರೋಕ್ಕೆ ಭೀಖೂನ ಕಳಿಸಿದೀನಿ. ಯಾವಾಗ ಬೇಕಾದರೂ ಹೆರಿಗೆ ಆಗಬಹುದು! ಅಷ್ಟೇ, ಇನ್ನೇನಿಲ್ಲ."

"ಸೂಲಗಿತ್ತೀನ ಕರೆಯೋಕ್ಕೆ ಕಳಿಸಿದಿ! ಲೇಡಿ ಡಾಕ್ಟರು, ಮಿಡ್‌ವೈಫಿಗೆ ಯಾಕೆ ಹೇಳಿಕಳಿಸಲಿಲ್ಲ? ಇನ್ನೂ ಹಳೇಕಾಲದ ಪದ್ಧತೀನೇ ನಡಸಿದೀರಾ ನೀವು! ತಾಳು, ನಾನು ಹೋಗಿ ಸಿವಿಲ್ ಆಸ್ಪತ್ರೆಯಿಂದ ಲೇಡಿ ಡಾಕ್ಟರು ಇಲ್ಲವೇ ನರ್ಸನ್ನ ಕರಕೊಂಡು ಬರ್‍ತೀನಿ," ಜ್ಞಾನಪ್ರಕಾಶ ಎದ್ದು ನಿಂತ.

ಅದೇ ಹೊತ್ತಿಗೆ ಎದುರಿಗೆ ಭೀಖೂ ಸೂಲಗಿತ್ತಿಯ ಜೊತೆ ಬರುತ್ತಿರುವುದು ಕಾಣಿಸಿತು.

"ಒಳ್ಳೇದು, ಆದರೆ ಸ್ವಲ್ಪಹೊತ್ತು ತಾಳು. ಸೂಲಗಿತ್ತಿ ಬರ್‍ತಿದಾಳೆ, ಅವಳೇನು

ಹೇಳ್ತಾಳೆ ನೋಡೋಣ. ಅಷ್ಟು ಹೊತ್ತಿಗೆ ನಾನು ಸ್ನಾನಮಾಡಿ ಬರ್ತೀನಿ. ನೀನೂ ಬಟ್ಟೆ ಬದಲಾಯಿಸಿಕೊಂಡು ಸ್ನಾನ-ಮಡಿ ಮುಗಿಸು," ಜ್ವಾಲಾಪ್ರಸಾದ ಹೇಳಿದ.

ಜ್ವಾಲಾಪ್ರಸಾದ ಸ್ನಾನ ಮುಗಿಸಿ ಜ್ಞಾನಪ್ರಕಾಶನ ಬಳಿಗೆ ಬಂದ. ಅದೇ ಸಮಯಕ್ಕೆ ಭೀಖೂ ಒಳಗಿನಿಂದ ಬಂದು ಹೇಳಿದ, "ಅಣ್ಣಾ, ಸೊಸೆ ಗಂಡುಮಗು ಹೆತ್ತಳು. ಹೊತ್ತಿಗೆ ಸರಿಯಾಗಿ ನಾನು ಸೂಲಗಿತ್ತೀನ ಕರಕೊಂಡು ಬಂದಹಾಗಾಯಿತು!"

ಜ್ವಾಲಾಪ್ರಸಾದನ ಮುಖ ಅರಳಿತು, ಅವನು ಎದ್ದುನಿಂತ. ಜೇಬಿನಿಂದ ಎರಡು ರೂಪಾಯಿ ತೆಗೆದು ಭೀಖೂವಿಗೆ ಕೊಡುತ್ತ, "ಹೋಗಿ ಎರಡು ರೂಪಾಯಿಗೆ ಚಿಲ್ಲರೆ ಕಾಸು ಮಾಡಿಸಿಕೊಂಡು ಬಂದು, ತಾಯಿಗೂ ಮಗೂಗೂ ನೀವಳಿಸಿ ಹಂಚು. ಹಾಗೇ ಶಹನಾಯಿಯೋರನ್ನ ಬರಹೇಳು, ಜೊತೇಲಿ ಶಾಸ್ತ್ರಿಗಳನ್ನೂ ಕರಕೊಂಡು ಬಾ."

ಭೀಖೂ ನಕ್ಕ, "ಓಹೋ ಈಗಲೇ! ಗಾಯಕೀರನ್ನ ಕರಕೊಂಡು ಬರಲು ಸುನಿಯಳನ್ನ ಕಳಿಸಿದೀನಿ; ಹಾಗೇ ದಾರೀಲಿ ಶಾಸ್ತ್ರಿಗಳನ್ನೂ ಕರಕೊಂಡು ಬರ್ತಾಳೆ. ನಾನು ಶಹನಾಯಿಯೋರನ್ನ ಕರಕೊಂಡು ಬರ್ತೀನಿ; ಅಂಗಡಿಯಿಂದ ಚಿಲ್ಲರೇನೂ ತರ್ತೀನಿ."

ನಡುರಾತ್ರಿಯ ಹೊತ್ತಿಗೆ ಗಂಗಾಪ್ರಸಾದ ಬನಾರಸ್ಸಿನಿಂದ ಹಿಂದಿರುಗಿ ಬಂದ. ಮನೆಯಲ್ಲಿನ್ನೂ ಆ ಹೊತ್ತಿನಲ್ಲೂ ಗದ್ದಲ ಕಡಿಮೆಯಾಗಿರಲಿಲ್ಲ. ಜ್ವಾಲಾಪ್ರಸಾದ ಜ್ಞಾನಪ್ರಕಾಶರು ಮಲಗಲು ತಯಾರಿ ನಡಸಿದ್ದರು. ಜ್ಞಾನಪ್ರಕಾಶನನ್ನು ನೋಡಿದವನೇ ಗಂಗಾಪ್ರಸಾದ ಹೇಳಿದ, "ವಾಹ್, ಚಿಕ್ಕಪ್ಪಣ್ಣ! ನಾನು ಯಾವಾಗಿನಿಂದ ನಿನ್ನ ದಾರಿ ನೋಡ್ತಿದೀನಿ! ಕಲಕತ್ತೇಲಿ ಬಹಳ ದಿನ ಮಾಡಿಬಿಟ್ಟೆಯಲ್ಲ? ಯಾವಾಗ ಬಂದೆ?"

"ನಾನು ಇವತ್ತು ಮಧ್ಯಾಹ್ನ ತಾನೇ ಇಲ್ಲಿ ಬಂದು ತಲಪಿದೆ, ನಿನ್ನೆ ಬನಾರಸ್ಸಿನಲ್ಲಿ ಇಳಿಯಬೇಕಾಗಿ ಬಂತು. ನಾನು ನಿನ್ನನ್ನ ಬನಾರಸ್ಸಿನಲ್ಲಿ ನೋಡಿದೆ, ಆದರೆ ಸರಿಯಾಗಿ ಗುರುತಿಸೋಕ್ಕೆ ಆಗಲಿಲ್ಲ. ನೀನೂ ಅವಸರದಲ್ಲಿದ್ದ ಹಾಗಿತ್ತು, ಆದ್ದರಿಂದ ನಿನ್ನನ್ನ ಕರೀಲಿಲ್ಲ. ಒಂದು ಸಲ ನನ್ನ ಕಣ್ಣೇ ಏನಾದರೂ ನನಗೆ ಮೋಸ ಮಾಡ್ತಿದೆಯೋ ಅಂತ ಯೋಚಿಸಿದೆ, ಆದರೆ..." ಜ್ಞಾನಪ್ರಕಾಶ ಒಂದು ಅರ್ಥಪೂರ್ಣವಾದ ನಗೆ ನಕ್ಕು ಗಂಗಾಪ್ರಸಾದನ ಕಡೆ ನೋಡಿದ, "ಇಲ್ಲ, ನನ್ನ ಕಣ್ಣು ಮೋಸಮಾಡಲಿಲ್ಲ, ನಾನು ನೋಡಿದ್ದು ನಿನ್ನನ್ನೇ!"

ಇನ್ನೆಲ್ಲಿ ಜ್ಞಾನಪ್ರಕಾಶ ಹಿಂದುಮುಂದು ನೋಡದೆ ಚರ್ಚೆಗೆ ಷುರುಮಾಡುವನೋ ಎಂದು ಗಂಗಾಪ್ರಸಾದ ಗಾಬರಿಯಾದ. ಆ ಹೊತ್ತಿಗೆ ಸರಿಯಾಗಿ ಜ್ವಾಲಾಪ್ರಸಾದ ಕುಳಿತಲ್ಲಿಂದ ಏಳುತ್ತ ಹೇಳಿದ, "ಗಂಟೆ ಒಂದಾಯ್ತು. ಇನ್ನು ಹೋಗಿ ಮಲಗೋಣ. ಇಡೀ ದಿನವೆಲ್ಲಾ ಹೋಗಿಬರೋರ ಗಲಾಟೆಯೇ ಆಯಿತು. ತುಂಬಾ ಸುಸ್ತಾಗಿದೆ."

"ಹ್ಞೂ, ನೀನು ಹೋಗಿ ಮಲಕ್ಕೋ ಅಣ್ಣಾ," ಎಂದು ಜ್ವಾಲಾಪ್ರಸಾದನನ್ನು ಕಳಿಸಿ, ಜ್ಞಾನಪ್ರಕಾಶ ಗಂಗಾಪ್ರಸಾದನಕಡೆ ತಿರುಗಿದ. "ಗಂಡುಮಗುವಾದದ್ದಕ್ಕೆ

ಅಭಿನಂದನೆ ! ಒಳ್ಳೇ ಶುಭಲಗ್ನದಲ್ಲಿ ಪ್ರಸವವಾಗಿದೆ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ತಾನೇ ಗಾಯಕೀರು ಹಾಡುಗೀಡು ಮುಗಿಸಿ ಹೋಗಿದಾರೆ. ಒಳಗೆ ಹೋಗಿ ನೋಡಿ ಕೊಂಡು ಬಾ. ಆಮೇಲೆ ಬಟ್ಟೆ ಬದಲಾಯಿಸಿ ಮಲಕ್ಕೊ. ಬನಾರಸ್ಸಿನಲ್ಲಿ ನಾನು ನೋಡಿದ್ದು ಯಾಕೋ ಸರಿಕಾಣಲಿಲ್ಲ. ಅದರ ವಿಷಯವಾಗಿ ನಾಳೆ ಮಾತಾಡೋಣ."

"ಈಗಲೇ ಮಾತಾಡಿ ಮುಗಿಸಿಬಿಡೋದು ವಾಸಿ ಅಂತ ಕಾಣುತ್ತೆ, ಚಿಕ್ಕಪ್ಪ; ಈಗ ನಾವಿಬ್ಬರೇ ಇದೀವಿ. ನನ್ನ ಜೊತೆ 'ರಾಣಿ' ಇದ್ದಳು ಅಂತ ತಾನೇ? ಅಪ್ಪನೂ ಮನೆ ಯವರೂ ಇಲ್ಲಿಗೆ ಬಂದಮೇಲೆ 'ರಾಣೀ'ನ ಇಲ್ಲಿ ಜೌನ್‌ಪುರದಿಂದ ಬನಾರಸ್ಸಿಗೆ ಕಳಿಸಿದೆ. ಇಲ್ಲಿ ಇರಿಸಿಕೊಂಡು ಸುಮ್ಮನೆ ಇಲ್ಲದ ತಲೆನೋವು, ಗೋಳುಕರೆ ಯಾಕೆ ತಂದುಕೋ ಬೇಕು ಅಂತ ಹಾಗೆ ಮಾಡಿದ್ದು. ತಪ್ಪೇನೂ ಅಲ್ಲ ತಾನೇ, ನೀನೇ ಹೇಳು ?"

"ಸರಿಯಾಗಿ ಮಾಡಿದೆ. ಆದರೆ ಅದರಿಂದ ಖರ್ಚು ಜಾಸ್ತಿ ಅಲ್ಲವೆ? ಬನಾರಸ್ಸಿನಲ್ಲಿ 'ರಾಣಿ'ಯ ಖರ್ಚು; ನೀನು ಬನಾರಸ್ಸಿಗೆ ಹೋಗಿ ಬರೋ ಖರ್ಚು ! ನಿನ್ನ ಹಣಕಾಸಿನ ಪರಿಸ್ಥಿತಿ ಅಷ್ಟೇನೂ ಚೆನ್ನಾಗಿಲ್ಲ ಅಂತ ನನಗೆ ಅನ್ನಿಸುತ್ತೆ."

"ಹಣಕಾಸಿನ ಪರಿಸ್ಥಿತಿ ನಿಜವಾಗಿಯೂ ಚೆನ್ನಾಗಿಲ್ಲ. ಆದರೆ ಅಲಹಾಬಾದಿನ ಮನೆ ಖರ್ಚು ಒಂದು ಮಾತ್ರ ಉಳಿತಾಯವಾಗ್ತಿದೆ. ಇಲ್ಲಿ ಜೌನ್‌ಪುರದಲ್ಲಿ ಜನ ಪಿಸುಗುಟ್ಟೋಕೆ ಷುರುಮಾಡಿದ್ದರು. ಹೇಗಾದರೂ ಮಾಡಿ ಅದನ್ನ ನಿಲ್ಲಿಸಬೇಕಾಗಿತ್ತು !"

ಜ್ಞಾನಪ್ರಕಾಶ ಸ್ವಲ್ಪ ಹೊತ್ತು ಮೌನವಾಗಿ ಯೋಚಿಸುತ್ತಿದ್ದ. ಆಮೇಲೆ ಆಗ್ರಹ ತುಂಬಿದ ಧ್ವನಿಯಲ್ಲಿ ಹೇಳಿದ, "ಗಂಗಾ, ನೀನು ಈ ದಾರಿ ಬಿಡೋಕ್ಕಾಗೋಲ್ಲವೆ? ಹೇಳ್ತೀನಿ ಕೇಳು, ಇದು ವಿನಾಶದ ದಾರಿ."

ಗಂಗಾಪ್ರಸಾದ ಗಂಭೀರನಾಗಿ ಹೇಳಿದ, "ಹೌದು ಚಿಕ್ಕಪ್ಪ, ಇದು ವಿನಾಶದ ದಾರಿ ಅಂತ ನನಗೂ ಗೊತ್ತಿದೆ. ಒಂದೊಂದು ಸಲ ನನ್ನೊಳಗೇ ಹಾಗೆ ಅನ್ನಿಸೋಕ್ಕೆ ಷುರು ವಾಗುತ್ತೆ, ಆದರೆ ಆಗ ಇನ್ನೂ ಒಂದು ಅನ್ನಿಸುತ್ತೆ—ಈ ಬದುಕಿನ ದಾರಿಯೂ ವಿನಾಶದ ದಾರಿಯೇ ಅಂತ. ಕೊನೇಗೆ ನಮ್ಮೆಲ್ಲರಿಗೂ ಸಿಗೋದು ಅಂದರೆ ಸಾವು ! ಈ ಸ್ಥಿತೀಲಿ ಮುಂದೆ ಏನು ಆಗುತ್ತೆ, ಏನು ಬಿಡುತ್ತೆ ಅಂತ ಯೋಚಿಸಿ ವಿಚಾರ ಮಾಡೋದು ವ್ಯರ್ಥ. ಇವತ್ತು ನಮ್ಮ ಪಾಲಿಗೆ ಏನಿದೆಯೋ ಅದಷ್ಟೇ ಸತ್ಯ. ನಾಳೆ ಏನಾಗುತ್ತೆ ಅಂತ ಯಾರೂ ಕಾಣರು. ಅದನ್ನ ಕುರಿತು ಯೋಚಿಸೋದರಿಂದ ಪ್ರಯೋಜನವಿಲ್ಲ."

ಕೊಂಚ ಬಳಲಿದ ಧ್ವನಿಯಲ್ಲಿ ಜ್ಞಾನಪ್ರಕಾಶ ಉತ್ತರಿಸಿದ, "ಒಂದು ದೃಷ್ಟಿಕೋಣ ಅಂದರೆ ಮೇಲುನೋಟಕ್ಕೆ ನೀನು ಹೇಳೋದು ತಪ್ಪು ಅಂತ ಕಾಣಿಸೋಲ್ಲ. ಆದರೆ ಒಳ್ಳೇದಕ್ಕೋ ಕೆಟ್ಟದಕ್ಕೋ ನಮಗೆಲ್ಲರಿಗೂ ವಿಚಾರಮಾಡಿ ನೋಡೋ ಪ್ರವೃತ್ತಿಶಕ್ತಿ ಗಳಿವೆ. ಈ ಬುದ್ಧೀನ ಕಳಕೊಳ್ಳೋದು ಹೇಗೆ ಸಾಧ್ಯ, ಹೇಳು? ನಿನ್ನಸಂಸಾರ ಬೆಳೀತಿದೆ, ಅದಕ್ಕೆ ನೀನು ಗಮನ ಕೊಡಲೇಬೇಕು. ನಿನ್ನ ಖರ್ಚು ತುಂಬ ಬೆಳೆದಿದೆ ಅಂತ ನನಗೆ ಗೊತ್ತು. ಲಂಚ ತೊಗೊಳ್ಳೋದು, ಪ್ರಾಮಾಣಿಕತೆ ಬಿಟ್ಟು ಬೇರೆ ದಾರೀಲಿ ಹೋಗೋದು

14

ನಿನಗೆ ಸಾಧ್ಯವಿಲ್ಲ ಅನ್ನೋದೂ ನನಗೆ ಗೊತ್ತು. ಅಂದಮೇಲೆ ನೀನು ಸಾಲಮಾಡಿ ಕೊಂಡಿದ್ದರೆ ನನಗೇನೂ ಆಶ್ಚರ್ಯವಿಲ್ಲ!"

"ಅಲೀರಜಾ ಇಲ್ಲಿಗೆ ಬಂದಾಗಿನಿಂದ ಖರ್ಚು ಕಡಿಮೆಯಾಗಿದೆ. ಇಲ್ಲದೆ ಇದ್ದರೆ ಇಷ್ಟು ಹೊತ್ತಿಗೆ ಸಾಲವಾಗಿರ್ರಿತ್ತು."

"ಆದರೆ ಅಲೀರಜಾ ಎಲ್ಲೀವರೆಗೆ ಇಲ್ಲಿರ್ತಾನೆ? ನೀನೂ ಅಲೀರಜಾ ಎಲ್ಲೀವರೆಗೆ ಒಟ್ಟಾಗಿರ್ತೀರಿ? ಇಲ್ಲ, ಗಂಗಾ. ನೀನು ನಿನ್ನ ಚಾಳಿಗಳನ್ನ ಬದಲಾಯಿಸಲೇಬೇಕು. ನಿನಗೆ ಹೆಂಡತಿ ಇದಾಳೆ, ಮಕ್ಕಳು ಮರಿ ಇದಾರೆ. ನೀನು ಗೌರವಸ್ಥ ಕುಲಕ್ಕೆ, ಸಮಾಜಕ್ಕೆ ಸೇರಿದವನು. ನಿನಗೆ ಮಾನವಿದೆ, ಮರ್ಯಾದೆಯಿದೆ."

ಗಂಗಾಪ್ರಸಾದ ಸ್ವಲ್ಪ ಹೊತ್ತು ಮೌನವಾಗಿದ್ದ. ಆಮೇಲೆ ಒಂದು ನಿಟ್ಟುಸಿರು ಬಿಟ್ಟು ಹೇಳಿದ, "ಹೆಂಡತಿ-ಮಕ್ಕಳು, ಕುಲ-ಸಮಾಜ, ಮಾನ-ಮರ್ಯಾದೆ—ಈ ಇಕ್ಕಟ್ಟುಗಳಲ್ಲಿ ಬದುಕನ್ನ ಸಿಕ್ಕಿಸಿ ನಾವು ಅದನ್ನ ಎಷ್ಟೊಂದು ಕುರೂಪವಾಗಿ, ರಸ ಹೀನವಾಗಿ ಮಾಡಿಬಿಟ್ಟಿದೀವಿ! ಚಿಕ್ಕಪ್ಪ, ಈ ಬಂಧನಗಳನ್ನ ಮುರಿಯೋವರೆಗೆ ಮನುಷ್ಯ ಏನನ್ನೂ ಮಾಡಲಾರ. ನೀನು ರಾಜಕೀಯದಲ್ಲಿರೋದರಿಂದ ಇದನ್ನ ನೀನು ತಿಳಿದಿರಬೇಕು. ಜೈಲಿಗೆ ಹೋಗೋದು, ಸ್ಪೃಶ್ಯ–ಅಸ್ಪೃಶ್ಯ ಅನ್ನೋ ಭೇದ-ಭಾವಾನ ಅಳಿಸೋದು, ಹೆಂಡತಿಮಕ್ಕಳ ಮೋಹದಲ್ಲಿ ಸಿಕ್ಕಿಕೊಂಡು ಹೇಡಿಯಾಗದೆ ಇರೋದು—ಇವನ್ನೆಲ್ಲಾ ಒಪ್ಪಿಕೊಂಡ ಮೇಲೆಯೇ ಇವತ್ತಿನ ಸಕ್ರಿಯ ರಾಜಕೀಯ ದಲ್ಲಿ ಕಾಲಿಡೋದು ಸಾಧ್ಯ. ನೀನು ಇಲ್ಲಿ ಮಾನ-ಮರ್ಯಾದೆ, ಕುಲ-ಸಮಾಜ ಅಂತ ಡಂಗುರ ಹೊಡೀತಿದಿ; ಅಲ್ಲಿ ಕಲಕತ್ತೇಲಿ ಖಿಲಾಫತ್ ಮಸೂದೇನ ಪಾಸುಮಾಡಿ ಬಂದಿದಿ. ನಿನ್ನ ಬಾಯಿಂದ ಇಂಥ ಮಾತು ಕೇಳೋವಾಗ ನನಗೆ ಏನೋ ವಿಚಿತ್ರ ಅನ್ನಿಸುತ್ತೆ."

ಗಂಗಾಪ್ರಸಾದನ ಈ ತರ್ಕ ಕೇಳಿ ಜ್ಞಾನಪ್ರಕಾಶ ನಕ್ಕ. "ತುಂಬ ಬುದ್ಧಿವಂತನಾಗಿ ಬಿಟ್ಟೆ, ಮಗು! ನೀನು ಹೇಳ್ತಿರೋದು ತಪ್ಪಲ್ಲ; ಆದರೆ ಅದು ಅರ್ಧಸತ್ಯ, ಅಷ್ಟೇ. ಇವತ್ತಿನ ವಾಸ್ತವಿಕ ಜೀವನ ಹಾಗೂ ಅದರ ಪ್ರಗತಿ, ಪ್ರಚಲಿತ ಮೌಲ್ಯಗಳ ವಿರುದ್ಧ ಬಂಡಾಯವೆದ್ದಿದೆ ಅನ್ನು, ನಾನು ಒಪ್ಪಿಕೋತೀನಿ. ಆದರೆ ಈ ಬಂಡಾಯಕ್ಕೆ ಎರಡು ಮುಖ ಇದೆ—ಒಂದು ವಿಶ್ವಾಸದ್ದು, ಇನ್ನೊಂದು ಅವಿಶ್ವಾಸದ್ದು. ನಿನ್ನದು ಅವಿಶ್ವಾಸದ ದಾರಿ, ನನ್ನದು ವಿಶ್ವಾಸದ ದಾರಿ."

"ಈ ವಿಶ್ವಾಸ, ಅವಿಶ್ವಾಸ ಅಂತ ವಿಚಿತ್ರ ಗೊಂದಲ ತಂದಿಟ್ಟೆ ನೀನು. ದಯವಿಟ್ಟು ಇದನ್ನ ಸ್ವಲ್ಪ ಬಿಡಿಸಿ ಹೇಳು ನೋಡೋಣ."

"ಕೊಂಚ ಗಮನವಿಟ್ಟು ಕೇಳು, ಮಗು. ಈ ಸಂಸಾರ, ಮಾನಮರ್ಯಾದೆ ಮುಂತಾದವು ಏನಿದೆ, ಇವಕ್ಕೂ ಹೆಚ್ಚಿನ ಕೆಲವು ಮೌಲ್ಯಗಳಿವೆ. ಅವು ಯಾವವು ಅಂದರೆ ತ್ಯಾಗ, ಬಲಿದಾನ, ಇತ್ಯಾದಿ. ಯಾರು ತಮ್ಮದು ವಿಶ್ವಾಸದ ದಾರಿ ಅಂತ

ಅಂದುಕೋತಾರೆಯೋ ಅವರಿಗೆ ತ್ಯಾಗ, ಬಲಿದಾನ, ಸತ್ಯಗಳ ಮೇಲೆ ಎಷ್ಟು ವಿಶ್ವಾಸ ವಿರುತ್ತೋ ಅಷ್ಟು ವಿಶ್ವಾಸ ಬದುಕಿನ ಪ್ರಚಲಿತ ಮೌಲ್ಯಗಳ ಮೇಲೆ ಇರೋದಿಲ್ಲ. ಆದರೆ ಇನ್ನು ಕೆಲವರು ಇರ್ತಾರೆ, ಅವರಿಗೂ ತ್ಯಾಗ ಬಲಿದಾನಗಳಂತಹ ಹೆಚ್ಚಿನ ಮೌಲ್ಯಗಳ ಮೇಲಿನ ವಿಶ್ವಾಸಕ್ಕೂ ಬಹು ದೂರ; ಬದುಕಿನಲ್ಲಿ ಮಾನಮರ್ಯಾದೆಗಳ ದಾರೀಲಿ ನಡೆಯೋದರ ಬಗ್ಗೆಯೂ ವಿಶ್ವಾಸವಿಲ್ಲ. ಅಂಥವರದ್ದು ಅವಿಶ್ವಾಸದ ದಾರಿ ಅಂತ ನಾನು ಅಂತೀನಿ. ನಮ್ಮದು ಹೇಗೆ ವಿಶ್ವಾಸದ ದಾರಿಯೋ ಹಾಗೆ ನೀನು ಹೊರಟಿರೋ ದಾರಿ ಈ ಅವಿಶ್ವಾಸದ್ದು. ಒಳ್ಳೇದು, ತುಂಬಾ ಹೊತ್ತಾಯ್ತು. ನೀನು ಸುಸ್ತಾಗಿ ಬಂದಿದಿ, ಇನ್ನೂ ಒಳಮನೇಗೆ ಬೇರೆ ಹೋಗಿ ಬರಬೇಕು, ಬಟ್ಟೆಗಿಟ್ಟೆ ಬದಲಾಯಿಸಿ ಮಲಕ್ಕೋಬೇಕು. ನಾನು ಮಲಕ್ಕೊಳ್ಳೋಕ್ಕೆ ಹೋಗ್ತೀನಿ. ನಾನು ಹೇಳಿದ್ದನ್ನ ಸ್ವಲ್ಪ ಗಮನವಿಟ್ಟು ವಿಚಾರಮಾಡು. ನಾಳೆ ಮತ್ತೆ ಮಾತಾಡೋಣಂತೆ."

ಜ್ಞಾನಪ್ರಕಾಶ ಮಲಗಲು ಹೋದಾಗ, ಗಂಗಾಪ್ರಸಾದ ಪೆಚ್ಚಾಗಿ ಏನನ್ನೋ ಚಿಂತಿಸುತ್ತಾ ತನ್ನಲ್ಲಿ ತಾನೇ ಮುಳುಗಿದ.

## ಏಳು

ಅಲೀರಜಾ ಏದುಸಿರು ಬಿಡುತ್ತಿದ್ದ; ಅವನ ನಾಲಗೆ ತೊದಲುತ್ತಿತ್ತು. ಬಂದವನೇ ನೇರವಾಗಿ ಕುರ್ಚಿಯ ಮೇಲೆ ಕುಳಿತು ಇದ್ದಿದ್ದೂ ಜೋರಾಗಿ ಉಸಿರೆಳೆಯತೊಡಗಿದ. "ಅಯ್ಯೋ ದೇವರೇ! ಯಾವದೋ ಮಹಾ ಗಂಡಾಂತರ ಮಳೆಗರೆಯೋ ಹಾಗೆ ಕಾಣುತ್ತೆ. ಜೌನ್‌ಪುರದಲ್ಲಿ ಇಷ್ಟು ದೊಡ್ಡ ಚಳವಳಿಯಾಗಬಹುದು ಅಂತ ಯಾರು ಯೋಚಿಸಿದ್ದರು! ಕೊನೇಆಖೈರಿಗೆ ಜಗತ್ತು ಎಲ್ಲಿ ಹೊರಟಿದೆ, ಏನು ಕಥೆ?" ಅಲೀರಜಾ ತನಗೆ ತಾನೇ ಗೊಣಗಿಕೊಳ್ಳುವವನಂತೆ ಹೇಳಿದ.

"ನರಕಕ್ಕೆ ಹೊರಟಿದೆ ಅಂತಾನೇ ಇಟ್ಟುಕೊಳ್ಳಿ, ಆದರೆ ನೀವು ಸೌಖ್ಯವಾಗಿದ್ದೀರಲ್ಲ, ಅಷ್ಟೇ ಸಾಕು. ಯಾಕೆ ಇಷ್ಟು ಗಾಬರಿಯಾಗಿದೀರಿ? ನನಗೂ ಸ್ವಲ್ಪ ಹೇಳಿ, ಕೇಳೋಣ!" ಗಂಗಾಪ್ರಸಾದ ನಗುತ್ತ ಹೇಳಿದ.

"ಗಾಬರಿ ಏನು, ನನ್ನ ಕಣ್ಣನ್ನ ನಾನೇ ನಂಬೋಕ್ಕೆ ಆಗ್ತಿಲ್ಲ. ಅಟಾಲಾ ಮಸೀದಿ ಯಿಂದ ಹೊರಟ ಮೆರವಣಿಗೇಲಿ ಬರೀ ಐವತ್ತು ಅರವತ್ತು ಜನ ಇದ್ದರು, ಸ್ವಾಮಿ. ಆದರೆ ಇಷ್ಟು ದೊಡ್ಡ ಗುಂಪು ಎಲ್ಲಿಂದ ಬಂತೋ ದೇವರೇ ಬಲ್ಲ."

ಗಂಗಾಪ್ರಸಾದ ನಗತೊಡಗಿದ, "ಐವತ್ತು ಅರವತ್ತು ಜನರಲ್ಲ, ಹತ್ತುಹನ್ನೆರಡು ಸಾವಿರ ಜನ ಇದ್ದರು. ನನಗೆ ಸುದ್ದಿ ಬಂದಿದೆ. ಇವತ್ತು ಮಾಘ ಅಮಾವಾಸ್ಯೆ ತಾನೇ,

ಗೋಮತೀ ನದೀಲಿ ಸ್ನಾನಮಾಡೋಕ್ಕೆ ಹಳ್ಳಿಗಳಿಂದ ಜನ ಬಂದಿದಾರೆ. ಅವರೂ ಎಲಾ ಮೆರವಣಿಗೇಲಿ ಸೇರಿಕೊಂಡರು. ಇದರಲ್ಲಿ ನನಗೇನೂ ಆಶ್ಚರ್ಯ ಕಾಣಿಸೋಲ್ಲ!"

"ಅರೇ ಸ್ವಾಮಿ, ಮುಂದೆ ಕೇಳಿ. ಈ ಸಮಾಚಾರ ಕೇಳಿದರೆ ದಂಗುಬಡಿದು ಹೋಗ್ತೀರಿ! ಮಹಾತ್ಮ ಗಾಂಧಿ ಹಾಗೂ ಕಾಂಗ್ರೆಸ್ಸಿನ ಆಜ್ಞೆ ಪ್ರಕಾರ ತಾನು ಇವತ್ತಿನಿಂದ ವಕೀಲಿ ಬಿಟ್ಟಿರೋದಾಗಿ ಫರಹತುಲ್ಲಾ ಘೋಷಣೆ ಮಾಡಿದಾನೆ. ಅಷ್ಟೇ ಅಲ್ಲ, ಠಾಣೇದಾರ ವಿಕ್ರಮಸಿಂಹ ನೌಕರಿಗೆ ರಾಜೀನಾಮೆ ಕೊಟ್ಟಿದಾನೆ. ಮೆರವಣಿಗೆ ಮುಗಿದು ಈಗ ಒಂದು ದೊಡ್ಡ ಮೀಟಿಂಗ್ ನಡೀತಾ ಇದೆ. ಈ ಘೋಷಣೆಗಳಾದದ್ದು ಅಲ್ಲೇ, ಈಗ. ನಾನು ಅಲ್ಲಿಂದ ಆ ಕ್ಷಣ ವಾಪಸು ಓಡಿಬಂದೆ. ಯಾಕೆಂದರೆ ಒಂದು ಸಲ ನನಗೂ ರಾಜೀನಾಮೆ ಕೊಟ್ಟುಬಿಡೋ ಮನಸ್ಸಾಯಿತು. ಏನು ಉತ್ಸಾಹ, ಎಂಥ ಆವೇಶ ಅಂತೀರಿ ಅಲ್ಲಿ!"

"ಫರಹತುಲ್ಲಾ ವಕೀಲಿ ಬಿಟ್ಟರೆ? ಏನು ಹೇಳ್ತಿದೀರಿ ನೀವು? ಅವನ ಕಸಬು ಚೆನ್ನಾಗಿ ನಡೀತಿತ್ತು. ಠಾಣೇದಾರ ವಿಕ್ರಮಸಿಂಹನ ವಿಷಯ ಅರ್ಥಮಾಡಿಕೊಳ್ಳಬಲ್ಲೆ. ಅವನು ಶುದ್ಧ ಒರಟ, ಹಟಮಾರಿ. ಅವನಿಂದ ಸರಕಾರೀ ನೌಕರಿ ಮಾಡೋದು ಸಾಧ್ಯವೇ ಇರಲಿಲ್ಲ. ಆದರೆ ಈ ಫರಹತುಲ್ಲಾರಿಗೆ ಏನು ಬಂತು, ವಕೀಲಿ ಬಿಡೋಕ್ಕೆ! ಅವರ ಹಣಕಾಸಿನ ಸ್ಥಿತಿ ಅಷ್ಟೇನೂ ಚೆನ್ನಾಗಿದೆ ಅಂತ ನನಗನ್ನಿಸೋಲ್ಲ."

"ಚೆನ್ನ ಏನು, ಕೆಟ್ಟು ಹಾಳಾಗಿದೆ ಅಂತ ತಿಳೀರಿ. ಅವರ ಅಪ್ಪ ನೆಯ್ಗೆಯವನು, ಆದರೆ ತುಂಬಾ ದುಂದುಗಾರ! ಅವನು ಸಂಪಾದಿಸಿದ್ದೆಲ್ಲಾ ಇವನ ಓದಿಗೇ ಹೋಯಿತು. ಸಾಯೋವಾಗ ಸಾಲ ಬಿಟ್ಟು ಹೋಗಿದ್ದ ಅಂತ ನನಗೆ ಅನ್ನಿಸುತ್ತೆ. ಈ ಫರಹತುಲ್ಲಾ ...ಇವನ ವಕೀಲಿಯೇನೋ ಚೆನ್ನಾಗೇ ನಡೀತಿತ್ತು. ಆದರೆ ಹೆಚ್ಚಾಗಿ ಮೊಕದ್ದಮೆಗಳನ್ನ ಬಿಟ್ಟಿ ನಡಸಿಕೊಡ್ತಿದ್ದ. ಯಾರು ಎಷ್ಟು ಕೊಟ್ಟರೆ ಅಷ್ಟೇ ತೊಗೋತಿದ್ದ. ಪಾಪ! ಇವನಿಗೆ ಹಣ ಕೇಳೋದಂತೂ ಗೊತ್ತೇ ಇರಲಿಲ್ಲ. ಇನ್ನು ಈ ಮುಖಂಡತ್ವದ ಗುಂಗು ತಲೆಗೆ ಹಚ್ಚಿಸಿಕೊಂಡ ಮೇಲೆ ಇವನ ಖರ್ಚುವೆಚ್ಚವೂ ಏರಿದೆ. ಸಮೀ ಉಲ್ಲಾನಿಗೆ ನೌಕರಿ ಹೋದಾಗಿನಿಂದ ಅವನು ಪೋಲಿ ಅಲೀತಿದಾನೆ. ಇವನ ಕಿರಿಯ ತಮ್ಮ ಅಲಹಾಬಾದಿನಲ್ಲಿ, ಮೋರ್ ಸೆಂಟ್ರಲ್ ಕಾಲೇಜಿನಲ್ಲಿ ಕಲೀತಿದಾನೆ. ಇವನಿಗೂ ಮೂರು ಮಕ್ಕಳಿದಾರೆ, ಇಬ್ಬರಿಗೆ ಮದುವೆಯಾಗಿದೆ. ಈಗ ವಕೀಲಿ ಬಿಟ್ಟು ಹೊಟ್ಟೆ ಮೇಲೆ ಒದ್ದೆ ಬಟ್ಟೆ ಹಾಕ್ಕೊಂಡು ನಿಸ್ಸೂರಾಗಿಬಿಟ್ಟ. ಮೂರ್ಖತನಕ್ಕೂ ಒಂದು ಮಿತಿ ಇದೆ!"

"ಆ ಮೀಟಿಂಗಿನಲ್ಲಿ ಇನ್ನು ಏನೇನು ನಡೀತು," ಗಂಗಾಪ್ರಸಾದ ಕೇಳಿದ.

"ಅಜೀ, ಮೀಟಿಂಗ್ ಏನು ಬಂತು ಗೊಂದಲ ಅನ್ನಿ! ಏನಾಯ್ತು ಅಂದರೆ ಪುತ್ತೂಲಾಲನ ಹೆಂಡದ ಗುತ್ತಿಗೆಯ ಮೇಲ್ವಿಚಾರಣೆ ಮುಗಿಸಿಕೊಂಡು ಮನೆಯ ಕಡೆ ಹೊರಟಿದ್ದೆ. ಸ್ವಲ್ಪ ದೂರ ಹೋಗೋ ಅಷ್ಟರಲ್ಲಿ ಟಾಂಗಾ ನಿಂತುಬಿಟ್ಟಿತು. ಮುಂದಿನಿಂದ ಒಂದು ಭಾರೀ ಮೆರವಣಿಗೆ ಬರ್ತಿತ್ತು; ರಸ್ತೇಲೇ ಒಂದು ಅರ್ಧ ಗಂಟೆ ನಿಂತುಕೋ

ಬೇಕಾಗಿ ಬಂತು, ಮೆರವಣಿಗೆ ಮುಂದೆ ಹೋಗೋತನಕ. ಅಲ್ಲಿಂದ ಮನೆಗೆ ಬಂದೆ. ಸ್ವಲ್ಪ ಸುಧಾರಿಸಿಕೊಂಡು, ಬಟ್ಟೆಗಿಟ್ಟೆ ಬದಲಾಯಿಸಿದೆ. ಆಮೇಲೆ ನಿಮ್ಮನ್ನ ನೋಡಿ ಬರೋಣ ಅಂತ ಹೊರಟೆ. ಅಟಾಲಾ ಮಸೀದಿ ಹತ್ತಿರ ಬಂದಾಗ, ಏನು ಹೇಳಲಿ, ಒಂದು ದೊಡ್ಡ ಸಭೆ ಸೇರಿದೆ. ಏನೇನು ನಡೀತಿದೆ ನೋಡೋಣ ಅಂತ ಯೋಚಿಸಿ ಟಾಂಗಾದಿಂದ ಇಳಿದು ನಾನೂ ಗುಂಪಿನಲ್ಲಿ ಸೇರಿಕೊಂಡೆ. ಫರಹತುಲ್ಲಾ ಸಭೆಯ ಅಧ್ಯಕ್ಷತೆ ವಹಿಸಿದಾನೆ. ಅವನ ಅಕ್ಕಪಕ್ಕದಲ್ಲಿ ಖದ್ದರ್ ತೊಟ್ಟಿರೋ ಹತ್ತುಹನ್ನೆರಡು ಮಂದಿ ಇದಾರೆ. ಅವರಲ್ಲಿ ಕೆಲವರು ಜಮ್ಮೈಯತ್ ಉಲ್ಮಾದವರು, ಕೆಲವರು ಕಾಂಗ್ರೆಸ್ಸಿನೋರು. ಈ ಫರಹತುಲ್ಲಾನೂ ಖದ್ದರ್ ಪೋಷಾಕು ಹಾಕಿಕೊಂಡು ಭಾಷಣ ಮಾಡ್ತಿದಾನೆ. ಕಲಕತ್ತೇಲಿ ಏನೇನು ನಡೀತು ಅನ್ನೋದನ್ನ ಹೇಳಿ, ಗಾಂಧೀಜಿ ಒಂದು ವರ್ಷದೊಳಗೆ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿ ಕೊಡ್ತೀನಿ ಅಂತ ವಾಗ್ದಾನ ಮಾಡಿದಾರೆ ಅಂತ ಹೇಳಿದ. ಖಿಲಾಫತ್ ಲೀಗ್ ಕಾಂಗ್ರೆಸ್ಸಿನಲ್ಲಿ ಸೇರಿದೆ, ಮೌಲಾನಾ ಮಹಮದ್ ಅಲಿ, ಮೌಲಾನಾ ಶೌಕತ್ ಅಲಿ ಕಾಂಗ್ರೆಸಿಗೆ ಸೇರಿದಾರೆ ಅಂತಾನೂ ಹೇಳಿದ. ಮಹಾತ್ಮ ಗಾಂಧಿಯವರ ಅಪ್ಪಣೆ ಪ್ರಕಾರ ಜನಸೇವೆ ಮಾಡೋಕ್ಕೋಸ್ಕರ ವಕೀಲಿ ಬಿಟ್ಟಿರೋ ದಾಗಿಯೂ ಹೇಳಿದ. ಜನ ಅವನನ್ನ ತುಂಬಾ ಹೊಗಳಿದರು, ಚಪ್ಪಾಳೆ ತಟ್ಟಿದರು, ಹೂವಿನ ಹಾರ ಹಾಕಿದರು. ಅವನಾದ ಮೇಲೆ ವಿಕ್ರಮಸಿಂಹ ಬಂದ. ಅವನೂ ಖಾದೀ ಪೋಷಾಕು ತೊಟ್ಟಿದ್ದ. ಅಸಹಕಾರದ ಬಗ್ಗೆ ಒಂದು ದೊಡ್ಡ ಭಾಷಣ ಮಾಡಿ, ತಾನು ಸರಕಾರೀ ನೌಕರಿಗೆ ರಾಜೀನಾಮೆ ಕೊಟ್ಟಿರೋದಾಗಿ ಹೇಳಿದ. ನನಗೆ ಗಾಬರಿ ಯಾಯಿತು, ಸ್ವಾಮಿ. ನನ್ನ ಮನಸ್ಸಿನಲ್ಲಿ ಭಾವನೆಗಳ ಬಿರುಗಾಳಿ ಏಳೋಕ್ಕೆ ಷುರು ವಾಯಿತು; ಎಲ್ಲಿ ನಾನೂ ಭಾಷಣ ಮಾಡೋಕ್ಕೆ ಹೊರಟುಬಿಟ್ತೀನೋ ಅಂತ ಭಯ ವಾಯಿತು. ತಕ್ಷಣ ಅಲ್ಲಿಂದ ಕಂಬಿ ಕಿತ್ತೆ."

ಗಂಗಾಪ್ರಸಾದ ನಕ್ಕ, "ಅಲ್ಲಿಂದ ಎದ್ದು ಓಡಿಬಂದು ತುಂಬ ಬುದ್ಧಿವಂತಿಕೆ ಕೆಲಸ ಮಾಡಿದಿರಿ, ಅಲೀರಜಾ !"

ಅವತ್ತು ಗಂಗಾಪ್ರಸಾದ ಮನೆಯಲ್ಲಿ ಒಬ್ಬನೇ ಇದ್ದ. ಮಾಘಮೇಳದ ಸ್ನಾನ ಮಾಡಿಬರಲೆಂದು ಜ್ವಾಲಾಪ್ರಸಾದ ಮನೆಯವರ ಜೊತೆ ಹದಿನೈದು ದಿನಕ್ಕಾಗಿ ಅಲಹಾಬಾದಿಗೆ ಹೋಗಿದ್ದ.

ಚಳವಳಿ ನಡೆದಿತ್ತು. ತುಂಬ ಬಿರುಸಿನಿಂದ, ವಿಚಿತ್ರ ರೀತಿಯಲ್ಲಿ ನಡೆದಿತ್ತು. ಎಲ್ಲಿ ನೋಡಿದರೂ ಹರಿತಾಳ; ಚರಖಾ ತಿರುಗುತ್ತಿತ್ತು. ಖಾದೀ ಹಾಗೂ ಸ್ವದೇಶಿಯ ಪ್ರಚಾರ ನಡೆಯುತ್ತಿತ್ತು. ವಿದೇಶೀ ಸಾಮಾನುಗಳ ಮೇಲೆ ಬಹಿಷ್ಕಾರ ಹಾಕಲಾಗಿತ್ತು. ಮೆರವಣಿಗೆಗಳಿಗಂತೂ ಲೆಕ್ಕವೇ ಇರಲಿಲ್ಲ. ಬಹಿರಂಗವಾಗಿ ಸರಕಾರವನ್ನು ನಿಂದಿಸ ಲಾಗುತ್ತಿತ್ತು, ಬ್ರಿಟಿಷರನ್ನು ಬೈಯಲಾಗುತ್ತಿತ್ತು. ಕಲೆಕ್ಟರರು ಜೌನ್‌ಪುರದಲ್ಲಿ ಈ ಚಳವಳಿಯನ್ನು ಮಟ್ಟ ಹಾಕುವ ಜವಾಬ್ದಾರಿಯನ್ನು ಗಂಗಾಪ್ರಸಾದನಿಗೆ ವಹಿಸಿದ್ದರು.

ಅವನು ತುಂಬ ತತ್ಪರತೆಯಿಂದ ನಿರ್ದಯನಾಗಿ ತನ್ನ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ. ಜೌನ್‌ಪುರದ ಜೈಲು ತುಂಬಿತ್ತು. ಜನಗಳಿಗೆ ಲೆಕ್ಕವಿಲ್ಲದಷ್ಟು ಜುಲ್ಮಾನೆ ಬೀಳುತ್ತಿತ್ತು ಜೌನ್‌ಪುರದ ಕಾರ್ಯಕರ್ತರಲ್ಲಿ ಹೆಚ್ಚು ಮಂದಿ ಜೈಲು ಕಂಡಿದ್ದರು.

## ಎಂಟು

ನವಲ್ ಹಾಡುತ್ತಿದ್ದ :

ಕರಾಚಿ ಖೈದಿ ಹೇಳ್ತಾನೆ ಕೇಳು,
ಎರಡೆರಡು ವರ್ಷ ನಮಗೆಲ್ಲಾ ಜೈಲು !

ಅದನ್ನು ಕೇಳಿ ವಿದ್ಯಾ ತೊದಲುತ್ತ ಹೇಳಿದಳು;

ಅಂದಳು ಮಹಮದ್ ಆಲಿಯ ಅವ್ವ,

ಮುಂದಿನ ಸಾಲು ಅವಳಿಗೆ ನೆನಪಾಗಲಿಲ್ಲ. ನವಲ್ ಅದನ್ನು ಪೂರ್ತಿಮಾಡಿದ:

ಕ್ರಾಂತಿಗೆ, ಎಲೆ ಮಗು, ನೀ ಕೊಡು ಜೀವ !

ಜ್ಞಾನಪ್ರಕಾಶ ಕಾಂಗ್ರೆಸ್ ಕಮಿಟಿಯ ಕಚೇರಿಗೆ ಹೋಗಲು ಬಟ್ಟೆ ತೊಟ್ಟುಕೊಂಡು ಸಿದ್ಧನಾಗಿ ನಿಂತಿದ್ದ. ಅವನು ನಗುತ್ತ ನವಲನ ಕೆನ್ನೆಗೊಂದು ಮೆತ್ತಗೆ ಏಟು ಹಾಕಿ ಹೇಳಿದ, "ಅಪ್ಪ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆದ; ಮಗನ್ನ ನೋಡಿದರೆ ಕ್ರಾಂತಿಗೀತೆ ಹಾಡ್ತಿದಾನೆ." ವಿದ್ಯಾ ಓಡುತ್ತ ಬಂದು ಜ್ಞಾನಪ್ರಕಾಶನ ಕಾಲುಗಳನ್ನ ಅಪ್ಪಿಕೊಂಡು ಹೇಳಿದಳು, "ಬಾಬಾ, ಆ ಬೊಂಬೆ ತರೋದು ಮರೀಬೇಡ ! ನಾಡಿದ್ದು ಪಕ್ಕದ ಮನೆ ಮಾಲತಿ ಬೊಂಬೇದು ಮದುವೆ ಇದೆ; ನಾನೂ ನನ್ನ ಬೊಂಬೆ ಮದುವೆ ಮಾಡ್ತೀನಿ."

ಇದೇ ಹೊತ್ತಿಗೆ ಜ್ವಾಲಾಪ್ರಸಾದ ಪೂಜೆ ಮುಗಿಸಿ ಎದ್ದ. ಜ್ಞಾನಪ್ರಕಾಶ ಹೊರಡಲು ತಯಾರಾಗಿದ್ದುದನ್ನು ಕಂಡು ಜ್ವಾಲಾಪ್ರಸಾದ ಕೇಳಿದ, "ಅರೇ, ಇವತ್ತು ಇಷ್ಟುಬೇಗ ಹೊರಟುಬಿಟ್ಟೆದಿ. ಈಗಿನ್ನೂ ಹತ್ತು ಹೊಡೆದಿದೆ. ಏನು ಸಮಾಚಾರ ? "

"ಸಮಾಚಾರ ಏನು ಹೇಳಲಿ, ಅಣ್ಣಾ ! ಸರಕಾರ ಕಾಂಗ್ರೆಸ್ ಸ್ವಯಂಸೇವಕ ದಳಾನ ಕಾನೂನಿಗೆ ವಿರುದ್ಧವಾದ ಸಂಸ್ಥೆ ಅಂತ ಘೋಷಿಸುತ್ತಂತೆ. ನಾವು ಇದರ ಬಗ್ಗೆ ಚರ್ಚೆ ಮಾಡಬೇಕಾಗಿದೆ. ಇದಲ್ಲದೆ ಈ ಕಾಂಗ್ರೆಸ್ ಚಳವಳೀನ ಮುಂದುವರಿಸೋದು ಹೇಗೆ ಅನ್ನೋದನ್ನೂ ವಿಚಾರ ಮಾಡಬೇಕಾಗಿದೆ."

ಜ್ವಾಲಾಪ್ರಸಾದ ಕುಳಿತುಕೊಳ್ಳುತ್ತ ಹೇಳಿದ, "ನಿಮ್ಮ ಈ ಆಂದೋಳನ ಎಲ್ಲೀವರೆಗೆ ನಡೆಯುತ್ತೆ ? "

"ಇನ್ನೂ ಈಗ ತಾನೇ ಷುರುವಾಗಿದೆ. ಇದು ಈ ಆಂದೋಳನದ ಮೊದಲನೇ ಸುತ್ತು ಅಂತ ಅಂದುಕೊ, ಅಣ್ಣ. ಅಲ್ಲದೆ ಈಗ ಸರಕಾರದ ಜೈಲುಗಳೆಲ್ಲಾ ತುಂಬಿ

ಹೋಗಿವೆ. ಸರಕಾರ ಈ ಆಂಧೋಳನಾನ ಎಷ್ಟೂ ಎಷ್ಟು ಅಡಗಿಸೋಕ್ಕೆ ಪ್ರಯತ್ನ ಪಡ್ತಿದೆಯೋ ಆಂಧೋಳನ ಅಷ್ಟೂ ಅಷ್ಟು ಜಾಸ್ತಿಯಾಗ್ತಾನೇ ಹೋಗ್ತಿದೆ."

"ಹೌದು, ನಿಮ್ಮ ಆಂಧೋಳನವೇನೋ ನಡೀತಾ ಇದೆ. ಈ ಆಂಧೋಳನಕ್ಕೆ ಮುಸಲಮಾನರಿಂದ ತುಂಬ ಬೆಂಬಲ ಸಿಕ್ಕಿದೆ. ಮಹಾತ್ಮ ಗಾಂಧಿಯವರ ಸೂಚನೇನ ನಾನು ಮೆಚ್ಚಿಕೊಂಡೆ. ಆಲಿ ಬಂಧುಗಳ ದಸ್ತಗಿರಿಯಿಂದಾಗಿ ದೇಶದಲ್ಲೆಲ್ಲಾ ಬೆಂಕಿ ಹೊತ್ತಿಕೊಂಡ ಹಾಗಾಗಿದೆ," ಜ್ವಾಲಾಪ್ರಸಾದ ಒಪ್ಪಿಕೊಂಡ.

"ಹೌದು, ಜನತೆ ಬೇಗಬೇಗ ಜಾಗ್ರತವಾಗ್ತಾ ಇದೆ," ಜ್ಞಾನಪ್ರಕಾಶ ಹೇಳಿದ.

ಈ ನಡುವೆ ಗಂಗಾಪ್ರಸಾದ ಬಂದವನೇ ತೆಪ್ಪಗೆ ಒತ್ತಟ್ಟಿಗೆ ಕುಳಿತುಕೊಂಡ. ಜ್ಞಾನ ಪ್ರಕಾಶನ ಮಾತು ಕೇಳಿ ಅವನಿಗೆ ಸುಮ್ಮನಿರಲಾಗಲಿಲ್ಲ, "ಚಿಕ್ಕಪ್ಪ, ಜನತೆ ಜಾಗ್ರತವಾಗೂ ಇಲ್ಲ, ಮಲಗೂ ಇಲ್ಲ. ಒಂದಿಷ್ಟು ಅಸಂತುಷ್ಟರಾಗಿರೋ ಜನರಷ್ಟೇ ಈ ಆಂಧೋಳನ ದಲ್ಲಿ ಸೇರಿಕೊಂಡಿದಾರೆ. ಈ ಆಂಧೋಳನ ಕೊನೆಗಾಣೋ ಹೊತ್ತು ಬಂದಿದೆ ಈಗ ಅಂತ ನನಗನ್ನಿಸುತ್ತೆ. ಕಾಂಗ್ರೆಸ್ ಸ್ವಯಂಸೇವಕದಳದ ಕತೆ ಮುಗೀತಾ ಬಂತು. ಜೈಲಿಗೆ ಹೋಗೋಕ್ಕೆ ವಾಲಂಟಿಯರ್‌ಗಳು ಭರ್ತಿಯಾಗೋದು ನಿಂತಿತು ಅಂದುಕೊಳ್ಳಿ. ನಿಮಗೆ ಬೆಂಕಿ ಹೊತ್ತಿರೋದು ಏನು ಕಾಣ್ತಾ ಇದೆ, ಅದು ಬ್ರಿಟಿಷ್ ಸರಕಾರದ ಹತೋಟೀಲಿದೆ. ಈ 'ಬೆಂಕಿ'ಯಿಂದಾಗಿ ಜನತೆ ಹಿಂಸೇಗೆ ಇಳೀತಾರೆ. ಜನತೆ ಯಾವಾಗ ಹಿಂಸೆಗೆ ಕೈಹಾಕುತ್ತೋ ಆಗ ಈ ಆಂಧೋಳನಾನ ಪೂರ್ತಿಯಾಗಿ ಮಟ್ಟ ಹಾಕಬಹುದು."

ಗಂಗಾಪ್ರಸಾದ ಸುತ್ತಾಡಿಕೊಂಡು ಹೊರಗಿನಿಂದ ಬಂದಿದ್ದ. ಅವನಿಗೆ ಜೌನ್ ಪುರದಿಂದ ಕಾನಪುರಕ್ಕೆ ವರ್ಗವಾಗಿತ್ತು. ಭಾರತೀಯನಾದ ಒಬ್ಬ ಹಂಗಾಮಿ ಜಾಯಿಂಟ್ ಮ್ಯಾಜಿಸ್ಟ್ರೇಟ್ ತಾತ್ಕಾಲಿಕವಾಗಿಯೇ ಆದರೂ ಕಾನಪುರ ಪಟ್ಟಣದ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆಗಿ ವರ್ಗವಾಗುವುದು ಬಲು ದೊಡ್ಡ ಮಾತೇ ಸರಿ! ಇದಕ್ಕೆ ಕಾರಣ ವೆಂದರೆ ಗಂಗಾಪ್ರಸಾದ ಜೌನ್‌ಪುರದಲ್ಲಿ ಚಳವಳಿಯನ್ನು ಹತ್ತಿಕ್ಕುವುದರಲ್ಲಿ ತುಂಬ ಯಶಸ್ವಿಯಾಗಿದ್ದ. ಕಾನಪುರದಲ್ಲಿ ಕಾಂಗ್ರೆಸಿಗೆ ತುಂಬ ಧನಸಹಾಯ ಸಿಗುತ್ತಿತ್ತು. ಆದ್ದರಿಂದ ಕಾನಪುರದಲ್ಲಿ ಕಾಂಗ್ರೆಸ್ ಆಂಧೋಳನದ ಬೇರು ಕೀಳಲು ಸಮರ್ಥನಾದವ ನೆಂದರೆ ಗಂಗಾಪ್ರಸಾದನೇ ಎಂಬ ಭಾವನೆ ಸರಕಾರಕ್ಕೆ ಬಂದಿತ್ತು. ಗಂಗಾಪ್ರಸಾದ ಚಾರ್ಜು ವಹಿಸಿಕೊಳ್ಳಲು ಕಾನಪುರಕ್ಕೆ ಹೊರಟಿದ್ದ. ಕಾನಪುರದಲ್ಲಿ ಸರಿಯಾದ ವ್ಯವಸ್ಥೆ ಯಾಗುವವರೆಗೆ ಅವನ ಸಂಸಾರ ಅಲಹಾಬಾದಿನಲ್ಲಿರುವುದೆಂದು ತೀರ್ಮಾನವಾಗಿ ಅವರೆಲ್ಲರೂ ಅಲ್ಲಿಗೆ ಹೊರಟುಬಂದಿದ್ದರು.

"ಕಮಿಷನರನ್ನ ಕಂಡು ಬಂದೆಯಾ? ಏನು ಮಾತುಕತೆ ನಡೀತು?" ಜ್ಞಾನ ಪ್ರಕಾಶ ಗಂಗಾಪ್ರಸಾದನನ್ನು ಕೇಳಿದ.

ಗಂಗಾಪ್ರಸಾದ ನಗುತ್ತ ಉತ್ತರಿಸಿದ, "ಕಮಿಷನರ್ ಜೊತೆ ಮಾತುಕತೆ! ದಮನ–ದಮನ–ದಮನ! ಸದ್ಯಕ್ಕೆ ಬ್ರಿಟಿಷ್ ಸರಕಾರ ಇಲ್ಲಿ ಖಾಯಂ ಆಗಿ ಇರ

ಬೇಕಾಗಿದೆ. ಅದಕ್ಕೋಸ್ಕರ ಆಂಧೋಳನಾನ ಅಡಗಿಸಬೇಕಾಗಿದೆ. ಇವತ್ತು ಸಂಜೆಯ ಗಾಡೀಗೇ ನಾನು ಕಾನಪುರಕ್ಕೆ ಹೊರಡಬೇಕು. ನಾಳೆ ಚಾರ್ಜು ವಹಿಸಿಕೋತೀನಿ. ಆಂಧೋಳನಕ್ಕೆ ಸಿಗ್ತಿರೋ ಲಕ್ಷಾಂತರ ರೂಪಾಯಿಗಳನ್ನ ತಡೆಯೋದಕ್ಕೆ ಏನು ಉಪಾಯ ಮಾಡಬೇಕು ಅನ್ನೋದರಲ್ಲೂ ನಾನು ಸಹಾಯ ಮಾಡಬೇಕಾಗಿದೆ."

ಜ್ಞಾನಪ್ರಕಾಶ ಚಿಂತೆ ತುಂಬಿದ ಧ್ವನಿಯಲ್ಲಿ ಹೇಳಿದ, "ಗಂಗಾ, ಒಂದು ಮಾತು ಕೇಳ್ತೀಯಾ?"

"ಚಿಕ್ಕಪ್ಪ, ರಾಜಕೀಯದಲ್ಲಿ ನನ್ನದು ಸರಕಾರೀ ಪಕ್ಷ. ಆ ವಿಷಯದಲ್ಲಿ ನನಗೆ ಏನನ್ನು ಒಪ್ಪಿಸೋಕ್ಕೂ ಪ್ರಯತ್ನಿಸಬೇಡ."

ಜ್ಞಾನಪ್ರಕಾಶ ಎರಡನೆಯ ಮಾತಾಡಲಿಲ್ಲ. ತೆಪ್ಪಗೆ ಕುಳಿತುಕೊಂಡು ಯೋಚಿಸ ತೊಡಗಿದ. ಗಂಗಾಪ್ರಸಾದನಿಂದ ಅವನು ಈ ಉತ್ತರ ನಿರೀಕ್ಷಿಸಿರಲಿಲ್ಲ ವೆಂಬುದು ಸ್ಪಷ್ಟವಾಗಿತ್ತು. ಅವನ ಕಣ್ಣಲ್ಲಿ ಗಾಢವಾದ ವ್ಯಸನ ತುಂಬಿತ್ತು.

ಗಂಗಾಪ್ರಸಾದ ಮನೆಯೊಳಕ್ಕೆ ಹೋದ. ಅವನು ಅವತ್ತೇ ಹೊರಡುವ ಏರ್ಪಾಡು ಮಾಡಬೇಕಾಗಿತ್ತು. ಜ್ವಾಲಾಪ್ರಸಾದನೂ ಮಗನ ಹಿಂದೆಹಿಂದೆಯೇ ಹೋದ. ಮೂಲೆಯಲ್ಲಿ ತೆಪ್ಪಗೆ ನಿಂತು ಇದನ್ನೆಲ್ಲಾ ನೋಡುತ್ತಿದ್ದ ನವಲ್ ಜ್ಞಾನಪ್ರಕಾಶನ ಹತ್ತಿರ ಬಂದು, "ಬಾಬಾ, ದೊಡ್ಡೋನಾದ ಮೇಲೆ ನಾನೂ ಜೈಲಿಗೆ ಹೋಗ್ತೀನಿ, ನೀವು ವ್ಯಸನ ಪಡಬೇಡಿ. ಭಾರತ ಮಾತಾಕಿ ಜೈ," ಎಂದು ಕೂಗಿದ.

ಜ್ಞಾನಪ್ರಕಾಶ ನಕ್ಕ, "ಇಲ್ಲ, ಮಗು, ನನಗೇನೂ ವ್ಯಸನವಿಲ್ಲ. ದೇವರು ಮನಸ್ಸು ಮಾಡಿದರೆ ನೀನು ಜೈಲಿಗೆ ಹೋಗೋ ಅಗತ್ಯವೇ ಬೀಳೋಲ್ಲ. ಭಾರತದೇಶದ ಸ್ವಾತಂತ್ರ್ಯಸುಖಾನ ಉಣ್ಣೋರು ನೀವೇ! ಒಳ್ಳೇದು, ನಿನಗೆ ಸ್ಕೂಲಿಗೆ ಹೋಗೋ ಹೊತ್ತಾಯ್ತು."

ನವಲನೂ ವಿದ್ಯಳೂ ಜಗಳ ಕಾಯುತ್ತ ಮನೆಯೊಳಗೆ ಹೋದರು. ಜ್ಞಾನ ಪ್ರಕಾಶ ಯಾರದ್ದೋ ನಿರೀಕ್ಷೆಯಲ್ಲಿರುವವನಂತೆ ಮೌನವಾಗಿ ಕುಳಿತು ಏನನ್ನೋ ಯೋಚಿಸುತ್ತಿದ್ದ. ಆ ಹೊತ್ತಿಗೆ ಮನೆಯ ಮುಂದಿನ ಪೋರ್ಟಿಕೋದಲ್ಲಿ ಒಂದು ಟಾಂಗಾ ಬಂದು ನಿಂತುಕೊಂಡಿತು. ಪಂಡಿತ ಜಯನಾಥ ಪಾಂಡೆ, ಅವನ ಸಂಗಡ ಒಬ್ಬ ಯುವಕ ಟಾಂಗಾದಿಂದ ಇಳಿದರು. ಜ್ಞಾನಪ್ರಕಾಶ ವರಾಂಡಕ್ಕೆ ಬಂದು ಅವರಿಬ್ಬರನ್ನೂ ಸ್ವಾಗತಿಸಿದ, "ಬನ್ನಿ, ಪಾಂಡೇಜಿ. ತುಂಬ ಹೊತ್ತು ಮಾಡಿಬಿಟ್ಟಿರಲ್ಲ?"

"ಹೌದು, ಇವರನ್ನ ಹುಡುಕೋದು ಹೊತ್ತಾಯ್ತು. ಇವರೇ, ನಾನು ಹೇಳ್ತಿದ್ದೆ ನಲ್ಲ, ಶ್ರೀ ಗೆಂದಾಲಾಲಜಿ. ಈ ವರ್ಷ ಎಫ್.ಎ. ಪಾಸು ಮಾಡಿದಾರೆ. ಚರ್ಮದ ಕಾರಖಾನೆ ತೆಗೀಬೇಕು ಅಂತ ಯೋಚಿಸ್ತಿದಾರೆ."

ಗೆಂದಾಲಾಲ ಬಗ್ಗಿ ಜ್ಞಾನಪ್ರಕಾಶನಿಗೆ ಸಲಾಮು ಮಾಡಿದ. ಅದಕ್ಕೆ ಉತ್ತರವಾಗಿ ಜ್ಞಾನಪ್ರಕಾಶ "ಒಳಗೆ ಬನ್ನಿ, ಇಬ್ಬರೂ" ಎಂದ.

ಗೆಂದಾಲಾಲ ಕಚ್ಚೆಪಂಚೆ ಉಟ್ಟಿದ್ದ. ಷರ್ಟಿನ ಮೇಲೆ ತೆರೆದ ಕಾಲರಿನ ಕೋಟು ತೊಟ್ಟಿದ್ದ. ಸುಮಾರು ನಡುಎತ್ತರದ ಗಟ್ಟಿಮುಟ್ಟಾದ ದೇಹ, ಮಡವೆಯಿಂದ ತುಂಬಿದ ದುಂಡು ಮುಖ, ನಸುಗಪ್ಪು ಬಣ್ಣ. ತಲೆಗೆ ರುಮಾಲು ಕಟ್ಟಿದ್ದ. ವಯಸ್ಸು ಸುಮಾರು ಇಪ್ಪತ್ತೈದು ಇಪ್ಪತ್ತಾರಿರಬಹುದು. ಕೊಂಚ ಹಿಂಜರಿಯುತ್ತ ಅವನು ಕೋಣೆಯೊಳಗೆ ಕಾಲಿಟ್ಟ. ಜಯನಾಥ ಪಾಂಡೆ, ಜ್ಞಾನಪ್ರಕಾಶರು ಕುಳಿತುಕೊಂಡರು. ಆದರೆ ಗೆಂದಾಲಾಲ ಕುಳಿತುಕೊಳ್ಳಲು ಧೈರ್ಯ ಸಾಲದವನಂತೆ ನಿಂತೇ ಇದ್ದ. "ಕೂತುಕೊಳ್ಳಿ, ಗೆಂದಾಲಾಲ್‌ಜಿ. ಯಾಕೆ ನಿಂತಿದ್ದೀರಿ?" ಜ್ಞಾನಪ್ರಕಾಶ ಹೇಳಿದ.

"ಏನೂ ಪರವಾಗಿಲ್ಲ. ನಿಂತಿರೋದರಲ್ಲಿ ನನಗೇನು ಅಸೌಕರ್ಯವಿಲ್ಲ. ಪಂಡಿತ್‌ಜಿ ನನ್ನನ್ನ ಟಾಂಗಾದಲ್ಲಿ ಕರಕೊಂಡು ಬಂದರು. ಸಾಧಾರಣವಾಗಿ ನಡಕೊಂಡು ಹೋಗೋದೇ ನನ್ನ ವಾಡಿಕೆ."

ಜ್ಞಾನಪ್ರಕಾಶ ಎದ್ದು ಗೆಂದಾಲಾಲನ ಕೈಹಿಡಿದುಕೊಂಡು ಹೇಳಿದ, "ಅರೆ, ಕೂತು ಕೊಳ್ಳಿ. ಏನೂ ಯೋಚಿಸಬೇಡಿ. ಸ್ಪೃಶ್ಯ-ಅಸ್ಪೃಶ್ಯ ಅನ್ನೋ ಭೇದಭಾವಾನ ನಾವು ತೊಡೆದುಹಾಕಿದೀವಿ. ಮಹಾತ್ಮ ಗಾಂಧಿಯವರು ಅದನ್ನ ಅಳಿಸಿಹಾಕಬೇಕು ಅಂತ ಸಂಕಲ್ಪ ಮಾಡಿದಾರೆ."

"ಸ್ವಾಮಿ ದಯಾನಂದರು ಈ ಕೆಲಸ ಷುರುಮಾಡಿದ್ದರು. ಅಂತೂ ಈಗ ಅದು ಸರಿಯಾಗಿ ಮುಂದುವರೀತಾ ಇದೆ. ಏನಂತೀರಿ ಜ್ಞಾನಪ್ರಕಾಶ್! ಅರೆ, ಕೂತು ಕೊಳ್ಳಯ್ಯ, ಗೆಂದಾಲಾಲ್, ನಾವೆಲ್ಲಾ ಒಂದೇ," ಜಯನಾಥ ಪಾಂಡೆ ಹೇಳಿದ.

ಗೆಂದಾಲಾಲ ಸಂಕೋಚದಿಂದಲೇ ಒಂದು ಕುರ್ಚಿಯ ಮೇಲೆ ಮುದುಡಿಕೊಂಡು ಕುಳಿತು, ಆಮೇಲೆ ಕೊಂಚ ಯೋಚಿಸಿ "ಹೇಳಿ, ಏನು ಹೇಳೋದಿದೆ?" ಅಂದ.

"ನೀವು ವಿಲಾಯಿತಿ ಮಾದರೀಲಿ ಚರ್ಮದ ಕಾರಖಾನೆ ತೆಗೀತಿದೀರಿ ಅಂತ ಕೇಳಿದೆ," ಜ್ಞಾನಪ್ರಕಾಶ ಹೇಳಿದ.

"ತೆಗೆಯೋದೇನು ಬಂತು, ತೆಗೆಯೋಕ್ಕೆ ಖಂಡಿತ ಪ್ರಯತ್ನಪಡ್ತಿದೀನಿ. ಆದರೆ ಹಣದ ಕೊರತೆ ಇದೆ. ಸರಕಾರಕ್ಕೆ ಬರೆದು ವರ್ಷದ ಮೇಲಾಯ್ತು. ಅಲ್ಲಿ ಇಲ್ಲಿ ಸಾಲ ಕೇಳಿದೆ. ಆದರೆ ತುಂಬಾ ಬಡ್ಡಿ ಕೇಳ್ತಾರೆ. ಮೇಲೆ ಲಾಭದಲ್ಲಿ ಅರ್ಧಪಾಲು ಕೊಡಬೇಕು ಅಂತಾರೆ."

"ಕಾರಖಾನೆ ನಡೆಯೋಕ್ಕೆ ಷುರುವಾದ ಮೇಲೆ ಹಣ ಹಾಕಿದವರು ಮಾಲಿಕರಾಗ್ತಾರೆ; ಗೆಂದಾಲಾಲ ಕಾರಖಾನೆಯಿಂದ ಹೊರಗೆ ಬರೋದು, ಇಲ್ಲವೇ ಅಲ್ಲಿ ನೌಕರಿ ಮಾಡೋದು —ಷರತ್ತು ಹೀಗೂ ಇದೆ. ಏನು ಗೆಂದಾಲಾಲ್, ನಾನು ಹೇಳೋದು ಸರಿತಾನೆ! ಆದ್ದರಿಂದ ಸದ್ಯಕ್ಕೆ ಕಾರಖಾನೆ ಯೋಚನೆ ಬಿಡಿ ಅಂತ ಇವರಿಗೆ ಹೇಳಿದೆ."

"ಹೌದು, ಪಂಡಿತ್‌ಜೀ, ಯೋಚನೇನೇನೋ ಬಿಡ್ತಿದೀನಿ, ಆದರೆ ಒಂದೊಂದು ಸಲ ಮನಸ್ಸಿಗೆ ನೋವಾಗುತ್ತೆ. ವಿಲಾಯಿತಿ ಚರ್ಮಕ್ಕಿಂತ ಒಳ್ಳೇ ಚರ್ಮ ತಯಾರಿಸ

ಬಹುದು. ಆದರೆ ಅದಕ್ಕೆ ನಮಗೆ ಅವಕಾಶ ಸಿಗಬೇಕಲ್ಲ. ಎಲ್ಲಿ ನೋಡಲಿ, ಅನ್ಯಾಯ ತಾಂಡವವಾಡ್ತಾ ಇದೆ."

ಜ್ಞಾನಪ್ರಕಾಶ ಈಗ ವಿಷಯಕ್ಕೆ ಬಂದ, "ಈಗ ನಡೀತಿರೋ ಆಂಧೋಳನದ ಬಗ್ಗೆ ನಿಮ್ಮ ಅಭಿಪ್ರಾಯವೇನು, ಗೆಂದಾಲಾಲ್‌ಜಿ?"

"ಈ ಆಂಧೋಳನ! ಇದರಲ್ಲಿ ನನ್ನದೇನು ಅಭಿಪ್ರಾಯ ಇರೋಕ್ಕೆ ಸಾಧ್ಯ? ಇದೆಲ್ಲಾ ನಿಮ್ಮಂಥವರಿಗೆ ಸೇರಿದ ವಿಷಯ. ನಾವು ಅಸ್ಪೃಶ್ಯರಿಗೆ ಇದನ್ನೆಲ್ಲಾ ಕಟ್ಟಿ ಕೊಂಡು ಏನಾಗಬೇಕು? ನಾವಂತೂ ಜನ್ಮಜನ್ಮಾಂತರದವರೆಗೆ ನಿಮ್ಮಗಳ ಗುಲಾಮ ಗಿರಿ ಮಾಡಬೇಕಾಗಿದೆ."

ಗೆಂದಾಲಾಲನ ಧ್ವನಿಯಲ್ಲಿ ಒಂದು ಬಗೆಯ ಕಹಿಯಿದ್ದದ್ದು ಜ್ಞಾನಪ್ರಕಾಶನಿಗೆ ಸ್ಪಷ್ಟವಾಗಿ ಗೊತ್ತಾಯಿತು. ಅವನಂದ, "ಇಲ್ಲ ಗೆಂದಾಲಾಲ್‌ಜಿ. ನಿಮ್ಮನ್ನು ನೀವೇ ಅಸ್ಪೃಶ್ಯರು ಅಂದುಕೋಬೇಡಿ! ನಾವು ಸವರ್ಣೀಯರು ನಿಮ್ಮಗಳ ಮೇಲೆ ಅತ್ಯಾಚಾರ ಮಾಡಿ ಕತ್ತು ಹಿಸುಕಿದ್ದರ ದುಷ್ಪರಿಣಾಮವನ್ನು ಸಾವಿರಾರು ವರ್ಷಗಳಿಂದ ಗುಲಾಮ ಗಿರಿ ಮಾಡಿ ಆ ಮೂಲಕ ಅನುಭವಿಸಿದೀವಿ. ಇವತ್ತು ನಮ್ಮ ದೇಶದ ಒಂದೊಂದು ಮಗುವೂ ಆ ಕಾರಣದಿಂದಾಗಿ ಅಪಮಾನಿತವಾಗಿದೆ, ಅಸ್ಪೃಶ್ಯವಾಗಿದೆ."

ಗೆಂದಾಲಾಲನಿಗೆ ಜ್ಞಾನಪ್ರಕಾಶನ ಮಾತು ಅರ್ಥವಾದಂತೆ ಕಾಣಲಿಲ್ಲ; ಅವನಿಗೆ ಅರ್ಥವಾಗುವುದೂ ಬೇಕಾಗಿರಲಿಲ್ಲ. ಅವನು ಕೇಳಿದ, "ನೀವು ನನ್ನನ್ನ ಬರಹೇಳಿ ದ್ದೇಕೆ?"

"ಗೆಂದಾಲಾಲ್‌ಜೀ, ದೇಶದಲ್ಲಿ ಇಷ್ಟು ದೊಡ್ಡ ಆಂಧೋಳನ ನಡೀತಿದೆ. ಇದನ್ನ ನೀವು ಬಲ್ಲಿರಿ. ಈ ಆಂಧೋಳನದಲ್ಲಿ ನೀವೇಕೆ ಭಾಗವಹಿಸಬಾರದು?"

"ಏನು ಆಂಧೋಳನ? ಏನು ಭಾಗವಹಿಸೋದು?" ಗೆಂದಾಲಾಲ ಕೇಳಿದ. "ಏನೋ ನಡೀತಾ ಇದೆ ಅನ್ನೋದು ನಮಗೆ ಕಾಣುತ್ತೆ. ಆದರೆ ಇದೆಲ್ಲಾ ಯಾಕೆ, ಏನು ಅಂತ ನಮಗೆ ಯಾರೂ ತಿಳಿಸಿಲ್ಲ, ನಾವೂ ತಿಳಕೊಂಡಿಲ್ಲ. ಪ್ರಾಯಶಃ ನಮ್ಮ ಬುದ್ಧಿಗೆ ಅದು ಎಟುಕಲೂ ಆರದು. ಹೇಗೆ ತಾನೆ ಅದು ನಮ್ಮ ಬುದ್ಧಿಗೆ ಎಟುಕೋದು ಸಾಧ್ಯ ಹೇಳಿ. ನಾವು ಓದು-ಬರೆಹ ಬಲ್ಲವರಲ್ಲ. ನಾವು ಓದು-ಬರೆಹ ಕಲಿತರೆ ಸಹ ಏನು ಪ್ರಯೋಜನ ಅಂತ ನನಗನ್ನಿಸುತ್ತೆ! ನನ್ನನ್ನೇ ನೋಡಿ. ವಿದ್ಯೆ ಕಲಿತಿದೀನಿ. ಆದರೆ ಕೆಲಸ ಮಾತ್ರ ಎಲ್ಲೂ ಸಿಗೋಲ್ಲ. ಜನ ನನ್ನನ್ನ ಮುಟ್ಟಿಸಿಕೊಳ್ಳೋಕ್ಕೆ ಸಹ ಸಿದ್ಧರಿಲ್ಲ ಅಂದಮೇಲೆ ಕಚೇರೀಲಿ ತಮ್ಮ ಜೊತೆ ಕೂರಿಸಿಕೊಳ್ಳೋಕೆ ಒಪ್ತಾರೆಯೆ! ನಾನು ಓದಿದ್ದೊಂದು ಮಿಷನ್‌ಸ್ಕೂಲು. ಆದ್ದರಿಂದ ಅಲ್ಲಿ ಯಾರದ್ದೂ ಏನೂ ನಡೆಯೋ ಹಾಗಿರಲಿಲ್ಲ. ಇಲ್ಲದೆ ಹೋಗಿದ್ದರೆ ಜನ ನನಗೆ ವಿದ್ಯೆ ಕಲಿಯೋಕ್ಕೂ ಬಿಡ್ತಿರಲಿಲ್ಲ."

ಇದೇ ಹೊತ್ತಿಗೆ ಗಂಗಾಪ್ರಸಾದ ಕೋಣೆಯೊಳಕ್ಕೆ ಬಂದ. ಅವನು ಕೋಟು ಪ್ಯಾಂಟು ತೊಟ್ಟಿದ್ದ, ಟೈ ಕಟ್ಟಿದ್ದ. ಗೆಂದಾಲಾಲ ಕಕ್ಕಾಬಿಕ್ಕಿಯಾಗಿ ಎದ್ದುನಿಂತು, ಬಗ್ಗಿ

ಗಂಗಾಪ್ರಸಾದನಿಗೆ ಸಲಾಮು ಮಾಡಿದ. ಗಂಗಾಪ್ರಸಾದ ಆ ಸಲಾಮಿಗೆ ಉತ್ತರವಾಗಿ ಒಮ್ಮೆ ತಲೆಯಲ್ಲಾಡಿಸಿ ಹೇಳಿದ, "ಕೂತುಕೊ, ಎದ್ದುನಿಂತುಕೊಳ್ಳೋ ಅಗತ್ಯ ಏನಿದೆ?"

ಗೆಂದಾಲಾಲ ಮತ್ತೆ ಮೌನವಾಗಿ ಸಂಕೋಚದಿಂದ ಮೈಮುದುಡಿಕೊಂಡು ಕುಳಿತ. ಆಗ ಜ್ಞಾನಪ್ರಕಾಶ ಗಂಗಾಪ್ರಸಾದನಿಗೆ ಹೇಳಿದ, "ಇವರು ಶ್ರೀ ಗೆಂದಾಲಾಲರು. ಎಫ್.ಎ. ಪಾಸು ಮಾಡಿದಾರೆ. ಚರ್ಮದ ಕಾರಖಾನೆ ತೆಗೀಬೇಕು ಅಂತ ಯೋಚಿಸ್ತಿದಾರೆ. ಯಾಕೆ ಅಂದರೆ ಇವರು ಜಾತಿಯಿಂದ ಚರ್ಮದ ಕೆಲಸ ಮಾಡೋರು."

ಗಂಗಾಪ್ರಸಾದ ಝುಗ್ಗನೆದ್ದ. "ಚಮ್ಮಾರ! ನೀನು ಈ ಕೋಣೆ ಒಳಗೆ ಹೇಗೆ ಕಾಲಿಟ್ಟೆ? ನಡಿ ಹೊರಗೆ."

ಗಂಗಾಪ್ರಸಾದನ ಪ್ರತಿಕ್ರಿಯೆ ಹೀಗಿರುತ್ತದೆಂದು ಜ್ಞಾನಪ್ರಕಾಶನಿಗೆ ಕೊಂಚವೂ ಕಲ್ಪನೆಯಿರಲಿಲ್ಲ. ಅವನು ಗಂಗಾಪ್ರಸಾದನ ಕೈ ಹಿಡಿದುಕೊಂಡು, "ಇದೇನು ಹುಚ್ಚಾಬಟ್ಟೆ ಮಾತನಾಡ್ತಿದಿ, ಗಂಗಾ? ನಾನು ಇವರನ್ನ ಬರಹೇಳಿದೀನಿ, ಇವರ ಜೊತೆ ಮಾತನಾಡಬೇಕು ಅಂತ. ಈಗಿನ ಆಂದೋಳನದಲ್ಲಿ ನಮ್ಮ ದೇಶದ ಅಸ್ಪೃಶ್ಯರದ್ದು ಯಾವ ಪಾತ್ರವೂ ಇದುವರೆಗಿಲ್ಲ. ದೇಶದಲ್ಲಿನ ಅಸ್ಪೃಶ್ಯರ ಸಂಖ್ಯೆ ಸುಮಾರು ಆರು ಕೋಟಿ. ಇವರ ಸಹಕಾರ ನಮಗೆ ಅಗತ್ಯವಾಗಿ ಬೇಕಾಗಿದೆ."

ಈ ಹೊತ್ತಿಗೆ ಎದ್ದುನಿಂತಿದ್ದ ಗೆಂದಾಲಾಲ ಜ್ಞಾನಪ್ರಕಾಶನ ಮಾತಿಗೆ ಮೊಟಕು ಹಾಕಿದ, "ಸಹಕಾರ ತೊಗೊಳ್ಳಿ, ನಮ್ಮನ್ನ ಮುಗಿಸಿಬಿಡಿ. ಎಲ್ಲಿ ನಮಗೆ ಕೂತುಕೊಳ್ಳೋ ಅಧಿಕಾರ ಸಹ ಇಲ್ಲವೋ, ಅಲ್ಲಿ ಏನು ಮಾತುಕತೆ ನಡೆಸೋದು? ನೀವು ಆಂದೋಳನ ನಡಸಿ, ಸ್ವರಾಜ್ಯ ಪಡಕೊಳ್ಳಿ. ಆದರೆ ನಮ್ಮನ್ನು ಮಾತ್ರ ಜೀವಸಹಿತ ಇರೋಕ್ಕೆ ಬಿಡಿ! ನಾವು ನಿಮ್ಮ ಗುಲಾಮಗಿರಿ ಮಾಡೋಕ್ಕೇ ಹುಟ್ಟಿದೀವಿ," ಹೀಗಂದು ಗೆಂದಾಲಾಲ ಏನೊಂದು ಉತ್ತರಕ್ಕೂ ಕಾಯದೆ ಕೋಣೆಯಿಂದ ಹೊರಟುಹೋದ.

ಗೆಂದಾಲಾಲ ಹೋದ ಮೇಲೆ ಜ್ಞಾನಪ್ರಕಾಶ ಗಂಗಾಪ್ರಸಾದನಿಗೆ ಹೇಳಿದ, "ನಾನು ಅಂದುಕೊಂಡಿದ್ದೆ, ಮಗು. ನೀನು ಹೊಸಯುಗದ ಮನುಷ್ಯ, ವಿದ್ಯಾವಂತ, ಉದಾರ ಮನೋಭಾವದವನು ಅಂತ. ಆದರೆ ನನ್ನ ಎಣಿಕೆ ತಪ್ಪು ಅಂತ ಈಗ ಗೊತ್ತಾಗ್ತಿದೆ. ಏನೇ ಇರಲಿ, ನಾವು ಈ ಆರು ಕೋಟಿ ಅಸ್ಪೃಶ್ಯರನ್ನ ಕಳಕೊಳ್ಳೋಕೆ ಆಗೋಲ್ಲ."

ಗೆಂದಾಲಾಲ ಹೋದೊಡನೆಯೇ ಗಂಗಾಪ್ರಸಾದನಿಗೆ ತಾನು ಮಾಡಿದುದು ತಪ್ಪು ಎಂದು ಅನ್ನಿಸದೇ ಇರಲಿಲ್ಲ. ಆದರೆ ಅದೇ ಸರಿಯೆಂದು ಸ್ಥಾಪಿಸುವುದೇ ತನ್ನ ಪರಮ ಕರ್ತವ್ಯವೆಂಬಂತೆ ಅವನು ಕೊಂಚ ಯೋಚನೆ ಮಾಡಿ ಹೇಳಿದ, "ಈ ಐದಾರು ಕೋಟಿ ಅಸ್ಪೃಶ್ಯರು, ಸುಮಾರು ಏಳೆಂಟು ಕೋಟಿ ಮುಸಲಮಾನರು! ಒಟ್ಟು ಸೇರಿ ಹದಿಮೂರು ಹದಿನಾಲ್ಕು ಕೋಟಿಯಾಗ್ತಾರೆ. ಈ ಹದಿಮೂರು ಹದಿನಾಲ್ಕು ಕೋಟಿ ಜನರ ಸಮಸ್ಯೆಯನ್ನ ಮೊದಲು ಬಿಡಿಸಿ ಆಮೇಲೆ ಸ್ವರಾಜ್ಯದ ವಿಷಯ ಯೋಚಿಸು,

ಚಿಕ್ಕಪ್ಪಣ್ಣ. ನಾನು ಸ್ವರಾಜ್ಯಾನೂ ಪಡೆಯಬೇಕಾಗಿಲ್ಲ, ಈ ಜನರ ಸಮಸ್ಯೇನೂ ಬಿಡಿಸಬೇಕಾಗಿಲ್ಲ. ಇವತ್ತು ಸಂಜೆಗಾಡಿ ಹಿಡಿದು ಕಾನಪುರಕ್ಕೆ ಹೋಗಬೇಕಾಗಿದೆ."

ಜಯನಾಥ ಪಾಂಡೆಯೂ ಎದ್ದುನಿಂತ. "ನೀವು ಗೆಂದಾಲಾಲನ ಚಿಂತೆ ಬಿಡಿ. ಅವನು ನಮ್ಮವನೇ" ಎಂದು ಜ್ಞಾನಪ್ರಕಾಶನಿಗೆ ಹೇಳಿ, ಮತ್ತೆ ಗಂಗಾಪ್ರಸಾದನ ಕಡೆ ತಿರುಗಿ, "ಬಾಬು ಗಂಗಾಪ್ರಸಾದ್, ಮುಸಲಮಾನರ ಸಮಸ್ಯೆಯನ್ನಂತೂ ನಾವು ಬಗೆಹರಿಸಿದೀವಿ. ಇನ್ನು ಅಸ್ಪೃಶ್ಯರ ಸಮಸ್ಯೆ. ಅದರ ರೂಪ ಏನೇ ಇರಲಿ, ಅದನ್ನ ಬಗೆಹರಿಸೋಕ್ಕೆ ಮಹಾತ್ಮ ಗಾಂಧಿ ಸಂಕಲ್ಪ ಮಾಡಿದಾರೆ. ಈಗ ಗೆಂದಾಲಾಲ ಎದ್ದು ಹೋದ ಅಂತ ಅಸ್ಪೃಶ್ಯರು ನಮ್ಮಿಂದ ದೂರ ಉಳಿದಿದಾರೆ ಅಂತ ನೀವು ತಿಳೀತೀರಿ. ಆದರೆ ಅವರು ನಮ್ಮ ಕೈಬಿಟ್ಟು ಹೋಗೋದು ಸಾಧ್ಯವಿಲ್ಲ. ಅವರು ನಮ್ಮವರು, ನಮ್ಮ ಜೊತೆ ಇದ್ದೇ ಇರ್ತಾರೆ."

ಜಯನಾಥನಾಡಿದ ಮಾತು ಗಂಗಾಪ್ರಸಾದನ ಮೇಲೆ ಯಾವ ಪರಿಣಾಮ ಮಾಡಿತೆಂದು ಹೇಳುವುದು ಕಷ್ಟ. ಜಯನಾಥ ಹೋದಮೇಲೆ ಗಂಗಾಪ್ರಸಾದ ಜ್ಞಾನಪ್ರಕಾಶನಿಗೆ ಹೇಳಿದ, "ಚಿಕ್ಕಪ್ಪ, ಇಷ್ಟು ಹೇಳ್ತೀನಿ, ಕೇಳು. ನಿಮ್ಮ ಈ ಆಂಧೋಳನ ಯಶಸ್ವಿಯಾಗೋಲ್ಲ. ಸ್ವಾತಂತ್ರ್ಯ ಪಡೆಯೋ ಯೋಗ್ಯತೆ ಬರಬೇಕಾದರೇನೇ ಈ ದೇಶಕ್ಕೆ ಸಾವಿರಾರು ವರ್ಷ ಹಿಡಿಯುತ್ತೆ. ಈ ಸ್ವಾತಂತ್ರ್ಯ ಹಾಗೂ ಸಮಾನತೆಯ ಹೊಸ ಚೇತನವೇನಿದೆ, ಅದು ಇಂಗ್ಲೀಷಿನೋರಿಂದಲೇ, ಇಂಗ್ಲಿಷ್ ಶಿಕ್ಷಣದಿಂದಲೇ ಬಂದದ್ದು ಅನ್ನೋದನ್ನ ನೀವು ಒಪ್ಪಲೇಬೇಕಾಗುತ್ತೆ. ಮೊದಲು ಆ ಶಿಕ್ಷಣಾನ ಪೂರ್ಣವಾಗಿ ದೊರಕಿಸಿಕೊಂಡಾದಮೇಲೆ ಮಾತ್ರ ನಾವು ಸ್ವಾತಂತ್ರ್ಯ ಕುರಿತು ಯೋಚಿಸಬಹುದು. ಈ ಆಂಧೋಳನ ನಡೀತಾ ಇರೋ ರೀತೀಲಿ ಅದಕ್ಕೆ ದೃಢವಾದ ಯಾವ ಯೋಜನೆಯೂ ಇಲ್ಲ, ಯಾವ ಸಿದ್ಧತೆಯೂ ಇಲ್ಲ. ಅಂದಮೇಲೆ ಅಧಕ್ಕೆ ಸೋಲಾಗೋದು ಖಂಡಿತ."

ಗಂಗಾಪ್ರಸಾದನ ಈ ಮಾತಿಗೆ ಜ್ಞಾನಪ್ರಕಾಶ ಏನೂ ಉತ್ತರ ಕೊಡಲಿಲ್ಲ. ಅವನಿಗೆ ಪ್ರಾಯಶಃ ವಾದ ಹೂಡುವ ಮನಸ್ಸಿರಲಿಲ್ಲವೇನೋ. ಅವನಂದ, "ನೀನು ಇವತ್ತು ಸಂಜೆ ಹೊರಡೋದು ತೀರ್ಮಾನವಾಗಿದೆ. ಈ ಆಂಧೋಳನದ ಬಗ್ಗೆ ನಿನ್ನ ಹೃದಯದಲ್ಲಿ ಒಂದಿಷ್ಟು ಸಹಾನುಭೂತಿ ಹುಟ್ಟೋ ಹಾಗೆ ಪ್ರಯತ್ನಿಸು."

ಗಂಗಾಪ್ರಸಾದ ಕಾನಪುರವನ್ನು ತಲಪಿದ ಮರುದಿನವೇ ಚಾರ್ಜು ವಹಿಸಿಕೊಂಡ. ಚಳಿ ಜೋರಾಗಿತ್ತು. ತನಗೊಂದು ಹೊಸ ಉಣ್ಣೆಯ ಸೂಟಿನ ಅವಶ್ಯಕತೆಯಿದೆಯೆಂದು ಗಂಗಾಪ್ರಸಾದನಿಗೆ ಅನ್ನಿಸಿತು. ಕಾನಪುರಕ್ಕೆ ಬಂದ ಮೇಲೆ ಅವನ ಸಾಮಾಜಿಕ ಸಂಪರ್ಕವೂ ಹೆಚ್ಚಿತ್ತು. ಕಾನಪುರದಲ್ಲಿ ಅನೇಕ ಮಿಲ್ಲುಗಳಿದ್ದ ಕಾರಣ ತುಂಬ ಜನ ಪರಂಗಿಯವರು ವಾಸಿಸುತ್ತಿದ್ದರು. ಗಂಗಾಪ್ರಸಾದ ಅವರಲ್ಲಿ ಹೋಗಿ ಬಂದು ಮಾಡ

ಬೇಕಾಗುತ್ತಿತ್ತು. ಅವನ ಬಂಗಲೆಯಿದ್ದದ್ದು ಸಿವಿಲ್ ಲೈನ್ಸ್‌ನಲ್ಲಿ. ಅವನು ನವಲನನ್ನು ಕಾನ್ವೆಂಟಿಗೆ ಸೇರಿಸಿದ. ಅವತ್ತು ಕಚೇರಿಯ ಕೆಲಸ ಮುಗಿಸಿ ಬಟ್ಟೆ ಕೊಂಡು ಬರಲು ನೇರವಾಗಿ ಪೇಟೆಯ ಕಡೆ ಹೊರಟ.

ಗಂಗಾಪ್ರಸಾದ ಬಟ್ಟೆ ಕೊಂಡು ವಾಪಸು ಮನೆಯ ಕಡೆ ನಡೆದಾಗ ಬಜಾರಿನ ಗುಂಪು ಗದ್ದಲ ಕಡಮೆಯಾಗಿತ್ತು. ಮನೆ ತಲಪಿದ ಕೂಡಲೇ ಬೆಳಗ್ಗೆ ಏಳು ಗಂಟೆಗೆ ತಮ್ಮನ್ನು ಬಂದು ಕಾಣಬೇಕೆಂದೂ ತುರ್ತಾಗಿ ಏನೋ ಚರ್ಚೆ ಮಾಡಬೇಕಾಗಿದೆಯೆಂದೂ ಕಲೆಕ್ಟರ್ ಅವರಿಂದ ಸಂದೇಶ ಬಂದಿತು.

ಮರುದಿನ ಬೆಳಗ್ಗೆ ಗಂಗಾಪ್ರಸಾದ ಕಲೆಕ್ಟರ್‌ರ ಮನೆ ತಲಪಿದಾಗ ಅವರು ವರಾಂಡದಲ್ಲಿ ಕುಳಿತು ಚಹ ಕುಡಿಯುತ್ತಿದ್ದರು. ಗಂಗಾಪ್ರಸಾದನಿಗೂ ಒಂದು ಕಪ್ಪು ಚಹ ಬೆರಸಿಕೊಡುತ್ತ ಹೇಳಿದರು, " ಮಿಸ್ಟರ್ ಗಂಗಾಪ್ರಸಾದ್, ತುಂಬ ಗಂಭೀರವಾದ ಸುದ್ದಿ ಬಂದಿದೆ. ನಿನ್ನೆ ಬೊಂಬಾಯಿಯಲ್ಲಿ ಬ್ರಿಟಿಷ್ ರಾಜಕುಮಾರರು ಬಂದಾಗ ಪೋಲೀಸರು ಗುಂಪಿನ ಮೇಲೆ ಗುಂಡು ಹಾರಿಸಬೇಕಾಯಿತು."

ಗಂಗಾಪ್ರಸಾದ ಗಾಬರಿಯಾದ, " ಗುಂಪಿನ ಮೇಲೆ ಗುಂಡು ಹಾರಿಸಬೇಕಾಯಿತು ! ಹೀಗಾಗಬಾರದಿತ್ತು. ರಾಜಕುಮಾರರು ಏನಂದುಕೊಂಡಿರಬೇಕು."

ಕಲೆಕ್ಟರ್ ಹೇಳಿದರು, "ರಾಜಕುಮಾರರು ಏನಂದುಕೊಂಡರು ಅನ್ನೋದಕ್ಕಿಂತ ಹೆಚ್ಚು ಮಹತ್ವಪೂರ್ಣವಾದ ಪ್ರಶ್ನೆ ಅಂದರೆ ಈ ಆಂಧೋಳನ ಇಷ್ಟು ದೊಡ್ಡದಾಗಿ ಹೇಗೆ ಬೆಳೀತು ಅನ್ನೋದು. ರಾಜಕುಮಾರರನ್ನ ಬಾಯ್‌ಕಾಟ್ ಮಾಡ್ತಾರೆ ಅನ್ನೋದು ನಮಗೆ ಗೊತ್ತಿತ್ತು. ಆದರೆ ಈ ಬಾಯ್‌ಕಾಟ್ ಇಷ್ಟು ಉಗ್ರವಾಗಿ ಹಿಂಸಾತ್ಮಕ ರೂಪ ತಾಳುತ್ತೆ ಅಂತ ನಾವು ಕಲ್ಪನೆ ಮಾಡಿರಲಿಲ್ಲ. ಇಲ್ಲಿ ಪಟ್ಟಣದಲ್ಲಿ ಏನು ನಡೀತಿದೆ? ನಿಮಗೇನಾದರೂ ಗೊತ್ತೆ ? "

" ಇಲ್ಲಿ ಕಾನಪುರದ ಸ್ಥಿತಿ ಸಹ ಅಷ್ಟೇನು ಚೆನ್ನಾಗಿದೆ ಅನ್ನೋ ಹಾಗಿಲ್ಲ. ನಿನ್ನೆ ಸಂಜೆ ಒಂದಿಷ್ಟು ಬಟ್ಟೆ ಕೊಂಡುಕೊಳ್ಳೋಣ ಅಂತ ಪೇಟೇಗೆ ಹೋಗಿದ್ದೆ. ಮೂಲ ಗಂಜಿನ ಚೌಕದಲ್ಲಿ ವಿದೇಶೀ ಬಟ್ಟೆಗಳನ್ನ ಸುಟ್ಟರು. ಜನಗಳನ್ನ ಉದ್ರೇಕಿಸುವಂಥಾ ಭಾಷಣಗಳಾದವು. ಪೇಟೇಲೆಲ್ಲಾ ಒಂದು ತರಹದ ಗಾಬರಿ ತುಂಬಿಕೊಂಡಿದೆ. ವ್ಯಾಪಾರಿಗಳು ತಮ್ಮ ತಮ್ಮ ಅಂಗಡಿಗಳಿಂದ ವಿದೇಶೀ ಬಟ್ಟೇನ ತೆಗೆದುಹಾಕ್ತಿದಾರೆ. ಈ ಸ್ವದೇಶೀ ಆಂಧೋಳನ ಬಿರುಸಾಗಿ ಹರಡ್ತಾ ಇದೆ. ವಿದೇಶೀ ಬಟ್ಟೆ ಅಂಗಡಿಗಳ ಮುಂದೆ ಸದ್ಯದಲ್ಲಿಯೇ ಮುಷ್ಕರ ಷುರುವಾಗುತ್ತೆ ಅಂತ ನನಗನ್ನಿಸುತ್ತೆ."

" ಹಾಗೇನು ? " ಕಲೆಕ್ಟರ್ ಕೊಂಚ ಆತಂಕದ ಧ್ವನಿಯಲ್ಲಿ ಹೇಳಿದರು, " ಮಿಸ್ಟರ್ ಗಂಗಾಪ್ರಸಾದ್, ಸರಕಾರದ ಅಪ್ಪಣೆಯಾಗಿದೆ. ನಾವು ಜಾಗರೂಕರಾಗಿರಬೇಕು. ರಾಜಕುಮಾರರು ಮದರಾಸು ಮುಖಾಂತರ ಕಲಕತ್ತೆಗೆ ಹೋಗ್ತಿದಾರೆ. ಡಿಸೆಂಬರ್ ಇಪ್ಪತ್ತೈದನೇ ತಾರೀಕು ಕಲಕತ್ತೆ ತಲಪಿ ಅಲ್ಲಿ ಕ್ರಿಸ್‌ಮಸ್ ಆಚರಿಸ್ತಾರೆ. ಆಗ ಗವರ್ನರ್

ಜನರಲ್ಲರು ಅಲ್ಲಿರ್ತಾರೆ. ಜನವರೀಲಿ ರಾಜಕುಮಾರರು ಉತ್ತರಭಾರತದಲ್ಲಿ ಸಂಚಾರ ಮಾಡ್ತಾರೆ. ಬೊಂಬಾಯಿಯಲ್ಲಿ ನಡೆದಂಥ ಘಟನೆ ಇಲ್ಲೂ ನಡೀಬಾರದು. ಅದಕ್ಕೆ ನಾವು ಈಗಿನಿಂದಲೇ ಎಚ್ಚರಿಕೆ ವಹಿಸಿ, ಪೂರ್ತಿ ತಯಾರಿ ಮಾಡಿಕೋಬೇಕಾಗಿದೆ."

"ಹೌದು, ನಿಜ. ಆದರೆ ಈ ತಯಾರಿ ಹೇಗೆ ಇರಬೇಕು ಅಂತೀರಿ?" ಗಂಗಾಪ್ರಸಾದ ಕೇಳಿದ.

"ನನಗೆ ಅನ್ನಿಸೋದು, ಕಾಂಗ್ರೆಸ್ ಮುಖಂಡರು ಹಾಗೂ ಪ್ರಮುಖ ಕಾರ್ಯಕರ್ತರುಗಳದ್ದೊಂದು ಪಟ್ಟಿ ತಯಾರಿಸಬೇಕು. ಡಿಸೆಂಬರ್ ಕೊನೇವಾರದಲ್ಲಿ ಅವರೆಲ್ಲರನ್ನೂ ದಸ್ತಗಿರಿ ಮಾಡಬೇಕಾಗುತ್ತೆ. ಈ ಕಾಂಗ್ರೆಸ್ ಸ್ವಯಂಸೇವಕದಳ ಏನಿದೆ, ಅದಕ್ಕೆ ಹಣ ಎಲ್ಲಿಂದ ಬರ್ತಿದೆ ಅನ್ನೋದಾದರೂ ನಮಗೆ ಗೊತ್ತಾಗಬೇಕು." ಕಲೆಕ್ಟರ್ ಕೊಂಚ ತಡೆದು ಮತ್ತೆ ಕೇಳಿದರು, "ಮಿಸ್ಟರ್ ಗಂಗಾಪ್ರಸಾದ್, ಕಾಂಗ್ರೆಸ್ಸಿಗೆ ಈ ಹಣ ಎಲ್ಲಿಂದ ಬರ್ತಿದೆ ಅಂತ ಊಹಿಸಬಲ್ಲಿರಾ? ಈ ಕಾನಪುರದಲ್ಲಂತೂ ದೊಡ್ಡ ಜಮೀನುದಾರರು, ತಾಲ್ಲೂಕ್‌ದಾರರುಗಳಿಲ್ಲ."

ಗಂಗಾಪ್ರಸಾದನ ತಲೆಯಲ್ಲಿ ಮೂಲಗಂಜ್‌ನ ಜವಳಿವ್ಯಾಪಾರಿಗಳ ಮಾತು ಗುಯ್ಗುಡುತ್ತಿತ್ತು. "ಸ್ವದೇಶೀ ಆಂಧೋಳನದಿಂದಾಗಿ ದೇಸೀ ಮಿಲ್ಲುಗಳ ಭಾಗ್ಯ ಬೆಳಗೋದುಂ ಕಾಣೋಲ್ಲವೆ?" ಅವನು ಕೊಂಚ ಅನುಮಾನಿಸುತ್ತ ಹೇಳಿದ, "ಈ ಆಂಧೋಳನದಿಂದ ನೇರವಾಗಿ ಯಾರಿಗೆ ಲಾಭವಾಗುತ್ತೋ, ಅಂದರೆ ಮಿಲ್ ಮಾಲಿಕರು, ವ್ಯಾಪಾರಿಗಳು, ಅವರಿಂದ ಹಣ ಬರುತ್ತೆ ಅಂತ ನನಗೆ ಅನ್ನಿಸುತ್ತೆ."

ಕಲೆಕ್ಟರ್ ಗಂಗಾಪ್ರಸಾದನನ್ನು ದೃಷ್ಟಿಸಿ ನೋಡಿದರು, "ಮಿಸ್ಟರ್ ಗಂಗಾಪ್ರಸಾದ್, ನೀವು ನಿಜವಾಗಿಯೂ ಬುದ್ಧಿವಂತರು. ಇಷ್ಟು ಸುಲಭವಾದ ಉತ್ತರ ನನಗೆ ಯಾಕೆ ಹೊಳೆದಿರಲಿಲ್ಲ ಅಂತ ಆಶ್ಚರ್ಯವಾಗುತ್ತೆ! ಬಾಕಿ ಕಡೇಲೆಲ್ಲಾ ಅಡಗಿ ಹೋದಂತಿರೋ ಈ ಆಂಧೋಳನ ಬೊಂಬಾಯಿ ಕಲಕತ್ತೆಗಳಲ್ಲಿ ಯಾಕೆ ಬಿಡದೆ ಜೋರಾಗಿ ನಡೀತಿದೆ ಅನ್ನೋದು ಈಗ ಸ್ಪಷ್ಟವಾಯಿತು! ಕಾನಪುರವೂ ವ್ಯಾಪಾರಕೇಂದ್ರ. ಆದರೆ ಇಲ್ಲಿಯ ಮಿಲ್ಲು ಮಾಲಿಕರು ಹೆಚ್ಚಾಗಿ ಬ್ರಿಟಿಷರು, ರಾಜಭಕ್ತರು. ಮಿಸ್ಟರ್ ಗಂಗಾಪ್ರಸಾದ್, ಯಾವ ಯಾವ ಮಿಲ್ಲು ಮಾಲಿಕರು, ವ್ಯಾಪಾರಿಗಳು ಕಾಂಗ್ರೆಸಿನ ಸಂಗಡ ಗಾಢವಾದ ಸಂಬಂಧ ಇಟ್ಟುಕೊಂಡಿದಾರೆ ಅಂತ ಹುಷಾರಾಗಿ ಪತ್ತೆ ಹಚ್ಚಿ!"

ಅವತ್ತು ಸಂಜೆ ಗಂಗಾಪ್ರಸಾದ ಲಕ್ಷ್ಮೀಚಂದನ ಮನೆಗೆ ಬಂದ. ಲಕ್ಷ್ಮೀಚಂದ ಪೇಟೆಯಲ್ಲಿದ್ದ ಮನೆಯನ್ನು ಆಫೀಸು ಮಾಡಿಕೊಂಡಿದ್ದ; ವಾಸಕ್ಕೆ ಸಿವಿಲ್ ಲೈನ್ಸ್‌ನಲ್ಲಿ ಒಂದು ಬಂಗಲೆ ಕಟ್ಟಿಸಿಕೊಂಡಿದ್ದ. ಲಕ್ಷ್ಮೀಚಂದನ ಬಂಗಲೆ ಗಂಗಾಪ್ರಸಾದನ ಬಂಗಲೆಯಿಂದ ಸುಮಾರು ಒಂದು ಮೈಲಿ ದೂರದಲ್ಲಿತ್ತು. ಗಂಗಾಪ್ರಸಾದ ಲಕ್ಷ್ಮೀಚಂದನ ಬಂಗಲೆ ತಲಪಿದಾಗ ರಾತ್ರಿಯಾಗಿತ್ತು. ಲಕ್ಷ್ಮೀಚಂದ ಹೊರಗಿನ ಕೋಣೆಯಲ್ಲಿ ಕುಳಿತು ಆಫೀಸಿನ ಕಾಗದಪತ್ರಗಳನ್ನು ನೋಡುತ್ತಿದ್ದ. ಇಬ್ಬರು ಗುಮಾಸ್ತರು ಅವನಿಗೆ

ಸಹಾಯ ಮಾಡುತ್ತಿದ್ದರು. ಗಂಗಾಪ್ರಸಾದನ ವಿಸಿಟಿಂಗ್ ಕಾರ್ಡ್ ಕೈಗೆ ಬಂದ ತಕ್ಷಣ ಕಾಗದಪತ್ರಗಳನ್ನು ಮುಚ್ಚಿಟ್ಟು, ಗುಮಾಸ್ತರಿಗೆ "ನಾಳೆ ಬನ್ನಿ, ಇದನ್ನೆಲ್ಲಾ ಸರಿಯಾಗಿ ತೆಗೆದಿಡಿ" ಎಂದವನೇ ವರಾಂಡಕ್ಕೆ ಬಂದು, "ಅರೆ ಗಂಗಾಪ್ರಸಾದ್, ಕಾರ್ಡು ಕಳಿಸೋ ಅಗತ್ಯವೇನಿತ್ತು? ಮನೆಮನೆಯವರಲ್ಲಿ ಎಲ್ಲಾದರೂ ಹೀಗುಂಟೆ? ಒಳಗೆ ಬಾ" ಎಂದ.

ಲಕ್ಷ್ಮೀಚಂದ ಗಂಗಾಪ್ರಸಾದನನ್ನು ಡ್ರಾಯಿಂಗ್ ರೂಮಿಗೆ ಕರೆದುಕೊಂಡು ಹೋಗಿ ಕೂರಿಸಿ, "ಈಗ ಎಲ್ಲಿದಿ? ಇಲ್ಲಿ ಕಾನಪುರಕ್ಕೆ ಯಾವಾಗ ಬಂದೆ? ಏನು ಸಮಾಚಾರ?" ಎಂದು ವಿಚಾರಿಸಿದ.

ಇದೇ ಲಕ್ಷ್ಮೀಚಂದ ಸ್ವಂತ ತಾಯಿಗೆ ಅವಳು ಮೃತ್ಯುಶಯ್ಯೆಯ ಮೇಲಿದ್ದಾಗ ಬೈದಿದ್ದ, ತನಗೂ ತನ್ನ ತಂದೆಗೂ ಅಪಮಾನ ಮಾಡಿದ್ದ, ಆದರೂ ಈಗ ತನ್ನೊಡನೆ ಆತ್ಮೀಯತೆಯಿಂದ ಮಾತನಾಡುತ್ತ ನಗುತ್ತಿದ್ದ—ಗಂಗಾಪ್ರಸಾದ ತನ್ನ ಮನಸ್ಸಿನೊಳಗೇ ಲಕ್ಷ್ಮೀಚಂದನನ್ನು ಅಳೆಯತೊಡಗಿದ. ಅವನಿಗೆ ತನ್ನೊಳಗೇ ಒಂದು ವಿಚಿತ್ರ ಬಗೆಯ ಮಾರ್ಪಾಡಾಗುತ್ತಿರುವುದು ಕಂಡಿತು. ಅವನ ಬಿಗಿತ ಮಾಯವಾಯಿತು, ಮುಖದ ಮೇಲೆ ನಗೆಯಾಡತೊಡಗಿತು, ಧ್ವನಿ ಕೋಮಲವಾಯಿತು. "ಇಲ್ಲಿ ಕಾನಪುರಕ್ಕೆ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆಗಿ ಬಂದು ಏಳುದಿನವಾಯಿತು. ಬಂದ ತಕ್ಷಣ ಕೆಲಸಕಾರ್ಯದಲ್ಲಿ ಮುಳುಗಬೇಕಾಯಿತು. ಹೊಸ ಊರು, ಹೊಸ ಜವಾಬ್ದಾರಿ, ಹೊಸ ಸಮಸ್ಯೆಗಳು. ಇವತ್ತು ಏನೇ ಆಗಲಿ ನಮ್ಮ ಲಕ್ಷ್ಮೀ ಅಣ್ಣನ್ನ ನೋಡಿಕೊಂಡು ಬರಲೇಬೇಕು ಅಂದುಕೊಂಡು ಪ್ರಯಾಸದಿಂದ ಬಿಡುವು ಮಾಡಿಕೊಂಡು ಬಂದೆ."

"ನನ್ನ ತಮ್ಮ ಕಾನಪುರದ ಜಾಯಿಂಟ್ ಮ್ಯಾಜಿಸ್ಟ್ರೇಟ್! ಇವತ್ತಿನ ತನಕ ಯಾವ ಭಾರತೀಯನೂ ಈ ಕುರ್ಚಿಯ ಮೇಲೆ ಕೂತಿರಲಿಲ್ಲ. ಇದು ನನಗೆ ಎಂಥ ಹೆಮ್ಮೆಯ ವಿಷಯ!" ಲಕ್ಷ್ಮೀಚಂದ ತುಂಬ ಉತ್ಸಾಹದಿಂದ ಹೇಳಿದ. "ನಿಮ್ಮ ಅತ್ತಿಗೇಗೂ ಸುದ್ದಿ ತಿಳಿಸಿ ಬರ್‍ತೀನಿ. ಅವಳು ನಿನ್ನ ವಿಷಯ ಎಷ್ಟೊಂದು ವಿಚಾರಿಸ್ತಾಳೆ ಅಂತ ಹೇಳೋಕ್ಕೆ ಆಗದು. ಆದರೆ ನನ್ನ ಹತ್ತಿರ ನಿನ್ನ ವಿಳಾಸವೇ ಇರಲಿಲ್ಲ. ನೀನು ಸಹ ಯಾವಾಗಲೂ ಒಂದು ಕಾಗದಾನೂ ಬರೀಲಿಲ್ಲ." ಲಕ್ಷ್ಮೀಚಂದ ಎದ್ದು ಒಳಗೆ ಹೋಗಿ, ಐದು ನಿಮಿಷದೊಳಗೆ ರಾಧೆಯ ಜೊತೆ ಹಿಂದಿರುಗಿ ಬಂದ.

ರಾಧೆ ಸಾಕಷ್ಟು ದಪ್ಪವಾಗಿ ನೋಡಲು ವಿಕಾರವಾಗಿ ಕಾಣುತ್ತಿದ್ದಳು. ಗಂಗಾಪ್ರಸಾದ ಅವಳನ್ನು ಗುರುತಿಸಲಾರದೇ ಹೋದ. ಒಡವೆಗಳಿಂದ ಮೈಮುಚ್ಚಿದ, ಮಧ್ಯವಯಸ್ಸಿನ ಯಾವಳೋ ಹೆಂಗಸು ತನ್ನ ಮುಂದೆ ನಿಂತಿದ್ದಂತಿತ್ತು. ಅವನೆದ್ದು "ನಮಸ್ಕಾರ, ಅತ್ತಿಗೆ" ಅಂದ.

"ಸುಖವಾಗಿರಪ್ಪ, ಗಂಗಾಲಾಲಾ! ನಿನ್ನ ಮೇಲೆ ತುಂಬಾ ಆರೋಪ ಇದೆ!

ಬರೋಕ್ಕೆ ಮುಂಚೆ ಬರೆದಿದ್ದರೆ ಸ್ಟೇಷನ್ನಿಗೆ ಗಾಡಿ ಕಳಿಸಿರೋವೆ. ಎಲ್ಲಿ ಇಳಕೊಂಡಿದಿ? ಆರಾಮವಾಗಿದಿ ತಾನೆ?"

ಲಕ್ಷ್ಮೀಚಂದ ನಗುತ್ತ ಹೇಳಿದ, "'ಜಂಟ್ ಸಾಹೇಬ'ನಾಗಿ ಕಾನಪುರಕ್ಕೆ ಬಂದಿದಾನೆ, ಈಗ ಇವನಿಗೆ ಆರಾಮಕ್ಕೆ ಏನು ಕಡಿಮೆ! ಭರ್ಜರಿ ಬಂಗಲೆ, ಕೈತುಂಬಾ ಆಳುಕಾಳು. ನಮ್ಮನ್ನ ನೋಡಿಕೊಂಡು ಹೋಗೋಕ್ಕೆ ಬಂದಿದಾನಲ್ಲ, ಅದೇನು ಕಡಿಮೆಯೇ ಹೇಳು! ಅಂದಹಾಗೆ, ಗಂಗಾ, ಹೆಂಡತೀನ ಕರಕೊಂಡು ಬಂದಿದೀಯೋ ಇಲ್ಲವೋ? ಚಿಕ್ಕಪ್ಪ, ಚಿಕ್ಕಮ್ಮ ಎಲ್ಲರೂ ಚೆನ್ನಾಗಿದಾರೆಯೆ? ಅಲಹಾಬಾದಿನಲ್ಲಿ ಒಂದು ಬಂಗಲೆ ಕಟ್ಟಿಸಿದಾರೆ, ಪೆನ್‌ಷನ್ ಆದಮೇಲೆ ಅಲ್ಲೇ ಇದ್ದುಬಿಟ್ಟಿದಾರೆ ಅಂತ ಕೇಳಿದೆ?"

"ಹೌದು, ಲಕ್ಷ್ಮೀ ಅಣ್ಣಾ, ಅಪ್ಪ ಅಲಹಾಬಾದಿನಲ್ಲಿ ಬಂಗಲೆ ಕಟ್ಟಿಸಿದಾರೆ, ಜಾರ್ಜ್ ಟೌನಿನಲ್ಲಿ. ಆದರೆ ಅಪ್ಪ ಅಮ್ಮ ಅಲ್ಲಿ ತಾವು ತಾವೇ ಏನಿದ್ದಾರು? ತುಂಬ ಬಲವಂತ ಮಾಡಿ ನನ್ನ ಜೊತೆ ಕರಕೊಂಡು ಬಂದಿದೀನಿ. ನನ್ನ ಸಂಸಾರಾನೂ ಇಲ್ಲೇ ಇದೆ. ಅಪ್ಪ ನಿಮ್ಮಲ್ಲಿಗೆ ಬರಬೇಕು ಅಂತ ಇದ್ದರು. ಆದರೆ ಇನ್ನೂ ಮನೇನ ಸಜ್ಜುಮಾಡೋದ ರಲ್ಲೇ ಇದಾರೆ, ಪುರಸೊತ್ತಾಗಿಲ್ಲ. ಅಲ್ಲದೆ ನನ್ನ ಹತ್ತಿರ ಇರೋದು ಒಂದೇ ಟಾಂಗಾ. ಅದು ನನ್ನ ಓಡಾಟಕ್ಕೆ ಬೇಕು. ಭಾನುವಾರ ಇಲ್ಲಿಗೆ ಬರ್ತೀನಿ ಅಂತ ಹೇಳ್ತಿದ್ದರು."

ಲಕ್ಷ್ಮೀಚಂದ ಹೇಳಿದ, "ಅರೆ, ಇನ್ನೂ ಟಾಂಗಾದಲ್ಲೇ ಕೆಲಸ ನಡಿಸ್ತಿದೀಯಾ? ನೀನು ಇಷ್ಟುಹೊತ್ತಿಗೆ ಕಾರು ತಗೋಬೇಕಾಗಿತ್ತು. ಟಾಂಗಾಗೀಂಗಾ ಎಲ್ಲಾ ಸಾಧಾರಣ ಡೆಪ್ಯುಟಿ ಕಲೆಕ್ಟರುಗಳಿಗೆ ಸರಿ. ನೀನು ಈಗ ಜಾಯಿಂಟ್ ಮ್ಯಾಜಿಸ್ಟ್ರೇಟ್!" ಲಕ್ಷ್ಮೀ ಚಂದ ಕೊಂಚ ಯೋಚಿಸಿ ಮುಂದುವರಿಸಿದ. "ನಾಳೆ ಸಂಜೆ ನಾನೇ ನಿಮ್ಮ ಮನೆಗೆ ಬರ್ತೀನಿ, ಚಿಕ್ಕಪ್ಪನ್ನ ನೋಡೋಕ್ಕೆ. ಅವರನ್ನೂ ನಿಮ್ಮ ಮನೆಯವರನ್ನೂ ನಾನೇ ಇಲ್ಲಿಗೆ ಕರಕೊಂಡು ಬರ್ತೀನಿ. ನಿಮ್ಮ ಮನೆಯೋರಿಗೆಲ್ಲಾ ನಾಳೆ ಇಲ್ಲೇ ಊಟ, ನಿನಗೆ ಬಿಡುವಾದರೆ ನೀನೂ ಇಲ್ಲೇ ಬಂದುಬಿಡು" ಎಂದು ಹೇಳಿ ನಗುತ್ತ "ಆದರೆ ನಮ್ಮ ಮನೇಲಿ ಊಟ ತಿಂಡಿಯೆಲ್ಲಾ ವೈಷ್ಣವ ಲೆಕ್ಕಾಚಾರ!" ಅಂದ.

ಗಂಗಾಪ್ರಸಾದನೂ ನಕ್ಕ, "ಇಲ್ಲ, ನಾಳೆ ಎಸ್.ಪಿ. ಅವರ ಮನೇಲಿ ಡಿನ್ನರ್ ಇದೆ. ನಾನು ಮತ್ತೆ ಯಾವಾಗಲಾದರೂ ಬರ್ತೀನಿ."

ಗಂಗಾಪ್ರಸಾದ ಮನೆಗೆ ಹಿಂದಿರುಗಿದ ಮೇಲೆ ಜ್ವಾಲಾಪ್ರಸಾದನಿಗೆ ತಾನು ಲಕ್ಷ್ಮೀ ಚಂದನಲ್ಲಿಗೆ ಹೋಗಿ ಬಂದ ವಿಷಯ ತಿಳಿಸಿದ, "ನಾಳೆ ಸಂಜೆ ಅವನೇ ನಿಮ್ಮನ್ನೆಲ್ಲಾ ಕರಕೊಂಡು ಹೋಗೋಕ್ಕೆ ಬರ್ತಾನೆ. ತುಂಬ ವಿಶ್ವಾಸದಿಂದ ಕಂಡು ಮಾತನಾಡಿದ."

ಜ್ವಾಲಾಪ್ರಸಾದನ ಮುಖ ಗಂಭೀರವಾಯಿತು. "ಗಂಗಾ, ನೀನು ಅವನ ಮನೆಗೆ ಹೋಗಬಾರದಾಗಿತ್ತು."

"ನಾನೇನು ಮಾಡಲಿ, ಅಪ್ಪಾ! ಕಾನಪುರದಲ್ಲಿ ಎಲ್ಲರಿಗಿಂತ ದೊಡ್ಡ ಮಿಲ್ ಮಾಲಿಕ, ಗಣ್ಯಪ್ರಜೆ. 'ಸರ್' ಟೈಟಲ್ ತೊಗೊಂಡಿದಾನೆ. ಸರಕಾರಕ್ಕೆ ಅವನನ್ನ

ಕಂಡರೆ ತುಂಬ ಮರ್ಯಾದೆ. ನಾನು ಅವನ ಜೊತೆ ಸ್ನೇಹ ಇಟ್ಟುಕೋಬೇಕಾಗುತ್ತೆ. ನೀವು ನಿಶ್ಚಿಂತರಾಗಿರಿ, ಎಲ್ಲಾ ಸರಿಹೋಗುತ್ತೆ. ಹಳೇದನ್ನ ಮರೆತುಬಿಡಬೇಕು, ಅಪ್ಪ! ಏನೇ ಆಗಲಿ, ಅವನು ದೊಡ್ಡಮ್ಮನ ಮಗ ತಾನೆ? "

ಗಂಗಾಪ್ರಸಾದನಲ್ಲಿ ಯಾವಾಗಲೂ ಭಾವನೆ-ಸೌಜನ್ಯಗಳ ಕೊರತೆಯಿದ್ದದ್ದು ಜ್ವಾಲಾ ಪ್ರಸಾದನ ಅನುಭವಕ್ಕೆ ಬಂದಿತ್ತು. ಈಗ ಮಗನ ಬಾಯಿಂದ ಇಂಥ ಮಾತು ಕೇಳಿ, ಅವನಲ್ಲಿ ಒಂದು ಹೊಸ ಪರಿವರ್ತನೆಯಾಗಿರುವುದನ್ನು ಕಂಡು, ಜ್ವಾಲಾಪ್ರಸಾದನಿಗೆ ಸಂತೋಷವೇ ಆಯಿತು. " ಹೌದು ಗಂಗಾ, ಅದೇನೋ ಸರಿ, ಆದರೆ ಈ ಲಕ್ಷ್ಮೀಚಂದ . . . ಯಾಕೋ ಕಾಣೆ, ಅವನು ನನಗೆ ಯಾವಾಗಲೂ ಹಿಡಿಸಿಲ್ಲ. ಒಳ್ಳೇದು, ಅವನು ಬರಲಿ. ಅವನ ಜೊತೆ ನಾವು ಹೋಗೋಣಂತೆ."

ಮಾರನೆಯ ದಿನ ಸಂಜೆ ಸುಮಾರು ಆರು ಗಂಟೆಗೆ ಲಕ್ಷ್ಮೀಚಂದ ಒಂದು ಹೊಸ ಓವರ್‌ಲ್ಯಾಂಡ್ ಕಾರಿನಲ್ಲಿ ಗಂಗಾಪ್ರಸಾದನ ಬಂಗಲೆಯ ಮುಂದೆ ಬಂದಿಳಿದ. ಗಂಗಾ ಪ್ರಸಾದ ಅವನ ಬರವಿಗೇ ಕಾಯುತ್ತಿದ್ದಾನೋ ಎಂಬಂತೆ ದಾರಿ ನೋಡುತ್ತ ಕುಳಿತಿದ್ದ. ಲಕ್ಷ್ಮೀಚಂದ ಡ್ರಾಯಿಂಗ್ ರೂಮಿಗೆ ಕಾಲಿಟ್ಟೊಡನೆಯೇ ಹೇಳಿದ, " ಗಂಗಾ, ಒಂದು ನಿಮಿಷ ಹೊರಗೆ ಬಾ. ಇವತ್ತು ತಾನೇ ಒಂದು ಹೊಸ ಕಾರು ಕೊಂಡುಕೊಂಡಿದೀನಿ. ನೋಡುವೆಯಂತೆ, ಹೇಗಿದೆ ! "

" ನಾನು ನಿನ್ನೆ ನೋಡಿದೆ, ನಿನ್ನ ಹತ್ತಿರ ಎರಡು ಮೋಟರ್ ಇದೆ. ಆದರೆ ಇದು ಬಲು ಒಳ್ಳೇ ಕಾರು. ಎರಡು ಮೂರು ತಿಂಗಳಲ್ಲಿ ನಾನೂ ಒಂದು ಕೊಂಡುಕೊಳ್ಳೋಣ ಅಂತ ಯೋಚಿಸ್ತಿದೀನಿ."

ಕಾರನ್ನು ನೋಡಿದ ಮೇಲೆ ಇಬ್ಬರೂ ವಾಪಸು ಕೋಣೆಯೊಳಗೆ ಬಂದರು. ಗಂಗಾ ಪ್ರಸಾದ ತಂದೆಗೆ ಲಕ್ಷ್ಮೀಚಂದ ಬಂದ ಸುದ್ದಿ ತಿಳಿಸಿದ.

ಜ್ವಾಲಾಪ್ರಸಾದ ಹೊರಬಂದ. ಲಕ್ಷ್ಮೀಚಂದ ಎದ್ದು ನಿಂತು ಹೇಳಿದ, " ನಮಸ್ಕಾರ ಚಿಕ್ಕಪ್ಪ, ನೀವೆಲ್ಲಾ ಬಂದಿದೀರಿ ಅಂತ ನಿನ್ನೆ ಗಂಗಾ ಹೇಳಿದ. ನಾವು ಒಡಹುಟ್ಟಿದವರ ಹಾಗೆ ಇದ್ದ ಒಂದು ಕಾಲವೂ ಇತ್ತು. ತಕ್ಷಣ ಆಗಿನ ನೆನಪು ಬಂತು. ಗಂಗನ್ನ ನೋಡಿದ ತಕ್ಷಣ ಎದೆ ತುಂಬಿ ಬಂತು. ಎಷ್ಟೇ ಆದರೂ ಅವನು ನನ್ನ ತಮ್ಮ ತಾನೇ ! ನೀವು ಚೆನ್ನಾಗಿದೀರಾ? ನಿಮ್ಮ ದೇಹಸ್ಥಿತಿ ನೆಟ್ಟಗಿದೆ ಅಲ್ಲವೆ? "

ಲಕ್ಷ್ಮೀಚಂದನ ಈ ಆತ್ಮೀಯತೆ ಜ್ವಾಲಾಪ್ರಸಾದನ ಮೇಲೆ ತುಂಬ ಪ್ರಭಾವ ಬೀರಿತು. ಅವನು ಕುಶಲ ಕೇಳಿ, ಯಮುನಾ, ರುಕ್ಮಿಣಿ ಮತ್ತು ಮಕ್ಕಳಿಗೆ ಹೊರಡಲು ತಯಾರಾಗುವಂತೆ ಹೇಳಿದ.

ಅವರ ಸಿದ್ಧತೆಯೆಲ್ಲಾ ಮುಗಿದು, ಅವರನ್ನು ಹೊರಡಿಸಿಕೊಂಡು ಜ್ವಾಲಾಪ್ರಸಾದ ಬರುವ ಹೊತ್ತಿಗೆ ಗಂಗಾಪ್ರಸಾದ, ಲಕ್ಷ್ಮೀಚಂದರು ರಾಜಕೀಯವನ್ನು ಕುರಿತು ಮಾತ ನಾಡುತ್ತಿದ್ದರು. ಬೊಂಬಾಯಿಯಲ್ಲಿ ನಡೆದದ್ದರ ಸುದ್ದಿಯೆಲ್ಲವೂ ಪತ್ರಿಕೆಗಳಲ್ಲಿ

ಅಚ್ಚಾಗಿತ್ತು. ನಗರದಲ್ಲೆಲ್ಲಾ ಗಾಬರಿ ಹರಡಿತ್ತು. ಗಂಗಾಪ್ರಸಾದ ಹೇಳುತ್ತಿದ್ದ, “ಈ ಸ್ವದೇಶೀ ಆಂದೋಳನದಿಂದ ಏನು ತಾನೇ ಸ್ವರಾಜ್ಯ ಸಿಕ್ಕೀತು? ಬರೀ ಸ್ವದೇಶಿಯ ಬಲದ ಮೇಲೆ ಎಲ್ಲಿ ಇರೋಕ್ಕಾಗುತ್ತೆ? ಸ್ವದೇಶೀ ಆಂದೋಳನ ಯಶಸ್ವಿಯಾಗೋಕ್ಕೆ ನಮ್ಮಲ್ಲಿ ಉದ್ಯಮ ಎಲ್ಲಿ ಬೆಳೆದಿದೆ? ಅನಿವಾರ್ಯವಾಗಿ ನಾವು ವಿದೇಶೀ ಮಾಲನ್ನ ಕೊಂಡುಕೊಳ್ಳಬೇಕಾಗುತ್ತೆ, ಲಕ್ಷ್ಮೀ ಅಣ್ಣ !”

ಲಕ್ಷ್ಮೀಚಂದ ಹೇಳಿದ, “ಹೌದು ಗಂಗಾ, ನೀನು ಹೇಳೋದು ಸರಿ. ಈ ಆಂದೋಳನ ದಿಂದ ಸ್ವರಾಜ್ಯ ಸಿಗೋಲ್ಲ. ಆದರೆ ನಾವು ನಮ್ಮದೇಶದ ಉದ್ಯಮಾನ ಬೆಳಸಲೇಬೇಕು. ಜನರಲ್ಲಿ ಸ್ವದೇಶೀಭಾವನೆ ಜಾಗೃತವಾಗದಿದ್ದರೆ ದೇಶದ ಉದ್ಯೋಗ ಏಳಿಗೆಗೆ ಬರೋ ಸಂಭವವೇ ಇಲ್ಲ. ನಮ್ಮ ದೇಶದಲ್ಲಿ ಇನ್ನೂ ಈಗ ತಾನೇ ಉದ್ಯಮಗಳ ಸ್ಥಾಪನೆಗೆ ಷುರುವಾಗಿದೆ. ಷುರುವಿನಲ್ಲೇ ವಿದೇಶಿಯರನ್ನು ನಾವು ಹೇಗೆ ಎದುರಿಸೋಕ್ಕೆ ಆಗುತ್ತೆ? ದೇಶದ ಭಾವನಾತ್ಮಕ ಸಹಕಾರ ನಮಗೆ ಸಿಕ್ಕಿದರೆ ನಾವು ಉದ್ದಿಮೆದಾರರು ದೇಶ ಸ್ವಾವ ಲಂಬಿಯಾಗೋ ಹಾಗೆ ಮಾಡಬಹುದು. ಜನ ದಪ್ಪ ಬಟ್ಟೆ ತೊಡಲಿ, ಸ್ವದೇಶೀ ಬಟ್ಟೇನೇ ಕೊಂಡುಕೊಂಡು ತೊಡಲಿ. ಆಗ ದೇಶದಲ್ಲಿ ಬರುಬರುತ್ತಾ ಹೆಚ್ಚು ಹೆಚ್ಚು ಮಿಲ್ಲು ಗಳು ಷುರುವಾಗುತ್ತವೆ. ಆಮೇಲೆ ನಾವು ಒಳ್ಳೇ ನಯವಾದ ಬಟ್ಟೇನ ತಯಾರಿಸೋಕ್ಕೆ ಪ್ರಾರಂಭಿಸಬಹುದು. ಆದರೆ, ಗಂಗಾ, ಈ ಅಸಹಕಾರದ ಸ್ವದೇಶೀ ಆಂದೋಳನವೇನಿದೆ, ಅದು ನಮ್ಮ ಹಿತಕ್ಕೋಸ್ಕರವೇ. ಬಾಕೀ ಸ್ವರಾಜ್ಯ, ಖಿಲಾಫತ್ತು ಇವೆಲ್ಲಾ ಬರೀ ಬೂಟಾಟಿಕೆ ನೋಡು,” ಹೀಗೆ ಹೇಳುತ್ತ ಹೇಳುತ್ತ ಲಕ್ಷ್ಮೀಚಂದ ನಗಲಾರಂಭಿಸಿದ.

ಜ್ವಾಲಾಪ್ರಸಾದ ಬಟ್ಟೆ ತೊಟ್ಟು ಹೊರಡಲು ಸಿದ್ಧನಾಗಿ ಬಂದ ಕಾರಣ, ಲಕ್ಷ್ಮೀ ಚಂದ ತನ್ನ ರಾಜಕೀಯ ಚರ್ಚೆಯನ್ನು ನಿಲ್ಲಿಸಬೇಕಾಯಿತು. “ಈಗ ನೀನು ಇಲ್ಲೇ ಬಂದಿದಿ, ಗಂಗಾ. ನಿನ್ನ ಜೊತೆ ವಿವರವಾಗಿ ಮಾತನಾಡ್ತೀನಿ. ಯಾವಾಗ ಏನೇ ಅಗತ್ಯ ಬಿದ್ದರೂ ನನಗೆ ತಿಳಿಸು. ಯಾವ ತರಹದ ಸಹಾಯಕ್ಕಾದರೂ ನಾನು ಸಿದ್ಧ. ನೋಡು, ಗಂಗಾ. ನೀನು ನನ್ನ ತಮ್ಮ ಇದ್ದ ಹಾಗೆ! ಇಲ್ಲಿರೋ ಭಾರತೀಯರಲ್ಲಿ ಎಲ್ಲರಿಗಿಂತ ದೊಡ್ಡ ಆಫೀಸರ್ ಅಂದರೆ ನನ್ನ ತಮ್ಮನೇ. ಅವನಿಗೆ ಒಂದು ಮೋಟರ್ ಕಾರ್ ಇರಬೇಕು. ನಾನು ಇವತ್ತು ಕೊಂಡಿರೋ ಕಾರು ನಿನಗೋಸ್ಕರ. ನಾನು ಅದರಲ್ಲೇ ನಿಮ್ಮ ಮನೇಗೆ ಬಂದಿದೀನಿ; ಅದರಲ್ಲೇ ನಿಮ್ಮ ಮನೆಯವರನ್ನ ನಮ್ಮಲ್ಲಿಗೆ ಕರಕೊಂಡು ಹೋಗ್ತಿದೀನಿ. ಕಂಪನಿಯವರಿಗೆ ಹೇಳಿ ಒಂದು ತಿಂಗಳಿಗೆ ಅಂತ ಒಬ್ಬ ಡ್ರೈವರನ್ನ ಗೊತ್ತುಮಾಡಿದೀನಿ; ಅವನ ಸಂಬಳವೂ ಈ ಕಾರಿನ ಬೆಲೇನಲ್ಲೇ ಸೇರಿಕೊಂಡಿದೆ. ಇದಕ್ಕೆ ಸಂಬಂಧಪಟ್ಟ ಕಾಗದಪತ್ರಗಳನ್ನ ತೊಗೊಂಡು ಜೋಪಾನವಾಗಿಟ್ಟುಕೊ. ಈ ಡ್ರೈವರ್ ನಿನಗೆ ಡ್ರೈವಿಂಗ್ ಹೇಳಿಕೊಡ್ತಾನೆ. ಬೇಕೂ ಅಂದರೆ ಒಬ್ಬ ಡ್ರೈವರನ್ನೂ ಗೊತ್ತುಮಾಡಿಕೊಡ್ತೀನಿ. ಮನೆ ತಲಪಿದ ಮೇಲೆ ಈ ಕಾರು ಕಳಿಸಿಕೊಡ್ತೀನಿ, ಇವತ್ತು ಡಿನ್ನರಿಗೆ ನೀನು ಇದರಲ್ಲೇ ಹೋಗಬೇಕು.”

ಗಂಗಾಪ್ರಸಾದ ತುಂಬ ಸಮಯದಿಂದ ಒಂದು ಕಾರು ಕೊಳ್ಳಬೇಕೆಂದು ಯೋಚಿಸುತ್ತಿದ್ದ. ಆದರೆ ಹಣದ ಅಭಾವದಿಂದಾಗಿ ಅದು ಸಾಧ್ಯವಾಗಿರಲಿಲ್ಲ. ಅವನಂದ, "ಲಕ್ಷ್ಮೀ ಅಣ್ಣ, ಇದರ ಅಗತ್ಯವೇನಿತ್ತು? ನಾನೇ ಸ್ವತಃ ಕಾರು ಕೊಳ್ಳೋನಿದ್ದೆ".

"ನೀನು ಕೊಂಡುಕೊಳ್ಳೋ ಹಾಗೇ ನಾನು ಕೊಂಡುಕೊಟ್ಟಿದೀನಿ. ಅದರಲ್ಲಿ ಏನು ವ್ಯತ್ಯಾಸ ಇದೆ," ಎಂದು ಹೇಳಿ ಲಕ್ಷ್ಮೀಚಂದ ಜ್ವಾಲಾಪ್ರಸಾದನ ಕಡೆ ತಿರುಗಿದ, "ನಡೀರಿ. ಚಿಕ್ಕಪ್ಪ. ಗಾಡಿ ಇಲ್ಲದ ಕಾರಣ ನೀವು ಇದುವರೆಗೆ ನಮ್ಮ ಮನೇಗೆ ಬರೋಕ್ಕಾಗಿರಲಿಲ್ಲ ಅಂತ ಗಂಗ ಹೇಳಿದ. ಈ ಗಾಡಿ ತೊಂದರೆ ಯಾಕಿರಬೇಕು ಅಂತ ಯೋಚಿಸಿ ಹೀಗೆ ಮಾಡಿದೆ. ಒಂದು ಮೋಟರು; ಒಂದು ಟಾಂಗಾ. ಒಂದು ಗಂಗನಿಗೆ; ಇನ್ನೊಂದು ನಿಮಗೆ, ಮನೆಯೋರಿಗೆ. ಈ ಕಾಲದಲ್ಲಿ ಎರಡು ವಾಹನವಿಲ್ಲದೇ ಕೆಲಸ ನಡೆಯೋಲ್ಲ."

ಗಂಗಾಪ್ರಸಾದ, ಲಕ್ಷ್ಮೀಚಂದರ ಕುಟುಂಬಗಳ ನಡುವೆ ಮತ್ತೊಮ್ಮೆ ಗಾಢವಾದ ಸಂಬಂಧ ಏರ್ಪಟ್ಟಿತು.

ಡಿಸೆಂಬರ್ ಮೂರನೆಯ ವಾರ ಬಂಗಾಳ ಹಾಗೂ ಇಡೀ ಉತ್ತರ ಭಾರತದಲ್ಲಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆಕ್ಟನ್ನು ಜಾರಿಗೆ ತರಲಾಯಿತು. ಬಂಗಾಳ ಮತ್ತು ಸಂಯುಕ್ತ ಪ್ರಾಂತಗಳ ಎಲ್ಲ ಕಾಂಗ್ರೆಸ್ ಮುಖಂಡರೂ ದಸ್ತಗಿರಿಯಾದರು. ಡಿಸೆಂಬರ್ ಇಪ್ಪತ್ತೈದರಂದು ಬ್ರಿಟನ್ನಿನ ರಾಜಕುಮಾರರು ಕಲಕತ್ತೆ ತಲಪಿದರು. ಆದರೆ ಅಲ್ಲಿ ನಡೆದ ಭಾರೀ ಹರತಾಳದಿಂದ ಹಾಗೂ ಇಡೀ ಉತ್ತರಭಾರತದಲ್ಲಿ ನಡೆದ ಹರತಾಳ, ಪ್ರದರ್ಶನಗಳಿಂದ ಸ್ಥಿತಿ ಚಿಂತಾಜನಕವಾಯಿತು. ಡಿಸೆಂಬರ್ ಇಪ್ಪತ್ತೈದರಂದು ನಡೆದ ಕಲಕತ್ತೆಯ ಹರತಾಳದ ಸುದ್ದಿ ಕೇಳಿ, ಕಲೆಕ್ಟರ್ ಗಂಗಾಪ್ರಸಾದನನ್ನು ಕರಸಿ ಆಲೋಚನೆ ನಡಸಿದರು. ಜಿಲ್ಲೆಯ ಇತರ ಅಧಿಕಾರಿಗಳೂ ಈ ಸಭೆಯಲ್ಲಿ ಹಾಜರಿದ್ದರು. ಆದರೆ ಆಂದೋಳನವನ್ನು ಹೇಗೆ ನಿಲ್ಲಿಸಬೇಕೆಂಬುದಕ್ಕೆ ಯಾರ ಬಳಿಯೂ ಉಪಾಯವಿರಲಿಲ್ಲ. ಅವರೆಲ್ಲರಿಗೂ ಗೊತ್ತಿದ್ದ ಒಂದೇ ಒಂದು ಉಪಾಯವೆಂದರೆ—ಆಂದೋಳನದ ದಮನ!

ಅಹಮದಾಬಾದ್ ಕಾಂಗ್ರೆಸ್ಸಿನಲ್ಲಿ ಆಂದೋಳನವನ್ನು ಇದ್ದಿದ್ದೂ ತೀವ್ರಗೊಳಿಸುವ ನಿರ್ಣಯವಾಯಿತು. ಆ ಅಧಿವೇಶನಕ್ಕೆ ಜ್ಞಾನಪ್ರಕಾಶ ಹೋಗಿದ್ದ. ಅವನು ಅಲ್ಲಿಂದ ನೇರವಾಗಿ ಅಲಹಾಬಾದಿಗೆ ಹಿಂದಿರುಗುವ ಬದಲು ದಿಲ್ಲಿಯ ಮೂಲಕ ಕಾನಪುರಕ್ಕೆ ಬಂದ. ಅವತ್ತು ೧೯೨೨ನೇ ಜನವರಿ ಒಂದನೆಯ ತಾರೀಕು. ಹೊಸ ವರ್ಷದ ಮೊದಲ ದಿನ. ಗಂಗಾಪ್ರಸಾದನ ಮನೆಯಲ್ಲಿ ಹೊಸ ವರ್ಷದ ಶುಭಾಶಯ ಹೇಳ ಬಂದವರು ಸಾಲುಗಟ್ಟಿ ನಿಂತಿದ್ದರು. ಅವತ್ತು ರಾತ್ರಿ ಲಕ್ಷ್ಮೀಚಂದನ ಮನೆಯಲ್ಲಿ ವರ್ಷಾರಂಭದ ಭೋಜನಕೂಟ ಏರ್ಪಾಡಾಗಿತ್ತು.

ಜ್ಞಾನಪ್ರಕಾಶ ಗಂಗಾಪ್ರಸಾದನ ಬಂಗಲೆ ತಲಪುವಾಗ ಸಂಜೆಯಾಗಿತ್ತು. ಗಂಗಾಪ್ರಸಾದನ ಮನೆಯವರೆಲ್ಲರೂ ಲಕ್ಷ್ಮೀಚಂದನ ಮನೆಗೆ ಮಧ್ಯಾಹ್ನವೇ ಹೊರಟು

ಹೋಗಿದ್ದರು. ಗಂಗಾಪ್ರಸಾದ ಡ್ರಾಯಿಂಗ್ ರೂಮಿನಲ್ಲಿ ಕುಳಿತು ಸ್ನೇಹಿತರಿಗೆ ಆತಿಥ್ಯ ನಡಸಿದ್ದ. ಅಷ್ಟುಹೊತ್ತಿಗಾಗಲೇ ಒಂದು ಬಾಟಲು ವ್ಹಿಸ್ಕಿ ಮುಗಿದು ಎರಡನೆಯದು ಅರ್ಧ ಖಾಲಿಯಾಗಿತ್ತು. ಜ್ಞಾನಪ್ರಕಾಶ ಬಂದಿರುವ ಸುದ್ದಿ ತಿಳಿದೊಡನೆಯೇ ಗಂಗಾ ಪ್ರಸಾದ ಕೋಣೆಯಿಂದ ಹೊರಬಂದು, ಅವನ ಕೈಹಿಡಿದು "ಬಾ ಚಿಕ್ಕಪ್ಪಣ್ಣ, ದಿಲ್ಲಿಗೆ ಹೋಗಿ ಬಂದಿದಿ ಅಂತ ಕಾಣುತ್ತೆ" ಎಂದು ಆಳಿಗೆ ಹೇಳಿ, ಇನ್ನೂ ಒಂದು ಗ್ಲಾಸು ತರಿಸಿದ. "ಹೊಸವರ್ಷದ ಶುಭಾಶಯಗಳು, ಚಿಕ್ಕಪ್ಪಣ್ಣ. ಬಾ, ಸುಸ್ವಾಗಿ ಬಂದಿದಿ!" ಎಂದು ಗ್ಲಾಸಿಗೆ ಒಂದು ದೊಡ್ಡ ಪೆಗ್ ವ್ಹಿಸ್ಕಿ ತುಂಬಿ ಜ್ಞಾನಪ್ರಕಾಶನ ಕಡೆ ಚಾಚಿದ.

ಕುಳಿತಿದ್ದ ಜನ ಎದ್ದು ಹೊರಟರು. ಜ್ಞಾನಪ್ರಕಾಶ ಒಂದೇ ಗುಟುಕಿಗೆ ಕಾಲು ಗ್ಲಾಸು ಖಾಲಿ ಮಾಡಿದ. ವಾಸ್ತವವಾಗಿ ಅವನು ತುಂಬ ಬಳಲಿದ್ದ; ಮೇಲೆ ಬಾಯಾರು ತ್ತಿತ್ತು. "ಅಣ್ಣ ಎಲ್ಲಿ? ಮನೆ ಬೆಕೋ ಅಂತಿದೆ, ಮಕ್ಕಳೂ ಎಲ್ಲೂ ಕಾಣೋಲ್ಲ."

"ಎಲ್ಲರೂ ಲಕ್ಷ್ಮೀಚಂದನ ಮನೆಗೆ ಹೋಗಿದಾರೆ. ಇವತ್ತು ಅವನ ಮನೇಲಿ ಭಾರೀ ಡಿನ್ನರ್ ಇದೆ, ಹೊಸವರ್ಷದ ಸಂದರ್ಭದಲ್ಲಿ. ಆಫೀಸರುಗಳಿಗೆಲ್ಲಾ ಆಮಂತ್ರಣ ಹೋಗಿದೆ. ಎಂಟು ಗಂಟೆ ಹೊತ್ತಿಗೆ ನಾನೂ ಅಲ್ಲಿ ಇರಬೇಕಾಗಿದೆ. ಏಳು, ಚಿಕ್ಕಪ್ಪಣ್ಣ. ಮುಖ ಕೈಕಾಲು ತೊಳೆದುಕೊಂಡು ಬಟ್ಟೆ ಬದಲಾಯಿಸು! ನಿನ್ನ ಹತ್ತಿರ ಡಿನ್ನರ್ ಸೂಟ್ ಇರಬೇಕಲ್ಲವೇ?" ಹೀಗಂದು ಗಂಗಾಪ್ರಸಾದ ಗಂಟೆ ಬಾರಿಸಿದ. ಗಂಟೆಯ ಶಬ್ದ ಕೇಳಿ ಭೀಖೂ ಬಂದ. "ಜ್ಞಾನಚಿಕ್ಕಪ್ಪನಿಗೆ ಬಿಸಿನೀರು ಸಿದ್ಧಮಾಡು," ಗಂಗಾ ಪ್ರಸಾದ ಭೀಖುವಿಗೆ ಹೇಳಿದ.

"ಚಿಕ್ಕಪ್ಪ, ಒಪ್ಪಂದದ ಮಾತುಕತೆ ಮುರಿದುಬಿತ್ತು. ಅಹಮದಾಬಾದ್ ಕಾಂಗ್ರೆಸಿ ನಲ್ಲಿ ನೀವು ಇನ್ನು ಏನೇನು ನಿರ್ಧರಿಸಿದಿರಿ?"

"ಆಂದೋಳನಾನ ಇದ್ದಿದ್ದೂ ಜೋರು ಮಾಡಬೇಕು. ಇಡೀ ದೇಶದಲ್ಲಿ ಸತ್ಯಾಗ್ರಹ ಆರಂಭಿಸಬೇಕು." ಜ್ಞಾನಪ್ರಕಾಶ ನಗುತ್ತ ಹೇಳಿದ, "ಹೋರಾಟಕ್ಕೆ ಈಗ ಹುರುಪು ಬಂದಿದೆ. ರಾಜಕುಮಾರರ ಸ್ವಾಗತಕ್ಕೆ ಏನು ದುರ್ಗತಿಯಾಯಿತು ಅಂತ ನಿನಗೆ ಗೊತ್ತೇ ಇದೆ."

ಗಂಗಾಪ್ರಸಾದನ ಮುಖದ ಮೇಲೆ ಮಬ್ಬು ಕವಿಯಿತು. "ತುಂಬ ಕಷ್ಟಕ್ಕೆ ತಂದಿಟ್ಟಿದಿ, ಚಿಕ್ಕಪ್ಪಣ್ಣ! ಈ ಅಸಹಕಾರ, ಮುಷ್ಕರಗಳಿಂದಾಗಿ ಪ್ರಾಣಕ್ಕೆ ಸಂಚಕಾರ ಬಂದಿದೆ. ಸಾಲದ್ದಕ್ಕೆ ಈ ಸತ್ಯಾಗ್ರಹ, ಕರನಿರಾಕರಣೆಗಳು ಬೇರೆ!" ಗಂಗಾಪ್ರಸಾದ ಮತ್ತೆ ಸ್ವಲ್ಪ ಯೋಚಿಸಿ ಹೇಳಿದ, "ಒಂದು ರೀತೀಲಿ ಈ ಸತ್ಯಾಗ್ರಹದಿಂದ ಒಳ್ಳೇದೇ ಆಯಿತು ಅನ್ನು. ಅದರಿಂದಾಗಿ ನಾವು ನಿಮ್ಮ ಆಂದೋಳನಾನ ಬೇಗ ಕೊನೆಗಾಣಿಸ ಬಹುದು."

"ಸತ್ಯಾಗ್ರಹದಿಂದ ಆಂದೋಳನ ನಿಲ್ಲುತ್ತೆ! ನೀನು ಏನು ಮಾತು ಆಡ್ತಿದಿ?"

"ಹೌದು, ಯಾಕೆ ಹಾಗೆ ಹೇಳ್ತಿದೀನಿ ಅಂದರೆ ಈ ಗದ್ದಲದಲ್ಲಿ ನಿಮ್ಮ ಸತ್ಯಾಗ್ರಹ

ಜನಸಾಮಾನ್ಯರ ಕೈಗೆ ಸಿಕ್ಕಿ ದುರಾಗ್ರಹವಾಗುತ್ತೆ. ಮುಖಂಡರು ಜೈಲಿನಲ್ಲಿರುತ್ತಾರೆ. ತಿಳಿವಳಿಕೆ ಹೇಳೋರು ಯಾರೂ ಇರೋದಿಲ್ಲ. ಜನತೆ ಹಿಂಸೆಗೆ ಕೈಹಾಕ್ತಾರೆ. ಆಮೇಲೆ ಜಲಿಯನ್‌ವಾಲಾಬಾಗಿನಲ್ಲಿ ನಡೆದದ್ದರ ಪುನರಾವೃತ್ತಿಯಾಗುತ್ತೆ. ಅಷ್ಟೇ ಸಾಕು, ಆಂದೋಳನ ಕಣ್ಮರೆಯಾಗುತ್ತೆ."

ಜ್ಞಾನಪ್ರಕಾಶ ದೂರಪ್ರವಾಸದಿಂದ ಬಳಲಿದ್ದ; ಅವನಿಗೆ ವಾದ ಮಾಡುವ ಮನಸ್ಸಿರಲಿಲ್ಲ. ವ್ಹಿಸ್ಕಿಯನ್ನು ಮುಗಿಸುತ್ತ ಅವನಂದ, "ಈ ವಿಷಯ ಮತ್ತೆ ಮಾತಾಡೋಣ ...ಆದರೆ ಈಗ ನೀನು ನನ್ನನ್ನ ಲಕ್ಷ್ಮೀಚಂದನಲ್ಲಿಗೆ ಬಲವಂತವಾಗಿ ಎಳಕೊಂಡು ಹೋಗ್ತಿದೀಯಲ್ಲ, ಇದು ಸರಿಯೇ, ಮಗು?"

"ಅದರಲ್ಲಿ ತಪ್ಪೇನಿದೆ, ಚಿಕ್ಕಪ್ಪ? ಅವನು ಇಡೀ ಪರಿವಾರಾನ ಕರೆದಿದಾನೆ ಅಂದಮೇಲೆ ನಾನು ನಿನ್ನನ್ನ ಬಿಟ್ಟು ಎಲ್ಲಿ ಹೋಗಲಿ? ಅಲ್ಲದೆ ಲಕ್ಷ್ಮೀಚಂದ ನಿನಗೆ ಚೆನ್ನಾಗಿ ಗೊತ್ತು. 'ಸರ್' ಟೈಟಲ್ ಸಿಕ್ಕಿದೆ. ಷ್ಯಾಂಪೇನ್ ಹರಿಯುತ್ತೆ; ಶಿಸ್ತಾಗಿ ಊಟವಾಗುತ್ತೆ; ಗುಡ್ಡೆಗುಡ್ಡೆ ಪರಂಗಿಯೋರು ಕಾಣಸಿಗ್ತಾರೆ—ನಿನಗೆ ವಿಲಾಯಿತಿ ನೆನಪು ಬರುತ್ತೆ."

ಜ್ಞಾನಪ್ರಕಾಶ ಒಳಗೊಳಗೇ ನಕ್ಕ, "ಒಳ್ಳೇದು, ನಡಿ. ಈ ಭೋಜನಕೂಟದಲ್ಲೇ ಅವನನ್ನ ಭೇಟಿ ಮಾಡೋಣಂತೆ."

ಮುಖ ತೊಳೆದು, ವಿಲಾಯಿತಿಯಲ್ಲಿ ಹೊಲಿಸಿದ್ದ ಡಿನ್ನರ್ ಡ್ರೆಸ್ ಹಾಕಿಕೊಂಡು ಜ್ಞಾನಪ್ರಕಾಶ ಕೋಣೆಯಿಂದ ಹೊರಬಿದ್ದಾಗ ಅವನಿಗೆ ಬಂಗಲೆಯ ಮುಂದೆ ನಿಂತಿದ್ದ ಗಂಗಾಪ್ರಸಾದನ ಕಾರು ಕಣ್ಣಿಗೆ ಬಿತ್ತು. "ಏನು, ಲಕ್ಷ್ಮೀಚಂದ ನಿನಗೆ ಕಾರು ಕಳಿಸಿದಾನೆಯೆ?" ಜ್ಞಾನಪ್ರಕಾಶ ಕೇಳಿದ.

ಗಂಗಾಪ್ರಸಾದ ನಗತೊಡಗಿದ, "ಇಲ್ಲ, ಚಿಕ್ಕಪ್ಪ. ಇದು ನನ್ನದೇ ಕಾರು. ನಾನು ಇಲ್ಲಿ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆಗಿರೋದರಿಂದ ನನ್ನ ಹತ್ತಿರ ಕಾರು ಇರಬೇಕು. ಆದರೆ ನಿನ್ನ ಮಾತು ಸುಳ್ಳಲ್ಲ. ಈ ಕಾರನ್ನ ಲಕ್ಷ್ಮೀಚಂದ ನನಗೆ ಉಡುಗೊರೆ ಕೊಟ್ಟ. ಅವನು ನಮ್ಮಣ್ಣ ಅಲ್ಲವೇ! ಕಾರು ಕೊಂಡುಕೊಳ್ಳೋಕೆ ನನ್ನ ಹತ್ತಿರ ಅಷ್ಟೊಂದು ಹಣ ಎಲ್ಲಿ ಬರಬೇಕು? ಇನ್ನೂ ಜೌನ್‌ಪುರದ ಸಾಲಾನೇ ತೀರಿಸ್ತಿರೋದಾಗಿದೆ!"

ಜ್ಞಾನಪ್ರಕಾಶನನ್ನು ಕಂಡು ಲಕ್ಷ್ಮೀಚಂದ ಬೆಚ್ಚಿಬಿದ್ದ. ಅವನು ಜ್ಞಾನಪ್ರಕಾಶನನ್ನು ಅಲಹಾಬಾದಿನಲ್ಲಿ ಎಷ್ಟೋ ಸಲ ನೋಡಿದ್ದ, ಅವನ ಜೊತೆ ಮಾತನಾಡಿದ್ದ. ಆದರೆ ಈಗ ಅವನನ್ನು ಕಂಡು ಬೆಚ್ಚಿದ್ದು ಗಂಗಾಪ್ರಸಾದನಿಗೆ ಕೊಂಚ ವಿಚಿತ್ರವೆನಿಸಿದರೂ ಸ್ವತಃ ಜ್ಞಾನಪ್ರಕಾಶನಿಗೆ ಅದರಿಂದ ಏನೂ ಆಶ್ಚರ್ಯವಾಗಲಿಲ್ಲ. ಲಕ್ಷ್ಮೀಚಂದ ಮೆಲುದನಿಯಲ್ಲಿ ಜ್ಞಾನಪ್ರಕಾಶನನ್ನು ಕೇಳಿದ, "ಏನು, ನೀವು ಅಹಮದಾಬಾದ್ ಕಾಂಗ್ರೆಸ್ ಮುಗಿಸಿಕೊಂಡು ಬರ್ತಿದೀರಾ?"

"ಹೌದು, ಮುಖ್ಯವಾಗಿ ನಿಮ್ಮನ್ನ ಭೇಟಿ ಮಾಡೋಣ ಅಂತ ಅಲಹಾಬಾದಿಗೆ ಹೋಗೋ ಮುಂಚೆ ಕಾನಪುರದಲ್ಲಿ ಇಳಿದೆ."

"ನಾಳೆ ಮಧ್ಯಾಹ್ನ ಆಫೀಸಿನಲ್ಲಿ ಬಂದು ನೋಡಿ," ಎಂದು ಹೇಳಿ ಲಕ್ಷ್ಮೀಚಂದ ಅತಿಥಿಗಳ ಸ್ವಾಗತಸತ್ಕಾರದಲ್ಲಿ ತೊಡಗಿದ.

ಜ್ಞಾನಪ್ರಕಾಶ, ಲಕ್ಷ್ಮೀಚಂದರ ಈ ಮಾತುಕತೆ ಗಂಗಾಪ್ರಸಾದನಿಗೆ ತುಂಬ ರಹಸ್ಯ ವಾಗಿ ಕಂಡಿತು. ಮನೆಗೆ ಹಿಂದಿರುಗಿದ ಮೇಲೆ ಗಂಗಾಪ್ರಸಾದ ಕೇಳಿದ, "ಚಿಕ್ಕಪ್ಪ, ಪೋಷಾಕು ನೋಡಿದರೆ ಯಾವ ಯೂರೋಪಿಯನ್ನನಾದರೂ ಮೀರಿಸೋ ಹಾಗಿದ್ದೆ. ನೀನು ಕಾಂಗ್ರೆಸ್ಸಿನೋನು, ಅಹಮದಾಬಾದ್ ಅಧಿವೇಶನ ಮುಗಿಸಿಕೊಂಡು ಬರ್‍ತಿದಿ ಅಂತ ಲಕ್ಷ್ಮೀಚಂದನಿಗೆ ಹೇಗೆ ಗೊತ್ತಾಯ್ತು?"

"ಅದನ್ನ ಕಟ್ಟಿಕೊಂಡು ನಿನಗೇನು?" ಜ್ಞಾನಪ್ರಕಾಶ ನಗುತ್ತ ಉತ್ತರ ಕೊಡದೆ ತಟಾಯಿಸಿದ.

"ಇಲ್ಲ, ಚಿಕ್ಕಪ್ಪ. ಇದನ್ನ ಹೇಳಲೇಬೇಕು ನೀನು. ಇಲ್ಲದೆ ಹೋದರೆ ಕುಡಿದ ನೀರು ಸಹ ಅರಗೋಲ್ಲ ನನಗೆ," ಗಂಗಾಪ್ರಸಾದ ಹಟ ಹಿಡಿದ.

"ಹಾಗಾದರೆ ಕೇಳು, ಮಗು! ಆದರೆ ಇಷ್ಟನ್ನ ಚೆನ್ನಾಗಿ ಜ್ಞಾಪಕದಲ್ಲಿ ಇಟ್ಟುಕೊ. ಈಗ ನಾನು ಹೇಳೋದು ಕಾನಪುರದ ಜಾಯಿಂಟ್ ಮ್ಯಾಜಿಸ್ಟ್ರೇಟಿಗಲ್ಲ, ನನ್ನ ಅಣ್ಣನ ಮಗ ಹಾಗೂ ಸ್ನೇಹಿತನಿಗೆ. ಗೊತ್ತಾಯ್ತೆ? ಈ ಸರ್ ಲಕ್ಷ್ಮೀಚಂದ ಬಂಡವಾಳಗಾರ ಹೌದು ತಾನೆ? ಭಾರತದ ಬಂಡವಾಳಗಾರರೇ ನಮ್ಮ ಆಂದೋಳನದ ಬೆನ್ನೆಲುಬು. ಆಂದೋಳನ ನಡಸೋಕ್ಕೆ ನಮಗೆ ಹಣ ಬೇಕು. ಈ ಹಣ ಸಿಗೋದು ದೇಶದ ಬಂಡವಾಳ ಗಾರರಿಂದಲೇ. ಯಾಕೆ ಅಂತೀಯೊ? ಬ್ರಿಟಿಷರ ಪ್ರಭುತ್ವ ಅಂದರೆ ಅದು ಅರ್ಥಾತ್ ಬ್ರಿಟಿಷ್ ಬಂಡವಾಳಗಾರರ ಪ್ರಭುತ್ವ. ಭಾರತದಲ್ಲಿ ವ್ಯಾಪಾರಮಾಡಿ, ಭಾರತದಲ್ಲಿ ತಮ್ಮ ಸಾಮಾನು ಮಾರಿ ತಾನೇ ಬ್ರಿಟನ್ ಭಾರತದ ಶೋಷಣೆ ಮಾಡ್ತಾ ಇರೋದು. ಈ ಬ್ರಿಟಿಷ್ ಬಂಡವಾಳಶಾಹಿಗೆ ಯಾವದಾದರೂ ಭಾರೀ ಹಾಗೂ ಸಕ್ರಿಯ ಶತ್ರು ಇರೋದಾದರೆ ಅದು ಭಾರತದ ಬಂಡವಾಳಶಾಹಿ!"

ಗಂಗಾಪ್ರಸಾದನಿಗೆ ಮತ್ತೆ ಜವಳಿ ಅಂಗಡಿಯವರ ಮಾತು ನೆನಪಾಯಿತು— "ಸ್ವದೇಶೀ ಆಂದೋಳನದಿಂದಾಗಿ ದೇಸೀ ಮಿಲ್ಲುಗಳ ಭಾಗ್ಯ ಬೆಳಗೋದು ಕಾಣೋಲ್ಲವೆ!" ಅವನಂದ, "ಅರ್ಥವಾಯಿತು, ಚಿಕ್ಕಪ್ಪ. ನೀನು ಆಂದೋಳನಕ್ಕೆ ಲಕ್ಷ್ಮೀಚಂದನಿಂದ ಹಣವಸೂಲಿ ಮಾಡೋಕ್ಕೆ ಬಂದಿದಿ. ಆಶ್ಚರ್ಯದ ವಿಷಯ ಅಂದರೆ ಲಕ್ಷ್ಮೀಚಂದ ಸರಕಾರಕ್ಕೂ ಹಣ ಕೊಡ್ತಾನೆ, ಕಾಂಗ್ರೆಸ್ಸಿಗೂ ಹಣ ಕೊಡ್ತಾನೆ."

"ಜೊತೆಗೆ ನಿನಗೂ ಹಣ ಕೊಡ್ತಾನೆ—ಕಾರಿನ ರೂಪದಲ್ಲಿ," ಜ್ಞಾನಪ್ರಕಾಶ ಹೇಳಿದ. "ಆದರೆ, ಗಂಗಾ, ಇದರಲ್ಲಿ ಆಶ್ಚರ್ಯಪಡೋದಕ್ಕೆ ಏನಿದೆ? ಈ ಬಂಡವಾಳಗಾರರು ಚೆನ್ನಾಗಿ ಲಾಭ ಹೊಡೀತಾರೆ. ಸರಕಾರದಿಂದ ಎಲ್ಲ ತರಹದ ಅನುಕೂಲಗಳೂ ಸಿಗಲಿ ಅಂತ ಆ ಲಾಭದಲ್ಲಿ ಒಂದು ಸಣ್ಣ ಪಾಲನ್ನ ಸರಕಾರಕ್ಕೆ ಕೊಡ್ತಾರೆ. ಸ್ವದೇಶೀ ಆಂದೋಳನಕ್ಕೆ ಬಲ ಬರಲಿ, ತಮ್ಮ ಮಾಲು ಚೆನ್ನಾಗಿ ಖರ್ಚಾಗಲಿ ಅಂತ ಇನ್ನೊಂದು

ಸಣ್ಣಪಾಲನ್ನ ಕಾಂಗ್ರೆಸ್ಸಿಗೆ ಕೊಡ್ತಾರೆ. ತಾವು ಮಾಡೋ ಲೂಟಿ-ಸುಲಿಗೆ, ತಗಲೂಫೀನ ನೋಡಿ ಸರಕಾರಿ ಅಧಿಕಾರಿಗಳು ಕಣ್ಣುಮುಚ್ಚಿಕೊಂಡಿರಲಿ ಅಂತ ಮತ್ತೊಂದು ಸಣ್ಣಪಾಲನ್ನ ಈ ಲಕ್ಷ್ಮೀಚಂದ ಜಾಯಂಟ್ ಮ್ಯಾಜಿಸ್ಟ್ರೇಟ್ ಗಂಗಾಪ್ರಸಾದನಿಗೆ ಕೊಡ್ತಾನೆ. ಈ ಯುಗದ ತೀರಾ ದೊಡ್ಡ ದೌರ್ಬಲ್ಯ ಅಂದರೆ ರೂಪಾಯಿ". ಹೀಗೆ ಹೇಳುತ್ತ ಹೇಳುತ್ತ ಜ್ಞಾನಪ್ರಕಾಶ ಜೋರಾಗಿ ನಗತೊಡಗಿದ.

## ಒಂಬತ್ತು

ಕಾನಪುರ ಪಟ್ಟಣದಲ್ಲಿ ಎಲ್ಲೆಲ್ಲೂ ಹರತಾಳ ನಡೆಯುತ್ತಿತ್ತು. ಜನರ ಉದ್ರೇಕ ಆವೇಶಗಳಿಗೆ ಮಿತಿಯಿರಲಿಲ್ಲ. ಹಿಂದಿನ ರಾತ್ರಿ ಜೈಲಿನಲ್ಲಿ ಒಬ್ಬ ಕಾಂಗ್ರೆಸ್ ಕಾರ್ಯಕರ್ತ ಸತ್ತಿದ್ದ. ಜೈಲಿನ ಅಧಿಕಾರಿಗಳ ಅತ್ಯಾಚಾರಕ್ಕೆ ಬಲಿಯಾಗಿ ಅವನು ಸತ್ತಿದ್ದನೆಂದು ಜನರ ಹೇಳಿಕೆಯಾದರೆ ಅವನಿಗೆ ಕಾಹಿಲೆ ಬಂದು ಸ್ವಾಭಾವಿಕವಾಗಿ ಸತ್ತಿದ್ದನೆಂದು ಅಧಿಕಾರಿಗಳು ಹೇಳುತ್ತಿದ್ದರು. ಆ ಕಾಂಗ್ರೆಸ್ ಸ್ವಯಂಸೇವಕನ ಶವವನ್ನು ಮೆರವಣಿಗೆ ಮಾಡುವ ಏರ್ಪಾಡಾಗಿತ್ತು. ಮೆರವಣಿಗೆ ಹೊರಟು ಮೆಸ್ಟನ್ ರೋಡ್ ತಲಪುವುದರೊಳಗೆ ಅದು ಇಪ್ಪತ್ತೈದು ಮೂವತ್ತು ಸಾವಿರ ಜನರ ದೊಡ್ಡ ಗುಂಪಾಗಿತ್ತು. ಜನರಲ್ಲಿ ಒಂದು ಬಗೆಯ ಕೋಪ, ಹಿಂಸೆ ಜಾಗ್ರತವಾಗುತ್ತಿತ್ತು.

ಪೋಲೀಸ್ ಅಧಿಕಾರಿಗಳಿಗೆ ಈ ಮೆರವಣಿಗೆಯ ಮನೋವೃತ್ತಿಯನ್ನು ಕಂಡು ಚಿಂತೆಗಿಟ್ಟುಕೊಂಡಿತು. ಅಧಿಕಾರಿಗಳು ತಮ್ಮತಮ್ಮಲ್ಲಿ ಆಲೋಚನೆ ನಡಸಿ, ಸಿವಿಲ್ ಲೈನ್ಸಿನಲ್ಲಿ ಬ್ರಿಟಿಷರ ಹಾಗೂ ಉಚ್ಚ ಅಧಿಕಾರಿಗಳ ಬಂಗಲೆಗಳಿರುವುದರಿಂದಾಗಿ ಮೆರವಣಿಗೆಯನ್ನು ಅಲ್ಲಿ ಪ್ರವೇಶಿಸಲು ಬಿಡಬಾರದು, ಗುಂಪು ಆವೇಶದಿಂದ ಕೂಡಿರುವ ಕಾರಣ ಅದು ಯಾವಾಗ ಹಿಂಸೆಗೆ ಕೈಹಾಕುವುದೆಂದು ಹೇಳಬರುವಂತಿಲ್ಲ ಎಂಬ ನಿರ್ಧಾರಕ್ಕೆ ಬಂದರು. ಮೆರವಣಿಗೆಯನ್ನು ಎದುರಿಸಲೆಂದು ಸಶಸ್ತ್ರ ಪೋಲೀಸ್ ದಳವನ್ನು ಕರೆಸಲಾಯಿತು.

ಮೆರವಣಿಗೆಯನ್ನು ತಡೆಯಲು ಸುಮಾರು ಇನ್ನೂರು ಸಶಸ್ತ್ರ ಹಾಗೂ ಸಾಧಾರಣ ಪೋಲೀಸ್ ಸಿಪಾಯಿಗಳೊಂದಿಗೆ ಗಂಗಾಪ್ರಸಾದ ಮೆಸ್ಟನ್ ರೋಡಿನಿಂದ ಸಿವಿಲ್ ಲೈನ್ಸಿಗೆ ತಿರುಗುವ ರಸ್ತೆಯ ಚೌಕದಲ್ಲಿ ನಿಂತುಕೊಂಡ. ಕಾಂಗ್ರೆಸ್ ಕಾರ್ಯಕರ್ತನ ಶವವನ್ನು ಅವನ ಹತ್ತಿರದ ಸಂಬಂಧಿಗಳ ಸಂಗಡ ಜೈಲಿನಿಂದ ನೇರವಾಗಿ ಭೈರವಘಾಟ್ ಸ್ಮಶಾನಕ್ಕೆ ಕಳಿಸಲಾಗಿತ್ತು. ಮೆರವಣಿಗೆ ಆ ರಸ್ತೆಯ ಚೌಕ ತಲಪಿದಾಗ ಅದನ್ನು ತಡೆಯಲಾಯಿತು. ಮೆರವಣಿಗೆಯಲ್ಲಿ ಎಲ್ಲಕ್ಕೂ ಮುಂದೆ ಕಾಂಗ್ರೆಸ್ ಬಾವುಟ ಹಿಡಿದ ಸ್ವಯಂಸೇವಕಿಯರಿದ್ದರು; ಅವರ ಜೊತೆ ಇತರ ಹೆಂಗಸರೂ ಕೂಡಿಕೊಂಡಿದ್ದರು. ಅವರ ಹಿಂದೆ ಕಾಂಗ್ರೆಸ್

ಸ್ವಯಂಸೇವಕರೂ ಇತರ ಕಾರ್ಯಕರ್ತರೂ ಇದ್ದರು. ಇನ್ನೂ ಹಿಂದೆ ಕಾನಪುರದ ನಾಗರಿಕರ ಭಾರೀ ಗುಂಪಿತ್ತು. ಗಂಗಾಪ್ರಸಾದ ಮುಂದೆ ಹೋಗಿ ಸಿವಿಲ್ ಲೈನ್ಸಿನಲ್ಲಿ ಮೆರವಣಿಗೆ ಹೋಗಲು ನಿರ್ಬಂಧ ಹಾಕಲಾಗಿದೆಯೆಂದೂ ಗುಂಪು ಹಾಗಿಂದ ಹಾಗೇ ಹಿಂದಿರುಗಬೇಕೆಂದೂ ಅಪ್ಪಣೆಮಾಡಿದ. ಅದನ್ನು ಕೇಳಿ ಕಾಂಗ್ರೆಸ್ ಕಮಿಟಿಯ ಐವರು ಮುಖಂಡರು ಮುಂದೆ ಬಂದರು. ಮೆರವಣಿಗೆ ಹಿಂದಿರುಗುವುದು ಸಾಧ್ಯವಿಲ್ಲವೆಂದೂ. ಸಿವಿಲ್‌ಲೈನ್ಸ್ ಮುಖಾಂತರ ಸ್ಮಶಾನಘಟ್ಟಕ್ಕೆ ಹೋಗಿ ಜನ ಅಮರ ಹುತಾತ್ಮನಿಗೆ ಶ್ರದ್ಧಾಂಜಲಿ ಅರ್ಪಿಸಲಿರುವರೆಂದೂ ಅವರು ಹೇಳಿದರು. ಸರಕಾರೀ ಆಜ್ಞೆಯನ್ನು ಪಾಲಿಸಲು ಜನ ಸಿದ್ಧರಿಲ್ಲ, ಆದರೆ ಅವರು ಹಿಂಸಾತ್ಮಕ ಕೃತ್ಯಕ್ಕೆ ಕೈಹಾಕುವುದಿಲ್ಲವೆಂದೂ ಮುಖಂಡರು ಗಂಗಾಪ್ರಸಾದನಿಗೆ ಭರವಸೆ ಕೊಟ್ಟರು.

ಮೆರವಣಿಗೆಯಲ್ಲಿ ಗದ್ದಲವೋ ಗದ್ದಲ. ಸರಕಾರಕ್ಕೂ ಸರಕಾರೀ ಅಧಿಕಾರಿಗಳಿಗೂ ಕೆಟ್ಟ ಕೆಟ್ಟ ಬೈಗಳ ಬೀಳುತ್ತಿತ್ತು. ಕಾಂಗ್ರೆಸ್, ಮಹಾತ್ಮಗಾಂಧಿ, ಸ್ವಾತಂತ್ರ್ಯ ಹಾಗೂ ಭಾರತಮಾತೆಯ ಪರವಾಗಿ ಜಯಜಯಕಾರ ಕೂಗುತ್ತ ಮೆರವಣಿಗೆ ಮುನ್ನಡೆದಿತ್ತು. ಗಂಗಾಪ್ರಸಾದನ ಬದಿಯಲ್ಲಿಯೇ ಕಾನಪುರದ ಪೋಲೀಸ್ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ನಿಂತಿದ್ದ. ಅವನು ಇಂಗ್ಲೀಷಿನವನು. ಅಕ್ಕಪಕ್ಕದಲ್ಲಿ ಆಂಗ್ಲೋ-ಇಂಡಿಯನ್ ಹಾಗೂ ಐರೋಪ್ಯ ಸಾರ್ಜಂಟರು ಸೊಂಟದಲ್ಲಿ ಪಿಸ್ತೂಲು ಸಿಕ್ಕಿಸಿಕೊಂಡು ನಿಂತಿದ್ದರು. ಗಂಗಾಪ್ರಸಾದ ಕಾನಪುರ ಪಟ್ಟಣದಲ್ಲಿ ೧೪೪ ನೇ ಸೆಕ್ಷನ್ ಜಾರಿಮಾಡಲಾಗಿದೆಯೆಂದು ಘೋಷಿಸಿ, ಹದಿನೈದು ನಿಮಿಷದೊಳಗೆ ಮೆರವಣಿಗೆ ಚದುರಬೇಕೆಂದು ಆಜ್ಞೆಮಾಡಿದ.

ಈ ಹೊತ್ತಿಗೆ ಮೆರವಣಿಗೆಯ ಹಿಂದಿನಿಂದ ಯಾರೋ ಒಂದು ಕಲ್ಲೆಸೆದರು. ಅದು ಅಸಿಸ್ಟೆಂಟ್ ಪೋಲೀಸ್ ಸೂಪರಿಂಟೆಂಡೆಂಟನ ಎಡಗೈಗೆ ತಾಕಿತು. ಆ ಕ್ಷಣ ಅವನು ಪಿಸ್ತೂಲನ್ನು ಹೊರತೆಗೆದು ಗುಂಪಿನ ಕಡೆ ಚಾಚಿದ. ಆದರೆ ಗಂಗಾಪ್ರಸಾದ ಅವನ ಕೈ ಬಗ್ಗಿಸಿದ. ಆದರೆ ಅದೇ ಸಮಯಕ್ಕೆ ಕಲ್ಲಿನ ಸುರಿಮಳೆಯಾಯಿತು. ಒಂದು ಕಲ್ಲು ಗಂಗಾಪ್ರಸಾದನ ತಲೆಗೂ ಬಡಿಯಿತು. ಗಂಗಾಪ್ರಸಾದ ಈಗ ಪೋಲೀಸರಿಗೆ ಲಾಠೀ ಚಾರ್ಜು ಮಾಡುವಂತೆ ಆಜ್ಞೆಮಾಡಿದ. ಗುಂಪನ್ನು ಚದುರಿಸುವಂತೆ ಕುದುರೆಸವಾರರಿಗೆ ಅಪ್ಪಣೆಯಾಯಿತು. ಗಂಗಾಪ್ರಸಾದನ ಅಪ್ಪಣೆಯಾದೊಡನೆಯೇ ಪೋಲೀಸರೂ ಕುದುರೆಸವಾರರೂ ಮೆರವಣಿಗೆಯ ಮೇಲೆ ಬಿದ್ದರು.

ಜನ ಗಾಬರಿಯಿಂದ ಓಡತೊಡಗಿದರು. ಆದರೆ ಕಾಂಗ್ರೆಸ್ಸಿನ ಸ್ವಯಂಸೇವಕರೂ ಸ್ವಯಂಸೇವಕಿಯರೂ ಕಾರ್ಯಕರ್ತರೂ ಅಲ್ಲಾಡದೆ ನಿಂತು ಲಾಠಿಯ ಏಟುಗಳನ್ನು ಸಹಿಸುತ್ತಿದ್ದರು. ಐದು ನಿಮಿಷದೊಳಗೆ ಗುಂಪು ಕರಗಿತು. ಬರಿಯ ಗಾಯಗೊಂಡವರಷ್ಟೇ ಅಲ್ಲಿ ಉಳಿದರು. ಲಾಠೀ ಚಾರ್ಜಿನಲ್ಲಿ ಗಾಯಗೊಂಡವರ ಸಂಖ್ಯೆ ಇನ್ನೂರಕ್ಕೂ ಹೆಚ್ಚಿತ್ತು. ಅವರಲ್ಲಿ ಇಪ್ಪತ್ತೈದು ಮಂದಿ ಹೆಂಗಸರೂ ಇದ್ದರು. ಗಾಯಗೊಂಡವರಲ್ಲಿ

ಐವತ್ತು ಮಂದಿಗೆ ಬಲವಾಗಿ ಏಟು ಬಿದ್ದಿತ್ತು. ಅವರನ್ನು ತಕ್ಷಣವೇ ಆಸ್ಪತ್ರೆಗೆ ಕಳಿಸ ಲಾಯಿತು; ಉಳಿದವರನ್ನು ದಸ್ತಗಿರಿ ಮಾಡಿ ಬಂದೀಖಾನೆಗೆ ಹಾಕಲಾಯಿತು.

ಮಾರನೆಯ ದಿನ ಗಂಗಾಪ್ರಸಾದ ಕಚೇರಿಯಿಂದ ಹಿಂದಿರುಗಿದಾಗ ಜ್ಞಾನಪ್ರಕಾಶ ಹಾಗೂ ಇನ್ನೊಬ್ಬ ಕಾರ್ಯಕರ್ತ ಸತ್ಯವ್ರತ ಅವನ ಕೋಣೆಯಲ್ಲಿ ಕುಳಿತಿದ್ದರು. ಗಂಗಾ ಪ್ರಸಾದನ ಮನಸ್ಸು ಹಗುರವಾಗಿತ್ತು. ಅದಕ್ಕೆ ಕಾರಣವೆಂದರೆ ಆಸ್ಪತ್ರೆಯಲ್ಲಿದ್ದ ವರಲ್ಲಿ ಸುಮಾರು ಮೂವತ್ತು ಮಂದಿಯನ್ನು ಬೆಳಗ್ಗೆಯೇ ಮನೆಗೆ ಕಳಿಸಲಾಗಿತ್ತು. ಉಳಿದ ಇಪ್ಪತ್ತು ಮಂದಿಗೆ ಔಷಧೋಪಚಾರ ನಡೆಯುತ್ತಿದ್ದು ಅವರೆಲ್ಲರ ಸ್ಥಿತಿ ಸುಧಾರಿ ಸಿತ್ತು. ಹಿಂದಿನ ಸಂಜೆ ದಸ್ತಗಿರಿ ಮಾಡಲಾಗಿದ್ದ ಐವರು ಮುಖಂಡರಿಗೆ ಗಂಗಾಪ್ರಸಾದ ಒಂದೊಂದು ತಿಂಗಳ ಸಜಾ ವಿಧಿಸಿದ್ದ. ಬಟ್ಟೆ ಬದಲಾಯಿಸಿ ಬಂದು ಗಂಗಾಪ್ರಸಾದ ಜ್ಞಾನಪ್ರಕಾಶ ಸತ್ಯವ್ರತರ ಹತ್ತಿರ ಕುಳಿತುಕೊಂಡ. ಭೀಖೂ ಮೂವರಿಗೂ ತಿಂಡಿ-ಚಹ ತಂದಿಟ್ಟ. ಗಂಗಾಪ್ರಸಾದ ಜ್ಞಾನಪ್ರಕಾಶನ ಕಡೆ ನಿಶ್ಚಿಂತನಾಗಿ ನೋಡುತ್ತ ಹೇಳಿದ, "ಹೇಳಿ, ಈಗ ನಿಮ್ಮ ಇರಾದೆ ಏನಿದೆ ಅಂತ ?"

"ಇರಾದೆ ! ನಿನ್ನ ಚಿಂತೇನ ದೂರ ಮಾಡ್ತಿದೀವಿ ಅಂತ ಅಂದುಕೊ, ಮಗು ! ಏನಿಲ್ಲದಿದ್ದರೂ ನಿನಗೊಂದಿಷ್ಟು ಶಾಂತಿ ಸಿಗುತ್ತೆ. ಆಂದೋಳನಾನ ಈಗ ಪಟ್ಟಣ ಬಿಟ್ಟು ಹಳ್ಳೀಲಿ ಷುರುಮಾಡಬೇಕಾಗಿದೆ. ನಾವು ಹಳ್ಳೀಲಿ ಕರಾನಿರಾಕರಣೆಯ ಸಾಮೂಹಿಕ ಸತ್ಯಾಗ್ರಹದ ಕಾರ್ಯಕ್ರಮ ಹಾಕ್ಕೊಂಡಿದೀವಿ. ಪಟ್ಟಣದ ಜಾಯಿಂಟ್ ಮ್ಯಾಜಿ ಸ್ಟ್ರೇಟ್‌ಗೆ ಹಳ್ಳಿ ಕಟ್ಟಿಕೊಂಡು ಏನಾಗಬೇಕಾಗಿದೆ ! ಮೂರು ನಾಲ್ಕು ತಿಂಗಳಲ್ಲೇ ಸರಕಾರ ಉಸಿರುಕಟ್ಟಿ ಒರಗಿ ಬಿದ್ದರೆ ಎಲ್ಲಾ ಫೈಸಲಾಗುತ್ತೆ ಅಂತ ಅಂದುಕೊಂಡಿದೀವಿ."

"ಅಂದರೆ ನೀವು ವಾಸ್ತವವಾಗಿ ಹಳ್ಳೀಲಿ ಸಾಮೂಹಿಕ ಸತ್ಯಾಗ್ರಹ ಷುರುಮಾಡ್ತೀರಾ, ಚಿಕ್ಕಪ್ಪ? ಈ ಸಾಮೂಹಿಕ ಸತ್ಯಾಗ್ರಹ ಅನ್ನೋದು ಒಂದು ಭಯಂಕರ ಅಸ್ತ್ರ. ಇದುವರೆಗೆ ಏನೊಂದಿಷ್ಟು ಯಶಸ್ಸು ಸಿಕ್ಕಿದೆ ಅದು ಇದರಿಂದ ನಷ್ಟವಾಗಿಹೋಗುತ್ತೆ."

ಜ್ಞಾನಪ್ರಕಾಶ ಸ್ವಲ್ಪ ಯೋಚಿಸಿ ಉತ್ತರಿಸಿದ, "ನನಗೆ ಗೊತ್ತಿದೆ, ಗಂಗಾ. ಆದರೆ ನಾವು ನಿಷ್ಕ್ರಿಯರಾಗಿದ್ದರೂ ಈ ಯಶಸ್ಸು ನಷ್ಟವಾಗುತ್ತೆ. ಬ್ರಿಟಿಷ್ ಸರಕಾರ ತಲೆ ತಗ್ಗಿಸೋದಿದ್ದರೆ ಈ ಸಾಮೂಹಿಕ ಸತ್ಯಾಗ್ರಹದ ಒಂದೇ ಅಸ್ತ್ರಕ್ಕೆ, ನೋಡು. ನಾವು ಈಗ ಈ ಆಂದೋಳನಾನ ಲಕ್ಷಾಂತರ, ಕೋಟ್ಯಾಂತರ ರೈತರ ಹತ್ತಿರಕ್ಕೆ ಒಯ್ಯಬೇಕಾಗಿದೆ. ಇನ್ನೊಂದು ವಾರದಲ್ಲಿ ಅಲಹಾಬಾದಿನಲ್ಲಿ ಸಂಯುಕ್ತಪ್ರಾಂತದ ಎಲ್ಲ ಸಕ್ರಿಯ ಕಾರ್ಯ ಕರ್ತರ ಸಭೆ ನಡೆಯೋದಿದೆ. ಅಲ್ಲಿ ಆಂದೋಳನಾನ ಹಳ್ಳಿಗಳಲ್ಲಿ ಹೇಗೆ ಷುರುಮಾಡ ಬೇಕು ಅನ್ನೋದರ ರೂಪರೇಷೆ ತಯಾರಾಗುತ್ತೆ."

ಈ ಹೊತ್ತಿಗೆ ಕಲೆಕ್ಟರರ ಜವಾನ ಗಂಗಾಪ್ರಸಾದನಿಗೆ ಒಂದು ಚೀಟಿ ತಂದುಕೊಟ್ಟ. ಅದನ್ನು ಓದಿ ಗಂಗಾಪ್ರಸಾದ ಬೆಚ್ಚಿದ. "ನಾನು ಇನ್ನೊಂದು ಗಂಟೇಲಿ ಬರ್ತೀನಿ

ಅಂತ ಹೇಳು" ಎಂದು ಜವಾನನನ್ನು ಕಳಿಸಿ, ಅವನು ಹೋದ ಕೂಡಲೆ ಕಲೆಕ್ಟರರಿಂದ ಬಂದಿದ್ದ ಟೈಪುಮಾಡಿದ ಚೀಟಿಯನ್ನು ಜ್ಞಾನಪ್ರಕಾಶನ ಕಡೆ ಚಾಚಿದ. "ಸ್ವಲ್ಪ ಇದನ್ನು ಓದು, ಚಿಕ್ಕಪ್ಪ. ಬಿಸಿಬಿಸಿ ಸುದ್ದಿ ಕೊಡ್ತಿದೀನಿ."

"ಅರೆ, ಇದೇನಿದು?" ಜ್ಞಾನಪ್ರಕಾಶ ಕಲೆಕ್ಟರರ ಚೀಟಿ ಓದಿ ಅರಚಿಕೊಳ್ಳುತ್ತಿರುವವನಂತೆ ಹೇಳಿದ, "ಈ ಚೌರೀಚೌರಾದ ಸುದ್ದಿ ಸುಳ್ಳು; ಇದು ಬರಿಯ ಅತಿಶಯೋಕ್ತಿ. ಇಪ್ಪತ್ತು ಜನ ಪೋಲೀಸ್ ಹಾಗೂ ಒಬ್ಬ ಸಬ್ ಇನ್ಸ್‌ಪೆಕ್ಟರನ್ನ ಜೀವಂತವಾಗಿ ಸುಟ್ಟು, ಠಾಣೇನ ಭಸ್ಮಮಾಡಲಾಯಿತು? ನಾನು ಇದನ್ನ ನಂಬೋದು ಸಾಧ್ಯವಿಲ್ಲ! ಏನು ಗಂಗಾ ಈ ಸುದ್ದಿ ಸತ್ಯವೆ?"

ಗಂಗಾಪ್ರಸಾದ ಉತ್ತರಕೊಟ್ಟ, "ಸರಕಾರೀ ವಿಷಯಗಳಲ್ಲಿ ಹಾಗೆಲ್ಲಾ ಸುಳ್ಳು ಸುದ್ದಿ ಕೊಡೋದಿಲ್ಲ. ಬೇಕಾದರೆ ನಂಬು, ಇಲ್ಲವೇ ಬಿಡು. ಹಳ್ಳಿಗಳಲ್ಲಿ ಈ ಸಾಮೂಹಿಕ ಸತ್ಯಾಗ್ರಹ, ಈ ಧ್ವಂಸಾತ್ಮಕ ಆಂದೋಳನಗಳನ್ನ ನಡಸೋದು ತಪ್ಪುಹೆಜ್ಜೆ ಅಂತ ನಾನು ನಿನಗೆ ಮೊದಲೇ ಹೇಳಿದೆ. ಈ ತರಹದ ಇನ್ನೊಂದು ನಾಲ್ಕಾರು ಘಟನೆ ನಡೆದರೆ ಇಡೀ ಪ್ರಾಂತ್ಯದಲ್ಲಿ ಸೈನಿಕ ಶಾಸನ ಜಾರಿಗೆ ಬರಬಹುದು, ಪಂಜಾಬಿನ 'ಮಾರ್ಷಲ್ ಲಾ'ಗಿಂತ ಹೆಚ್ಚು ಭೀಕರವಾದದ್ದು. ಈ ಸೈನಿಕ ಶಾಸನದ ಔಚಿತ್ಯವನ್ನೂ ಸಿದ್ಧಮಾಡಿ ತೋರಿಸಿದ ಹಾಗಾಗುತ್ತೆ."

ಜ್ಞಾನಪ್ರಕಾಶ ಈ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಆದರೆ ಸತ್ಯವ್ರತ ದೃಢತೆ ತುಂಬಿದ ಧ್ವನಿಯಲ್ಲಿ ಹೇಳಿದ, "ಜಂಟ್ ಸಾಹೇಬ್, ಬರೀ ಸಂಯುಕ್ತ ಪ್ರಾಂತದಲ್ಲಷ್ಟೇ ಅಲ್ಲ, ಇಡೀ ಭಾರತದಲ್ಲಿ ಮಾರ್ಷಲ್ ಲಾ ಜಾರಿಗೆ ಬಂದರೆ ನನಗೆ ಸಂತೋಷವಾಗುತ್ತೆ. ಈಗ ಬ್ರಿಟಿಷರು ದೇಶದ ತುಂಬ ಹಾಸುಹೋಕ್ಕಾಗಿ ಹೆಣೆದಿಟ್ಟಿರೋ ಈ ನೌಕರಶಾಹಿ ಏನಿದೆ, ಅದಾದರೂ ಕೊನೆಗೊಳ್ಳುತ್ತೆ. ಪ್ರತಿಯೊಬ್ಬ ಭಾರತೀಯನಿಗೂ ತಾನುಗುಲಾಮ ಅನ್ನೋದು ಗೊತ್ತಾಗುತ್ತೆ. ಈ ಸರಕಾರ ನಿಂತಿರೋದು ಯಾರು ಸಿವಿಲಿಯನ್ಸ್ ಅಂತ ಕರಕೊಂಡು ಸರಕಾರೀ ನೌಕರಿ ಮಾಡ್ತಿದಾರೋ ಅವರ ಬಲದ ಮೇಲೆ."

ಗಂಗಾಪ್ರಸಾದನಿಗೆ ಸತ್ಯವ್ರತನ ಮಾತು, ಅದು ವಿಶೇಷವಾಗಿ ತನ್ನನ್ನೇ ಗೇಲಿ ಮಾಡುವಂತಿದ್ದುದರಿಂದ, ಅಪ್ರಿಯವಾಗಿ ಕಂಡಿತು. ಆದರೆ ಅವನು ಸತ್ಯವ್ರತ ಹೇಳಿದುದನ್ನು ಅಲ್ಲಗಳೆಯುವಂತಿರಲಿಲ್ಲ. ಅವನು ಸತ್ಯವ್ರತನ ಕಡೆ ನೋಡಿದ. ಆ ಅನುಭವವಿಲ್ಲದ ನವಯುವಕ ಇಷ್ಟು ದೊಡ್ಡ ಸತ್ಯವನ್ನು ಹೇಳಿದ್ದಾದರೂ ಹೇಗೆ! ಆದರೆ ಸತ್ಯವ್ರತನ ಮಾತಿಗೆ ಇನ್ನೂ ಒಂದು ಮುಖವಿತ್ತು. ಗಂಗಾಪ್ರಸಾದ ಕೇಳಿದ. "ಆದರೆ ಈ ಹಿಂದೂಸ್ತಾನಿ ಸೇನೆಯಿದೆಯಲ್ಲ. ಸತ್ಯವ್ರತ – ಯಾತರ ಸಹಾಯದಿಂದ ೧೮೫೭ರ ವಿದ್ರೋಹವನ್ನ ಅಡಗಿಸಲಾಗಿತ್ತೋ ಅದು—ಅದಕ್ಕೆ ಏನು ಮಾಡ್ತಿ? ಆ ಸೇನೆಯ ಬಲದಿಂದಲೇ ಅಲ್ಲವೆ, ಕೆಲವೇ ಮಂದಿ ಬ್ರಿಟಿಷರು ಇಡೀ ದೇಶದ ಜನಾನ ಗುಲಾಮ

ರನ್ನಾಗಿ ಮಾಡಿಕೊಂಡದ್ದು. ಈ ಮಾರ್ಷಲ್ ಲಾ ಬಲು ಅಪಾಯಕಾರಿ, ಸತ್ಯವ್ರತ. ಅದನ್ನ ಆಶಿಸಬೇಡ!"

ಸತ್ಯವ್ರತ ಎದ್ದುನಿಂತ, "ಜಂಟ್ ಸಾಹೇಬ್, ನಾನು ಇಷ್ಟು ಬಲ್ಲೆ. ಗುಲಾಮ ಗಿರಿಯ ವಿರುದ್ಧ ದಂಗೆಯೇಳೋದು, ಹೋರಾಡೋದು ನಮ್ಮಗಳ ಧರ್ಮ, ಈ ದಂಗೆ, ಈ ಹೋರಾಟಗಳ ಪರಿಣಾಮ ಏನಾಗುತ್ತೆ ಅಂತ ಯೋಚಿಸೋದು, ವಾದ-ವಿವಾದ ಮಾಡೋದು ಹೇಡಿತನ. ಈ ಹೇಡಿತನದಿಂದಾಗಿಯೇ ನಮ್ಮ ಭಾರತೀಯರ ಸ್ಥಿತಿ ಆಡುಕುರಿಗಳ ಸ್ಥಿತಿಯಂತಾಗಿದೆ. ಒಳ್ಳೇದು, ನೀವು ಕಲೆಕ್ಟರ್ ಸಾಹೇಬರಲ್ಲಿಗೆ ಹೋಗ ಬೇಕಾಗಿದ್ದರೆ ನಾನು ಕಾಂಗ್ರೆಸ್ ಆಫೀಸಿಗೆ ಹೋಗಬೇಕಾಗಿದೆ. ಪ್ರಾಯಶಃ ಅಲ್ಲೂ ಏನಾದರೂ ಸುದ್ದಿ ಬಂದಿರಬಹುದು. ಈ ಗಂಭೀರ ಸ್ಥಿತಿಯ ಬಗ್ಗೆ ನಾವೂ ಒಂದಿಷ್ಟು ಯೋಚಿಸಬೇಕಾಗಿದೆ. ನಡೀರಿ, ಜ್ಞಾನಪ್ರಕಾಶ್‌ಜೀ, ನೀವು ಇಲ್ಲಿ ಕುಳಿತುಕೊಂಡು ಮಾಡೋದೇನಿದೆ?"

ಗಂಗಾಪ್ರಸಾದ ಜ್ಞಾನಪ್ರಕಾಶನಿಗೆ ಹೇಳಿದ, "ಈ ಚೌರೀಚೌರಾದ ಸುದ್ದಿ ಬೇರೆ ಯಾರಿಗೂ ಗೊತ್ತಾಗೋದು ಬೇಡ, ಚಿಕ್ಕಪ್ಪ. ಇಲ್ಲದೆ ಹೋದರೆ ನನ್ನಮೇಲೆ ಸರಕಾರೀ ಸುದ್ದೀನ ಬಯಲಿಗೆಳೆದ ಆರೋಪ ಬರಬಹುದು. ಸರಕಾರ ಈ ಸುದ್ದೀನ ಬೇರೆ ಯಾವದಾದರೂ ರೂಪದಲ್ಲಿ ಪ್ರಕಟಿಸೋ ಸಂಭವವಿದೆ. ಜೈಲು ಹೊರಗೆ ಉಳಿದಿರೋ ಕಾಂಗ್ರೆಸ್ಸಿನ ಜವಾಬ್ದಾರಿಯುಳ್ಳ ಮುಖಂಡರು ನೀವುಗಳು. ನಿಮಗೆ ಒಂದು ಸಲಹೆ ಕೊಡ್ತೀನಿ. ಈ ಆಂದೋಳನ ಇಲ್ಲಿಗೆ ನಿಂತರೆ ವಾಸಿ. ಇಲ್ಲದೇ ಹೋದರೆ ಅನರ್ಥ ವಾಗುತ್ತೆ. ಒಬ್ಬ ಭಾರತೀಯ ಇನ್ನೊಬ್ಬ ಭಾರತೀಯನನ್ನ ಕೊಲ್ತಾನೆ, ಸುಡ್ತಾನೆ. ಹೀಗೆ ನಮ್ಮ ದೇಶದಲ್ಲಿ ಗೃಹಕಲಹ ಆರಂಭವಾಗುತ್ತೆ. ಎಲ್ಲೆಲ್ಲೂ ಹೊಡೆದಾಟ, ಲೂಟಿಗಳಾಗುತ್ತೆ, ಅರಾಜಕತೆ ಹರಡುತ್ತೆ."

ಮಾರನೆಯ ದಿನ ಚೌರೀಚೌರಾದ ಹತ್ಯಾಕಾಂಡದ ಸುದ್ದಿ ದೇಶದಲ್ಲೆಲ್ಲಾ ಹರಡಿತು. ಆ ಘಟನೆ ಬಲು ಭೀಕರವಾಗಿತ್ತು. ಜನ ಉತ್ತೇಜಿತರಾದಾಗ ಎಷ್ಟು ಭಯಾನಕವಾಗಿ ವರ್ತಿಸಬಲ್ಲರು! ಸರಕಾರೀ ಅಧಿಕಾರಿಗಳಲ್ಲೂ ಕೆಲಸಗಾರರಲ್ಲೂ ಒಂದು ಬಗೆಯ ಭಯ ತುಂಬಿತ್ತು. ಆ ಭಯಕ್ಕೆ ಪ್ರತಿಕ್ರಿಯೆಯಾಗಿಯೋ ಎಂಬಂತೆ ಅವರಲ್ಲಿ ಕಾಂಗ್ರೆಸ್ಸಿನವರ ವಿರುದ್ಧ ಒಂದು ರೀತಿಯ ಹಿಂಸೆ ಜಾಗ್ರತವಾಗಿತ್ತು. ಹೋರಾಟದ ಶ್ರೀಕಾರ ಬರೆದಾಗಿತ್ತು. ದೇಶದಲ್ಲಿ ಎಲ್ಲೆಲ್ಲೂ ಕಾಂಗ್ರೆಸ್ಸಿನ ಸಂಘಟನಾಕಾರ್ಯದಲ್ಲಿ ಉತ್ಸಾಹವೋ ಉತ್ಸಾಹ.

ಅವತ್ತು ಹತ್ತು ಹನಿ ಮಳೆ ಬಿದ್ದಿತ್ತು. ಹಿಂದಿನ ರಾತ್ರಿಯಿಂದಲೇ ಚಳಿ ಷುರು ವಾಗಿತ್ತು. ಗಂಗಾಪ್ರಸಾದ ಕಚೇರಿಗೆ ಹೋಗುವ ತಯಾರಿ ನಡಸಿದ್ದ. ಅದೇ ಹೊತ್ತಿಗೆ ಜ್ಞಾನಪ್ರಕಾಶ ಕೋಣೆಯೊಳಗೆ ಕಾಲಿಡುತ್ತ ಹೇಳಿದ, "ಗಂಗಾ, ನಾನು ಈ ಗಾಡಿಯಿಂದ ಅಲಹಾಬಾದಿಗೆ ಹೊರಟಿದೀನಿ. ನಿನ್ನೆ ರಾತ್ರಿ ಕಾಂಗ್ರೆಸ್ ಕಮಿಟಿಯಿಂದ ತಂತಿ ಬಂತು.

ಅಲ್ಲಿ ನನ್ನ ಅವಶ್ಯಕತೆ ತುಂಬ ಇದೆ. ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಕಾರ್ಯ ದರ್ಶಿಯ ಕಾಗದ ಇದೇ ಈಗ ಟಪಾಲಿನಿಂದ ಬಂತು. ಬಲು ವಿಚಿತ್ರ ಪರಿಸ್ಥಿತಿಯುಂಟಾಗಿದೆ.

ಗಂಗಾಪ್ರಸಾದ ಕುತೂಹಲದಿಂದ ಜ್ಞಾನಪ್ರಕಾಶನ ಕಡೆ ನೋಡಿದ, "ಏನು ಚಿಕ್ಕಪ್ಪ, ಅದೇನು ಪರಿಸ್ಥಿತಿ ಉಂಟಾಗಿದೆ? ಅಭ್ಯಂತರವಿಲ್ಲದಿದ್ದರೆ ನನಗೂ ಹೇಳ ಬಹುದಲ್ಲ!"

"ನೀನು ಪತ್ರಿಕೆಗಳಲ್ಲಿ ಓದಿರಬೇಕು. ಮಹಾತ್ಮ ಗಾಂಧಿ ಈ ಸಾಮೂಹಿಕ ಸತ್ಯಾಗ್ರಹಾನ ವಾಪಸು ತೊಗೋಬೇಕು ಅಂತಿದಾರೆ. ಇದನ್ನೂ ನೀನು ಓದಿರಬಹುದು, ಫೆಬ್ರುವರಿ ಹನ್ನೆರಡಕ್ಕೆ ಬಾರಡೋಲೀಲಿ ಕಾಂಗ್ರೆಸ್ ಕಾರ್ಯಸಮಿತಿಯ ಸಭೆ ಇದೆ. ಅದರಲ್ಲಿ ಗಾಂಧೀಜಿಯ ಠರಾವು ಪಾಸಾಗುತ್ತೆ ಅಂತ ಎಲ್ಲಾ ಅಂದುಕೊಂಡಿದಾರೆ."

ಗಂಗಾಪ್ರಸಾದ ಒಮ್ಮೆ ಆಳವಾಗಿ ಉಸಿರೆಳೆದುಕೊಂಡು ಸಂತೋಷ ವ್ಯಕ್ತಪಡಿಸಿದ, "ನಾನು ಏನು ಹೇಳಿದ್ದೆ, ಚಿಕ್ಕಪ್ಪ. ವಾಸ್ತವವಾಗಿ ಮಹಾತ್ಮ ಗಾಂಧಿ ದೇಶದ ಸ್ಥಿತೀನ ಚೆನ್ನಾಗಿ ಬಲ್ಲರು. ಅವರು ಮಾಡ್ತಿರೋದು ಸರಿಯಾಗಿದೆ. ಇದರಲ್ಲಿ ನೀವುಗಳು ಚಿಂತೆಪಡೋಕ್ಕೆ ಏನಿದೆ?"

"ಮುಂದಿಟ್ಟ ಹೆಜ್ಜೇನ ಹಿಂದೆ ತೊಗೋಳೋದು ನಮ್ಮ ಸೋಲು! ವಿಜಯ ಮುಂದಿರೋವಾಗ ನಾವು ಹಿಂದೆ ಸರೀತಿದೀವಿ!"

ಗಂಗಾಪ್ರಸಾದ ನಕ್ಕ, "ವಿಜಯ ಮುಂದಿದೆಯೋ ವಿನಾಶ ಮುಂದಿದೆಯೋ ಅನ್ನೋದನ್ನ ನಿನಗಿಂತ ಚೆನ್ನಾಗಿ ಮಹಾತ್ಮ ಗಾಂಧಿ ನೋಡಬಲ್ಲರು, ಅರ್ಥಮಾಡಿಕೊಳ್ಳ ಬಲ್ಲರು. ಆದರೆ ನೀನು ಅಲಹಾಬಾದಿಗೆ ಹೋಗಿ ಏನು ಮಾಡ್ತಿ? ನೋಡು, ಚಿಕ್ಕಪ್ಪ, ಇವತ್ತು ತಾರೀಕು ಹನ್ನೊಂದಾಯಿತು, ಅಪ್ಪ ಇನ್ನೂ ವಾಪಸು ಬಂದಿಲ್ಲ. ನೀನು ಜೊತೇಲಿತ್ತು ಅಂದರೆ ಬೇಜಾರು ಕಳೆಯುತ್ತೆ. ನನ್ನ ಮಾತು ಕೇಳು. ಇನ್ನೊಂದೆರಡು ವಾರ ಇಲ್ಲಿರು. ನೀನಿಲ್ಲದೆ ಹೋದರೆ ಕಾಂಗ್ರೆಸ್ಸಿನ ಕೆಲಸವೇನೂ ನಿಂತುಹೋಗೋಲ್ಲ!"

ಜ್ಞಾನಪ್ರಕಾಶ ಕೋಪದಿಂದ ಸಿಡಿಗುಟ್ಟುತ್ತ ಕೊಂಚ ಬಿರುಸಾಗಿಯೇ ಹೇಳಿದ, "ಕೆಲಸ ನಿಂತುಹೋಗುತ್ತೋ ಬಿಡುತ್ತೋ. ಈ ಆಂದೋಳನದ ವ್ಯವಸ್ಥೆಯ ಭಾರ ನನ್ನ ಮೇಲಿತ್ತು. ಈಗ ನೋಡಿದರೆ ಹಣ ಸಿಗೋ ಹಾಗೆ ಸಹ ಕಾಣೋಲ್ಲ. ಕಾನಪುರದ ವ್ಯಾಪಾರಿಗಳೂ ಮಿಲ್ಲು ಮಾಲೀಕರೂ ಇಲ್ಲದ ನೆಪ ಹೇಳೋಕ್ಕೆ ಷುರುಮಾಡಿದಾರೆ. ಲಕ್ಷ್ಮೀ ಚಂದ ಐವತ್ತು ಸಾವಿರ ರೂಪಾಯಿ ಕೊಡ್ತೀನಿ ಅಂತ ಮಾತು ಕೊಟ್ಟಿದ್ದ, ನಿನ್ನೆ ಸ್ಪಷ್ಟ ವಾಗಿ ಕೈ ಅಲ್ಲಾಡಿಸಿಬಿಟ್ಟ."

ಗಂಗಾಪ್ರಸಾದ ನಕ್ಕ, "ಷಾಭಾಷ್! ಸರ್ ಲಕ್ಷ್ಮೀಚಂದ್! ಮನುಷ್ಯ ಬುದ್ಧಿ ವಂತ! ಆಂದೋಳನದ ಮಟ್ಟಿಗೆ ನಿಮಗೆ ಜೊತೆಕೊಡ್ತಾನೆ. ಆದರೆ ಹೋರಾಟ, ಅರಾಜ ಕತೆಗಳ ಪ್ರಶ್ನೆ ಬಂದಾಗ ಅವನು ನಿಮ್ಮ ಜೊತೆಗಿರ್ತಾನೆಯೆ? ಒಳ್ಳೇದು, ಹೋಗು. ಹೋಗಿ ಕಾಂಗ್ರೆಸ್ಸಿನವರು ಇಟ್ಟುಕೊಂಡಿರೋ ಹಣಕಾಸಿನ ಸುಳ್ಳು ಕನಸನ್ನ ಕೊನೆಗಾಣಿಸು.

ಆದರೆ ಹೋದ ತಕ್ಷಣ ಅಪ್ಪನ್ನೂ ಮನೆಯವರನ್ನೂ ನಾಳೆ ಹೊತ್ತಿಗೆ ಇಲ್ಲಿರೋ ಹಾಗೆ ಕಳಿಸಿಕೊಡು ! "

ಜ್ಞಾನಪ್ರಕಾಶನಿಗೆ ಸಾಧಾರಣವಾಗಿ ಕೋಪ ಬರುತ್ತಿರಲಿಲ್ಲ. ಆದರೆ ಈಗ ಅವನ ಮುಖ ಸಿಟ್ಟಿನಿಂದ ಕೆಂಪಾಯಿತು. " ಎಲ್ಲರನ್ನೂ ಕಳಿಸಿಕೊಡ್ತೀನಿ. ಹೋಗೋಲ್ಲ ಅಂದರೆ ಬಲವಂತವಾಗಿ ಗಾಡೀಲಿ ತುಂಬಿ ದಬ್ತೀನಿ. ಆದರೆ ಲಕ್ಷ್ಮೀಚಂದ ಇದಾನಲ್ಲ, ಗಂಗಾ, ಅವನು ಬಲು ಕ್ಷುದ್ರಮನುಷ್ಯ. ಈ ಸ್ವದೇಶೀ ಆಂದೋಳನದಿಂದಾಗಿ ಅವನಿಗೆ ಐದಾರು ಲಕ್ಷ ರೂಪಾಯಿ ಲಾಭವಾಗಿದೆ. ಸ್ವಲ್ಪ ದಿನದಲ್ಲೇ ಇನ್ನೊಂದು ಹೊಸ ಬಟ್ಟೆ ಮಿಲ್ಲು ತೆಗೆಯೋನಿದಾನೆ. ಆದರೆ ಈಗ ಸಮಯ ಬಂದಾಗ ಕೈ ಅಳ್ಳಾಡಿಸಿಬಿಟ್ಟ. ಅಲಹಾಬಾದಿನಲ್ಲಿ, ಪ್ರಾಂತೀಯ ಕಾಂಗ್ರೆಸ್ ಕಮಿಟಿಯವರಿಗೆ ನಾನು ಏನೂ ಅಂತ ಮುಖ ತೋರಿಸಲಿ? ಅಲಹಾಬಾದಿನಲ್ಲಿ ನಾವು ಕರೆದಿರೋ ಕಾಂಗ್ರೆಸ್ ಸ್ವಯಂ ಸೇವಕರ ಹಾಗೂ ಸಕ್ರಿಯ ಕಾರ್ಯಕರ್ತರ ರ್‍ಯಾಲೀಗೇನೇ ಸುಮಾರು ಎರಡು ಮೂರು ಸಾವಿರ ರೂಪಾಯಿ ಖರ್ಚಾಗುತ್ತೆ. ಅಲ್ಲಿ ನಮ್ಮ ಕೋಶದಲ್ಲಿದ್ದ ಹಣವೆಲ್ಲಾ ಕರಗಿ ಹೋಗಿದೆ. ಇವತ್ತು ಬೆಳಗ್ಗೆ ಲಕ್ಷ್ಮೀಚಂದನನ್ನ ಐದು ಸಾವಿರ ರೂಪಾಯಿ ಕೊಡು ಅಂತ ಕೇಳಿದರೆ ತನ್ನ ಹತ್ತಿರ ದುಡ್ಡೇ ಇಲ್ಲ ಅಂತ ಅಂದ. ನೂರುನೂರು ರೂಪಾಯಿನ ಐದು ನೋಟು ತೆಗೆದು ತೋರಿಸಿ 'ನಿನ್ನೆ ತಾನೇ ಮೂರು ಲಕ್ಷ ರೂಪಾಯಿನ ಹುಂಡಿ ಬಿಡಿಸಿಕೊಂಡೆ; ನನ್ನ ಹತ್ತಿರ ಇರೋ ನಗದು ಇಷ್ಟೇಯೇ ' ಅಂತ ಅಂದ."

ಗಂಗಾಪ್ರಸಾದ ಕೇಳಿದ, " ಹಾಗಾದರೆ ಅವನು ನಿನ್ನನ್ನ ಬರಿಗೈಲಿ ಕಳಿಸಿದನೆ, ಚಿಕ್ಕಪ್ಪ ? ಅಲಹಾಬಾದಿಗೆ ಹೋಗೋಕ್ಕೆ ರೈಲು ಚಾರ್ಜು ಇದೆಯೋ ಇಲ್ಲಾ ಕೊಡಲೋ ? "

ಜ್ಞಾನಪ್ರಕಾಶ ಸಿಟ್ಟಿನಿಂದ ಉತ್ತರಿಸಿದ, " ನಿನ್ನ ಹತ್ತಿರ ದಾರಿಖರ್ಚು ಕೇಳೋ ಅಷ್ಟು ಬಿಕನಾಸಿ ಅಲ್ಲ ನಾನು, ಮಗು. ಲಕ್ಷ್ಮೀಚಂದ ' ಇಲ್ಲ ಇಲ್ಲ ' ಅಂತಾನೇ ಇದ್ದ. ಆದರೆ ಅವನ ಆ ಐನೂರು ರೂಪಾಯನ್ನ ಕಿತ್ತುಕೊಂಡೇ ಬಂದೆ. ಓಡಿಹೋಗೋ ಭೂತದ ಲಂಗೋಟಿ ಸಿಕ್ಕಿದರೆ ಅಷ್ಟೇ ಲಾಭ ! ಇನ್ನೊಂದು ಐನೂರು ರೂಪಾಯಿ ಅಲ್ಲಿ ಇಲ್ಲಿ ಕೂಡಿಸಿದೆ. ಈಗ ಪರಿಸ್ಥಿತಿ ಹೇಗಿದೆ ಅಂದರೆ ಸಾವಿರ ರೂಪಾಯಿ ನನ್ನ ಹತ್ತಿರ ಇದೆ, ಇನ್ನು ಸಾವಿರ ರೂಪಾಯಿ ಬೇಕಾಗಿದೆ. ಏನು ಮಾಡೋದು ಅಂತ ಹೊಳೀತಿಲ್ಲ ! "

ಗಂಗಾಪ್ರಸಾದ ಆಗ ಹರ್ಷಚಿತ್ತದಿಂದಿದ್ದ. ಅವನಂದ, " ಚಿಕ್ಕಪ್ಪ, ಒಂದು ಐದು ಹತ್ತು ನಿಮಿಷಕ್ಕೋಸ್ಕರ ನೀನು ಅಮನ್-ಸಭೆಯ ಸದಸ್ಯನಾಗೋದಾದರೆ ಇವತ್ತು ನಿನಗೆ ಸಾವಿರ ರೂಪಾಯಿ ಕೊಡಿಸಿಕೊಡ್ತೀನಿ ! "

ಜ್ಞಾನಪ್ರಕಾಶ ಗಾಬರಿಯಾದ, " ಅಮನ್-ಸಭೆ ! ನನ್ನನ್ನ ಅಮನ್-ಸಭೇಗೆ ಕರೀತೀಯಲ್ಲ, ಮೈಮೇಲೆ ಪ್ರಜ್ಞೆ ಇದೆ ತಾನೆ ! "

ಗಂಗಾಪ್ರಸಾದ ನಕ್ಕ, " ನೀನಲ್ಲದೆ ಹೋದರೆ ನಿಮ್ಮ ಅಣ್ಣ ರಾಯ್‌ಸಾಹೇಬ್ ಸತ್ಯಪ್ರಕಾಶರು ಅಮನ್-ಸಭೆಗೆ ಅಧ್ಯಕ್ಷರು ಚಿಕ್ಕಪ್ಪ. ಇಷ್ಟು ಸಣ್ಣ ಮಾತನ್ನ ತಪ್ಪು

ತಿಳಕೊಳ್ಳೋ ಅವಶ್ಯಕತೆ ಏನಿದೆ? ನೀನಿರೋ ಕಷ್ಟದ ಪರಿಸ್ಥಿತಿಯಿಂದ ಬಿಡಿಸಿ ನಿನಗೆ ಸಾವಿರ ರೂಪಾಯಿ ಕೊಡಿಸೋ ಇಚ್ಛೆ ಇತ್ತು ಅಷ್ಟೆ. ಇಲ್ಲದೆ ಹೋದರೆ ಈ ಹಣಾನ ನಿನ್ನ ಕೈಯಿಂದ ತೆರಬೇಕಾಗುತ್ತೆ. ನಾನು ಹೇಳ್ತಿರೋದು ತಪ್ಪಲ್ಲ ತಾನೇ, ಚಿಕ್ಕಪ್ಪ?"

"ಹೌದು, ಈ ಹಣಾನ ನನ್ನ ಕೈಯಿಂದ ಹಾಕಬೇಕಾಗುತ್ತೆ," ಜ್ಞಾನಪ್ರಕಾಶ ಅಸಹಾಯನಾಗಿ ಹೇಳಿದ. "ಆದರೆ ಅಮನ್–ಸಭೆಯುವನಾಗೋದು ನನ್ನಿಂದ ಹೇಗೆ ಸಾಧ್ಯ! ಹಾಗೆ ಆಗೋದಾದರೆ ಹಣ ಹೇಗೆ ಸಿಗುತ್ತೆ?"

"ಅದು ಸಾಧ್ಯವಾಗೋದು ಹೀಗೆ: ಇಲ್ಲಿ ನೂರ್ ಅಹಮದ್-ಮಂಜೂರ್ ಅಹಮದ್ ಎಂಬ ಹೆಸರಿನ ಒಂದು ಫರ್ಮಿದೆ. ಅವರಿಗೆ ಚರ್ಮ ಹದ ಮಾಡೋ ಎರಡು ಟ್ಯಾನರಿಗಳಿವೆ. ಖಾನ್‌ಬಹದ್ದೂರ್ ನೂರ್ ಅಹಮದ್ ಸರಕಾರದ ಮಹಾ ಭಕ್ತರು. ನಾನು ನಿನ್ನೆ ಅಮನ್-ಸಭೆಯ ಚಂದದ ಬಗ್ಗೆ ಅವರ ಜೊತೆ ಮಾತಾಡಿದ್ದೆ. ಅವರು ಸಾವಿರ ರೂಪಾಯಿ ಕೊಡೋದಾಗಿ ಮಾತುಕೊಟ್ಟಿದ್ದರು. ಅವರಿಗೆ ಚೀಟಿ ಬರಕೊಡ್ತೀನಿ, ಅವರಿಂದ ಸಾವಿರ ರೂಪಾಯಿ ಇಸಕೊ. ಆದರೆ ಅವರ ಹತ್ತಿರಕ್ಕೆ ಸೂಟು ಹಾಕಿಕೊಂಡು ಹೋಗಬೇಕಾಗುತ್ತೆ!"

"ಈ ಚಂದಾಹಣಕ್ಕೆ ರಸೀದಿ!" ಜ್ಞಾನಪ್ರಕಾಶ ಕೇಳಿದ.

"ರಸೀದೀನ ನಾನು ಅವರಿಗೆ ಕಳಿಸಿಕೊಡ್ತೀನಿ. ವಿಷಯ ಏನಪ್ಪ ಅಂದರೆ ಲಕ್ಷ್ಮೀಚಂದ ಅಮನ್-ಸಭೆಗೆ ಎರಡುಸಾವಿರ ರೂಪಾಯಿ ಕೊಟ್ಟಿದಾನೆ. ಅವನಿಗಿನ್ನೂ ನಾನು ರಸೀದಿ ಕಳಿಸಿಕೊಟ್ಟಿಲ್ಲ. ಬಂದ ಹಣವನ್ನೆಲ್ಲಾ ಬ್ಯಾಂಕಿನಲ್ಲಿ, ಅಮನ್-ಸಭೆಯ ಖಾತೇಲಿ, ಜಮಾ ಮಾಡಿಬಿಡ್ತೀನಿ; ರಸೀದೀನ ಆಮೇಲೆ ಬರೀತೀನಿ. ಲಕ್ಷ್ಮೀಚಂದನಿಗೆ ಬರೀ ಒಂದು ಸಾವಿರಕ್ಕೆ ರಸೀದಿ ಕೊಟ್ಟರಾಯಿತು. ನನ್ನ ಹತ್ತಿರ ಹಣ ಇದ್ದಿದ್ದರೆ ನಾನು ನಿನ್ನನ್ನ ಈ ಖದೀಮ ಖಾನ್‌ಬಹದ್ದೂರನ ಹತ್ತಿರಕ್ಕೆ ಕಳಿಸ್ತಿರಲಿಲ್ಲ."

ಜ್ಞಾನಪ್ರಕಾಶನ ಮುಖದಮೇಲೆ ಒಂದು ನೀರಸವಾದ ನಗೆ ಮೂಡಿತು. "ಅಂದರೆ ನೀನು ಮೋಸ ವಂಚನೆಗಳಲ್ಲೂ ಪ್ರವೀಣನಾಗಿದಿ, ಮಗು!"

ಮೊದಲೇ ಊಹಿಸಿದ್ದಂತೆ ಬಾರಡೋಲಿ ಕಾಂಗ್ರೆಸ್ಸಿನ ಕಾರ್ಯಸಮಿತಿಯಲ್ಲಿ ಸಾಮೂಹಿಕ ಸತ್ಯಾಗ್ರಹವನ್ನು ನಿಲ್ಲಿಸಬೇಕೆಂಬ ಮಹಾತ್ಮ ಗಾಂಧಿಯವರ ಠರಾವು ಪಾಸಾಯಿತು. ದೇಶದಲ್ಲಿ ಎಲ್ಲೆಲ್ಲೂ ಒಂದು ಬಗೆಯ ಹತಾಶೆ ಹರಡಿಕೊಂಡಿತು. ಆದರೂ ಸಹ ಸಕ್ರಿಯ ಕಾರ್ಯಕರ್ತರ ಒಂದು ತಂಡ ಆಂದೋಳನವನ್ನು ಮುಂದುವರಿಸಲು ತಯಾರಿ ನಡಸಿತ್ತು. ಫೆಬ್ರುವರಿ ೨೪ ರಂದು ದಿಲ್ಲಿಯಲ್ಲಿ ಅಖಿಲ ಭಾರತೀಯ ಕಾಂಗ್ರೆಸ್ಸಿನ ಮಹಾಸಮಿತಿಯ ಅಧಿವೇಶನ ನಡೆಯುವುದಿತ್ತು. ಜ್ಞಾನಪ್ರಕಾಶ, ಸತ್ಯವ್ರತರಿಬ್ಬರೂ ಆ ಮಹಾಸಮಿತಿಯ ಸದಸ್ಯರು. ಹೆಚ್ಚು ಮಂದಿ ಸದಸ್ಯರಿಗೆ ಸತ್ಯಾಗ್ರಹವನ್ನು ನಿಲ್ಲಿಸುವುದು ಸರಿಕಾಣಲಿಲ್ಲ. ಸದಸ್ಯರಲ್ಲಿ ಪ್ರಭಾವಶಾಲಿಗಳಾಗಿದ್ದವರು ಜೈಲಿನಲ್ಲಿದ್ದರು.

ಅಧಿವೇಶನದಲ್ಲಿ ಭಾಗವಹಿಸಿದವರಲ್ಲಿ ಭಾವನೆ ತುಂಬಿತ್ತೇ ವಿನಹ ಅವರಿಗೆ ಕೆಲಸದ ರೂಪರೇಖೆಯೇನೆಂಬುದೂ ತಿಳಿಯದು. ಸತ್ಯಾಗ್ರಹದ ಕಲ್ಪನೆ ಮಹಾತ್ಮ ಗಾಂಧಿಯು ವರದ್ದು; ಅದನ್ನ ನಡಸಬಲ್ಲವರಾಗಿದ್ದವರು ಅವರೊಬ್ಬರೇ. ಅಧಿವೇಶನದ ಬಹು ಮತದ ಬೇಡಿಕೆ ವೈಯಕ್ತಿಕ ಸತ್ಯಾಗ್ರಹವನ್ನು ಮುಂದುವರಿಸಬೇಕೆಂದಾಗಿತ್ತು. ಸ್ವತಃ ಮಹಾತ್ಮ ಗಾಂಧಿಯುವರೂ ವೈಯಕ್ತಿಕ ಸತ್ಯಾಗ್ರಹದ ಪರವಾಗಿದ್ದರು. ಅದರಲ್ಲಿ ಸಹ ಎಚ್ಚರಿಕೆ ವಹಿಸಬೇಕೆಂದೂ ಈ ನಡುವೆ ರಚನಾತ್ಮಕ ಕಾರ್ಯಕ್ರಮಗಳ ಮುಖಾಂತರ ಜನತೆಯನ್ನು ಸತ್ಯಾಗ್ರಹಕ್ಕೆ ತಯಾರುಮಾಡಬೇಕೆಂದು ಆದೇಶವಾಯಿತು. ಈ ರಚನಾತ್ಮಕ ಕಾರ್ಯಕ್ರಮದ ರೂಪರೇಖೆ ಮಹಾತ್ಮ ಗಾಂಧಿಯುವರಲ್ಲಿತ್ತು.

ಸತ್ಯವ್ರತ ದಿಲ್ಲಿಯಿಂದ ಕಾನಪುರಕ್ಕೆ ಹಿಂದಿರುಗಿದ; ಆದರೆ ಜ್ಞಾನಪ್ರಕಾಶ ನೇರವಾಗಿ ಅಲಹಾಬಾದಿಗೆ ಹೊರಟುಹೋದ. ಈಗ ಕಾಂಗ್ರೆಸನ್ನು ಹೊಸರೀತಿಯಲ್ಲಿ ಸಂಘಟಿಸಬೇಕಾಗಿತ್ತು. ಅಲಹಾಬಾದಿನಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಒಂದು ದೊಡ್ಡ ಶಿಬಿರ ನಡೆಯುವುದಿತ್ತು. ಆಂದೋಳನಕ್ಕಾಗಿ ಹಣಹೊಂದಿಸಲು ಒಂದು ನಿಧಿ ಕೂಡಿಸುವ ಬಗ್ಗೆಯೂ ಮಹತ್ವ ಕೊಡಲಾಯಿತು. ಅಲಹಾಬಾದಿನ ಶಿಬಿರದಲ್ಲಿ ಭಾಗವಹಿಸಲು ಕಾನಪುರದ ಕಾಂಗ್ರೆಸ್ ಕಾರ್ಯಕರ್ತರ ಒಂದು ದೊಡ್ಡ ಗುಂಪೇ ಹೊರಟಿತ್ತು.

ಗಂಗಾಪ್ರಸಾದ ಅವತ್ತು ಕಚೇರಿಯಿಂದ ಹೊತ್ತಾಗಿ ಬಂದ. ಕಲೆಕ್ಟರರ ಕಚೇರಿಯಲ್ಲಿ ನಗರದ ಸರಕಾರೀ ಅಧಿಕಾರಿಗಳ ಒಂದು ಮೀಟಿಂಗ್ ಇತ್ತು. ಅದರಲ್ಲಿ ಕಾಂಗ್ರೆಸ್ಸಿನ ಭಾವೀ ಕಾರ್ಯಕ್ರಮುವನ್ನು ಎದುರಿಸಲು ಏನೇನು ಮಾಡಬೇಕೆಂಬುದನ್ನು ಆಲೋಚಿಸಿ ನಿರ್ಣಯಿಸಬೇಕಾಗಿತ್ತು. ಆ ಮೀಟಿಂಗ್‌ನಲ್ಲಿ ಕಲೆಕ್ಟರರು ಗಂಗಾಪ್ರಸಾದನಿಗೆ ಸರಿಬೀಳದ ಕೆಲವು ಸಲಹೆಗಳನ್ನು ಕೊಟ್ಟಿದ್ದರು. ಸ್ವತಃ ಕಲೆಕ್ಟರರಿಗೇ ಆ ಸಲಹೆಗಳ ಬಗ್ಗೆ ಸಂದೇಹವಿತ್ತು. ಆದರೆ ಅವು ಬಂದಿದ್ದುದು ಮೇಲಿನಿಂದ. ಅವತ್ತು ಗಂಗಾಪ್ರಸಾದ ದೈಹಿಕ ಹಾಗೂ ಮಾನಸಿಕವಾಗಿ ತುಂಬ ದಣಿದಿದ್ದ. ಈ ಆಂದೋಳನದ ಬಗ್ಗೆ ಅವನೊಳಗೆ ತನಗೆ ತಿಳಿಯದಂತೆಯೇ ಸಹಾನುಭೂತಿಯೋ ಎಂಬಂತಹ ಒಂದು ಭಾವನೆ ಜಾಗ್ರತವಾಗಿತ್ತು. ಅವತ್ತಿನ ಮೀಟಿಂಗಿನಲ್ಲಿ ಆಂದೋಳನದ ಬಗ್ಗೆ ವಿಚಾರ ಮಾಡಿದ್ದಲ್ಲದೆ ಹೋಳಿಹಬ್ಬದಲ್ಲಿ ಮುಸಲಮಾನರ ಮೇಲೆ ಬಣ್ಣ ಎರಚುವುದರ ಪರಿಣಾಮವಾಗಿ ಗಲಭೆ ಉಂಟಾಗುವ ಸಂಭವವಿದೆಯೆಂದು ಕಲೆಕ್ಟರ್ ಸೂಚಿಸಿದ್ದರು. ಇದು ಗಂಗಾಪ್ರಸಾದನಿಗೆ ವಿಚಿತ್ರವಾಗಿ ಕಂಡಿತು. ಮುಸಲಮಾನ ಅಧಿಕಾರಿಗಳು ಕಲೆಕ್ಟರರ ಮಾತಿಗೆ ಪುಷ್ಟಿಕೊಟ್ಟಿದ್ದಲ್ಲದೇ ತಮ್ಮೊಳಗಿನ ಕೋಪ ಹಾಗೂ ಮತಾಂಧತೆಯ ಭಾವನೆಯನ್ನು ಪ್ರದರ್ಶಿಸಿದ್ದರು. ಇದು ಗಂಗಾಪ್ರಸಾದನಿಗೆ ತುಂಬ ಆಶ್ಚರ್ಯವಾಗಿ ಕಂಡಿತು. ಸಾವಿರಾರು ವರ್ಷಗಳಿಂದ ಈ ಹೋಳಿಯ ಹಬ್ಬ ನಡೆದುಕೊಂಡು ಬಂದಿದೆ; ಆದರೆ ಒಮ್ಮೆಯೂ ಜಗಳವಾದುದ್ದಿಲ್ಲ, ಹಿಂದೂ ಮುಸಲಮಾನರೆಲ್ಲರೂ ಸೇರಿಕೊಂಡು ಒಟ್ಟಿಗೆ ಹೋಳಿ ಆಡುತ್ತಿದ್ದರು. ಈ ಸಲ ಹೋಳಿಹಬ್ಬದ ಸಂದರ್ಭದಲ್ಲಿ ಮತೀಯ ಗಲಭೆ

ಯನ್ನು ಕುರಿತು ವಿಚಾರ ಮಾಡುವ ಅವಶ್ಯಕತೆಯಾದರೂ ಏನಿತ್ತು?— ಗಂಗಾಪ್ರಸಾದ ಯೋಚಿಸತೊಡಗಿದ.

## ಹತ್ತು

ಮಿಸ್ಟರ್ ಹ್ಯಾರಿಸನ್ ಕೊಟ್ಟ ಭೋಜನಕೂಟದಲ್ಲಿ ಒಟ್ಟು ಇದ್ದವರು ಹನ್ನೆರಡೇ ಜನ. ಅವರಲ್ಲಿ ಆರು ಮಂದಿ ಭಾರತೀಯರು. ಈ ಭಾರತೀಯರಲ್ಲಿ ನಾಲ್ವರು ಹಿಂದೂಗಳು; ಇಬ್ಬರು ಮುಸಲಮಾನರು—ಸರ್ ಲಕ್ಷ್ಮೀಚಂದ, ರಾಜಾ ಶಿವಕುಮಾರ್, ರಾಯ್ ಬಹದ್ದೂರ್ ಗೋಪೀನಾಥ ಮತ್ತು ಗಂಗಾಪ್ರಸಾದ; ಖಾನ್‌ಬಹದ್ದೂರ್ ನೂರ್ ಅಹಮದ್ ಮತ್ತು ನವಾಬ್ ಅಶ್ಫಾಕ್ ಹುಸೇನ್. ಆಮಂತ್ರಿತರೆಲ್ಲರೂ ಬಂದು, ಮದ್ಯಪಾನ ಪ್ರಾರಂಭವಾಗಿ ಮಾತುಕತೆಗೆ ಷುರುವಾದಾಗ ಗಂಗಾಪ್ರಸಾದನಿಗೆ ಇದೊಂದು ರಾಜಕೀಯ ಭೋಜನವೇನೋ ಎನಿಸಿತು. ಅಲ್ಲಿ ಸೇರಿದ್ದ ಬ್ರಿಟಿಷರಲ್ಲಿ ಕಾನಪುರದ ಕಲೆಕ್ಟರ್ ಮತ್ತು ಪೋಲೀಸ್ ಸೂಪರಿಂಟೆಂಡೆಂಟರನ್ನು ಬಿಟ್ಟರೆ ಉಳಿದ ನಾಲ್ವರು ಮಿಲ್ ಮಾಲೀಕರು.

ಮಿಸ್ಟರ್ ಹ್ಯಾರಿಸನ್ ಅಗತ್ಯಕ್ಕಿಂತ ಒಂದಿಷ್ಟು ಹೆಚ್ಚಾಗಿಯೇ ಕುಡಿದಿದ್ದನೋ ಅಥವಾ ಹೆಚ್ಚು ಉತ್ಸಾಹದಲ್ಲಿದ್ದನೋ, ಅವನು ಹೇಳಿದ, "ಒಟ್ಟು ಆರು ವರ್ಷಗಳ ಸಜಾ ಈ ಗಾಂಧಿಗೆ! ಇಡೀ ಹಿಂದೂಸ್ಥಾನದಲ್ಲಿ ದಂಗೆ ಎಬ್ಬಿಸೋ ಈ ಮಹಾವಿದ್ರೋಹೀನ ಗುಂಡಿಟ್ಟು ಕೊಲ್ಲಬೇಕು. ಏನು ಸರ್ ಲಕ್ಷ್ಮೀಚಂದ್, ನಿಮ್ಮ ವಿಚಾರ ಏನು?"

ಲಕ್ಷ್ಮೀಚಂದ ಅವನ ಮಾತಿಗೆ ಏನೊಂದೂ ಉತ್ತರ ಕೊಡಲಿಲ್ಲ. ಉತ್ತರ ಕೊಟ್ಟವನೆಂದರೆ ರಾಯ್‌ಬಹದ್ದೂರ್ ಗೋಪೀನಾಥ, "ಪೀಡೆಯೇ ಕಳೀತು, ಬಿಡಿ! ಈ ಬದಮಾಶ್ ನನ್ನ ವ್ಯಾಪಾರಕ್ಕೇ ಮಟ್ಟ ಹಾಕಿಬಿಟ್ಟಿದ್ದ; ಮ್ಯಾಂಚೆಸ್ಟರ್‌ನಿಂದ ನನಗೆ ಐದು ಲಕ್ಷ ರೂಪಾಯಿಯ ಬಟ್ಟೆ ಬರೋದಿದೆ, ತುಂಬಾ ಚಿಂತೆಯಾಗಿತ್ತು."

ಖಾನ್‌ಬಹದ್ದೂರ್ ನೂರ್ ಅಹಮದ್ ದನಿಗೂಡಿಸಿದ, "ವಾಹ್ವಾ! ಏನು ಮಾತು ಹೇಳಿದಿರಿ, ಗೋಪೀನಾಥ್ ಸಾಹೇಬ್! ನಿಜವಾಗಿಯೂ ಮನುಷ್ಯ ಪೀಡೆಯೇ ಸರಿ. ಹೇಗೆ ಬೆಂಕಿ ಹೊತ್ತಿಸಿದಾನೆ ಇವನು!"

ಮಿಸ್ಟರ್ ಹ್ಯಾರಿಸನ್‌ನ ಉತ್ಸಾಹ ಇದ್ದಿದ್ದೂ ಹೆಚ್ಚಾಯಿತು. "ಆ ಬೆಂಕಿ ಆರಿ ಹೋಯಿತು. ನಾನು ನಿಮಗೆಲ್ಲಾ ಏನು ಹೇಳಬೇಕಾಗಿದೆ ಅಂದರೆ ನಾನು ಇವತ್ತು ಈ ಪಾರ್ಟೀನ ಕೊಡ್ತಿರೋದು ಆ ಜಂಗಲಿ ದಂಗೆಕೋರ ಜೈಲಿಗೆ ಹೋದನಲ್ಲ ಅನ್ನೋ ಸಂತೋಷಕ್ಕೋಸ್ಕರ."

ಗಂಗಾಪ್ರಸಾದ ತನ್ನ ಭಾರತೀಯ ಮಿತ್ರರ ಕಡೆ ನೋಡಿದ. ಹ್ಯಾರಿಸನ್‌ನ ಅಸಭ್ಯ

ಮಾತುಗಳನ್ನು ಕೇಳಿ ಯಾರ ಹಣೆಯ ಮೇಲೇ ಆಗಲಿ ಒಂದು ನೆರಿಗೆ ಸಹ ಮೂಡಲಿಲ್ಲ. ಅವನಿಗೆ ತಡೆಯಲಾಗಲಿಲ್ಲ. "ಮಿಸ್ಟರ್ ಹ್ಯಾರಿಸನ್, ಈ ಡಿನ್ನರ್ ಪಾರ್ಟಿಯ ಹಿಂದೆ ಇಂಥ ನೀಚ ಉದ್ದೇಶವಿದೆ ಅಂತ ನೀವು ಮೊದಲೇ ಹೇಳಿದ್ದಿದ್ದರೆ ಕನಿಷ್ಠ ನಾನಂತೂ ಇದರಲ್ಲಿ ಭಾಗವಹಿಸ್ತಾ ಇರಲಿಲ್ಲ. ಪ್ರಾಯಶಃ ಇಲ್ಲಿರೋರಲ್ಲಿ ಇನ್ನೂ ನಾಲ್ಕಾರು ಜನ ಬರ್ತಿರಲಿಲ್ಲ ಅಂತ ಕಾಣುತ್ತೆ."

ಭೋಜನಕ್ಕೆ ಆಮಂತ್ರಿತರಾಗಿದ್ದ ಅತಿಥಿಗಳೆಲ್ಲರೂ ಗಂಗಾಪ್ರಸಾದನ ಮಾತನ್ನು ಕೇಳಿ ದಂಗು ಬಡಿದು ಹೋದರು. ಮಿಸ್ಟರ್ ಹ್ಯಾರಿಸನ್ ಕಾನಪುರದ ಭಾರೀ ಬಂಡವಾಳಗಾರ ಹಾಗೂ ಮಿಲ್ ಮಾಲಿಕ. ಅವನ ಪ್ರಕಾರ ಇಂಗ್ಲಂಡಿನ ಯಾವದೋ ಉಚ್ಚ ಲಾರ್ಡ್ ಮನೆತನಕ್ಕೆ ಸೇರಿದವನು. ಹ್ಯಾರಿಸನ್ ತನ್ನ ಉಗ್ರಸ್ವಭಾವಕ್ಕೆ ಹೆಸರುವಾಸಿಯಾಗಿದ್ದ. ಗಂಗಾಪ್ರಸಾದನ ಮಾತನ್ನು ಕೇಳಿ ಅವನ ಮುಖ ಕೆಂಪಾಯಿತು. "ಅಂದರೆ ನೀವು ಈ ಸುಳ್ಳ, ವಂಚಕ, ಬದಮಾಶ್, ಲುಚ್ಚ ಗಾಂಧೀನ ಮಹಾತ್ಮ ಅಂತ ತಿಳೀತೀರಾ?"

ಹ್ಯಾರಿಸನ್ ಅಕಾರಣವಾಗಿ ಆಡಿದ್ದ ಈ ಬೈಗಳದ ಮಾತನ್ನು ಕೇಳಿ ಗಂಗಾಪ್ರಸಾದ ಇದ್ದಿದ್ದೂ ಉರಿದೆದ್ದ, "ಆ ಮಹಾಪುರುಷನನ್ನ ಬೈತಿರೋದು ನಿಮ್ಮ ಕೀಳುತನ, ನಿಮ್ಮ ಲುಚ್ಚಾತನ. ನಾವು ಗಾಂಧೀಜಿಯವರ ರಾಜನೀತೀನ ಒಪ್ಪೋಲ್ಲ, ನಿಜ. ಆದರೆ ಅವರ ದೊಡ್ಡತನ, ಪ್ರಾಮಾಣಿಕತೆ, ಸೌಜನ್ಯಗಳನ್ನು ಯಾರೂ ಅಲ್ಲಗಳೆಯೋ ಹಾಗಿಲ್ಲ."

ಹ್ಯಾರಿಸನ್ ಎದ್ದು ನಿಂತ, "ನನ್ನನ್ನ ನೀನು ಕೀಳ, ಲುಚ್ಚ ಅಂತೆಲ್ಲ ಅಂತೀಯ, ನೀನು ಕರಿಯ! ನಾವು ನಿಮ್ಮನ್ನ ಹತ್ತಿರಕ್ಕೆ ಕರಕೊಂಡದ್ದರ ಪರಿಣಾಮ ಇದು! ಇನ್ನೊಂದು ಸಲ ಹಾಗಂದರೆ ನಿನ್ನ ತಲೆ ಒಡೀತೀನಿ, ನೋಡು!"

ಗಂಗಾಪ್ರಸಾದನೂ ಎದ್ದು ನಿಂತು ಕೈಯೆತ್ತಿದ, "ನೀನು ಲುಚ್ಚ, ನೀನು ಕೀಳ, ನೀನು ಸೂಳೇಗೆ ಹುಟ್ಟಿದೋನು ಕಣೋ!"

ಅಲ್ಲಿ ಒಂದು ಜಗಳವೇ ಷುರುವಾಯಿತು. ಅತಿಥಿಗಳು ಇಬ್ಬರನ್ನೂ ತಡೆದರು. ತಪ್ಪು ಸ್ಪಷ್ಟವಾಗಿ ಹ್ಯಾರಿಸನ್‌ನದು. ಅಲ್ಲಿದ್ದವರ, ಅದರಲ್ಲೂ ವಿಶೇಷವಾಗಿ ಮಿಲ್ ಮಾಲಿಕರ ಒತ್ತಾಯಕ್ಕೆ ಮಣಿದು ಹ್ಯಾರಿಸನ್ ಗಾಂಧಿಯ ಬಗ್ಗೆ ಆಡಿದ್ದ ಮಾತನ್ನು ಹಿಂತೆಗೆದುಕೊಂಡ ಆಮೇಲೆ ಗಂಗಾಪ್ರಸಾದನೂ ತಾನು ಆಡಿದ್ದುದನ್ನು ವಾಪಸು ತೆಗೆದುಕೊಂಡ. ವಾತಾವರಣ ಮತ್ತೆ ಶಾಂತವಾಯಿತು. ಅತಿಥಿಗಳು ಊಟಕ್ಕೆ ಪ್ರಾರಂಭಿಸಿದರು.

ಮಾರನೆಯ ದಿನ ಗಂಗಾಪ್ರಸಾದ ಕಚೇರಿ ತಲಪಿದಾಗ ಕಲೆಕ್ಟರರ ಆಳು ಬಂದು ಹೇಳಿದ, "ಹುಜೂರ್, ಸಾಹೇಬರು ತಮ್ಮನ್ನ ನೋಡಬೇಕು ಎಂದರು."

ಗಂಗಾಪ್ರಸಾದ ನೇರವಾಗಿ ಕಲೆಕ್ಟರರಲ್ಲಿಗೆ ಹೋದ. ಅವರು ಹೇಳಿದರು, "ಮಿಸ್ಟರ್ ಗಂಗಾಪ್ರಸಾದ್, ಈ ಹ್ಯಾರಿಸನ್ ಒಂದನೇ ನಂಬರ್ ಖದೀಮ, ದುಷ್ಟ."

"ಸಾರ್, ಅವನು ಕುಡಿದಿದ್ದ. ನಾನೂ ಸಾಕಷ್ಟು ಮದ್ಯ ತೊಗೊಂಡಿದ್ದೆ," ಗಂಗಾಪ್ರಸಾದ ಕೊಂಚ ಅನುಮಾನಿಸುತ್ತಲೇ ಹೇಳಿದ.

"ಇಲ್ಲ, ಅದರಲ್ಲಿ ನಿನ್ನದೇನೂ ತಪ್ಪಿಲ್ಲ. ಆದರೆ ಈ ಹ್ಯಾರಿಸನ್ ಈಗ ನಿನ್ನ ಬೆನ್ನು ಹತ್ತಿದಾನೆ. ಅಧಿಕೃತವಾಗಿ ನನ್ನ ಮುಖಾಂತರ ಕಮಿಷನರಿಗೆ ಕಂಪ್ಲೇಂಟ್ ಕಳಿಸಿದಾನೆ." ಕಲೆಕ್ಟರರು ಹ್ಯಾರಿಸನ್‌ನ ಕಾಗದವನ್ನು ಗಂಗಾಪ್ರಸಾದನ ಕೈಗೆ ಕೊಟ್ಟರು.

ಗಂಗಾಪ್ರಸಾದ ಆ ಕಾಗದ ಓದಿ ಸ್ತಬ್ಧನಾದ. ಆ ಕಾಗದದಲ್ಲಿ ಗಂಗಾಪ್ರಸಾದ ಕಾಂಗ್ರೆಸ್ಸಿನವನೆಂದು ಹ್ಯಾರಿಸನ್ ಆರೋಪಿಸಿದ್ದ. ಹಿಂದಿನ ರಾತ್ರಿಯ ಘಟನೆಯನ್ನು ಅವನು ಬಣ್ಣಕಟ್ಟಿ ವರ್ಣಿಸಿದ್ದ. ಕಾಗದ ಓದಿ ಗಂಗಾಪ್ರಸಾದ ಕಲೆಕ್ಟರರಿಗೆ ಹೇಳಿದ, "ಇದೆಲ್ಲಾ ಸುಳ್ಳು ಅಂತ ನಿಮಗೆ ಗೊತ್ತಿದೆ."

"ಹೌದು, ಸುಳ್ಳಷ್ಟೇ ಅಲ್ಲ, ಹಗೆತನದಿಂದ ಕೂಡಿದ ಸುಳ್ಳು ಅದು. ಈ ಕಾಗದದ ಮೇಲೆ ನನ್ನ ಟಿಪ್ಪಣಿ ಬರೀತಿದೀನಿ. ಆದರೆ ನೀನು ಕಮಿಷನರ್ ಅವರನ್ನು ಹೋಗಿ ನೋಡಿದರೆ ಒಳ್ಳೇದು. ಕಮಿಷನರ್ ಈ ಹ್ಯಾರಿಸನ್‌ನ ಮಾತಿಗೆ ಮಹತ್ವಕೊಡೋ ಸಂಭವ ಬೇಕಾದಷ್ಟಿದೆ. ಹಾಗೆ ಅವರು ಮಹತ್ವ ಕೊಟ್ಟು ಅವರ ಮನಸ್ಸಿನಲ್ಲಿ ನಿನ್ನ ವಿರುದ್ಧ ವೈಮನಸ್ಯವುಂಟಾದರೆ ನಿನ್ನ ಭವಿಷ್ಯಕ್ಕೆ ಒಳ್ಳೇದಲ್ಲ. ನಾನು ಕಮಿಷನರಿಗೆ ಈ ಕಾಗದ ಕಳಿಸೋಕ್ಕೆ ಮೊದಲೇ ನೀನು ಅವರನ್ನ ಕಂಡು ನಡೆದದ್ದನ್ನ ಅವರಿಗೆ ನಿನ್ನ ದೃಷ್ಟಿಯಿಂದ ವಿವರಿಸಿ ಹೇಳು. ನಾನು ನಿನ್ನ ಪರವಾಗಿಯೇ ಟಿಪ್ಪಣಿ ಬರೀತೀನಿ."

ಕಲೆಕ್ಟರನ್ನು ಕಂಡು ಹಿಂದಿರುಗಿದ ಕೂಡಲೇ ಗಂಗಾಪ್ರಸಾದ ನಾಲ್ಕು ದಿನಕ್ಕೆ ರಜ ಹಾಕಿದ; ಕಲೆಕ್ಟರ್ ಅದನ್ನು ಆ ಕ್ಷಣ ಮಂಜೂರು ಮಾಡಿದರು.

ಅಲಹಾಬಾದ್ ತಲಪಿದೊಡನೆಯೇ ಗಂಗಾಪ್ರಸಾದ ಕಮಿಷನರ್ ಅವರನ್ನು ಕಂಡ. ಗಂಗಾಪ್ರಸಾದನ ಮಾತು ಕೇಳಿ ಅವರಂದರು, "ಹಾಗಾದರೆ ನೀನು ಗಾಂಧೀನ ಮಹಾತ್ಮ ಅಂತ ತಿಳೀತೀಯಾ? ಆತ ಅರೆಸಭ್ಯ, ದಂಗೆಕೋರ ಮಹಾತ್ಮ ಅಂತ ತಾನೆ ನಿನ್ನ ಅಭಿಪ್ರಾಯ?" ಕಮಿಷನರ್ ಅವರ ಧ್ವನಿಯಲ್ಲಿ ವ್ಯಂಗ್ಯವಿತ್ತು.

"ಹುಜೂರ್, ನಾನು ಅವರ ರಾಜನೀತೀನ, ಅವರ ವಿಚಾರಗಳನ್ನ ಒಪ್ಪದೇ ಹೋದರೂ ಅವರ ನಡತೆ, ಪ್ರಾಮಾಣಿಕತೆಗಳನ್ನು ಗೌರವಿಸದೆ ಇರೋಕ್ಕೆ ಸಾಧ್ಯವಿಲ್ಲ. ಇನ್ನೊಬ್ಬರ ಒಳ್ಳೆಯ ಗುಣವನ್ನ ಗೌರವಿಸೋದಕ್ಕೆ ಅಡ್ಡಿಬರೋ ಅಷ್ಟು ಬ್ರಿಟಿಷ್ ಜನಾಂಗ ಔದಾರ್ಯಹೀನವಾಗಿದೆ ಅಂತ ನಾನು ನಂಬಲಾರೆ," ಗಂಗಾಪ್ರಸಾದ ವಿನಯದಿಂದಲೇ, ಆದರೂ ದೃಢವಾಗಿ, ಹೇಳಿದ.

ಕಮಿಷನರ್ ತುಟಿ ಕಚ್ಚಿ ಹೇಳಿದರು, "ಬ್ರಿಟಿಷ್ ಜನಾಂಗ ಅಷ್ಟು ಔದಾರ್ಯಹೀನವಲ್ಲ; ಆದರೆ ವ್ಯಕ್ತಿ ಔದಾರ್ಯಹೀನವಾಗಿರಬಹುದು. ನೀನು ಇದ್ದದ್ದು ಇದ್ದ ಹಾಗೇ ಹೇಳಿರೋದಾದರೆ ಹ್ಯಾರಿಸನ್ನನ ಕಂಪ್ಲೇಂಟಿನಿಂದ ನನ್ನ ಮೇಲೆ ಯಾವ ಪ್ರಭಾವವೂ ಆಗೋದು ಸಾಧ್ಯವಿಲ್ಲ."

ಗಂಗಾಪ್ರಸಾದ ಸಂತೃಪ್ತನಾಗಿ 'ಹೌದು ಸಾರ್' ಎಂದು ಹೇಳಿ ಹೊರಡಲು ಅನುವಾದ. ಆದರೆ ಕಮಿಷನರ್ ಅವನನ್ನು ತಡೆದರು, "ಗಂಗಾಪ್ರಸಾದ್, ಆದದ್ದಾಯಿತು. ಆದರೆ ಭವಿಷ್ಯದಲ್ಲಿ ಒಂದು ಮಾತು ನೆನಪಿರಲಿ. ಇಂಗ್ಲೀಷಿನೋನು ಇಂಗ್ಲೀಷಿನೋನೇ, ಹಿಂದೂಸ್ತಾನಿ ಹಿಂದೂಸ್ತಾನಿಯೇ! ಒಬ್ಬ ಅಧಿಕಾರ ಮಾಡೋನು, ಇನ್ನೊಬ್ಬ ಅಧಿಕಾರ ಮಾಡಿಸಿಕೊಳ್ಳೋನು. ಈ ಮಾತು ನಿನಗೆ ಕೆಟ್ಟದೆನಿಸುತ್ತೆ, ನಿಜ. ಆದರೆ ಇದು ಸತ್ಯ. ಆದ್ದರಿಂದ ಇಂಥ ವಿಷಯಗಳಲ್ಲಿ ಬಾಯಿಮುಚ್ಚಿಕೊಂಡು ತೆಪ್ಪಗಿರೋದರಿಂದ ನಿನಗೆ ಲಾಭವಿದೆ."

ಗಂಗಾಪ್ರಸಾದ ಕಮಿಷನರರ ಈ ಸಲಹೆಯನ್ನು ಆ ಕ್ಷಣ ಆಚರಣೆಗೆ ತರುವವನಂತೆ, "ಒಳ್ಳೇದು ಸರ್!" ಅಂದ.

ಆಂದೋಳನ ಮುಕ್ತಾಯಗೊಂಡಂತಾಗಿತ್ತು. ದೇಶದಲ್ಲಿ ಎಲ್ಲಿ ನೋಡಲಿ ನಿರಾಶೆಯ ಅಲೆಯೇ. ಕಾಂಗ್ರೆಸ್ಸಿನ ನೀತಿಯನ್ನು ಪುನರ್‌ವಿಚಾರಮಾಡಿನೋಡಬೇಕೆಂಬ ಅಭಿಪ್ರಾಯ ಕಾಣಿಸಿಕೊಂಡಿತ್ತು. ಇದರಿಂದ ಇಷ್ಟು ಸ್ಪಷ್ಟವಾಗಿತ್ತು; ಜನ ಆಂದೋಳನದಿಂದ ಬೇಸರಗೊಂಡಿದ್ದರು. ಪೂರ್ಣ ಅಸಹಕಾರದ ಬದಲು ಸ್ವಲ್ಪಸ್ವಲ್ಪವಾಗಿ ಸಹಕಾರದ ಜೊತೆಜೊತೆಗೇ ವಿರೋಧವನ್ನು ತೋರಿಸುವ ಹೊಸನೀತಿಯನ್ನು ಕುರಿತು ಜನ ಬಹಿರಂಗವಾಗಿ ಮಾತನಾಡಿಕೊಳ್ಳುತ್ತಿದ್ದರು.

ಗಂಗಾಪ್ರಸಾದ ತನ್ನೊಳಗೆ ಒಂದು ವಿಚಿತ್ರ ಪ್ರಕಾರದ ಮಾರ್ಪಾಡಾಗುತ್ತಿರುವುದನ್ನು ಕಂಡ. ಅಸಹಕಾರ-ಆಂದೋಳನ ದುರ್ಬಲವಾಗಿದ್ದುದರಿಂದ ಅವನಿಗೇನೂ ಸಂತೋಷವಾಗಿರಲಿಲ್ಲ. ಅವನೊಳಗೆ ಯಾವುದೋ ಅಶಾಂತಿ ತುಂಬಿಕೊಂಡಿತ್ತು; ಆ ಅಶಾಂತಿಗೆ ಕಾರಣವೇನೆಂದು ಅವನ ಬುದ್ಧಿಗೆ ಹೊಳೆಯುತ್ತಿರಲಿಲ್ಲ.

ಇದ್ದಕ್ಕಿದ್ದಂತೆ ಜುಲೈ ತಿಂಗಳ ಕೊನೆಯ ವಾರದಲ್ಲಿ ಅವನಿಗೆ ತನ್ನೊಳಗಿನ ಅಶಾಂತಿ ಹಾಗೂ ವೇದನೆಗೆ ಕಾರಣ ಅರ್ಥವಾಯಿತು. ಅವನನ್ನು ನಿಷ್ಕಾರಣವಾಗಿ ದೂರದ ಏಟಾಕ್ಕೆ ಡೆಪ್ಯುಟಿ ಕಲೆಕ್ಟರ್‌ನ ಹುದ್ದೆಕೊಟ್ಟು ವರ್ಗಮಾಡಲಾಗಿತ್ತು. ಅವನು ಒಂದು ಬೆಳಗ್ಗೆ ತಿಂಡಿ ತಿನ್ನುತ್ತ ಕುಳಿತಿದ್ದಾಗ ಸರಕಾರದ ಆರ್ಡರ್ ಕೈಗೆ ಬಂತು. ತಿನ್ನುವುದನ್ನು ಅರ್ಧಕ್ಕೇ ನಿಲ್ಲಿಸಿ ಅವನು ಎದ್ದು ನಿಂತ. ಅಂದರೆ ಅವನಿಗೆ ಸಿಕ್ಕಿದ್ದುದು ಈ ಬಹುಮಾನ!

ಅಸಹಕಾರ-ಆಂದೋಳನವನ್ನು ಅಡಗಿಸುವುದರಲ್ಲಿ ಅವನು ಸಲ್ಲಿಸಿದ್ದ ಸೇವೆ ಉಚ್ಚ ಅಧಿಕಾರಿಗಳಿಗೆ ಮೆಚ್ಚಿಗೆಯಾಗಿ ಅವರು ಆ ಕುರಿತು ಮಾತನಾಡುತ್ತಿದ್ದರು. ತನಗೆ ಬೇಗನೆ ಬಡತಿ ದೊರೆಯುತ್ತದೆ, ಜಾಯಿಂಟ್ ಮ್ಯಾಜಿಸ್ಟ್ರೇಟ್‌ನ ಸ್ಥಾನದಲ್ಲಿ ತನ್ನನ್ನು ಖಾಯಂ ಮಾಡುತ್ತಾರೆ ಎಂದು ಅವನು ಕನಸು ಕಾಣುತ್ತಿದ್ದ. ಕಾನಪುರದ ಜಾಯಿಂಟ್ ಮ್ಯಾಜಿಸ್ಟ್ರೇಟ್ ೧೯೨೩ ರ ಜೂನ್ ತಿಂಗಳವರೆಗೂ ರಜವನ್ನು ಮುಂದುವರಿಸಿದ್ದುದರಿಂದ ಅಲ್ಲಿಯವರೆಗಂತೂ ತನಗೆ ವರ್ಗ ಸಾಧ್ಯವಿಲ್ಲವೆಂದು ಅವನು ನಂಬಿದ್ದ. ಆದರೆ

ಈಗ ಈ ಆರ್ಡರ್! ಗಂಗಾಪ್ರಸಾದ ಬಟ್ಟೆ ತೊಟ್ಟುಕೊಂಡು ಆ ಕ್ಷಣ ನೇರವಾಗಿ ಕಲೆಕ್ಟರರಲ್ಲಿಗೆ ಹೋದ. ಅವನ ಮುಖ ಕಂಡೊಡನೆಯೇ ಕಲೆಕ್ಟರ್ ಹೇಳಿದರು, "ಮಿಸ್ಟರ್ ಗಂಗಾಪ್ರಸಾದ್, ನಿನ್ನ ವರ್ಗದ ಬಗ್ಗೆ ನನಗೆ ತುಂಬಾ ದುಃಖವಾಗಿದೆ, ಅನಿವಾರ್ಯವಾಗಿ ಹೀಗಾಗಿದೆ ಅಂತ ನನಗನ್ನಿಸುತ್ತೆ. ಕಾನಪುರದ ಜಾಯಂಟ್ ಮ್ಯಾಜಿಸ್ಟ್ರೇಟ್ ಆಗೋರು ಯಾವಾಗಲೂ ಐ.ಸಿ.ಎಸ್. ಗಳೇ. ಕೆಲವರು ಹೊಸ ಐ.ಸಿ.ಎಸ್. ಗಳು ಬಂದಿದಾರೆ, ಅವರಿಗೆ ಒಂದಲ್ಲ ಒಂದು ಕಡೆ ಗೊತ್ತುಮಾಡಬೇಕಾಗಿದೆ ಅಂತ ಕಾಣುತ್ತೆ."

"ಹಾಗಾದರೆ ಯಾವನಾದರೂ ಐ.ಸಿ.ಎಸ್. ನನ್ನೇ ಟೆಂಪರರಿ ಜಾಯಂಟ್ ಮ್ಯಾಜಿಸ್ಟ್ರೇಟನನ್ನಾಗಿ ನೇಮಿಸಬೇಕಾಗಿತ್ತು, ಸಾರ್! ಐ.ಸಿ.ಎಸ್. ನೋರಿಗೆ ಅಂತ ಕಾದಿಟ್ಟಿರೋ ಈ ಸ್ಥಾನಕ್ಕೆ ನನ್ನನ್ನ ನೇಮಿಸಿದ್ದೇಕೆ!?"

"ಆಗ ಅಸಹಕಾರ-ಆಂದೋಳನ ಬಹಳ ಬಿರುಸಾಗಿ ನಡೀತಿತ್ತು. ಅದನ್ನ ಎದುರಿಸೋಕ್ಕೆ ಒಬ್ಬ ಯೋಗ್ಯ, ಅನುಭವಸ್ಥನ ಅವಶ್ಯಕತೆಯಿತ್ತು. ಅದಕ್ಕೋಸ್ಕರ ನಿನ್ನನ್ನ ನೇಮಿಸಿದ್ದರು ಅಂತ ಅಂದುಕೊಂಡಿದೀನಿ."

ಗಂಗಾಪ್ರಸಾದ ಕಹಿ ತುಂಬಿದ ಧ್ವನಿಯಲ್ಲಿ ಉತ್ತರಕೊಟ್ಟ, "ಈಗ ಆಂದೋಳನ ಮುಗಿದಿದೆ, ಇಷ್ಟೆ ತಾನೆ ವಿಷಯ! ನಾನು ಭಾರತೀಯನಾದ ಕಾರಣ ಈ ಆಂದೋಳನ ಮುಗಿದ ಮೇಲೆ ಹಾಲಿನಿಂದ ನೊಣ ತೆಗೆದು ಆಚೆಗೆಸೆಯೋ ಹಾಗೆ ನನ್ನನ್ನ ಎಸೀತಿದೀರಿ."

ಕಲೆಕ್ಟರ್ ಗಂಗಾಪ್ರಸಾದನನ್ನು ದೃಷ್ಟಿಸಿ ನೋಡಿದರು. ಆಮೇಲೆ ಸ್ವಲ್ಪ ಗಂಭೀರರಾಗಿ ಹೇಳಿದರು, "ಮಿಸ್ಟರ್ ಗಂಗಾಪ್ರಸಾದ್, ಈ ಐ.ಸಿ.ಎಸ್. ಹೆಸರಿನ ಏನೊಂದು ಸಂಸ್ಥೆಯಿದೆ, ಯಾವದರಲ್ಲಿ ದಕ್ಷರಾದ ಇಂಗ್ಲಿಷ್ ಯುವಕರನ್ನ ಭರ್ತಿ ಮಾಡ್ತೀವಿ, ಅದು ಹಿಂದೂಸ್ಥಾನದಲ್ಲಿ ಬ್ರಿಟಿಷ್ ರಾಜ್ಯದ ಬೆನ್ನೆಲುಬಾಗಿದೆ. ಜವಾಬ್ದಾರಿಯ ಎಲ್ಲ ಸರಕಾರೀ ನೌಕರಿಗಳಲ್ಲೂ ಐ.ಸಿ.ಎಸ್. ಗಳನ್ನೇ ಇಡ್ತೀವಿ. ಕಾನ್‌ಪುರದ ಜಾಯಿಂಟ್ ಮ್ಯಾಜಿಸ್ಟ್ರೇಟರ ಸ್ಥಾನವೂ ಜವಾಬ್ದಾರೀದು ಅಂತ ಅನ್ನಿಸಿಕೊಂಡಿದೆ."

ಕೆಲವು ತಿಂಗಳ ಹಿಂದೆ ಕಮಿಷನರು ತನಗೆ ಹೇಳಿದ್ದ ಆ ಮಾತು ಗಂಗಾಪ್ರಸಾದನಿಗೆ ಅನಾಯಾಸವಾಗಿ ನೆನಪಾಯಿತು. ಅದನ್ನು ಮೆಲುಕು ಹಾಕುತ್ತ ಅವನು ಹೇಳಿದ, "ಹೌದು, ನನಗೆ ಗೊತ್ತಿದೆ. ಇಂಗ್ಲೀಷಿನೋನು ಇಂಗ್ಲೀಷಿನೋನೇಯೇ, ಭಾರತೀಯ ಭಾರತೀಯನೇ. ಒಬ್ಬ ಅಧಿಕಾರ ಮಾಡೋಕ್ಕೆ ಇದಾನೆ, ಇನ್ನೊಬ್ಬ ಅಧಿಕಾರ ಮಾಡಿಸಿಕೊಳ್ಳೋಕ್ಕೆ ಇದಾನೆ. ಈ ಐ.ಸಿ.ಎಸ್. ಅಧಿಕಾರ ಮಾಡೋರ ಸಂಸ್ಥೆ." ಗಂಗಾಪ್ರಸಾದನ ಮುಖದ ಮೇಲೆ ಒಂದು ಕಹಿಯಾದ ನಗೆ ಮೂಡಿತು. "ಥ್ಯಾಂಕ್ಯೂ ಸರ್, ಇನ್ನು ಇದಕ್ಕಿಂತ ಹೆಚ್ಚು ಹೇಳೋದು ಏನೂ ಇಲ್ಲ. ನನ್ನ ಸಂದೇಹ ನಿವಾರಣೆಯಾಯಿತು," ಅಂದ.

ಗಂಗಾಪ್ರಸಾದನ ಮಾತು ಕಲೆಕ್ಟರರಿಗೆ ಕೆಟ್ಟದೆನಿಸಬಹುದಾಗಿತ್ತು. ಆದರೆ ಅದರ ಹಿಂದೆ ಎಂಥ ವೇದನೆ ತುಂಬಿತ್ತೆಂಬುದನ್ನು ಅವರು ಗ್ರಹಿಸಿದರು. ಅವರಿಗೆ

ಗಂಗಾಪ್ರಸಾದನನ್ನು ಕಂಡು ಸಹಾನುಭೂತಿಯುಂಟಾಯಿತು. "ಮಿಸ್ಟರ್ ಗಂಗಾ ಪ್ರಸಾದ್, ಬ್ರಿಟಿಷ್ ಸರಕಾರ ಆದಷ್ಟು ಬೇಗ ತನ್ನ ಈ ದೃಷ್ಟಿಕೋನಾನ ಬದಲಾಯಿಸ ಬೇಕಾಗುತ್ತೆ ಅಂತ ನನಗೆ ಗೊತ್ತಿದೆ. ನಿನಗೆ ಅನ್ಯಾಯವಾಗ್ತಿದೆ ಅಂತ ನಾನು ಒಪ್ತೀನಿ. ನನ್ನ ಸಲಹೆ ಅಂದರೆ ಒಂದು ಸಲ ನೀನು ಚೀಫ್ ಸೆಕ್ರೆಟರಿಯವರನ್ನು ಹೋಗಿನೋಡು. ನಿನ್ನ ರಿಕಾರ್ಡು ಚೆನ್ನಾಗಿದೆ. ನಿನ್ನನ್ನ ಏಟಾಕ್ಕೆ ಯಾಕೆ ಕಳಿಸ್ತಿದಾರೆ ಅಂತ ನನಗೆ ಅರ್ಥ ವಾಗ್ತಿಲ್ಲ."

ಗಂಗಾಪ್ರಸಾದ ಚೀಫ್ ಸೆಕ್ರೆಟರಿಯವರನ್ನು ಕಂಡಾಗ ಅವರಂದರು, "ಗಂಗಾ ಪ್ರಸಾದ್, ನಿನ್ನನ್ನ ಈ ಸಲ ಏಟಾಕ್ಕೆ ಬಿಟ್ಟು ಬೇರೆ ಎಲ್ಲೂ ಕಳಿಸೋಕ್ಕೆ ಆಗ್ತಿಲ್ಲವಲ್ಲ ಅಂತ ವಿಷಾದವಾಗುತ್ತೆ. ನಾನು ನಿನ್ನನ್ನ ಕಾನಪುರದಲ್ಲೇ ಇರಿಸಿಕೊಳ್ತಿದ್ದೆ. ಆದರೆ ...ಆದರೆ...,ಹೋಗಲಿ ಈಗೇಕೆ ಆ ಮಾತು! ಪ್ರತಿಯೊಬ್ಬರೂ ಅವರವರ ರೀತೀಲಿ ಅಸಹಾಯರೇ. ನನ್ನ ಸಲಹೆ ಅಂದರೆ ನೀನು ಡಿಸೆಂಬರ್‌ವರೆಗೆ ರಜಾ ತೊಗೊ. ಜನವರೀಲಿ ನಿನ್ನನ್ನ ಎಲ್ಲಾದರೂ ಒಳ್ಳೇ ಜಾಗಕ್ಕೆ ಹಾಕ್ತೀನಿ. ಅಷ್ಟು ಹೊತ್ತಿಗೆ ಒಂದಿಷ್ಟು ಎಲ್ಲಾ ಸರಿಹೋಗುತ್ತೆ."

ಚೀಫ್ ಸೆಕ್ರೆಟರಿಯವರು ಐ.ಸಿ.ಎಸ್.ನ ಆತಂಕ ಎತ್ತದಿದ್ದುದನ್ನು ಕಂಡು ಗಂಗಾ ಪ್ರಸಾದನಿಗೆ ಆಶ್ಚರ್ಯವಾಯಿತು. ಅವರಿಗೆ ಅದಾವ ಅಸಹಾಯತೆಯಿತ್ತೆಂಬುದೂ ಅವನ ಬುದ್ಧಿಗೆ ಹೊಳೆಯಲಿಲ್ಲ. ಅವನು ಆ ಕ್ಷಣ ರಜಕ್ಕೆ ಅರ್ಜಿ ಬರೆದು ಕೊಟ್ಟ; ಚೀಫ್ ಸೆಕ್ರೆಟರಿಯವರೂ ಅದನ್ನು ಅಲ್ಲೇ ಮಂಜೂರು ಮಾಡಿದರು.

ಗಂಗಾಪ್ರಸಾದನನ್ನು ಬೀಳ್ಕೊಡುವ ಸಂದರ್ಭದಲ್ಲಿ ಲಕ್ಷ್ಮೀಚಂದ ಒಂದು ಪಾರ್ಟಿ ಕೊಟ್ಟ. ಅದಕ್ಕೆ ನಗರದ ಪ್ರಮುಖ ವ್ಯಾಪಾರಿಗಳೂ, ಮಿಲ್‌ಮಾಲಿಕರು, ಜಮೀನ್‌ದಾರರು, ಸರಕಾರಿ ಅಧಿಕಾರಿಗಳು ಆಮಂತ್ರಿತರಾಗಿದ್ದರು. ಎಲ್ಲರೂ ಗಂಗಾಪ್ರಸಾದ ಕಾನಪುರ ಬಿಟ್ಟು ಹೋಗುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ಪಾರ್ಟಿ ಮುಗಿದು ಎಲ್ಲರೂ ಹೊರಡು ತ್ತಿದ್ದಾಗ ಹ್ಯಾರಿಸನ್ ಗಂಗಾಪ್ರಸಾದನ ಬಳಿ ಬಂದ. ಅವನ ಮುಖದ ಮೇಲೆ ಒಂದು ಕೆಟ್ಟ ಉಲ್ಲಾಸ ಕುಣಿಯುತ್ತಿತ್ತು. ಗಂಗಾಪ್ರಸಾದನ ಕಿವಿಯಲ್ಲಿ ಅವನು ಮೆಲ್ಲಗೆ ಉಸುರಿದ, "ಮಿಸ್ಟರ್ ಗಂಗಾಪ್ರಸಾದ್, ಇನ್ನುಮುಂದೆ ಇಂಗ್ಲಿಷಿನೋರು ಯಾರನ್ನೂ ಎದುರುಹಾಕಿ ಕೊಳ್ಳೋ ಧಾರ್ಷ್ಟ್ಯ ಮಾಡಬೇಡ!" ಹ್ಯಾರಿಸನ್ ನಗುತ್ತ ಬೇಗ ಬೇಗ ಹೊರಟುಹೋದ.

ಹ್ಯಾರಿಸನ್‌ನ ಈ ಮಾತು ಕೇಳಿದ ತಕ್ಷಣ ಗಂಗಾಪ್ರಸಾದನ ತಲೆಯೊಳಗೆ ಏನೋ ಮಿಂಚಿನಂತೆ ಹೊಳೆದುಹೋಯಿತು. ಚೀಫ್ ಸೆಕ್ರೆಟರಿಯ ಅಸಹಾಯತೆಗೆ ಕಾರಣ ಅವನಿಗೆ ಈಗ ಅರ್ಥವಾಯಿತು.

ಮಳೆಗಾಲ ನಿಂತಿತ್ತಾದರೂ ವಾತಾವರಣ ಮಳೆಗಾಲದ ಕೊನೆಗೆ ಕಾಣಿಸಿಕೊಳ್ಳುವ ಭೀಕರ ಸೆಕೆಯಿಂದ ತುಂಬಿತ್ತು. ಆಗಸ್ಟ್ ತಿಂಗಳನ್ನು ಅಲಹಾಬಾದಿನಲ್ಲೇ ಕಳೆದು

ಆಮೇಲೆ ಜ್ಞಾನಪ್ರಕಾಶನ ಜೊತೆ ದಕ್ಷಿಣದಲ್ಲಿ ಪ್ರವಾಸ ಮಾಡಿ ಬರುವುದೆಂದು ಗಂಗಾ ಪ್ರಸಾದ ನಿಶ್ಚಯಿಸಿದ್ದ. ಅವನ ಎದೆಯುರಿ ಒಂದೇ ಸಮನೆ ಹೆಚ್ಚುತ್ತ ಹೋಗುತ್ತಿತ್ತು. ತಾನು ಭಾರತೀಯನೆಂಬ ಬರಿಯ ಒಂದು ಕಾರಣಕ್ಕಾಗಿ ಒಬ್ಬ ಉದ್ಧಟ ಅಸಭ್ಯ ಇಂಗ್ಲೀಷಿ ನವನಿಗೆ ಕೆಟ್ಟದಾಗಿ ಸೋಲಬೇಕಾಗಿ ಬಂದಿತಲ್ಲ ಎಂದು ಅವನಿಗೆ ಬಿಟ್ಟುಬಿಟ್ಟು ವೇದನೆ ಯಾಗುತ್ತಿತ್ತು. ಅವನ ಈ ಸೋಲಿನ ಮೂಲಕಾರಣವೆಂದರೆ ಬ್ರಿಟಿಷ್ ಸರಕಾರದ ವರ್ಣಭೇದದ ಭಾವನೆ. ಸತ್ಯ, ನ್ಯಾಯ, ಮಾನವತೆ—ಇವೊಂದೂ ಗುಲಾಮನ ಪಾಲಿಗಿಲ್ಲ. ಗುಲಾಮನಾದ ಕಾರಣ ಅವನ ಅಸ್ತಿತ್ವ ಸ್ವತಃ ಚೇತನವಾಗಲೀ ಭಾವನೆಯಾಗಲೀ ಇಲ್ಲದೆ ಮಾಲಿಕನ ಸಂಜ್ಞೆಯನ್ನು ಅನುಸರಿಸಿ ನಡೆಯುವ ಒಂದು ಕೆಲಸಕ್ಕೆ ಬಾರದ ಪ್ರಾಣಿ ಯದಂತಾಗಿತ್ತು. ಅವನು ತನ್ನೊಳಗಿನ ವಿದ್ರೋಹ ಭಾವನೆಯನ್ನು ಅದುಮಿಕೊಳ್ಳಲು ಪ್ರಯತ್ನಿಸಿದಂತೆಲ್ಲಾ ಅದು ಇದ್ದಿದ್ದೂ ಹೆಚ್ಚುತ್ತಲೇ ಹೋಗುತ್ತಿತ್ತು. ಗಂಗಾಪ್ರಸಾದ ತನಗೆ ಅರಿವಿಲ್ಲದಂತೆಯೇ ಭಾವನಾತ್ಮಕವಾಗಿ ಜ್ಞಾನಪ್ರಕಾಶನಿಗೆ ಹತ್ತಿರವಾಗುತ್ತ ಬಂದ.

ಅವತ್ತು ಗಂಗಾಪ್ರಸಾದ ಪೇಟೆಯಲ್ಲಿ ಸುತ್ತಾಡಿ ವಾಪಸು ಬರುವಾಗ ಜ್ಞಾನಪ್ರಕಾಶ ಮತ್ತು ಫರಹತುಲ್ಲಾ ವರಾಂಡದಲ್ಲಿ ಮಾತನಾಡುತ್ತ ಕುಳಿತಿದ್ದರು. ಗಂಗಾಪ್ರಸಾದ ಫರಹತುಲ್ಲರನ್ನು ನೋಡಿ, "ಆದಾಬ್ ಅರಸೇ, ಫರಹತುಲ್ಲಾ ಸಾಹೇಬ್, ಯಾವಾಗ ದಯಮಾಡೋಣವಾಯಿತು?" ಅಂದ.

ಫರಹತುಲ್ಲಾ ಎದ್ದು ನಮಸ್ಕಾರ ಮಾಡಿದರು. ಅವನ ಕೈ ಕುಲುಕುತ್ತ, "ಈಗ ನಾನು ಅಲಹಾಬಾದಿಗೆ ಬಂದಿದೀನಿ. ಅಲ್ಲೇ ವಾಸ. ಬಾಬು ಜ್ಞಾನಪ್ರಕಾಶ ಸಾಹೇಬ ರನ್ನ ಕಂಡು ಹೋಗೋಣ ಅಂತ ಬಂದೆ," ಅಂದರು.

ಇಬ್ಬರೂ ಕುಳಿತುಕೊಂಡರು. ಗಂಗಾಪ್ರಸಾದ ಕೇಳಿದ, "ಹಾಗಾದರೆ ನೀವು ಜೌನ್‌ಪುರ ಬಿಟ್ಟುಬಿಟ್ಟಿರಾ? ಅದು ಯಾಕೆ?"

ಫರಹತುಲ್ಲಾ ಮುಗುಳುನಗೆ ನಕ್ಕರು, "ಬಿಡೋದೇನು ಬಂತು, ಜನ ಬಿಡದೆ ಬೇರೆ ಗತಿಯಿಲ್ಲ ಅನ್ನೋ ಹಾಗೆ ಮಾಡಿದರು. ಸರಿ, ನಾಲ್ಕಾರು ತಿಂಗಳು ಅಲಹಾಬಾದಿನಲ್ಲೇ ಇದ್ದುಕೊಂಡು ಕಾಂಗ್ರೆಸ್ಸಿನ ಕೆಲಸಕಾರ್ಯ ನೋಡಿಕೊಳ್ಳೋದು ಅಂದುಕೊಂಡೆ. ಅಲ್ಲಿಯ ಮುಸಲಮಾನರು ನನ್ನ ಮೇಲೆ ಕತ್ತಿ ಕಟ್ಟಿ ನನಗೆ ಅಲ್ಲಿರೋಕೆ ಆಗದಷ್ಟು ಕಷ್ಟ ವಾಗೋಹಾಗೆ ಅಬ್ದುಲ್ ಹಕ್ ಸಾಹೇಬರು ನನ್ನ ವಿರುದ್ಧ ವಿಷಕಾರಿದರು, ನೋಡಿ. ಅವರ ಜೊತೆ ಅಲಿರಜಾನೂ ಸೇರಿಕೊಂಡ. ಕೊನೆಗೆ ಗೂಂಡಾಗಿರಿಗೆ ಷುರುಮಾಡಿದ. ಅದು ಹೋಗಲಿ, ಬಿಡಿ. ಈಗ ತಾನೇ ಬಾಬು ಜ್ಞಾನಪ್ರಕಾಶ ಹೇಳಿದರು, ನೀವು ದೀರ್ಘಕಾಲ ರಜದ ಮೇಲಿದೀರಿ ಅಂತ."

ಜ್ಞಾನಪ್ರಕಾಶ ಹೇಳಿದ, "ಫರಹತುಲ್ಲಾ ಸಾಹೇಬ್, ಸಾಮಾಜಿಕ ಪಿಡುಗುಗಳನ್ನ ಧರ್ಮದಿಂದ ಮೇಲೆದ್ದು ದೂರ ಮಾಡಬೇಕಾಗುತ್ತೆ. ಮಹಾತ್ಮ ಗಾಂಧಿಯವರು ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡೋಕ್ಕೆ ಪಣತೊಟ್ಟಿದ್ದಾರೆ. ಕಾಂಗ್ರೆಸ್ಸಿನ

ಕಾರ್ಯಕ್ರಮ ರಾಜಕೀಯದ ಜೊತೆಜೊತೆಗೇ ಸಾಮಾಜಿಕವೂ ಆಗಿದೆ ಅನ್ನೋದನ್ನ ನೀವು ಚೆನ್ನಾಗಿ ಬಲ್ಲಿರಿ."

"ಹೌದು, ಅದಕ್ಕೋಸ್ಕರವೇ ನಾನು ಕಾಂಗ್ರೆಸ್ ಸೇರಿದ್ದು, ಗಾಂಧಿಯವರ ನೇತೃತ್ವವನ್ನ ಒಪ್ಪಿಕೊಂಡದ್ದು. ಆದರೆ, ಸ್ವಾಮಿ, ನಾನು ಮೊದಲು ಮುಸಲಮಾನ. ನನ್ನ ಧರ್ಮ ಸತ್ಯ, ಸಮಾನತೆಗಳ ಅಸ್ತಿಭಾರದ ಮೇಲೆ ನಿಂತಿದೆ, ಇದನ್ನ ನಾನು ಹೇಗೆ ಮರೆಯೋಕ್ಕೆ ಆಗುತ್ತೆ ! ಒಂದೊಂದು ಸಲ ನನ್ನೊಳಗೆ ಒಂದು ವಿಚಿತ್ರ ತರಹದ ತಿಕ್ಕಾಟ ಷುರುವಾಗುತ್ತೆ. ನಾನು ತೊಗೊಂಡಿರೋ ಈ ದಾರಿ ಸರಿಯಾದದ್ದೆ? ಇಸ್ಲಾಮ್ ಧರ್ಮಕ್ಕೆ ವಿರುದ್ಧವಾಗಿ ಸುಧಾರಣೆ ಮಾಡೋದು ಸಾಧ್ಯವೆ? ಆಗ ಅಂದುಕೋತೀನಿ, ಇದರ ಯೋಚನೆ ಸಹ ಯಾಕೆ ಮಾಡಬೇಕು! ನಮ್ಮ ನಿಯತ್ತು, ಪ್ರಾಮಾಣಿಕತೆಗಳನ್ನು ಭದ್ರವಾಗಿ ಉಳಿಸಿಕೊಂಡು ದೇವರ ಮಕ್ಕಳ ಸೇವೆ ಮಾಡಿಕೊಂಡಿರೋದು ನಮ್ಮ ಧರ್ಮ! ದೇವರ ಮಕ್ಕಳ ಸೇವೇನ ಸಹ ಅದೊಂದು ಧರ್ಮ ಅಂತ ತಿಳಕೊಂಡು ಮಾಡ್ತೀನಿ; ನನ್ನ ಕೈಯಲ್ಲಿರೋ ಒಂದು ಕನ್ನಡಿ ಅಂದರೆ ಧರ್ಮ ನೋಡಿ!"—ಹೀಗೆ ಹೇಳಹೇಳುತ್ತ ಫರಹತುಲ್ಲಾ ನಗತೊಡಗಿದರು. "ಅಯ್ಯೋ, ಬಿಡಿ ಈ ಮಾತು! ನಾನು ಮಾಡಿದ್ದು ಸರಿಯೋ ಅಬ್ದುಲ್ ಹಕ್, ಅಲಿರಜ಼ಾ ಮಾಡ್ತಿರೋದು ಸರಿಯೋ ಅನ್ನೋದನ್ನ ದೇವರು ತೀರ್ಮಾನ ಮಾಡ್ತಾನೆ. ನಾನು ನ್ಯಾಯನಿಯತ್ತುಗಳನ್ನ ಬಿಡಲಾರೆ. ಯಾಕೆ ಅಂದರೆ ನ್ಯಾಯನಿಯತ್ತು ಮಹಾತ್ಮ ಗಾಂಧಿಯವರಲ್ಲಿ ಇರೋ ಗುಣಗಳು. ಮಹಾತ್ಮ ಗಾಂಧಿಯವರ ಹತ್ತಿರ ಇನ್ನೂ ಒಂದು ಅಸ್ತ್ರ ಇದೆ. ಅದೂ ಅಂದರೆ ಅಹಿಂಸೆ. ನಾನಂತೂ ಅಹಿಂಸೆಯ ಭಕ್ತ. ಅದರಿಂದಾಗಿ ನನಗೆ ಯಾರ ಮೇಲೆ ದೂರೂ ಇಲ್ಲ. ಮತ್ಸರವೂ ಇಲ್ಲ."

ಫರಹತುಲ್ಲರು ಹೋದ ಮೇಲೆ ಗಂಗಾಪ್ರಸಾದ ಜ್ಞಾನಪ್ರಕಾಶನಿಗೆ ಹೇಳಿದ, "ಚಿಕ್ಕಪ್ಪಣ್ಣ, ನಿನ್ನ ಹತ್ತಿರ ಒಂದು ಸಲಹೆ ಕೇಳಬೇಕಾಗಿದೆ. ನನ್ನನ್ನ ಕಾನಪುರದಿಂದ ವರ್ಗ ಮಾಡಿದರು ಅನ್ನೋ ಕಾರಣಕ್ಕೆ ನಾನು ರಜಾ ತೊಗೊಂಡಿದೀನಿ ಅಂತ ನಿನಗೆ ಗೊತ್ತಿದೆ. ಆದರೆ ಈ ವರ್ಗ ಯಾಕೆ ಆಯಿತು ಅನ್ನೋದು ಗೊತ್ತಿಲ್ಲ, ಅಲ್ವೆ?"

"ಅದನ್ನ ನೀನು ನನಗೆ ಯಾವಾಗಲೂ ಹೇಳಿಲ್ಲ, ಮಗು. ನಾನಾಗಿಯೇ ಕೇಳೋದು ಸರಿಯಲ್ಲ ಅಂತ ಸುಮ್ಮನಿದ್ದೆ."

"ಈಗ ಹೇಳ್ತೀನಿ ಕೇಳು. ಒಬ್ಬ ಅಯೋಗ್ಯ ಇಂಗ್ಲೀಷಿರೋನು ಮಹಾತ್ಮ ಗಾಂಧಿಯವರಿಗೆ ಅಪಮಾನವಾಗೋ ಹಾಗೆ ಮಾತನಾಡಿದ ಅಂತ ನಾನು ಅವನಿಗೆ ಬೈದೆ. ಅದಕ್ಕೋಸ್ಕರ!" ಹ್ಯಾರಿಸನ್‌ನ ಜೊತೆ ನಡೆದ ಪ್ರಸಂಗವನ್ನು ಗಂಗಾಪ್ರಸಾದ ಜ್ಞಾನಪ್ರಕಾಶನಿಗೆ ವಿಸ್ತಾರವಾಗಿ ಹೇಳಿದ.

"ನೀನು ಮಾಡಿದ್ದು ಬಿಲ್‌ಕುಲ್ ಸರಿ, ಮಗು. ಈಗ ನಿನಗೆ ಅರ್ಥವಾಯಿತೆ, ನಾನು ಯಾಕೆ ಕಾಂಗ್ರೆಸ್ಸಿಗೆ ಸೇರಿಕೊಂಡೆ ಅಂತ!"

"ಅರ್ಥವಾಗಿದೆ ಚಿಕ್ಕಪ್ಪ. ನೀನು ಕಾಂಗ್ರೆಸ್ ಸೇರಿದಾಗ ನಾನು ತಡೆಯೋಕ್ಕೆ ಬಂದದ್ದು ತಪ್ಪು ಅಂತ ಗೊತ್ತಾಗ್ತಿದೆ. ಈಗ ನಾನು ಏನು ಯೋಚಿಸ್ತಿದೀನಿ ಅಂದರೆ . . . ಇಲ್ಲ, ಸರಕಾರೀ ನೌಕರಿಗೆ ರಾಜೀನಾಮೆ ಕೊಟ್ಟು ಕಾಂಗ್ರೆಸ್ಸಿಗೆ ಸೇರಿಕೋತೀನಿ ಅಂತ ಹೇಳೋದೇ ಸರಿ."

ಜ್ಞಾನಪ್ರಕಾಶ ಬೆಚ್ಚಿಬಿದ್ದ. "ಇದೇನು ಹುಚ್ಚುಮಾತು ಆಡ್ತಿದೀಯೋ! ರಾಜೀನಾಮೆ ಕೊಟ್ಟು ಏನು ಮಾಡ್ತಿ? ನಿನಗೆ ಹೆಂಡತಿ ಮಕ್ಕಳಿದಾರೆ, ಅವರ ಯೋಚನೇನೂ ಮಾಡಬೇಕು ನೀನು. ಇನ್ನೆರಡು ವರ್ಷದಲ್ಲಿ ನವಲ್ ಕಾಲೇಜ್ ಸೇರ್ತಾನೆ, ಮಗಳ ಮದುವೆ ಮಾಡಬೇಕು. ನನಗೆ ತಿಳಿದಿರೋ ಮಟ್ಟಿಗೆ ನೀನು ನೌಕರಿ ಮಾಡಿ ಏನನ್ನೂ ಉಳಿಸಿಲ್ಲ."

"ಒಟ್ಟು ಎರಡು-ಎರಡೂವರೆ ಸಾವಿರ ರೂಪಾಯಿದೆ ಬ್ಯಾಂಕಲ್ಲಿ. ಅಪ್ಪನ ಹತ್ತಿರಾನೂ ಸುಮಾರು ಮೂರು ನಾಲ್ಕು ಸಾವಿರ ರೂಪಾಯಿ ಹುಟ್ಟಬಹುದು. ಈ ಐದಾರು ಸಾವಿರ ರೂಪಾಯಿ ಬಂಡವಾಳ ಹಾಕಿ ಅಲಹಾಬಾದಿನಲ್ಲಿ ಏನಾದರೂ ವ್ಯಾಪಾರ ಷುರು ಮಾಡೋಣ ಅಂತ ಯೋಚಿಸ್ತಿದೀನಿ."

ಜ್ಞಾನಪ್ರಕಾಶ ನಕ್ಕ, "ಕಾಯಸ್ಥರ ಹೈದ ವ್ಯಾಪಾರ ಮಾಡ್ತಾನೆಯೇ, ಅದೂ ಜಾಯಿಂಟ್ ಮ್ಯಾಜಿಸ್ಟ್ರೇಟ್ ಆಗಿ ಕೆಲಸ ಮಾಡಿದ ಮೇಲೆ! ಇರೋ ಬಂಡವಾಳಾನ ಕಳಕೋತಿ, ಮಗು!"

"ಹೋಗಲಿ, ವ್ಯಾಪಾರ ಬೇಡ. ಹತ್ತಿರ ಇರೋ ಒಡವೆ ಮಾರಿದರೆ ಸುಮಾರು ಏಳು ಸಾವಿರ ರೂಪಾಯಿ ಸಿಗುತ್ತೆ. ನನ್ನ ಈ ವಜ್ರದ ಉಂಗುರಾನ ಆರೇಳು ಸಾವಿರ ರೂಪಾಯಿಗೆ ಮಾರಬಹುದು. ಈ ಹತ್ತು ಹನ್ನೆರಡು ಸಾವಿರ ರೂಪಾಯಿ ಹಾಕಿ ಒಂದು ಬಂಗಲೆ ಕಟ್ತೀನಿ. ತಿಂಗಳಿಗೆ ನೂರು ರೂಪಾಯಿ ಬಾಡಿಗೆ ಬರುತ್ತೆ. ನಮ್ಮ ವಾಸಕ್ಕೆ ಈಗಿರೋ ಬಂಗಲೆ ಇದ್ದೇ ಇದೆ. ಅಪ್ಪನ ಪೆನ್‌ಷನ್, ಮನೆಬಾಡಿಗೆ–ಈ ಎರಡೂ ಸೇರಿದರೆ ಜೀವನ ನಿರ್ವಹಣೆ ಚೆನ್ನಾಗಿಯೇ ನಡೆದುಹೋಗುತ್ತೆ."

"ಹೌದು, ಕುಡಿಯೋದನ್ನ ಪೂರ್ತಿಯಾಗಿ ಬಿಟ್ಟು ನಮ್ಮಗಳ ತರಹ ನಿರಾಡಂಬರ ಜೀವನ ನಡಸೋದಾದರೆ," ಜ್ಞಾನಪ್ರಕಾಶ ಹೇಳಿದ. "ಇನ್ನೊಂದು ನಾಲ್ಕಾರು ವರ್ಷ ಕಷ್ಟವಾಗುತ್ತೆ. ಸ್ವರಾಜ್ಯ ಸಿಕ್ಕಿದ ಮೇಲೆ ಮಜಾ ಮಾಡಬಹುದು."

ಗಂಗಾಪ್ರಸಾದನ ಈ ನಿರ್ಧಾರದಿಂದ ಜ್ವಾಲಾಪ್ರಸಾದನಿಗೆ ಆಂತರಿಕವಾಗಿ ತುಂಬ ನೋವಾಯಿತು. ಮಗನಿಗೆ ತಿಳಿವಳಿಕೆ ಹೇಳಲು ಎಷ್ಟೋ ಪ್ರಯತ್ನಿಸಿದ. ಜ್ಞಾನಪ್ರಕಾಶ ಗಂಗಾಪ್ರಸಾದನ ಪಕ್ಷ ವಹಿಸುತ್ತಿದ್ದ, ಅದೂ ಉಡುಗಿದ ಧ್ವನಿಯಲ್ಲಿ. ಎರಡು ದಿನ ಮನೆಯಲ್ಲಿ ತಿಕ್ಕಾಟವಾಯಿತು. ಮೂರನೆಯ ದಿನ ಜ್ವಾಲಾಪ್ರಸಾದ ಸೋಲಬೇಕಾಗಿ ಬಂತು.

ಸಂಜೆ ಗಂಗಾಪ್ರಸಾದ ಜ್ಞಾನಪ್ರಕಾಶರಿಬ್ಬರೂ ಸೇರಿ ರಾಜೀನಾಮೆ ಬರೆದರು.

ಅವರ ಧ್ವನಿ ಬಿರುಸಾಗಿದ್ದರೂ ಮಾತು ಸೌಜನ್ಯದಿಂದ ಕೂಡಿತ್ತು. ಜ್ವಾಲಾಪ್ರಸಾದನ ಸಲಹೆಯ ಮೇರೆಗೆ ರಾಜೀನಾಮೆಯಲ್ಲಿ ಕೊಂಚ ಪರಿವರ್ತನೆಯನ್ನೂ ಮಾಡಿದ್ದಾಯಿತು. ಆಮೇಲೆ ಜ್ಞಾನಪ್ರಕಾಶ ಅದನ್ನು ಟೈಪ್ ಮಾಡಿದ. ಗಂಗಾಪ್ರಸಾದ ಧೈರ್ಯದಿಂದ ಆ ರಾಜೀನಾಮೆಗೆ ರುಜುಹಾಕಿದ. ಗಂಗಾಪ್ರಸಾದ ರುಜು ಹಾಕುವಾಗ ಜ್ವಾಲಾಪ್ರಸಾದನಿಗೆ ಸಹಿಸಲಾಗಲಿಲ್ಲ. ಅವನು ಕೋಣೆಯಿಂದ ಹೊರಬಂದ; ಕಣ್ಣಲ್ಲಿ ನೀರು ತುಂಬಿತ್ತು.

ಜ್ವಾಲಾಪ್ರಸಾದ ಕೋಣೆಯಿಂದ ಹೊರಬೀಳುವುದಕ್ಕೂ ಫರಹತುಲ್ಲಾ ವರಾಂಡದಲ್ಲಿ ಕಾಲಿಡುತ್ತ "ಜ್ಞಾನಪ್ರಕಾಶ ಬಾಬು ಮನೇಲಿದಾರೆಯೆ?" ಎಂದು ಕೇಳುವುದಕ್ಕೂ ಸರಿಹೋಯಿತು.

ಫರಹತುಲ್ಲರ ಮುಖದಲ್ಲಿ ಗಾಬರಿ ಎದ್ದುಕಾಣುತ್ತಿತ್ತು. ಅವರ ಕೈಯಲ್ಲಿ 'ಪಯನಿಯರ್' ಪತ್ರಿಕೆಯ ಒಂದು ಪುಟದ ವಿಶೇಷ ಸಂಸ್ಕರಣವಿತ್ತು. ಆದರೆ ಜ್ವಾಲಾಪ್ರಸಾದನ ಗಮನ ಅದರ ಕಡೆ ಹೋಗಲಿಲ್ಲ. ಅನ್ಯಮನಸ್ಕನಾಗಿ "ಬನಿ, ಒಳಗೆ ಕೋಣೇಲಿದಾರೆ" ಎನ್ನುತ್ತ ಫರಹತುಲ್ಲರ ಜೊತೆ ಕೋಣೆಗೆ ಹಿಂದಿರುಗಿದ.

ಫರಹತುಲ್ಲಾ ಬಾಗಿಲಬಳಿಯಿಂದಲೇ ಅರಚುತ್ತ ಹೇಳಿದರು, "ಅನರ್ಥವಾಯಿತು, ಜ್ಞಾನಪ್ರಕಾಶ್ ಸಾಹೇಬ್. ನಿನ್ನೆ ಮುಲತಾನಿನಲ್ಲಿ ಹಿಂದೂ-ಮುಸ್ಲಿಂ ದೊಂಬಿಯಾಗಿದೆ."

"ಹ್ಞಾ, ಹಿಂದೂ-ಮುಸ್ಲಿಂ ದೊಂಬಿ, ಮುಲತಾನಿನಲ್ಲಿ! ಏನು ಹೇಳ್ತಿದೀರಿ?"

"ಹೌದು, 'ಪಯನಿಯರ್'ನ ಸ್ಪೆಶಲ್ ಎಡಿಷನ್ ಪ್ರಕಟವಾಗಿದೆ. ಏನೇನಾಗೋದಿದೆಯೋ, ದೇವರೇ!"

ಮತ್ತೆ ಮತ್ತೆ ಆ ಸುದ್ದಿಯನ್ನು ಎಲ್ಲರೂ ಓದಿದರು. ಕೋಣೆಯ ವಾತಾವರಣ ನಿರಾಶೆಯಿಂದ ತುಂಬಿತ್ತು. ಆಮೇಲೆ ಸ್ವಲ್ಪ ಹೊತ್ತು ಎಲ್ಲರೂ ಮೌನವಾಗಿದ್ದರು.

"ಮುಸಲಮಾನರಲ್ಲಿ ಈ ಬೆಂಕೀನ ಹೊತ್ತಿಸಿದವರು ಯಾರು? ಇವತ್ತು ರಾತ್ರಿಯ ಗಾಡಿಗೆ ನನಗೆ ಮುಲ್ತಾನಿಗೆ ಹೋಗೋಕ್ಕೆ ಅಪ್ಪಣೆಯಾಗಿದೆ. ಹಿಂದೂ-ಮುಸ್ಲಿಂ ಒಗ್ಗಟ್ಟಿಗೆ ಎಂಥ ಘೋರವಾದ ಧಕ್ಕೆ ಇದು!" ಫರಹತುಲ್ಲಾ ಹೇಳಿದರು.

"ಅಂದರೆ ಸರಕಾರ ಹಿಂದೂ-ಮುಸ್ಲಿಂ ಒಗ್ಗಟ್ಟನ್ನು ಮುರಿಯೋ ಈ ಘಾತಕತನಾನ ಮತ್ತೆ ಷುರು ಮಾಡಿದೆ!" ಜ್ಞಾನಪ್ರಕಾಶ ಉತ್ತರಿಸಿದ.

ಕಳೆದುಹೋಗಿದ್ದ ತನ್ನ ಹಿಂದಿನ ವ್ಯಕ್ತಿತ್ವ ಒಮ್ಮೆಲೇ ಜಾಗ್ರತವಾಗಿ ಎದ್ದುನಿಂತಿತೋ ಎಂಬಂತೆ ಗಂಗಾಪ್ರಸಾದ ಹೇಳಿದ, "ಚಿಕ್ಕಪ್ಪ, ನೀನು ಮರೀತಿದಿ! ಈ ಒಗ್ಗಟ್ಟು ಯಾವಾಗಲೂ ಇರಲೇ ಇಲ್ಲ. ಕೃತಕ ಉಪಾಯಗಳಿಂದ ಅದನ್ನ ಸೃಷ್ಟಿಸಲಾಗಿತ್ತು; ಕೃತಕ ಉಪಾಯಗಳಿಂದ ಅದನ್ನ ಮುರಿದೇ ಮುರೀತಾರೆ!"

ಫರಹತುಲ್ಲಾ ಗಂಗಾಪ್ರಸಾದನ ಕಡೆ ಆಶ್ಚರ್ಯದಿಂದ ನೋಡುತ್ತ ಕೇಳಿದರು, "ಇದೇನು ಹೇಳ್ತಿದೀರಿ, ಸ್ವಾಮಿ!"

ಗಂಗಾಪ್ರಸಾದ ಮೈಮೇಲೆ ದೆವ್ವ ಬಂದವನಂತೆ ಹೇಳಿದ, "ಸರಿಯಾಗಿಯೇ

ಹೇಳ್ತಿದೀನಿ, ಫರಹತುಲ್ಲಾ ಸಾಹೇಬ್. ಈ ಗುಲಾಮಗಿರಿಯಿಂದ ಇನ್ನು ಮುಕ್ತಿ ಸಿಗೋ ಹಾಗೆ ನನಗೆ ಕಾಣೋಲ್ಲ. ನನಗನ್ನಿಸೋದು, ಈ ಹಿಂದೂ-ಮುಸ್ಲಿಂ ಜಗಳ ಇದ್ದಿದ್ದೂ ಬೆಳೆಯುತ್ತೆ, ಹೇಳತೀರದಷ್ಟು ಬೆಳೆಯುತ್ತೆ. ಈ ಹಿಂದೂ ಮುಸ್ಲಿಮರ ಭೇದಭಾವ ಮೂಲಭೂತವಾದದ್ದು ಅಂತ ಅವತ್ತು ಅಪ್ಪಣೆ ಕೊಡಿಸಿದ್ದಿರಿ. ಈಗ ನಾನು ಆ ಮಾತನ್ನ ಒಪ್ಪಿಕೊಂಡೆ. ಈ ಮೂಲಭೂತವಾದ ಭೇದಭಾವಾನ ಅಳಿಸಿ ಹಾಕೋಕ್ಕೆ ಸಾವಿರಾರು ವರ್ಷ ಹಿಡಿಯುತ್ತೆ; ಅಲ್ಲೀತನಕ ಕಾದುಕೊಂಡಿರೋಕ್ಕೆ ಯಾರ ಕೈಲಿ ಆಗುತ್ತೆ! ಚಿಕ್ಕಪ್ಪಣ್ಣ, ಇವತ್ತು ನಾನು ಕೂದಲೆಳೆಯಷ್ಟರಲ್ಲಿ ಬದುಕಿಕೊಂಡೆ. ಈ ಗುಲಾಮಗಿರಿ ಉಣ್ಣೋದೇ ಖಚಿತವಾಗಿರೋವಾಗ ಆರಾಮವಾಗಿ ನಗುನಗುತಾ ಯಾಕೆ ಉಣ್ಣಬಾರದು!" ಹೀಗನ್ನುತ್ತ ಗಂಗಾಪ್ರಸಾದ ಕೈಯಲ್ಲಿದ್ದ ರಾಜೀನಾಮೆಯನ್ನ ಚೂರುಚೂರಾಗಿ ಹರಿದುಹಾಕಿದ.

## ತೃತೀಯ ಭಾಗ

# ಒಂದು

ನವಲ್ ಕಣ್ಣು ತೆರೆದ. ಅವನ ದೃಷ್ಟಿ ಎದುರಿನ ಮೇಜಿನ ಮೇಲಿದ್ದ ಅಲಾರಂ ಗಡಿಯಾರದ ಮೇಲೆ ಬಿತ್ತು. ಗಡಿಯಾರ ಮೂರೂವರೆ ಗಂಟೆ ತೋರಿಸುತ್ತಿತ್ತು; ಕಿಟಕಿಯಿಂದ ಬರುತ್ತಿದ್ದ ಬೆಳಕು ಕೋಣೆಯೊಳಗೆಲ್ಲಾ ಹರಡುತ್ತಿತ್ತು. ಅವನು ಮನಸ್ಸಿಲ್ಲದಿದ್ದರೂ ಕೂಡ ಎದ್ದು ಕುಳಿತ. ತಾನು ಅವತ್ತು ಬೆಳಗ್ಗೆ ತಾನೇ ಬಿ.ಎ. ಯ ಕೊನೆಯ ಪೇಪರ್ ಮುಗಿಸಿ ಬಂದಿದ್ದುದು ಅವನಿಗೆ ಏಕಾಏಕಿ ನೆನಪಾಯಿತು. ಇನ್ನು ಪರೀಕ್ಷೆಗೆಂದು ಮನಸ್ಸುಕೊಟ್ಟು ಓದಬೇಕಾಗಿಲ್ಲ. ರಾತ್ರೋರಾತ್ರಿ ಜಾಗರಣೆ ಮಾಡಬೇಕಾಗಿಲ್ಲ; ಹಾಸ್ಟಲಿನ ಕೋಣೆಯಲ್ಲಿ ಬಂದಿಯಾಗಿರಬೇಕಾಗಿಲ್ಲ. ನವಲನಿಗೆ ತನ್ನೊಳಗೆ ಏನೋ ಒಂದು ಉಲ್ಲಾಸ, ಉತ್ಸಾಹಗಳ ಅನುಭವವಾಯಿತು. ಕೋಣೆಯ ಬಾಗಿಲನ್ನು ತೆಗೆದು ಆಲಸ್ಯದಿಂದ ಕುರ್ಚಿಯ ಮೇಲೆ ಕುಳಿತುಕೊಂಡ.

ಎದುರಿಗೆ ಮಾರ್ಚಿ ತಿಂಗಳ ಕೋಮಲ ಶಾಖದಿಂದ ಕೂಡಿದ ಹೊಂಬಣ್ಣದ ಬಿಸಿಲು ಮಿನುಗುತ್ತಿತ್ತು. ಹಸಿರು ಹುಲ್ಲಿನ ಮಕಮಲ್ ಬಯಲಿನ ಅಂಚಿನಲ್ಲಿ ಬಣ್ಣಬಣ್ಣದ ಹೂಗಳು ಅರಳುತ್ತಿದ್ದವು. ನವಲನ ದೃಷ್ಟಿ ಆ ಹೂಗಳ ಮೇಲೆ ನಾಟಿತು. ಅವನು ಯೋಚಿಸತೊಡಗಿದ. ಒಮ್ಮೆಲೇ ಬಗೆಬಗೆಯ ಬಣ್ಣದ ಸಹಸ್ರ, ಲಕ್ಷ ಹೂಗಳು ಅರಳಿ ನಿಂತಿದ್ದವು. ಆದರೆ ಈ ಹೂಗಳೆಲ್ಲಾ ಎಲ್ಲಿಂದ ಬಂದವು! ಬಣ್ಣದ ಈ ವೈವಿಧ್ಯ, ಈ ಸ್ರೋತ ಇರುವುದಾದರೂ ಎಲ್ಲಿ? ಆ ಸಣ್ಣಸಣ್ಣ ಬೀಜಗಳಲ್ಲೆ? ಗಿಡಗಳಿಗೆ ಸಿಂಪಡಿಸಿದ್ದ ನೀರಿನಲ್ಲೆ? ಅಥವಾ ಹೂವರಳುವ ಈ ಋತುವಿನಲ್ಲೆ?

ಹೂ ಅರಳುತ್ತದೆ, ಹೂ ಬಾಡುತ್ತದೆ. ಈ ಅರಳಿಕೆ, ಈ ಬಾಡಿಕೆ, ಇದೆಲ್ಲವೂ ಯಾಕೆ?

ಮತ್ತೆ ಈ ಶಂಕೆ, ಈ ಪ್ರಶ್ನೆ, ಇವುಗಳೆಲ್ಲ ಹೂವಿನ ಬಗ್ಗೆಯೇ ಯಾಕೆ? ಈ ಪ್ರಶ್ನೆ ಇಡೀ ಸೃಷ್ಟಿಗೇ ಅನ್ವಯಿಸುವಂತಹದು. ಮನುಷ್ಯ ಹುಟ್ಟುತ್ತಾನೆ, ಮನುಷ್ಯ ಸಾಯುತ್ತಾನೆ. ಸೃಷ್ಟಿ ಹಾಗೂ ನಾಶ—ಇದು ಸೃಷ್ಟಿಯ ನಿಯಮ. ಇದ್ದಕ್ಕಿದ್ದಂತೆ ನವಲನ ದೃಷ್ಟಿ ಪರೀಕ್ಷೆಗೆ ಹೋಗುವ ಮೊದಲು ಮೇಜಿನ ಮೇಲೆ ತೆಗೆದಿಟ್ಟಿದ್ದ ಪುಸ್ತಕದ ಕಡೆಗೆ ಹರಿಯಿತು. ಆ ಪುಸ್ತಕವನ್ನು ಕಂಡು ಅವನ ಮುಖದ ಮೇಲೆ ಒಂದು ನಗೆ ಮೂಡಿತು.

ಬೆಳಗಿನ ಪೇಪರಿನಲ್ಲಿ ಒಂದು ಪ್ರಶ್ನೆ ಬಂದಿತ್ತು: "ಮೊಗಲ ಸಾಮ್ರಾಜ್ಯದ ವಿನಾಶಕ್ಕೆ ಕಾರಣವೇನೆಂಬುದನ್ನು ಬರೆಯಿರಿ?"

ನವಲ್ ಆ ಪ್ರಶ್ನೆಗೆ ಉತ್ತರ ಬರೆಯುವ ಮೊದಲು ಒಂದು ಸ್ವಲ್ಪ ಯೋಚಿಸಿದ್ದ, 'ಮೊಗಲ ಸಾಮ್ರಾಜ್ಯದ ವಿನಾಶಕ್ಕೆ ಬ್ರಿಟಿಷ್ ಸಾಮ್ರಾಜ್ಯದ ನಿರ್ಮಾಣವೇ ಕಾರಣ' ಎಂದು ಉತ್ತರ ಬರೆಯೋಣವೆಂದು ಒಂದು ಸಲ ಅವನ ಮನಸ್ಸಿಗೆ ಯೋಚನೆ ಬಂದಿತ್ತು. ಆದರೆ ಈ ಕಾರಣವನ್ನು ಬರೆಯದೆ ತಾನು ಪುಸ್ತಕಗಳಲ್ಲಿ ಓದಿದ್ದ ಕಾರಣವನ್ನು ಬರೆದಿದ್ದ. ಪುಸ್ತಕಗಳಲ್ಲಿ ತೋರಿಸಿದ್ದ ಕಾರಣ ತಪ್ಪೆಂದು ನವಲನ ಅಭಿಪ್ರಾಯ. ಸೃಷ್ಟಿ ಹಾಗೂ ವಿನಾಶ—ಹಳೆಯದು ನಾಶವಾಗುತ್ತದೆ, ಹೊಸದು ಸೃಷ್ಟಿಯಾಗುತ್ತದೆ. ಆದರೆ ಈ ಉತ್ತರ ದರ್ಶನದ ಕ್ಷೇತ್ರದ್ದು, ಇತಿಹಾಸದ್ದಲ್ಲ.

ಈ ಹೂಗಳ ಇತಿಹಾಸವನ್ನು ಯಾರೂ ಬರೆಯುವುದಿಲ್ಲ. ಪ್ರತಿವರ್ಷವೂ ವಸಂತ ಋತುವಿನಲ್ಲಿ ಅಗಣಿತ ಸಂಖ್ಯೆಯಲ್ಲಿ ಹೂಗಳು ಅರಳುತ್ತವೆ; ಗ್ರೀಷ್ಮ ಬಂದೊಡನೆಯೇ ಒಂದೂ ಬಿಡದಂತೆ ಎಲ್ಲವೂ ಬಾಡಿ ಉದುರುತ್ತವೆ. ಆದರೆ ಅಕಾರಣವಾದ ಈ ಅಸೀಮ ಸೌಂದರ್ಯದ ಸೃಷ್ಟಿ; ಅಷ್ಟೇ ಅಕಾರಣವಾದ ಆ ಸೌಂದರ್ಯದ ವಿನಾಶ—ಇದು ನವಲನ ಬುದ್ಧಿಗೆ ಎಟುಕುತ್ತಿರಲಿಲ್ಲ.

ನವಲ್ ಒಮ್ಮೆ ಆಕಳಿಸಿ ಎದ್ದು ನಿಂತ. ಮೂಲೆಯಲ್ಲಿದ್ದ ಸ್ಟೋವ್ ಹಚ್ಚಿದ; ಚಹಕ್ಕೆ ನೀರು ಕಾಯಲಿಟ್ಟು ಮತ್ತೆ ಕುರ್ಚಿಯ ಮೇಲೆ ಬಂದು ಕುಳಿತುಕೊಂಡು ಹೊರಗಿನ ಬಯಲನ್ನು ನೋಡತೊಡಗಿದ. ಅಕಸ್ಮಾತ್ತಾಗಿ ಅವನಿಗೆ ಎಲ್ಲೋ ದೂರದಿಂದ ಬರುತ್ತಿದ್ದ ಕೋಗಿಲೆಯ 'ಕುಹೂ ಕುಹೂ' ಕೇಳಿಸಿತು. ಕೋಗಿಲೆಯ ಆ ಕೂಗು ಅದೆಷ್ಟು ಮಧುರವಾಗಿತ್ತು, ವಸಂತಋತುವಿನ ಮಾದಕತೆಯ ಸಮಸ್ತ ಸಂಗೀತವೂ ಕೋಗಿಲೆಯ ಆ ಕೂಗಿನಲ್ಲಿ ಉಕ್ಕಿ ಬಂದಿದೆಯೇನೋ ಎಂದು ತೋರುತ್ತಿತ್ತು. ಕೋಗಿಲೆಯ ಆ ಕೂಗು ಅನಾಯಾಸವಾಗಿ ಉಷಳ ಸುಮಧುರ, ಸಂಗೀತಮಯ ಧ್ವನಿಯಾಗಿ ಮಾರ್ಪಟ್ಟಿತು.

ಉಷಾ! ಅಸೀಮ ಸೌಂದರ್ಯದ ವರ ಪಡೆದು ಅವಳು ಬಂದಿದ್ದಾಳೆ. ಎಂಥ ಮಧುರವಾದ ಕಂಠ ಅವಳದ್ದು! ಉಷಳ ಮುಂದೆ ಅವನು ತನ್ನನ್ನು ತಾನು ಕಳೆದುಕೊಂಡವನಂತೆ, ಎಚ್ಚರ ತಪ್ಪಿದವನಂತೆ ಇದ್ದುಬಿಡುತ್ತಾನೆ. ಆಗ ಉಷಾ ಅನಾಯಾಸವಾಗಿ ನವಲನನ್ನು ಕೇಳುತ್ತಾಳೆ, "ಯಾಕೆ, ಏನು ಯೋಚಿಸುತ್ತಿದ್ದೀರಿ, ನೀವು ?" ನವಲ್ ಚದುರಿಹೋಗಿದ್ದ ತನ್ನ ಪ್ರಜ್ಞೆಯನ್ನು ಮತ್ತೆ ಒಟ್ಟುಗೂಡಿಸಿಕೊಂಡು ಹೇಳುತ್ತಾನೆ, "ಉಷಾ, ಸೌಂದರ್ಯದಲ್ಲಿ ನಿನಗೆ ಸರಿಸಮಾನಳಾದ ಬೇರೆ ಯಾರನ್ನಾದರೂ ದೇವರು ಸೃಷ್ಟಿಸಿರಬಹುದೆ ಎಂದು ಯೋಚಿಸುತ್ತಿದ್ದೀನಿ." ನವಲನ ಈ ಉತ್ತರ ಕೇಳಿ ಉಷಾ ಒಮ್ಮೆಲೇ ಅಸಂಖ್ಯಾತ ಹೂಗಳ ಝರಿ ಸುರಿದಂತೆ ಕಿಲಕಿಲನೆ ನಗುತ್ತಾಳೆ. "ಹೋಗ್ರಿ, ನೀವು ನನ್ನನ್ನ ಹಾಸ್ಯ ಮಾಡ್ತಿದೀರಿ!" ಅವಳು ಅವನ ಹತ್ತಿರದಿಂದ ಓಡಿಹೋಗುತ್ತಾಳೆ. ಅವಳು ಓಡಿಹೋಗುತ್ತಾಳೆ, ನಿಜ. ಆದರೆ ಬಹಳ ದೂರವೇನಲ್ಲ. ಕೊಂಚ ದೂರ ಹೋಗಿ, ನಿಂತು, ಮತ್ತೆ ಹಿಂದಿರುಗಿ, ತುಂಬ ಗಂಭೀರ ಮುಖಮುದ್ರೆಯಿಂದ ಅವನಿಂದ

ಕೊಂಚ ದೂರ ಸರಿದು ಕುಳಿತುಕೊಳ್ಳುತ್ತಾಳೆ. ಒಮ್ಮೆ ಇತಿಹಾಸದ ಮೇಲೆ, ಒಮ್ಮೆ ಸಾಹಿತ್ಯದ ಮೇಲೆ ಒಂದಿಷ್ಟು ಪ್ರಶ್ನೆ ಕೇಳಿ ಅವನನ್ನು ಗೊಂದಲಕ್ಕೆ ಕೆಡವುತ್ತಾಳೆ.

ಉಷಾ ಈ ವರ್ಷ ಇಂಟರ್ ಪರೀಕ್ಷೆಗೆ ಕೂತಿದ್ದಾಳೆ. ಪರೀಕ್ಷೆ ಮುಗಿದು ಒಂದು ವಾರವಾಗಿದೆ. ಸುಮಾರು ಒಂದು ತಿಂಗಳಿಂದ ನವಲ್ ಉಷಳನ್ನು ಕಂಡಿಲ್ಲ. ಅವನಿಗೂ ಪರೀಕ್ಷೆಯಿತ್ತಲ್ಲವೆ! ಇವತ್ತು ಅವನ ಪರೀಕ್ಷೆಯೂ ಮುಗಿದಿದೆ.

ಉಷಾ ರಾಯ್‌ಬಹದ್ದೂರ್ ಕಾಮತಾನಾಥರ ಮಗಳು. ಕಾಮತಾನಾಥರಿಗೂ ಗಂಗಾಪ್ರಸಾದನಿಗೂ ತುಂಬ ಸ್ನೇಹ. ನವಲ್‌ಕಿಶೋರ ಕಾಮತಾನಾಥರ ಮನೆಯ ಮಗನಂತೆಯೇ ಇದ್ದಾನೆ. ಕಾಮತಾನಾಥರು ಉಷಳನ್ನು ತನಗೆ ಕೊಟ್ಟು ಮದುವೆ ಮಾಡಬಯಸುತ್ತಾರೆಂದು ನವಲ್ ಬಲ್ಲ. ಉಷಳಿಗೂ ಇದು ಗೊತ್ತು. ನವಲನ ಮುಖದ ಮೇಲೆ ಮೃದುವಾದ ನಗೆ ಮೂಡುತ್ತಿದೆ. ಅದೇ ಹೊತ್ತಿಗೆ ಅವನ ದೃಷ್ಟಿ ಎದುರಿನ ಸ್ಟೋವಿನ ಮೇಲೆ ಬೀಳುತ್ತದೆ—ನೀರು ಕುದಿಯುತ್ತಿದೆ.

ನವಲ್ ಎದ್ದು ಚಹ ಮಾಡಿದ. ಆಮೇಲೆ ಪದ್ಧತಿಯ ಪ್ರಕಾರ ಅಲ್ಲಿಂದಲೇ ಕೂಗು ಹಾಕಿದ, "ಪ್ರೇಮಶಂಕರ್, ಅರೆ ಭಾಯ್ ಪ್ರೇಮಶಂಕರ್! ಚಹಾ ತಯಾರಾಗಿದೆ!"

ಪಕ್ಕದ ಕೋಣೆಯ ಬಾಗಿಲು ತೆರೆದು ಮುಚ್ಚಿದ ಶಬ್ದ ಕೇಳಿಸಿತು. ಅದೇ ಹೊತ್ತಿಗೆ ಪ್ರೇಮಶಂಕರ ಅವನ ಕೋಣೆಗೆ ಬಂದ.

"ಏನು ನವಲ್, ಇವತ್ತು ನಿನ್ನ ಪೇಪರ್ ಹೇಗಿತ್ತು?" ಪ್ರೇಮಶಂಕರ ಬಂದೊಡನೆಯೇ ಕೇಳಿದ.

"ಚೆನ್ನಾಗಿತ್ತು, ಹೈ ಸೆಕೆಂಡ್ ಕ್ಲಾಸ್ ಸಿಗುತ್ತೆ," ನವಲ್ ಹೇಳಿದ. "ಫಸ್ಟ ಕ್ಲಾಸ್ ಬರೋದಂತೂ ಸಾಧ್ಯವಿಲ್ಲ!"

"ನಿಂದು ಇದೇ ಗೋಳು! ನೀನು ಸ್ವಲ್ಪ ಕಷ್ಟಪಟ್ಟಿದ್ದರೆ ಫಸ್ಟ್‌ಕ್ಲಾಸ್ ಬರಬಹುದಾಗಿತ್ತು. ಹೋಗಲಿ ಬಿಡು," ಪ್ರೇಮಶಂಕರ ಕುರ್ಚಿಯ ಮೇಲೆ ಕುಳಿತುಕೊಂಡ.

ಪ್ರೇಮಶಂಕರ ಚಹ ಕುಡಿಯುತ್ತ ಮಾತು ಮುಂದುವರಿಸಿದ, "ನೀನು ಕಷ್ಟಪಡಬಲ್ಲೆ; ಆದರೆ ಅದಕ್ಕೆ ನೀನು ಪ್ರಯತ್ನ ಮಾಡೋಲ್ಲ. ಪ್ರಯತ್ನಪಡದೇನೇ ನಿನಗೆ ಎಲ್ಲಾ ಸಿಕ್ಕಿದೆ, ಸಿಗ್ತಾ ಇದೆ." ಆಮೇಲೆ ಕೊಂಚ ತಡೆದು ಪ್ರೇಮಶಂಕರ ಕೇಳಿದ, "ಈಗ ಏನು ಕಾರ್ಯಕ್ರಮ ನಿನ್ನದು?"

"ಕಾರ್ಯಕ್ರಮ! ಇನ್ನೂ ಏನೂ ಹೇಳೋಕ್ಕೆ ಬರೋಲ್ಲ. ಸೆಪ್ಟೆಂಬರ್‌ನಲ್ಲಿ ಇಂಗ್ಲಂಡಿಗೆ ಹೋಗೋ ಸಂಭವವಿದೆ. ಅಲ್ಲೇ ಐ.ಸಿ.ಎಸ್. ಗೆ ಕೂತುಕೋತೀನಿ. ಪಾಸ್‌ಪೋರ್ಟ್ ಮಾಡಿಸಿದ್ದಾಗಿದೆ. ಅಲ್ಲಿ ವಾಸದ ವ್ಯವಸ್ಥೆಗೆ ಅಪ್ಪ ಪತ್ರವ್ಯವಹಾರ ಮಾಡ್ತಾ ಇದಾರೆ."

ಪ್ರೇಮಶಂಕರ ನಕ್ಕ, "ನಾನು ಇಷ್ಟು ಹೇಳ್ತೀನಿ, ಕೇಳು. ನೀನು ಖಂಡಿತಾ ಐ.ಸಿ. ಎಸ್. ಆಗ್ತಿ. ಆದರೆ ನಾನು ಕೇಳಿದ್ದು ಈಗಿನ ಕಾರ್ಯಕ್ರಮ ಏನೂ ಅಂತ. ನಿನ್ನ

ದಯದಿಂದ ಇಲ್ಲಿ ಸಂಜೆಯ ಚಹ ಆಗಿಹೋಗ್ತಾ ಇತ್ತು. ಇನ್ನು ಅದೂ ಮುಗೀತು ಅಂದುಕೊ."

ಪ್ರೇಮಶಂಕರ ಎಲ್ಎಲ್.ಬಿ. ಫೈನಲ್ ನಲ್ಲಿ ಓದುತ್ತಿದ್ದ. ಅವನು ವಯಸ್ಸಿನಲ್ಲಿ ನವಲನಿಗಿಂತ ಸಾಕಷ್ಟು ದೊಡ್ಡವನು. ಆದರೆ ನೋಡಲು ಮಾತ್ರ ನವಲನ ಸಮ ವಯಸ್ಕನಂತೆ ಕಾಣುತ್ತಿದ್ದ. ಬೆಳ್ಳಗೆ ಸುಂದರವಾಗಿದ್ದ ನಡುಎತ್ತರದ ಯುವಕ ಅವನು. ಆಳವಾದ ಕಪ್ಪನೆಯ ದೊಡ್ಡದೊಡ್ಡ ಕಣ್ಣುಗಳು, ಮಧ್ಯಕ್ಕೆ ತೆಗೆದ ಬೈತಲೆ! ಪ್ರೇಮಶಂಕರನ ಇಡೀ ವ್ಯಕ್ತಿತ್ವದಲ್ಲಿ ಒಂದು ಬಗೆಯ ಕೋಮಲತೆಯಿತ್ತು. ಧ್ವನಿಯಲ್ಲಿ ಒಂದು ಬಗೆಯ ಮಧುರತೆಯಿತ್ತು. ಕಣ್ಣುಗಳು ತಮ್ಮನ್ನು ತಾವೇ ಮರೆತಂತಿದ್ದವು. ಪ್ರೇಮಶಂಕರ ಫಸ್ಟ್ ಡಿವಿಷನ್ನಿನಲ್ಲಿ ಎಂ.ಎ. ಪಾಸುಮಾಡಿದ್ದ. ಆಮೇಲೆ ವಕೀಲಿಗೆ ಓದಲು ಆರಂಭಿಸಿದ್ದ.

ನವಲ್ ಹೇಳಿದ, "ಇನ್ನೂ ಒಂದು ವಾರ ಇಲ್ಲೇ ಇರ್ತೀನಿ. ಫತಹಪುರದಲ್ಲಿ ನಮ್ಮ ಚಿಕ್ಕಪ್ಪ ಇದಾರೆ. ಅವರ ಮಗನ ಮದುವೆ ಗೊತ್ತಾಗಿದೆ. ಮದುವೆಗೆ ತಮ್ಮ ಜೊತೆ ನಾನೂ ಫತಹಪುರಕ್ಕೆ ಹೋಗಿಬರಬೇಕು ಅಂತ ಅಪ್ಪನ ಇಷ್ಟ. ಹಾಗಂತ ಕಾಗದ ಬರೆದಿದಾರೆ. ಚಹದ ಪಾತ್ರೆಪದಾರ್ಥಗಳನ್ನು ಇಲ್ಲೇ ಬಿಟ್ಟು ಹೋಗಿರ್ತೀನಿ. ಸುಖಿಯೀಗೆ ಹೇಳಿ ಚಹ ಮಾಡಿಸಿಕೊ. ನಾನು ಅವನಿಗೆ ಹೇಳಿ ಹೋಗಿರ್ತೀನಿ. ನೀನು ಹಾಸ್ಟಲ್ ಬಿಡೋಕ್ಕೆ ಮುಂಚೆ ಸಾಮಾನನ್ನೆಲ್ಲಾ ಸುಖಿಯೀಗೆ ಕೊಟ್ಟುಬಿಡು. ಅವನು ನಮ್ಮ ಮನೆಗೆ ತಲಪಿಸ್ತಾನೆ."

ಪ್ರೇಮಶಂಕರ ನಕ್ಕ, "ಇದೆಲ್ಲಾ ನನ್ನಿಂದ ಆಗೋ ಕೆಲಸವಲ್ಲ. ಚಹದ ಚಟ ಮಾಡಿಸಿದವನು ನೀನು. ನೀನು ಹೋದ ಮೇಲೆ ಈ ಚಟಾನೂ ಬಿಟ್ಟುಬಿಡ್ತೀನಿ."

ಇದ್ದಕ್ಕಿದ್ದಂತೆ ನವಲನಿಗೆ ಏನೋ ನೆನಪಾಯಿತು. "ನಿನ್ನೆ ಸಂಜೆ ನೀನು ಸಿವಿಲ್ ಲೈನ್ಸ್‌ನಲ್ಲಿ ಯಾವನೋ ಇಂಗ್ಲೀಷಿನೋನ ಜೊತೆ ಅಡ್ಡಾಡ್ತಿದ್ದೆಯಂತೆ—ಜೀವನ್ ಇವತ್ತು ಮಧಾಹ್ನ ಹೇಳಿದ. ಅವನು ಯಾರು? ಆ ನಿನ್ನ ಸ್ನೇಹಿತನನ್ನ ನಮಗೂ ಪರಿಚಯ ಮಾಡಿಸಿಕೊಡಯ್ಯ."

ಪ್ರೇಮಶಂಕರ ಹೇಳಿದ, "ಅವನೊಬ್ಬ ಟೂರಿಸ್ಟ್. ಸಿವಿಲ್ ಲೈನ್ಸ್‌ನಲ್ಲಿ ಸಿಕ್ಕಿದ. ಹಾಗೇ ಪರಿಚಯವಾಯಿತು." ಆಮೇಲೆ ನಗುತ್ತ, "ಜನಗಳ ಕಣ್ಣಿಂದ ಯಾವದನ್ನೂ ಮುಚ್ಚಿಡೋ ಹಾಗಿಲ್ಲ. ಜೊತೆಗೆ ಎಲ್ಲಾದಕ್ಕೂ ಸಾಕಷ್ಟು ಬಣ್ಣ ಹಚ್ಚಿ ಹೇಳಿಬಿಡ್ತಾರೆ."

ಪ್ರೇಮಶಂಕರ ವಿಷಯವನ್ನು ಮರೆಮಾಡುತ್ತಿದ್ದಾನೆಂಬುದು ನವಲನಿಗೆ ಸ್ಪಷ್ಟವಾಯಿತು. ಅವನಿಗೆ ಅದನ್ನು ಮುಂದುವರಿಸುವುದು ಸರಿಕಾಣಲಿಲ್ಲ. ಪ್ರೇಮಶಂಕರನೂ ಚಹ ಕುಡಿದು ಮುಗಿಸಿದ್ದ. ನವಲ್ ಹೇಳಿದ, "ಹಾಗೇ ಕೇಳಿದೆ ಅಷ್ಟೆ. ಪರೀಕ್ಷೆ ಮುಗಿದ ಮೇಲೆ ನಿನ್ನದೇನು ಕಾರ್ಯಕ್ರಮ?"

ಪ್ರೇಮಶಂಕರ ಜೇಬಿನಿಂದ ಒಂದು ಸಿಗರೇಟು ತೆಗೆದು ಹಚ್ಚಿದ. "ನನ್ನದೇನು

ಕಾರ್ಯಕ್ರಮ ಅಂತ ನನಗೇ ಗೊತ್ತಿಲ್ಲ. ನನಗೆ ಯಾವ ಮನೆಮಠಾನೂ ಇಲ್ಲ; ಇರೋಕ್ಕೆ ಒಂದು ನೆಲೆ ಅಂತ ಇಲ್ಲ. ಪರೀಕ್ಷೆ ಮುಗಿದಾದ ಮೇಲೆ ಎಲ್ಲಿ ಹೋಗೋದು, ಏನು ಮಾಡೋದು ಅಂತ ಯೋಚನೆ ಮಾಡ್ತೀನಿ!" ಪ್ರೇಮಶಂಕರ ಹೀಗೆ ಹೇಳಹೇಳುತ್ತ ಎದ್ದು ನಿಂತ, "ಇವತ್ತು ನಿನಗೆ ಹೊರಗೆ ಹೋಗಿ ಓಡಾಡಿಕೊಂಡು ಬರೋ ಮನಸ್ಸು ಅಂತ ಕಾಣುತ್ತೆ. ವಾಪಸು ಬರೋದು ಹೊತ್ತಾಗಬಹುದು. ನಾನು ಹೋಗಿ ಮತ್ತೆ ಪುಸ್ತಕಕ್ಕೆ ಅಂಟಿಕೋತೀನಿ."

ಪ್ರೇಮಶಂಕರ ಒಂದು ಮಲ್ಲಿನ ಜುಬ್ಬ ತೊಟ್ಟಿದ್ದ. ಪ್ರಾಯಶಃ ಮೂರು ದಿನ ದಿಂದ ಬದಲಾಯಿಸದೆ ಅದು ಸಾಕಷ್ಟು ಕೊಳೆಯಾಗಿತ್ತು. ಅವನ ದೊಗಲೆ ಪೈಜಾಮವೂ ಅಷ್ಟೇ ಕೊಳೆಯಾಗಿತ್ತು. ನವಲ್ ಹೇಳಿದ, "ಅದೇನೋ ಸರಿ, ಹೋಗಿ ಸ್ವಲ್ಪ ಬಟ್ಟೆ ಬದಲಾಯಿಸು, ಮಹರಾಯ!"

"ಓಹ್! ಬಟ್ಟೆ ಬದಲಾಯಿಸೋದನ್ನ ಮರೆತೇಬಿಟ್ಟಿದ್ದೆ." ಪ್ರೇಮಶಂಕರ ನಕ್ಕ. "ಇವತ್ತಿನ ಜೀವನ ಅದೆಷ್ಟು ತೊಡಕಾಗಿದೆ. ಬಿಳೀ ಬಟ್ಟೆ ಬೇಕು. ಏನಾದರೂ ಕೆಲಸಕ್ಕೆ ಮನಸ್ಸು ಹಚ್ಚಿಸಬೇಕಾದರೆ ಸಿಗರೇಟ್ ಬೇಕು. ಇನ್ನೂ ಏನೇನೆಲ್ಲಾ ಬೇಕೋ! ಈ ಎಲ್ಲ 'ಬೇಕು'ಗಳ ಹಿಂದೆ ಹಣ ಇದೆ. ಇವತ್ತಿನ ಇಡೀ ಸಮಸ್ಯೆ ಅಂದರೆ ಹಣ. ಅದಿರಲಿ, ನಿನಗೆ ಹೊತ್ತಾಗ್ತಿದೆ ಅಂತ ಕಾಣುತ್ತೆ. ನಾನು ಬರ್ತೀನಿ." ಪ್ರೇಮಶಂಕರ ಹೊರಟ.

ನವಲ್ ಸ್ನಾನ ಮುಗಿಸಿ ಬಟ್ಟೆ ಬದಲಾಯಿಸಿಕೊಳ್ಳುವ ಹೊತ್ತಿಗೆ ಗಂಟೆ ಐದಾಗಿತ್ತು. ಮೊಳೆಗೆ ನೇತು ಹಾಕಿದ್ದ ಟೆನಿಸ್ ರ‍್ಯಾಕೆಟ್ ತೆಗೆದ. ಒಂದು ತಿಂಗಳಿಂದ ಅವನು ಆ ರ‍್ಯಾಕೆಟ್ ಮುಟ್ಟಿರಲಿಲ್ಲ. ರ‍್ಯಾಕೆಟ್ ಹಿಡಿದು ಸೈಕಲ್ ಹತ್ತಿ ಆಲ್‌ಫ್ರೆಡ್ ಪಾರ್ಕಿನ ಕಡೆ ಹೊರಟ.

ಎರಡು ಸೆಟ್ ಟೆನಿಸ್ ಆಡುವುದರಲ್ಲಿ ಅವನಿಗೆ ದಣಿವಾಯಿತು. ಒಂದು ತಿಂಗ ಳಿಂದ ರೂಢಿ ತಪ್ಪಿತ್ತು. ಆದರೆ ಆಟದಲ್ಲಿ ಮಾತ್ರ ಏನೂ ವ್ಯತ್ಯಾಸವಾಗಿರಲಿಲ್ಲ. ಸ್ವಲ್ಪ ಹೊತ್ತು ಸುಧಾರಿಸಿಕೊಂಡು ನವಲ್ ರಾಯ್‌ಬಹದ್ದೂರ್ ಕಾಮತಾನಾಥರ ಮನೆಗೆ ಹೊರಟ.

ರಾಯ್‌ಬಹದ್ದೂರ್ ಕಾಮತಾನಾಥರ ಮನೆ ಮುಟ್ಠೀಗಂಜ್‌ನಲ್ಲಿತ್ತು. ಮನೆ ಹೊರಗಿನಿಂದ ತುಂಬ ಸಾಧಾರಣವಾಗಿ ಕಾಣುತ್ತಿತ್ತು. ಒಂದು ದೊಡ್ಡ ಗೋಡೆ; ಗೋಡೆಗೆ ಹತ್ತಿಕೊಂಡಂತೆ ಗುಡಿಸಿಲುಗಳಂತೆ ಕಾಣುವ ಲೆಕ್ಕವಿಲ್ಲದಷ್ಟು ಅಂಗಡಿಗಳು. ಆ ಗೋಡೆಯ ನಡುಮಧ್ಯದಲ್ಲಿ ಒಂದು ಹೆಬ್ಬಾಗಿಲು. ಹೆಬ್ಬಾಗಿಲನ್ನು ದಾಟಿ ಹೋದರೆ ಒಂದು ಉದ್ಯಾನ. ಒಳಗಡೆ ರಾಯ್‌ಬಹದ್ದೂರರ ಎರಡಂತಸ್ತಿನ ಮನೆ. ಮನೆಯ ಮುಂಭಾಗವನ್ನು ಕಲ್ಲಿನಲ್ಲಿ ಕಟ್ಟಿದ್ದರು. ಈ ಮನೆಗೂ ಒಂದು ಹೆಬ್ಬಾಗಿಲು. ಹೆಬ್ಬಾಗಿ ಲಿನ ಎಡಬಲಗಳಲ್ಲಿ ದೊಡ್ಡದೊಡ್ಡ ಪಡಸಾಲೆಗಳು. ಹೆಬ್ಬಾಗಿಲಿನ ಒಳಗೆ ಮತ್ತೂ

ಒಂದು ಉದ್ಯಾನ. ಉದ್ಯಾನವದ ಅಂಚಿಗೆ ಹೆಂಗಸರ ಮನೆಯ ಹೊಸ್ತಿಲು ಷುರು ವಾಗುತ್ತಿತ್ತು. ಹೊರಗಡೆಯ ಭಾಗಕ್ಕೆ 'ಗಂಡಸರ ಮನೆ' ಎಂದು ಕರೆಯುತ್ತಿದ್ದರು.

ಕಾಮತಾನಾಥರು ನವಲನನ್ನು ಕೂರಿಸಿದರು, "ಏನು ನವಲ್, ಬಹಳ ದಿನದ ಮೇಲೆ ಮುಖ ತೋರಿಸ್ತಿದಿ. ಪೇಪರ್ ಹೇಗೆ ಮಾಡಿದಿ?"

"ಚೆನ್ನಾಗಿ ಮಾಡಿದೀನಿ. ಹೈ ಸೆಕಂಡ್ ಕ್ಲಾಸ್ ಸಿಗುತ್ತೆ."

"ಹಾಗಾದರೆ ವಿಲಾಯಿತಿಗೆ ಯಾವಾಗ ಹೊರಡ್ತಿ!" ಮತ್ತೆ ತಕ್ಷಣ ಏನೋ ಯೋಚನೆ ಹೊಳೆದವರಂತೆ ಕಾಮತಾನಾಥರು ಮುಂದುವರಿಸಿದರು. "ಅರೆ, ನೀನೂ ನಮ್ಮಗಳ ಜೊತೆ ಸ್ವಿಟ್ಜರ್‌ಲ್ಯಾಂಡಿಗೆ ಬಂದುಬಿಡು. ನೀನು ಹೇಗಿದ್ದರೂ ವಿಲಾಯಿತಿಗೆ ಹೋಗಲೇ ಬೇಕು. ಈಗಲೇ ನನ್ನ ಜೊತೆ ಹೊರಟುಬಿಡು."

ಕಾಮತಾನಾಥರ ಮಾತು ಕೇಳಿ ನವಲನಿಗೆ ದಿಗ್ಭ್ರಮೆಯಾಯಿತು, "ಇವತ್ತಿನ್ನೂ ಕೊನೆ ಪೇಪರ್ ಮುಗಿಸಿದೀನಿ, ಪಾಪಾ! ಮೊದಲು ರಿಸಲ್ಟ್ ಬರಲಿ. ಆಮೇಲೆ ತಾನೇ ನಾನು ವಿಲಾಯಿತಿಗೆ ಹೋಗೋ ಮಾತು."

ಕಾಮತಾನಾಥರಿಗೆ ತಮ್ಮ ಸಲಹೆ ಉಚಿತವೆಂದು ತೋರಿತು. "ಅರೆ, ಪಾಸಂತೂ ಆಗೇ ಆಗುತ್ತೆ. ರಿಸಲ್ಟನ್ನ ಕೇಬಲ್‌ಗ್ರಾಮ್‌ನಿಂದ ಸ್ವಿಟ್ಜರ್‌ಲ್ಯಾಂಡಿಗೇ ತರಿಸಿಕೊಂಡ ರಾಯಿತು. ನಾವು ಹೊರಡೋದೂ ಏಪ್ರಿಲ್ ಕೊನೆಗೆ. ಇನ್ನೂ ಒಂದು ತಿಂಗಳಿಗೂ ಹೆಚ್ಚು ಸಮಯ ಇದೆ."

ಇದೇ ಹೊತ್ತಿಗೆ ಉಷಾ ಮುಖ-ಕೈ ತೊಳೆದು ಬಂದು, ಒಂದು ಕುರ್ಚಿಯ ಮೇಲೆ ಮೌನವಾಗಿ ಕುಳಿತುಕೊಂಡಳು. ಕಾಮತಾನಾಥ ಮಗಳಿಗೆ ಹೇಳಿದರು, "ಈಗ ನನಗೊಂದು ದೂರಾಲೋಚನೆ ಹೊಳೆದಿದೆ, ಉಷಾ. ನವಲ್ ಐ.ಸಿ.ಎಸ್. ಮಾಡೋಕ್ಕೆ ಹೇಗೂ ವಿಲಾಯಿತಿಗೆ ಹೋಗೋನಿದಾನೆ. ನಮ್ಮ ಜೊತೆ ಸ್ವಿಟ್ಜರ್‌ಲ್ಯಾಂಡಿಗೆ ಬಂದು ಬಿಡು ಅಂತ ಇವನಿಗೆ ಹೇಳಿದೀನಿ. ಅಕ್ಟೋಬರಿನಲ್ಲಿ ನಾವು ಸ್ವಿಟ್ಜರ್‌ಲ್ಯಾಂಡ್ ಬಿಟ್ಟು ವಾಪಸು ಹೊರಡ್ತೀವಿ. ಇವನು ಹಾಗಿಂದಹಾಗೇ ನೇರವಾಗಿ ಇಂಗ್ಲಂಡಿಗೆ ಹೋಗ್ತಾನೆ."

ಉಷಾ ತನ್ನೆಲ್ಲ ಖಿನ್ನತೆಯೂ ಕರಗಿಹೋದಂತೆ ಹೇಳಿದಳು, "ವಾಹ್ವ್ ಪಾಪಾ! ಎಂಥ ಯೋಚನೆ ಮಾಡಿದಿರಿ! ನವಲ್‌ಬಾಬು, ನೀವು ನಮ್ಮ ಜೊತೆ ಹೊರಡಲೇ ಬೇಕು. ನೀವು ಇಲ್ಲ ಅನ್ನೋ ಹಾಗಿಲ್ಲ."

ಅದೇ ಹೊತ್ತಿಗೆ ಕಾಮತಾನಾಥರ ಹೆಂಡತಿ ಬಾಯಿಹಾಕಿದಳು, "ಮಗೂ ನವಲ್, ನೀನು ಇವರ ಜೊತೆಗಿದ್ದರೆ ನನಗೆ ನಿಶ್ಚಿಂತೆಯಾಗಿರುತ್ತೆ. ಇವರು ಹೇಗೆ ಅಂತ ನಿನಗೆ ಗೊತ್ತೇ ಇದೆ. ಉಷಾ ಇನ್ನೂ ಎಳೇ ಹುಡುಗಿ. ನೀನಿದ್ದರೆ ದೊಡ್ಡ ಆಸರೆಯಾ ಗಿರುತ್ತೆ."

ನವಲ್ ಗೊಂದಲದಲ್ಲಿ ಸಿಕ್ಕಿಬಿದ್ದ. ಈ ಸೂಚನೆ ಅವನ ಮುಂದೆ ಹಠಾತ್ತಾಗಿ ಬಂದಿತ್ತು. ಅದನ್ನು ಎದುರಿಸಲು ಅವನು ಸಿದ್ಧನಾಗಿರಲಿಲ್ಲ. "ಪಾಪಾ, ಈ

ವಿಷಯದಲ್ಲಿ ನಾನು ತಂದೆಯವರನ್ನ ಕೇಳಬೇಕಾಗುತ್ತೆ. ಅವರು ಒಪ್ಪಿಗೆ ಕೊಟ್ಟರೆ ನಾನು ಬರ್‍ತೀನಿ," ನವಲ್ ಮೆಲುದನಿಯಲ್ಲಿ ಹೇಳಿದ.

ಕಾಮತಾನಾಥನ ಹೆಂಡತಿ ಗಂಡನಿಗೆ ಹೇಳಿದಳು, "ಇಲ್ಲಿ ಕೇಳಿ, ನೀವು ನಾಳೇನೇ ಕಲೆಕ್ಟರ್ ಸಾಹೇಬರಿಗೆ ಕಾಗದ ಹಾಕಿಬಿಡಿ. ನಿಮ್ಮ ಮಾತಿಗೆ ಅವರು ಇಲ್ಲ ಅನ್ನೋಲ್ಲ, ನವಲ್ ಹೇಳೋದು ಸರಿ. ವಿಲಾಯಿತಿಗೆ ಹೋಗೋ ವಿಷಯ, ಅವನು ತಮ್ಮ ತಂದೇನ ಕೇಳಲೇಬೇಕಾಗುತ್ತೆ."

"ಕಾಗದ-ಗೀಗದ ಯಾಕೆ, ನಾಳೆ ಇಲ್ಲವೇ ನಾಡಿದ್ದು ನಾನೇ ಖುದ್ದಾಗಿ ಮಿರ್ಜಾ ಪುರಕ್ಕೆ ಹೋಗಿಬರ್‍ತೀನಿ. ಯಾವ ಮಹಾದೂರ ಇಲ್ಲಿಂದ! ಅಲ್ಲದೆ ಬಾಬು ಗಂಗಾ ಪ್ರಸಾದರಿಗೆ ಹಣದ ವ್ಯವಸ್ಥೆ ಮಾಡೋ ಅಗತ್ಯವೂ ಇಲ್ಲ. ನವಲ್ ನನ್ನ ಜೊತೆ ಬರ್‍ತಿ ದಾನೆ, ನಾನು ನನಗೆ, ಅವನಿಗೆ, ಉಷಳಿಗೆ ಅಂತ ಮೂರು ಪ್ಯಾಸೇಜ್ ಬುಕ್ ಮಾಡೇ ಬಿಡ್ತೀನಿ."

ನವಲನಿಗೆ ರಾಯ್‌ಬಹದ್ದೂರ್ ಕಾಮತಾನಾಥರ ಉಪಕಾರ ಪಡೆಯುವುದು ಸರಿಕಾಣಲಿಲ್ಲ. ಅವನು ಮತ್ತೆ ಹೇಳಿದ, "ಮೊದಲು ತಂದೆಯವರ ಒಪ್ಪಿಗೆ ತೊಗೋ ತೀನಿ, ಆಮೇಲೆ ನನಗೆ ಪ್ಯಾಸೇಜ್ ಬುಕ್ ಮಾಡಿಸೋರಂತೆ. ನೀವು ಬೇಕಾದರೆ ಅವರಿಗೆ ಕಾಗದ ಬರೀರಿ, ಇಲ್ಲವೇ ಹೋಗಿ ಖುದ್ದಾಗಿ ಕಂಡುಬನ್ನಿ."

"ಗಂಗಾಪ್ರಸಾದರ ಒಪ್ಪಿಗೆ ಸಿಕ್ಕಿದೆ ಅಂತಾನೆ ಇಟ್ಟುಕೋ," ಕಾಮತಾನಾಥರು ಆತ್ಮವಿಶ್ವಾಸದಿಂದ ಹೇಳಿದರು. "ನೀನು ನಾಳೆಯೇ ಉಷನ್ನೂ ಕರಕೊಂಡು ಹೋಗಿ ಸಿವಿಲ್‌ಲೈನ್ಸ್‌ನಲ್ಲಿರೋ ಡೇವಿಡ್‌ಸನ್ ಅಂಗಡೀಲಿ ಸೂಟು ಹೊಲಿಯೋಕ್ಕೆ ಹಾಕು. ಹಾಗೇ ಉಷಳ ಬಟ್ಟೆಗೂ ಆರ್ಡರ್ ಕೊಟ್ಟು ಬಾ."

"ಒಳ್ಳೇದು", ನವಲ್ ಉತ್ತರಿಸಿದ. ಆಮೇಲೆ ಉಷಳ ಕಡೆ ತಿರುಗಿ, "ಈ ಮಾತುಕತೇಲಿ ನಿನ್ನ ಪೇಪರ್ ಹೇಗಾಯ್ತು ಅಂತ ಕೇಳೋದೇ ಮರೀತು. ಏನು ಹೇಳಲಿ, ನನ್ನ ಪರೀಕ್ಷೆಯಿಂದಾಗಿ ನನಗೆ ಈ ಕಡೆ ಬರೋಕ್ಕೇ ಆಗಲಿಲ್ಲ."

ಉಷಾ ತುಸು ಮುನಿಸು ನಟಿಸುತ್ತ ಹೇಳಿದಳು, "ಬರದೇ ಹೋದರೆ ಏನಂತೆ, ನೀವು ನನಗೆ ಪಾಠ ಹೇಳಿಕೊಟ್ಟಿದ್ದಿರಲ್ಲ. ಈ ಸಲ ಸೆಕಂಡ್ ಡಿವಿಷನ್ ಸಿಗುತ್ತೆ. ಆದರೆ ಬಿ.ಎ. ನಲ್ಲಿ ನನಗೆ ಯಾರು ಪಾಠ ಹೇಳಿಕೊಡ್ತಾರೆ!" ಉಷಾ ಕಿಲಕಿಲನೆ ನಕ್ಕಳು, "ಸ್ವಿಟ್ಜರ್‌ಲ್ಯಾಂಡಿಗೇ ನನ್ನ ಪುಸ್ತಕಗಳನ್ನ ತೊಗೊಂಡು ಬಂದುಬಿಡ್ತೀನಿ. ಅಲ್ಲೇ ಪಾಠ ಹೇಳಿಕೊಡೋರಂತೆ!"

ನವಲ್ ನಕ್ಕ, "ಅಲ್ಲಿ ನಮ್ಮ ಓಡಾಟದಲ್ಲಿ ಪುರಸೊತ್ತು ಸಿಕ್ಕಹಾಗೇ ಇದೆ! ಒಳ್ಳೇದು, ನಾಳೆ ಸಂಜೆ ತಯಾರಾಗಿರು, ಉಷಾ. ಇನ್ನು ನಾನು ಹೊರಡ್ತೀನಿ. ಸಾಕಷ್ಟು ಹೊತ್ತಾಗಿದೆ." ನವಲ್ ಎದ್ದುನಿಂತ.

"ವಾಹ್ವ್ ! ಊಟಮಾಡದೆ ಹೇಗೆ ಹೋಗ್ತೀರಂತೆ ನೀವು!" ಉಷಾ ನವಲನ ಕೈ ಹಿಡಿದು ಕೂರಿಸಿದಳು.

ಕಾಮತಾನಾಥರ ಮನೆಯಲ್ಲಿ ಊಟ ಮುಗಿಸಿಕೊಂಡು ನವಲ್ ಮೋರ್ ಹಾಸ್ಟಲ್ ತಲಪುವಾಗ ಆದೇ ತಾನೆ ಹನ್ನೊಂದು ಹೊಡೆಯುತ್ತಿತ್ತು. ಅವನಿಗೆ ಅವತ್ತು ಸಂತೋಷದ ದಿವಸ. ಅವನು ತನ್ನ ಕೋಣೆಯ ಹತ್ತಿರ ಬಂದಾಗ ಪ್ರೇಮಶಂಕರನ ಕೋಣೆಯ ಬಾಗಿಲಿನ್ನೂ ತೆಗೆದಿದ್ದುದು ಕಾಣಿಸಿತು. ನವಲನನ್ನು ಕಂಡೊಡನೆಯೇ ಪ್ರೇಮಶಂಕರ ಎದ್ದುನಿಂತು, "ಇವತ್ತು ಸಂಜೆ ಮಜವಾಗಿ ಕಳೀತು ಅಂತ ಕಾಣುತ್ತೆ!"

ಪ್ರೇಮಶಂಕರನನ್ನು ನೋಡಿದರೆ ಅವನೂ ಸಂಜೆ ಹೊರಗೆ ಹೋಗಿಬಂದಂತೆ ಕಾಣುತ್ತಿತ್ತು. ನವಲ್ ಹೇಳಿದ, "ಹೌದು, ಆದರೆ ನಿನ್ನದೇನು ಹೇಳು. ನೀನೂ ಹೊರಗೆ ಹೋಗಿದ್ದೆ ಅಲ್ಲವೆ!"

ಪ್ರೇಮಶಂಕರ ಗಂಭೀರನಾದ, "ನವಲ್, ಸಂಜೆ ನಾನು ನಿನಗೆ ಸುಳ್ಳು ಹೇಳಿದೆ. ಸುಳ್ಳು ಹೇಳಿದೆ ಅನ್ನೋಕ್ಕಿಂತ ನಿಜ ಹೇಳಲಿಲ್ಲ ಅನ್ನೋದು ವಾಸಿ. ಇವತ್ತು ನೀನು ಆ ಇಂಗ್ಲೀಷಿರೋನ ವಿಷಯ ಕೇಳಿದ್ದೆಯಲ್ಲ, ಅವನನ್ನ ಕಂಡು ಬರೋಕ್ಕೆ ಹೋಗಿದ್ದೆ. ಆ ಜನ ಸ್ವಲ್ಪ ವಿಚಿತ್ರ ಜನ. ಅರ್ಥವೇ ಆಗದ ಹಾಗೆ ಮಾತನಾಡ್ತಾರೆ. ಆದರೆ ಅವರು ಹೇಳೋದು ತಪ್ಪೂ ಅಲ್ಲ. ಇಂಗ್ಲಿಷಿನೋರಾದರೂ ಅವರು ಬ್ರಿಟಿಷ್ ಸರಕಾರ, ಬ್ರಿಟಿಷ್ ಸಾಮ್ರಾಜ್ಯಗಳ ಘೋರಶತ್ರುಗಳು."

ನವಲನ ಕುತೂಹಲ ಕೆರಳಿತು, "ನಾನೂ ಅವರನ್ನ ನೋಡಬೇಕು ಅನಿಸುತ್ತೆ. ನನಗೆ ಅವರ ಪರಿಚಯ ಮಾಡಿಕೊಡು."

ಪ್ರೇಮಶಂಕರ ತಲೆ ಅಲ್ಲಾಡಿಸುತ್ತ ಹೇಳಿದ, "ಇಲ್ಲ, ನಿನ್ನನ್ನ ಅಪಾಯದಲ್ಲಿ ಸಿಕ್ಕಿಸೋಕ್ಕೆ ನಾನು ಇಷ್ಟಪಡೋಲ್ಲ. ಅದಕ್ಕೋಸ್ಕರವೇ ಸಂಜೆ ನಿನಗೆ ಸುಳ್ಳು ಹೇಳಿ ಹೋಗಿದ್ದೆ. ಆ ಜನ ಕಮ್ಯುನಿಸ್ಟರು. ಇಲ್ಲವೇ ಬ್ರಿಟಿಷ್ ಗೂಢಚಾರರು. ಇಬ್ಬರ ಸ್ನೇಹವೂ, ಕನಿಷ್ಠ ನಿನಗೆ, ಅಪಾಯಕಾರಿಯಾಗೋದು ಖಂಡಿತ."

ನವಲ್ ಪ್ರೇಮಶಂಕರನನ್ನು ದೃಷ್ಟಿಸಿ ನೋಡಿದ, "ಆದರೆ ನೀನು ಯಾಕೆ ಈ ಅಪಾಯಾನ ಮೈಮೇಲೆ ತೊಗೋತಿದಿ, ಪ್ರೇಮಶಂಕರ?"

"ಯಾಕೆ ಅಂದರೆ ನನ್ನ ಇಡೀ ಜೀವನ ಹೋರಾಟದ ಜೀವನವಾಗಿದೆ. ನಮ್ಮ ತಂದೆ ಯಾವಾಗ ಸತ್ತರೂ ಅಂತ ನೆನಪಿಲ್ಲ. ತಾಯಿ ನನ್ನನ್ನ ಓದಿಸಿದಳು. ನನ್ನನ್ನ ಓದಿಸೋಕ್ಕೆ ನಮ್ಮ ತಾಯಿ ಎಷ್ಟೊಂದು ಅಪಮಾನ, ಎಷ್ಟೊಂದು ಕಳಂಕ ಸಹಿಸಬೇಕಾಗಿ ಬಂತು ಅಂತ ನಿನಗೆ ಕಲ್ಪನೆ ಮಾಡೋಕ್ಕೂ ಆಗೋಲ್ಲ. ನಮ್ಮ ಚಿಕ್ಕಪ್ಪ ಎಷ್ಟೊಂದು ಕಿರುಕುಳ ಕೊಟ್ಟ. ನಮ್ಮ ತಾಯಿ ನನ್ನನ್ನ ಕರಕೊಂಡು ಮನೆಬಿಟ್ಟು ಬಂದಳು. ಅವಳು ಓದು-ಬರೆಹ ಕಲಿತಿದ್ದಳು. ಅಧ್ಯಾಪಕಿಯಾಗಿ ಕೆಲಸ ಮಾಡಿ ನನ್ನನ್ನ ಓದಿಸಿದಳು.

ನಾನು ಇಂಟರ್‌ಮೀಡಿಯಟ್‌ನಲ್ಲಿದ್ದಾಗ ಅವಳು ತೀರಿಕೊಂಡಳು. ಸಾಯುವಾಗ ಅವಳು ನನಗೆ ಎರಡು ಸಾವಿರ ರೂಪಾಯಿ ನಗದು ಹಣಕೊಟ್ಟಳು. ಒಂದೂವರೆ ಸಾವಿರ ರೂಪಾಯಿನಷ್ಟು ಒಡವೆ ಇತ್ತು. ಆವಾಗಿನಿಂದ ನಾನು ಹಾಸ್ಟಲಿನಲ್ಲಿದ್ದು ಕೊಂಡು ಓದತಾ ಇದೀನಿ. ನನಗೆ ಈಗ ಅನ್ನಿಸುತ್ತೆ, ಜಗತ್ತಿನಲ್ಲಿ ನನ್ನವರಾಗಿ ಯಾರೂ ಇಲ್ಲ ಅಂತ. ಮೂರೂವರೆ ಸಾವಿರ ರೂಪಾಯಿನಲ್ಲಿ ಈಗ ಒಂದು ಆರು ನೂರು ರೂಪಾಯಿ ಉಳಿದಿದೆ. ಅದೂ ಯಾವಾಗಲೋ ಮುಗಿದು ಹೋಗುತ್ತೆ."

ನವಲ್ ಹೇಳಿದ, "ಆದರೆ ನನ್ನ ಪ್ರಶ್ನೆಗೂ ನಿನ್ನ ಕತೆಗೂ ಏನೂ ಸಂಬಂಧ ಇಲ್ಲವಲ್ಲ."

"ಇದೆ ಅಂದರೆ ಇದೆ, ಇಲ್ಲ ಅಂದರೆ ಇಲ್ಲ. ನಾನು ಎಂ.ಎ. ಫಸ್ಟ್ ಡಿವಿಷನ್ನಿನಲ್ಲಿ ಪಾಸುಮಾಡಿದೆ ಅಂತ ನಿನಗೆ ಗೊತ್ತಿದೆ. ಎಷ್ಟೆಷ್ಟು ಕಡೆ ಅರ್ಜಿ ಹಾಕಿದೆನೋ ಕಾಣೆ, ಆದರೆ ನೌಕರಿ ಮಾತ್ರ ಎಲ್ಲೂ ಸಿಗಲಿಲ್ಲ. ಒಂದೆರಡು ಪ್ರೈವೇಟ್ ಸ್ಕೂಲಿನಲ್ಲಿ ನೌಕರಿ ಸಿಕ್ಕೇನೋ ಇತ್ತು, ಆದರೆ ಅವರ ಷರತ್ತು ಏನೂ ಅಂದರೆ ತೊಂಬತ್ತು ರೂಪಾಯಿ ಸಂಬಳ ಪಡೆದೆ ಅಂತ ರುಜು ಹಾಕಿಕೊಡಬೇಕು, ಆದರೆ ಅವರು ಕೊಡೋದು ಐವತ್ತು ರೂಪಾಯಿ. ಜೇಜಾರು ಬಂದು ಎಲ್‌ಎಲ್.ಬಿ. ಸೇರಿಕೊಂಡೆ. ಈ ವಕೀಲವೃತ್ತೀಲಿ ಸಹ ಭೀಕರ ಹೋರಾಟ ನಡಸಬೇಕಾಗುತ್ತೆ ಅಂತ ನನಗೆ ಗೊತ್ತಿದೆ. ಹೀಗೆ ಅಪಾಯದ ಸಂಗಡ ಆಟ ಆಡೋದರಲ್ಲಿ ನನಗೆ ಸ್ವಲ್ಪಸ್ವಲ್ಪವಾಗಿ ಮಜಾ ಬರೋಕ್ಕೆ ಷುರುವಾಗಿದೆ."

ನವಲ್ ಸ್ವಲ್ಪ ಹೊತ್ತು ಸುಮ್ಮನಿದ್ದ. ಆಮೇಲೆ ಒಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು ಹೇಳಿದ, "ನನಗೆ ಅರ್ಥವಾಗುತ್ತೆ, ಪ್ರೇಮಶಂಕರ. ಆದರೆ ನಾನು ಮತ್ತೆ ಹೇಳ್ತೀನಿ, ಕೇಳು. ನಿನಗೆ ಜೀವನದಲ್ಲಿ ಖಂಡಿತ ಸಫಲತೆ ಸಿಗುತ್ತೆ. ಹೀಗೆ ನಿರಾಶನಾಗಿ ಅಪಾಯದಲ್ಲಿ ಧುಮುಕೋದು ಸರಿಯಲ್ಲ. ಈ ಜನಗಳ ಜೊತೆ ಓಡಾಡೋದನ್ನ ನೀನು ನಿಲ್ಲಿಸಬೇಕು."

ಪ್ರೇಮಶಂಕರ ನಕ್ಕ, "ನಿನ್ನ ಸಲಹೆಗೆ ಧನ್ಯವಾದ. ಆದರೆ ನಾನು ಈಗಾಗಲೇ ಹೆಜ್ಜೆ ಇಟ್ಟಾಗಿದೆ . . . ಅರೆ ಹ್ಞಾ, ನಾನು ಮರೆತೇಬಿಟ್ಟೆ. ನಿಮ್ಮ ತಾತ ನಿನ್ನನ್ನ ಹುಡುಕಿ ಕೊಂಡು ಬಂದಿದ್ದರು, ಎರಡು ಸಲ. ಒಂಬತ್ತೂವರೆಗೆ ಒಮ್ಮೆ, ಮತ್ತೆ ಹತ್ತೂವರೆಗೆ. ಬಹಳ ಜರೂರಿ ಕೆಲಸವಿದೆ, ನೀನು ಬಂದ ತಕ್ಷಣ ಹೇಗಿದ್ದರೆ ಹಾಗೇನೇ ಮನೆಗೆ ಬಾ ಅನ್ನು, ಅಂತ ಹೇಳಿಹೋದರು."

ನವಲ್ ಗಡಿಯಾರ ನೋಡುತ್ತ ಹೇಳಿದ, "ಈಗಂತೂ ಬಹಳ ಹೊತ್ತಾಗಿದೆ. ನಾಳೆ ಬೆಳಗ್ಗೆ ಹೋಗಿ ನೋಡ್ತೀನಿ."

"ಇಲ್ಲ ಇಲ್ಲ, ಈಗಲೇ ಹೋಗಿ ಬಾ. ಬಂದ ತಕ್ಷಣ ಕಳಿಸು ಅಂತ ಒತ್ತಿ ಒತ್ತಿ ಹೇಳಿ, ಹೋಗಿದಾರೆ."

ನವಲನಿಗೆ ಚಿಂತೆಗಿಟ್ಟುಕೊಂಡಿತು. "ಏನು ಸಮಾಚಾರ? ಬಹಳ ಗಾಬರಿ ಯಾಗಿದ್ದರೆ? ಇನ್ನೇನಾದರೂ ಹೇಳಿದರೆ?"

"ಅವರೇನೂ ಹೇಳಲಿಲ್ಲ. ಆದರೆ ತುಂಬ ಚಿಂತೇಲಿದ್ದರು. ಹೋಗಿ ಏನು ವಿಷಯ ನೋಡಿ ಬಾ."

ನವಲ್ ತನ್ನ ಕೋಣೆಯ ಬಾಗಿಲು ತೆರೆಯಲಿಲ್ಲ. ಮೋರ್ ಹಾಸ್ಟಲಿನಿಂದ ನೇರ ವಾಗಿ ಮನೆಗೆ ಹೊರಟ. ಅವನ ಎದೆ ಡವಗುಟ್ಟುತ್ತಿತ್ತು. ಇದ್ದಕಿದ್ದಂತೆ ಅವನೊಳಗೆ ಯಾವುದೋ ಭಯ ತುಂಬಿಕೊಂಡಿತು.

ನವಲ್ ಮನೆ ತಲಪಿದಾಗ ಜ್ವಾಲಾಪ್ರಸಾದ ವರಾಂಡದಲ್ಲಿ ಖಿನ್ನನಾಗಿ ಯೋಚಿಸುತ್ತ ಕುಳಿತಿದ್ದ. ನವಲನನ್ನು ಕಂಡೊಡನೆಯೇ ಅವನು ಎದ್ದು ನಿಂತ.

"ಬಹಳ ಹೊತ್ತಿನಿಂದ ನಿನ್ನ ದಾರಿ ಕಾಯ್ತಿದೀನಿ, ನವಲ್. ನಮ್ಮಗಳ ಮೇಲೆ ದೊಡ್ಡ ಗಂಡಾಂತರ ಬಂದು ಹೇರಿಕೊಂಡಿದೆ!"

"ಎಲ್ಲ ಸೌಖ್ಯ ತಾನೆ?" ನವಲ್ ಕೇಳಿದ.

"ಅದೇ ನೋಡು, ಗಂಗನಿಗೆ ತುಂಬಾ ಕಾಹಿಲೆಯಾಗಿದೆ. ನಾಲ್ಕು ದಿನದ ಹಿಂದೆ ಇದ್ದಕ್ಕಿದ್ದ ಹಾಗೆ ರಕ್ತ ವಾಂತಿಯಾಯಿತು. ನೂರುಮೂರು ಡಿಗ್ರಿಯಷ್ಟು ಜ್ವರ ಏರಿತು. ಸಿವಿಲ್ ಸರ್ಜನ್ನರನ್ನ ಕರಸಿದೆವು. ಅವರು ಪರೀಕ್ಷೆ ಮಾಡಿ, ಶ್ವಾಸಕೋಶ ಎರಡೂ ಕೆಟ್ಟಿದೆ, ಎಕ್ಸ್‌ರೇ ತೆಗೀಬೇಕಾಗುತ್ತೆ, ಮಿರ್ಜಾಪುರದಲ್ಲಿ ಗುಣವಾಗೋದು ಸಾಧ್ಯವಿಲ್ಲ ಅಂದರು."

ನವಲನಿಗೆ ಗಾಬರಿಯಾಯಿತು. "ತಾತ, ನೀವು ಮೊದಲೇ ಏಕೆ ನನಗೆ ಸುದ್ದಿ ತಿಳಿಸಲಿಲ್ಲ? ಈಗೇನು ಮಾಡೋದು?"

"ನಿನ್ನ ಪರೀಕ್ಷೆ ನಡೀತಿತ್ತು; ಇವತ್ತು ತಾನೇ ಅದು ಮುಗಿದದ್ದು. ಡಾಕ್ಟರ್ ಶೇರ್‌ವುಡ್‌ರನ್ನ ಕರಕೊಂಡು ಹೋಗೋಕ್ಕೆ ಬಂದಿದೀನಿ. ಸಿವಿಲ್ ಸರ್ಜನರಿಂದ ಗುಣ ವಾಗೋ ರೋಗವಲ್ಲ ಅದು. ಇವತ್ತು ಡಾ॥ ಶೇರ್‌ವುಡ್‌ರನ್ನ ಕಂಡಿದ್ದೆ. ನಾಳೆ ಮಧ್ಯಾಹ್ನ ಹನ್ನೆರಡು ಗಂಟೆಗೆ ಅವರು ಹೊರಡ್ತಾರೆ. ನೀನೂ ತಯಾರಾಗು."

ನವಲ್‌ಕಿಶೋರ್ ಮೂಕನಂತೆ ಕುಳಿತುಕೊಂಡ. ಜ್ವಾಲಾಪ್ರಸಾದ ಹೇಳಿದ, "ನವಲ್ ನಮಗೆ ತುಂಬಾ ವಿಪತ್ತಿನ ಕಾಲ ಬಂದಿದೆ! ದೇವರ ಇಚ್ಛೆ ಏನಿದೆಯೋ ಗೊತ್ತಿಲ್ಲ. ಹ್ಯಾಗಿದ್ದದ್ದು ಹ್ಯಾಗಾಯಿತು?"

ಜ್ವಾಲಾಪ್ರಸಾದನ ಮುಖದ ಮೇಲಿನ ಸುಕ್ಕುಗಳು ಜೋಲು ಬೀಳುತ್ತಿದ್ದವು; ಕಣ್ಣಿನ ಕಾಂತಿ ಇಳಿಯುತ್ತಿತ್ತು. ಜ್ವಾಲಾಪ್ರಸಾದ ಒಮ್ಮೆಲೇ ತುಂಬ ಮುದುಕನಾದಂತೆ ಕಾಣುತ್ತಿದ್ದುದನ್ನು ನವಲ ಗಮನಿಸಿದ. ಅವನಂದ, "ಧೈರ್ಯ ತಂದುಕೊಳ್ಳಿ, ತಾತ. ನಾಳೆ ಡಾ॥ ಶೇರ್‌ವುಡ್ ಬಂದು ನೋಡಿದ ಮೇಲೆ ತಾನೆ ಕಾಹಿಲೆ ಏನು ಅಂತ ಗೊತ್ತಾ ಗೋದು."

ಜ್ವಾಲಾಪ್ರಸಾದ ನರಳಿಕೆಯ ಧ್ವನಿಯಲ್ಲಿ ಹೇಳಿದ, "ಎದೇನ ಕಲ್ಲು ಮಾಡಿ ಕೊಳ್ಳೋದು ಬಿಟ್ಟು ಬೇರೆ ಉಪಾಯವಿಲ್ಲ, ನವಲ್. ಹೋಗು, ನಾಳೆ ಬೆಳಗ್ಗೆ ಸಾಮಾನು

ತೊಗೊಂಡು ಬಂದುಬಿಡು. ಪ್ರಾಯಶಃ ಡಾ॥ ಶೇರ್‌ವುಡ್‌ರ ಮನೆಗೆ ನೀನೇ ಹೋಗ ಬೇಕಾಗಿ ಬರಬಹುದು. ನನ್ನಲ್ಲಿ ಅಷ್ಟು ಶಕ್ತಿಯೂ ಉಳಿದಿಲ್ಲ!"

ಡಾ॥ ಶೇರ್‌ವುಡ್‌ರನ್ನು ಕರೆದುಕೊಂಡು ನವಲ ಮತ್ತು ಜ್ವಾಲಾಪ್ರಸಾದರು ಮಿರ್ಜಾಪುರ ತಲಪಿದಾಗ ಎರಡು ಗಂಟೆಯಾಗಿತ್ತು. ವಿದ್ಯಾ ಗಂಗಾಪ್ರಸಾದನ ಕೋಣೆಯಲ್ಲಿ ಕುಳಿತಿದ್ದಳು, ಎದ್ದುಬಂದು ಇವರೆಲ್ಲರನ್ನೂ ಕೋಣೆಗೆ ಕರೆದುಕೊಂಡು ಹೋದಳು. ಗಂಗಾಪ್ರಸಾದ ತೆಪ್ಪಗೆ ಕಣ್ಣುಮುಚ್ಚಿ ಮಲಗಿದ್ದ. ಆದರೆ ಅವನ ಮುಖದಲ್ಲಿ ಅತೀವ ಯಾತನೆ ಕೆತ್ತಿದಂತಿತ್ತು. ಡಾ॥ ಶೇರ್‌ವುಡ್ ಗಂಗಾಪ್ರಸಾದನನ್ನು ಚೆನ್ನಾಗಿ ಪರೀಕ್ಷೆ ಮಾಡಿದರು. ಈ ನಡುವೆ ನವಲ್‌ಕಿಶೋರ ಮಿರ್ಜಾಪುರದ ಸಿವಿಲ್ ಸರ್ಜನ್ನರನ್ನೂ ಕರೆತಂದಿದ್ದ. ಇಬ್ಬರು ಡಾಕ್ಟರರೂ ತಮ್ಮ ನಡುವೆ ಆಲೋಚನೆ ನಡಸಿ ಜ್ವಾಲಾಪ್ರಸಾದನಿಗೆ ಹೇಳಿದರು, "ಇವರನ್ನ ಅಲಹಾಬಾದಿಗೆ ಕರಕೊಂಡು ಹೋಗಲೇಬೇಕಾಗುತ್ತೆ. ಮಿರ್ಜಾಪುರದಲ್ಲಿ ಎಕ್ಸ್-ರೇ ವ್ಯವಸ್ಥೆ ಸಹ ಇಲ್ಲ. ಅಲಹಾಬಾದಿನಲ್ಲಿ ಔಷಧೋಪಚಾರ ಸಾಧ್ಯ."

"ಆದರೆ ಸರಕಾರೀ ಅಪ್ಪಣೆಯಿಲ್ಲದೆ ಕಲೆಕ್ಟರ್ ಹೆಡ್‌ಕ್ವಾರ್ಟರ್ಸ್ ಬಿಡೋಹಾಗಿಲ್ಲವಲ್ಲ?" ಜ್ವಾಲಾಪ್ರಸಾದ ಹೇಳಿದ.

"ನೀವು ಡಾ॥ ಶೇರ್‌ವುಡ್ ಜೊತೆ ಅಲಹಾಬಾದಿಗೆ ಹೋಗಿ ಕಮಿಷನರನ್ನ ಕಂಡು ರಜಾಕ್ಕೆ ಅರ್ಜಿ ಕೊಡಿ. ನಾನು ಮೆಡಿಕಲ್ ಸರ್ಟಿಫಿಕೇಟ್ ಬರಕೊಡ್ತೀನಿ. ಇವರನ್ನ ಅಲಹಾಬಾದಿಗೆ ಸಾಗಿಸೋದಂತೂ ತುಂಬ ಅವಶ್ಯಕ," ಸಿವಿಲ್ ಸರ್ಜನ್ ಸಲಹೆ ಕೊಟ್ಟರು.

ಜ್ವಾಲಾಪ್ರಸಾದ ಡಾ॥ ಶೇರ್‌ವುಡ್‌ರ ಜೊತೆ ಅಲಹಾಬಾದಿಗೆ ಹೊರಟ.

ತಾತನನ್ನು ಡಾಕ್ಟರರ ಜೊತೆ ಕಳಿಸಿ, ನವಲ್‌ಕಿಶೋರ ತಂದೆಯ ಕೋಣೆಗೆ ಬಂದ. ಗಂಗಾಪ್ರಸಾದನ ಜ್ವರ ಸಾಕಷ್ಟು ಏರಿತ್ತು. ಅವನು ನವಲ್‌ಕಿಶೋರನನ್ನು ನೋಡಿದ ತಕ್ಷಣ ತನ್ನ ಬಳಿ ಬಂದು ಕುಳಿತುಕೊಳ್ಳುವಂತೆ ಸಂಜ್ಞೆಮಾಡಿದ. ಕೊಂಚ ಹೊತ್ತು ಎಡೆಬಿಡದೆ ಮಗನನ್ನೇ ದೃಷ್ಟಿಸಿ ನೋಡುತ್ತಿದ್ದು ಆಮೇಲೆ ಕ್ಷೀಣವಾದ ಧ್ವನಿಯಲ್ಲಿ "ಡಾಕ್ಟರ್ ಶೇರ್‌ವುಡ್ ಏನಂದರು?" ಎಂದು ಕೇಳಿದ.

ಗಂಗಾಪ್ರಸಾದನ ಧ್ವನಿ ನಡುಗುತ್ತಿರುವಂತೆ ತೋರಿತು. ಅವನ ಕಣ್ಣಿನಲ್ಲಿ ಒಂದು ಬಗೆಯ ಭಯ ಕಾಣುತ್ತಿತ್ತು. "ಅಲಹಾಬಾದಿನಲ್ಲೇ ಚಿಕಿತ್ಸೆಯಾಗಬೇಕು, ಗುಣವಾಗುತ್ತೆ ಅಂತ ಹೇಳ್ತಾರೆ," ನವಲ್ ಉತ್ತರ ಕೊಟ್ಟ.

"ಅಲಹಾಬಾದಿನಲ್ಲಿ ಗುಣವಾಗುತ್ತೆಯೆ? ನಿಜವೆ? ಗುಣವಾಗದಂಥ ಒಂದು ರೋಗ ಬೆನ್ನಿಗಂಟಿಕೊಂಡಿದೆ ಅಂತ ನನಗನ್ನಿಸುತ್ತೆ; ಆದರೆ ಡಾ॥ ಶೇರ್‌ವುಡ್ ಗುಣವಾಗುತ್ತೆ ಅಂತ ಹೇಳ್ತಾರೆ! ಏನು ಕಾಹಿಲೆ ಅಂದರು ಅವರು?" ಗಂಗಾಪ್ರಸಾದ ತನ್ನ ಸುತ್ತ ಹರಡಿದ್ದ ನಿರಾಶೆಯ ಅಂಧಕಾರದಿಂದ ಆಶೆಯ ಒಂದು ಕಿರಣವನ್ನು ಹುಡುಕಿ

ತೆಗೆಯಲು ಪ್ರಯತ್ನಿಸುತ್ತಿರುವವನಂತೆ ಹೇಳಿದ. ನವಲ್ ನೋಡಿದ, ಗಂಗಾಪ್ರಸಾದನ ಮುಖ ಬಿಳುಪುಗಟ್ಟಿತ್ತು, ಅವನ ಇಡೀ ವ್ಯಕ್ತಿತ್ವ ಒಮ್ಮೆಗೇ ಚೂರುಚೂರಾಗಿದ್ದಂತೆ ಕಂಡಿತು. ನವಲನಿಗೆ ಸುಳ್ಳು ಹೇಳದೆ ವಿಧಿಯಿರಲಿಲ್ಲ, "ಕಾಹಿಲೆಯ ಹೆಸರನ್ನ ಅವರು ಹೇಳಲಿಲ್ಲ. ಆದರೆ ಅಲಹಾಬಾದಿಗೆ ಹೋದ ಮೇಲೆ ಒಂದು ತಿಂಗಳೊಳಗೆ ಅವರ ಔಷಧಿಯಿಂದ ಗುಣವಾಗ್ತೀರಿ ಅಂತ ಹೇಳಿ ಹೋದರು. ತಾತ, ನಿಮ್ಮ ರಜಕ್ಕೆ ಅರ್ಜಿ ಹಾಕಿ ಬರೋಕ್ಕೆ ಹೋಗಿದಾರೆ."

ಗಂಗಾಪ್ರಸಾದ ನಿಟ್ಟುಸಿರುಬಿಟ್ಟ, "ನನ್ನ ರಜಕ್ಕೆ ಅರ್ಜಿ ಹಾಕಿಬರೋಕ್ಕೆ ಹೋಗಿದಾರೆ! ಅದು ಸರಿ, ನಾನು ರಜಾ ತೊಗೋಬೇಕಾಗಿದೆ, ಪ್ರಾಯಶಃ ಮುಂದೆ ಎಂದೆಂದಿಗೂ ರಜಾ ತೊಗೋಬೇಕಾಗಿ ಬರುತ್ತೇನೋ!"

ಮೂಲೆಯಲ್ಲಿ ಮೌನವಾಗಿ ನಿಂತು ಈ ಮಾತುಕತೆಯನ್ನು ಕೇಳುತ್ತಿದ್ದ ವಿದ್ಯಾ ಮುಂದೆ ಬಂದಳು. "ಕಾಹಿಲೆ ಬಿದ್ದಾಗಿನಿಂದ ಅಪ್ಪ ಹೀಗೇ ಮಾತಾಡ್ತಿದಾರೆ ಕಣಣ್ಣ! ನೀನಾದರೂ ಅವರಿಗೆ ಹೇಳು, ಹೀಗೆ ನಿರಾಶೆ ಪಟ್ಟುಕೊಳ್ಳೋದು ಸರಿಯಲ್ಲ ಅಂತ."

ಗಂಗಾಪ್ರಸಾದನ ಮುಖದ ಮೇಲೆ ದೈನ್ಯದಿಂದ ಕೂಡಿದ ಒಂದು ನಗೆ ಮೂಡಿತು, "ಕೇಳಿದೆಯಾ ನವಲ್, ಈ ವಿದ್ಯಾ ನನಗೇ ಬುದ್ಧಿ ಹೇಳ್ತಿದಾಳೆ, ಹದಿನಾರು ಹದಿನೇಳು ವರ್ಷದ ಹುಡುಗಿ!" ಎಂದು ವಿದ್ಯಳ ಕಡೆ ತಿರುಗಿ, "ಹೋಗು, ನಿಮ್ಮ ಅಮ್ಮನ್ನ ಇಲ್ಲಿ ಕಳಿಸು. ಈ ಹಗಲೂ ರಾತ್ರಿಯ ಸೇವೆ, ಈ ಸುಸ್ತು!" ಮತ್ತೆ ನವಲನ ಕಡೆ ನೋಡಿದ, "ನನಗೆ ನಿದ್ದೆ ಬರ್ತಾ ಇದೆ. ನೀವೆಲ್ಲಾ ಸ್ವಲ್ಪ ವಿಶ್ರಾಂತಿ ತೊಗೊಳ್ಳಿ. ಇನ್ನೊಂದಿಷ್ಟು ದಿನವಂತೂ ನೀವು ಸೇವೆ ಮಾಡಲೇಬೇಕಾಗುತ್ತೆ," ಗಂಗಾಪ್ರಸಾದ ಕಣ್ಣುಮುಚ್ಚಿದ.

ನವಲ್‌ಕಿಶೋರ, ವಿದ್ಯಾ ಕೋಣೆಯಿಂದ ಹೊರಬಂದರು. ವಿದ್ಯಾ ನವಲನಿಗಿಂತ ಎರಡು ವರ್ಷ ಚಿಕ್ಕವಳು—ಎತ್ತರವಾದ ನಿಲುವು, ದಷ್ಟಪುಷ್ಟವಾದ ಮೈಕಟ್ಟು, ಪಕ್ವವಾದ ಗೋದಿಯ ಮೈಬಣ್ಣ, ದೊಡ್ಡದೊಡ್ಡ ಕಣ್ಣುಗಳು. ಆ ಕಣ್ಣುಗಳಲ್ಲಿ ಒಂದು ಬಗೆಯ ದೃಢತೆಯಿಂದ ಕೂಡಿದ ಕಠೋರತೆ! ವಿದ್ಯಾ ಈ ವರ್ಷ ಕಾಶೀ ವಿಶ್ವವಿದ್ಯಾಲಯದ ಮೊದಲನೆ ವರ್ಷದ ಬಿ.ಎ. ಗೆ ಕೂತಿದ್ದಳು. ಸದ್ಯಃ ಪರೀಕ್ಷೆ ಮುಗಿಸಿ ಮಿರ್ಜಾಪುರಕ್ಕೆ ಬಂದಿದ್ದಳು. "ನಮ್ಮ ಮೈಮೇಲೆ ದೊಡ್ಡ ಗಂಡಾಂತರ ಬಂದಿದೆ, ಅಣ್ಣಾ," ವಿದ್ಯಾ ಹೇಳಿದಳು.

"ಕಾಣ್ತಿದೆ, ವಿದ್ಯಾ. ಆದರೆ ಈ ಗಂಡಾಂತರಾನ ನಾವು ಎದುರಿಸಲೇಬೇಕು."

ವಿದ್ಯಾ ಮೌನವಾಗಿ ನಿಂತು ಯೋಚಿಸುತ್ತಿದ್ದಳು. ಆಮೇಲೆ ಅಣ್ಣನ ಕಡೆ ನೋಡಿದಳು. ನವಲ್ ತೆಳ್ಳಗೆ ಎತ್ತರಕ್ಕಿದ್ದ. ಗಟ್ಟಿಮುಟ್ಟಾಗಿ ಆರೋಗ್ಯದಿಂದ ಕೂಡಿದ ಶರೀರ, ಮುಖದಮೇಲೆ ಆತ್ಮವಿಶ್ವಾಸದ ಕಾಂತಿ! ನವಲನನ್ನು ನೋಡಲು ಸುಂದರನೆಂದೇ ಹೇಳಬಹುದಾಗಿತ್ತು. ವಿದ್ಯಾ ಹೇಳಿದಳು, "ಅಣ್ಣಾ, ಅಪ್ಪನಾದ ಮೇಲೆ ನೀನೇ ನನ್ನ ಸರ್ವಸ್ವ. ನೀನು ಹೇಗೆ ಹೇಳ್ತೀಯೋ ಹಾಗೆ ಮಾಡ್ತೀನಿ. ಈ

ಗಂಡಾಂತರದ ಜೊತೆ ಹೋರಾಡಲೇಬೇಕು." ವಿದ್ಯಳ ಕಣ್ಣಿನಲ್ಲಿ ನೀರು ತುಂಬಿತು. "ಹೋಗಿ ಅಮ್ಮನ್ನ ಕಳಸ್ತೀನಿ ಅಪ್ಪನ ಹತ್ತಿರ!" ವಿದ್ಯಾ ಕಣ್ಣೀರನ್ನು ಒರಸಿಕೊಳ್ಳುತ್ತ ಹೊರಟುಹೋದಳು.

ಒಳಗೆ ಅಂಗಳದಲ್ಲಿ ನವಲ್‌ಕಿಶೋರನ ಅಜ್ಜಿ ಯಮುನಾ ಬಾಡಿ ಬಸವಳಿದು ಕುಳಿತಿದ್ದಳು. ನವಲ್ ಅಜ್ಜಿಯ ಹತ್ತಿರ ಬಂದು ಕುಳಿತುಕೊಂಡ. ಯಾರೋ ಕೊಳ ತೊಡಿಸಿದ್ದಾರೇನೋ ಎಂಬಂತೆ ಯಮುನಾ ನಿಶ್ಚೇಷ್ಟಳಾಗಿದ್ದಳು. ನವಲನನ್ನು ನೋಡಿಯೂ ನೋಡದಂತೆ ಸುಮ್ಮನಿದ್ದಳು. "ಅಜ್ಜೀ," ನವಲ್ ಕೂಗಿದ.

ಯಮುನಳ ನಿದ್ರೆ ಭಂಗವಾಯಿತು. "ಬಂದೆಯಾ, ನವಲ್? ಡಾಕ್ಟರ್ ಏನಂದರು?" ಯಮುನಾ ಕೇಳಿದಳು.

"ಅಪ್ಪನ್ನ ಅಲಹಾಬಾದಿಗೆ ಕರಕೊಂಡು ಬರೋಕ್ಕೆ ಹೇಳಿದಾರೆ. ಅಲ್ಲಿ ಚಿಕಿತ್ಸೆ ಮಾಡ್ತಾರೆ."

"ಗಂಗನ ಜೊತೆ ಈಗ ಯಾರಿದಾರೆ?"

"ಅಮ್ಮ ಇದಾಳೆ. ಅಪ್ಪನಿಗೆ ನಿದ್ರೆ ಬರ್ತಿತ್ತು ಅಂತ ನಮ್ಮನ್ನ ಕಳಿಸಿದರು."

"ನಾನೂ ಅಲ್ಲೇ ಅವನ ಹತ್ತಿರವೇ ಹೋಗ್ತೀನಿ," ನವಲನ ಜೊತೆ ಹೆಚ್ಚು ಮಾತ ನಾಡದೆ ಯಮುನಾ ಗಂಗಾಪ್ರಸಾದನ ಕೋಣೆಗೆ ಹೋದಳು. ಶರೀರದಲ್ಲಿ ಪ್ರಾಣವೇ ಇಲ್ಲವೇನೋ ಎಂಬಂತೆ ಅವಳ ಕಾಲುಗಳು ತೂರಾಡುತ್ತಿದ್ದವು.

ನವಲ್ ಅಲ್ಲಿಂದ ಖಿನ್ನನಾಗಿ ಹಿಂದಿರುಗಿ ಬಂದು ಹೊರಗೆ ವರಾಂಡದಲ್ಲಿ ಕುಳಿತು ಕೊಂಡ. ರಾತ್ರಿಯಾಗುತ್ತಿತ್ತು. ವರಾಂಡದಲ್ಲಿ ಲಾಟೀನು ಮಿನುಗುತ್ತಿತ್ತು. ನಾಲ್ಕೂ ಕಡೆ ಕತ್ತಲು ಹೆಪ್ಪುಹೆಪ್ಪಾಗಿ ಕವಿದಿತ್ತು. ನವಲ್ ಮೌನವಾಗಿ ಕುಳಿತು ಯೋಚಿಸು ತ್ತಿದ್ದ. ಭೂತ, ವರ್ತಮಾನ, ಭವಿಷ್ಯ—ಇವುಗಳೆಲ್ಲದರ ಸಂಬಂಧವೇನು? ಈಗ ನಡೆಯುತ್ತಿರುವುದರಲ್ಲಿ ಏನಾದರೂ ನಿಯಮವಿದೆಯೇ? ವಿದ್ಯಾ ಬಂದು ಅವನ ಹತ್ತಿರ ವಿದ್ದ ಕುರ್ಚಿಯ ಮೇಲೆ ಯಾವಾಗ ಕುಳಿತುಕೊಂಡಲೆಂಬುದೇ ಅವನಿಗೆ ತಿಳಿಯಲಿಲ್ಲ.

ವಿದ್ಯಳಿಗೆ ತಡೆಯಲಾಗಲಿಲ್ಲ. "ಅಣ್ಣಾ," ನವಲನನ್ನು ಕೂಗಿದಳು. ನವಲ್ ಬೆಚ್ಚಿಬಿದ್ದವನಂತೆ "ವಿದ್ಯಾ ನೀನು? ಅಪ್ಪನ ದೇಹಸ್ಥಿತಿ ಹೇಗಿದೆ? ಮಲಗಿದಾರೆಯೋ ಎದ್ದಿದ್ದಾರೆಯೋ?" ಎಂದು ಕೇಳಿದ.

"ಅವರಿಗೆ ನಿದ್ರೆ ಬರಬೇಕೆಲ್ಲಿ!" ವಿದ್ಯಾ ಹೇಳಿದಳು, "ಜ್ವರ ಏರಿದಾಗ ಬರೋ ಮೂರ್ಛೆಯೆಷ್ಟೋ ಅಷ್ಟೆ, ಅವರ ಕಣ್ಣು ತುಂಬಬೇಕಾದರೆ!"

"ಅಪ್ಪನ ಕೋಣೇಲಿ ಈಗ ಯಾರಿದಾರೆ?"

"ಅಜ್ಜಿ ಇದಾಳೆ. ಅಮ್ಮ ಅಡಿಗೆಯ ಏರ್ಪಾಡು ಮಾಡೋಕ್ಕೆ ಹೋಗಿದಾಳೆ."

"ಹಾಗಾದರೆ ಅಲ್ಲೇ ಹೋಗೋಣ, ನಡಿ. ಹೇಗಿದೆ ಸ್ಥಿತಿ ಅಂತ ವಿಚಾರಿಸೋಣ."

"ಸ್ಥಿತಿ ಹಾಗೇ ಇದೆ, ಕೂತುಕೋಣ್ಣ. ಪರೀಕ್ಷೆ ಮುಗೀತೆ?"

ನವಲನ ಮುಖದಲ್ಲಿ ಒಂದು ವ್ಯಂಗ್ಯದ ನಗೆ ಕಾಣಿಸಿಕೊಂಡಿತು, "ಪರೀಕ್ಷೆ ಈಗಿನ್ನೂ ಷುರುವಾಗ್ತಾ ಇದೆ, ವಿದ್ಯಾ. ಆ ಬಿ.ಎ. ಪರೀಕ್ಷೆಯಾದರೋ ಹುಡುಗಾಟವಾಗಿತ್ತು! ನೀನು ನಿನ್ನ ವಿಷಯ ಹೇಳಲಿಲ್ಲವಲ್ಲ?"

"ಹೇಳೋದೇನಿದೆ, ಅಣ್ಣಾ? ಫಸ್ಟ್ ಇಯರ್ ಬಿ.ಎ. ಯಿಂದ ಸೆಕೆಂಡ್ ಇಯರ್ ಬಿ.ಎ. ಗೆ ಬಂದಿದೀನಿ."

ಅಷ್ಟುಹೊತ್ತಿಗೆ ತಾಯಿ ರುಕ್ಮಿಣಿ ಬಂದು ಹೇಳಿದಳು, "ಮಗೂ ನವಲ್, ಇವರು ನಿನ್ನನ್ನ ಕರೀತಿದಾರೆ."

"ಬಂದೆ ಅಮ್ಮ." ನವಲ್ ಎದ್ದು ಗಂಗಾಪ್ರಸಾದನ ಕೋಣೆಗೆ ಹೋದ.

ಮಗನನ್ನು ನೋಡಿ ಗಂಗಾಪ್ರಸಾದ ಕೇಳಿದ, "ಮಗೂ ನವಲ್, ಚೆನ್ನಾಗಿದೀಯ? ನಿನ್ನ ಪೇಪರ್ ಹೇಗಿದ್ದವು?"

"ಚೆನ್ನಾಗಿದ್ದವು, ಅಪ್ಪ. ಈ ಸಲ ಫಸ್ಟ್ ಕ್ಲಾಸ್ ಬರೋ ಸಂಭವವಿದೆ," ನವಲ್ ಹೇಳಿದ.

ಗಂಗಾಪ್ರಸಾದ ಕೊಂಚ ಹೊತ್ತು ಎಡೆಬಿಡದೆ ಮಗನನ್ನೇ ನೋಡುತ್ತಿದ್ದು ಆಮೇಲೆ ಮೆಲ್ಲಗೆ ಹೇಳಿದ, "ಲಂಡನ್ನಿನಲ್ಲಿ ನೀನು ಇರೋದಕ್ಕೆ ಬೇಕಾದ ವ್ಯವಸ್ಥೆಯೆಲ್ಲಾ ಸರಿಯಾಗಿ ಆಗಿದೆ. ಸೆಪ್ಟೆಂಬರ್ ಮೊದಲನೆ ವಾರದಲ್ಲಿ ನೀನು ಅಲ್ಲಿಗೆ ಹೋಗಬೇಕಾಗುತ್ತೆ."

"ಅದಕ್ಕೆ ಇಷ್ಟು ಬೇಗ ಏನು ಅವಸರ? ಮೊದಲು ನಿಮ್ಮ ಕಾಹಿಲೆ ಗುಣವಾಗಲಿ. ಆಮೇಲೆ ಹೋಗ್ತೀನಿ."

"ನನ್ನ ಕಾಹಿಲೆ! ನವಲ್, ನನ್ನ ಕಾಹಿಲೆ ಏನೂ ಅಂತ ನನಗೆ ಗೊತ್ತು. ಇದು ರಾಜರೋಗ. ಇದು ಬಂದೋರು ಯಾರೂ ಹುಷಾರಾಗೋಲ್ಲ. ನನ್ನ ಕಾಹಿಲೆ ಗುಣವಾಗಲಿ ಅಂತ ಕಾಯೋದು ವ್ಯರ್ಥ. ನಾನು ಮುರಿದು ಬೀಳ್ತಿದೀನಿ. ನಾನು ಮುರಿದು ಬೀಳೋಕ್ಕೆ ಮುಂಚೆ ನೀನು ತಯಾರಾಗಬೇಕು ಅಂತ ಆಸೆಪಟ್ಟಿದ್ದೆ!"

ಗಂಗಾಪ್ರಸಾದನ ಮಾತಿನಲ್ಲಿ ಅಸಹಾಯತೆ ತುಂಬಿದ ಒಂದು ಯಾತನೆಯಿತ್ತು. ತಾನು ದಣಿಯೆಂಬ ಭಾವನೆ, ಆ ಅಧಿಕಾರದ ಅಹಂಕಾರ, ಇವೆಲ್ಲವೂ ಒಮ್ಮೆಲೇ ಅವನನ್ನು ತೊರೆದು ಹೋಗಿದ್ದವು. ನವಲ್ ಗಂಗಾಪ್ರಸಾದನ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಗಂಗಾಪ್ರಸಾದ ಸ್ವಲ್ಪ ಸುಧಾರಿಸಿಕೊಂಡು ಮತ್ತೆ ಹೇಳಿದ, "ನವಲ್, ನಾನು ಬದುಕಿನಲ್ಲಿ ಭಯಂಕರವಾಗಿ ಸೋಲುಕಂಡಿದೀನಿ. ಈ ಪದವಿ, ಈ ಉನ್ನತಿ, ಈ ಮರ್ಯಾದೆ—ಇವೆಲ್ಲಾ ಮೇಲಿನ ತೋರಿಕೆಗೆಷ್ಟೋ ಅಷ್ಟೆ. ಇವುಗಳಲ್ಲಿ ಏನೂ ಇಲ್ಲ. ಆದರೆ ಬೇರೆ ಯಾತರಲ್ಲಾದರೂ ಇದೆಯೋ ಅನ್ನೋದು ಸಹ ನನಗೆ ಇವತ್ತಿನ ತನಕ ಗೊತ್ತಾಗಿಲ್ಲ."

ಗಂಗಾಪ್ರಸಾದನಿಗೆ ಮಾತಾಡುವುದು ಕಷ್ಟವಾಗುತ್ತಿದೆಯೆಂಬುದು ನವಲನಿಗೆ ಸ್ಪಷ್ಟವಾಗಿತ್ತು. ಅವನಂದ, "ಅಪ್ಪಾ, ನೀವು ನಿದ್ರೆ ಮಾಡೋಕ್ಕೆ ಪ್ರಯತ್ನಿಸಿ. ಹೀಗೆ ಮಾತಾಡೋದರಿಂದ, ನಿರಾಶೆ ಪಡೋದರಿಂದ ಇದ್ದಿದ್ದೂ ಕಷ್ಟವಾಗುತ್ತೆ. ನಾನು

ಇಷ್ಟು ಭರವಸೆ ಕೊಡ್ತೀನಿ. ನನ್ನಿಂದಾಗಿ ನಿಮಗೆ ಯಾವ ರೀತೀಲೂ ಅಸಂತೋಷ ವಾಗೋಲ್ಲ. ಹೊತ್ತಾಯ್ತು, ತೊಗೊಳ್ಳಿ, ಈ ಔಷಧಿ ಕುಡೀರಿ."

"ಕೊಡು, ಔಷಧಿ ಕುಡಿಯೋದು ನನ್ನ ಧರ್ಮ. ಯಾಕೆ ಅಂದರೆ ಔಷಧಿಯಿಂದ ಏನೂ ಲಾಭವಾಗ್ತಿಲ್ಲ ಅಂತ ನನಗೆ ಗೊತ್ತಿದೆ. ಔಷಧಿ ಕುಡಿದಾದಮೇಲೆ ನಿದ್ರಿಸೋಕ್ಕೆ ಪ್ರಯತ್ನಿಸೋದೂ ನನ್ನ ಧರ್ಮ. ಯಾಕೆ ಅಂದರೆ ನಿದ್ರೆ ಬರೋಲ್ಲ ಅನ್ನೋದು ನನಗೆ ಗೊತ್ತಿದೆ. ನಿದ್ರೆ ಬಂದರೂ ಎಲ್ಲೋ ಸ್ವಲ್ಪ ಬರುತ್ತೆ, ಕೆಟ್ಟ ಕನಸಿನಿಂದ ತುಂಬಿರುತ್ತೆ."

ಗಂಗಾಪ್ರಸಾದನಿಗೆ ಔಷಧಿ ಕುಡಿಸಿ, ಆಹಾರ ಕೊಟ್ಟು ನವಲ್ ಕೋಣೆಯಿಂದ ಹೊರ ಬಿದ್ದಾಗ ರಾತ್ರಿ ಬಹಳ ಹೊತ್ತಾಗಿತ್ತು. ವಿಪರೀತ ಸೆಕೆ. ವಿದ್ಯಾ ವರಾಂಡದಲ್ಲಿ ಕುಳಿತು ಅಣ್ಣನ ನಿರೀಕ್ಷೆ ಮಾಡುತ್ತಿದ್ದಳು. ನವಲ ಬಂದದ್ದನ್ನು ಕಂಡು ಅವಳಂದಳು, "ನಡಿಯಣ್ಣ, ಊಟ ಮಾಡುವೆಯಂತೆ!"

"ಬಂದೆ," ಎಂದವನೇ ನವಲ ಕುಳಿತುಕೊಂಡ. ಅವನ ಸುತ್ತಲೂ ದಟ್ಟವಾದ ಮೌನ ಕವಿದಿತ್ತು. ಆಕಾಶದಲ್ಲಿ ಪಂಚಮಿಯ ಚಂದ್ರ ನಿಧಾನವಾಗಿ ಕೆಳಗಿಳಿಯುತ್ತಿದ್ದ, ಆಕ್ಷಣ ದೂರದಲ್ಲಿ ಒಂದು ಅರಳಿಮರದ ಮೇಲುತುದಿಯಲ್ಲಿದ್ದ. ನವಲ್ ವಿದ್ಯಳ ಕಡೆ ನೋಡಿದ. "ವಿದ್ಯಾ, ಆ ಚಂದ್ರನ್ನ ನೋಡಿದೆಯಾ?—ಎಷ್ಟು ನಿಸ್ತೇಜನಾಗಿ, ಕಾಂತಿರಹಿತನಾಗಿ, ಅಸಹಾಯನಾಗಿ ಕಾಣ್ತಿದಾನೆ! ನಿಧಾನವಾಗಿ ಆಕಾಶದಿಂದ ಕೆಳ ಗಿಳೀತಿದಾನೆ. ಅವನ ಪ್ರಕಾಶ ಎಷ್ಟು ಕ್ಷೀಣವಾಗಿದೆ?"

"ನೋಡ್ತಿದೀನಣ್ಣ," ವಿದ್ಯಾ ಹೇಳಿದಳು. "ಈ ಚಂದ್ರ ಮುಳುಗಲೇ ಬೇಕು. ಆದರೇನಂತೆ? ನಾಳೆ ಇದೇ ಚಂದ್ರ ಮತ್ತೆ ಹುಟ್ತಾನೆ. ಅವನ ಪ್ರಕಾಶ ಇವತ್ತಿಗಿಂತ ಉಜ್ವಲವಾಗಿರುತ್ತೆ; ಅದರಲ್ಲಿ ಹೆಚ್ಚು ಬೆಳಕಿರುತ್ತೆ."

ನವಲ್ ಒಂದು ನಿಟ್ಟುಸಿರು ಬಿಟ್ಟ. "ಹೌದು, ಆದರೆ ಅದೆಲ್ಲಾ ನಾಳೆ. ನನ್ನ ಮುಂದಿರೋ ಸವಾಲು ಇವತ್ತಿನದು, ಈ ಕ್ಷಣದ್ದು."

"ಅಣ್ಣ, ನಮ್ಮ ಇಡೀ ಜೀವನ ಇರೋದು ನಾಳಿನ ಆಸರೇಲಿ. ನಮಗೆ ನಾಳಿನ ಕಲ್ಪನೆ ಅನ್ನೋದನ್ನ ಮಾಡೋಕ್ಕಾಗದೆ ಹೋಗಿದ್ದರೆ ಇವತ್ತು ಅನ್ನೋದು ಅದೆಷ್ಟು ಭಯಂಕರವಾಗಿ, ವಿಕಾರವಾಗಿ ಇರ್ತಿತ್ತು!"

"ನೀನು ಹೇಳೋದು ಪ್ರಾಯಶಃ ಸರಿ, ವಿದ್ಯಾ!" ನವಲ್ ಮತ್ತೆ ಆಕಾಶದ ಕಡೆ ನೋಡಿದ. ಈಗ ಆ ಚಂದ್ರ ಅರಳಿಮರದ ಮೇಲಿನ ಕೊಂಬೆಗಳ ಅಂಚಿಗೆ ಬಂದಿದ್ದ. ನವಲ್ ಚಂದ್ರ ಇಳಿಯುವುದನ್ನೇ ನೋಡುತ್ತಿದ್ದ. ಚಂದ್ರ ನಿಧಾನವಾಗಿ, ಸಂಪೂರ್ಣ ವಾಗಿ ಆ ಅರಳಿಮರದ ಕೆಳಗೆ ಹೊರಟುಹೋದ. ಸ್ವಲ್ಪ ಹೊತ್ತು ಚಂದ್ರನ ಪ್ರಕಾಶ ಆ ಅರಳಿಮರವನ್ನು ತೂರಿಕೊಂಡು ಬರುತ್ತಿತ್ತು. ಆಮೇಲೆ ಅದೂ ಮಾಯವಾಯಿತು. ಈಗ ಅವನ ಮುಂದೆ ಘೋರವಾದ ಅಭೇದ್ಯ ಅಂಧಕಾರವಿತ್ತು. ನವಲ ಎದ್ದು ನಿಂತು "ನಡಿ, ವಿದ್ಯಾ" ಅಂದ.

# ಎರಡು

"ನವಲ್, ಜ್ಞಾನಚಿಕ್ಕಪ್ಪನ ಸಮಾಚಾರ ಏನಾದರೂ ಗೊತ್ತಾಯ್ತೆ? ವಿಲಾಯಿತಿಯಿಂದ ಯಾವಾಗ ವಾಪಸು ಬರ್‍ತಾನಂತೆ?" ಗಂಗಾಪ್ರಸಾದ ಕೇಳಿದ.

"ಮೇ ಕೊನೆಯ ವಾರದಲ್ಲಿ ಬರ್‍ತಾರೆ. ಯಾಕೆ, ಅವರಿಂದ ಏನಾದರೂ ಆಗೋದಿತ್ತೆ?" ನವಲ್ ಕೇಳಿದ.

"ಇಲ್ಲ, ಹಾಗೇ ಕೇಳಿದೆ, ಅಷ್ಟೆ. ಈ ಎರಡು ವರ್ಷದಿಂದ ಅವನನ್ನ ಕಾಣಲಿಲ್ಲ. ಬಿಟ್ಟು ಬಿಟ್ಟು ಅವನ ನೆನಪು ಬರ್‍ತಿರುತ್ತೆ."

ಈ ಹೊತ್ತಿಗೆ ಜ್ವಾಲಾಪ್ರಸಾದ ಡಾಕ್ಟರ್ ಶೇರ್‌ವುಡ್‌ರ ಸಂಗಡ ಕೋಣೆಯೊಳಗೆ ಬಂದ. ಡಾಕ್ಟರ್ ಶೇರ್‌ವುಡ್ ಗಂಗಾಪ್ರಸಾದನನ್ನು ಪರೀಕ್ಷೆ ಮಾಡಿ ಆಮೇಲೆ ಗಂಭೀರವಾಗಿ ಹೇಳಿದರು, "ವಿಶೇಷ ಗುಣಪೇನೂ ಕಾಣೋಲ್ಲ. ಸೆಕೆ ವಿಪರೀತವಾಗಿದೆ. ಇವರನ್ನ ಬೆಟ್ಟಕ್ಕೆ ಕರಕೊಂಡು ಹೋಗಬೇಕಾಗುತ್ತೆ."

"ನೀವು ಹೇಳೋದು ಸರಿ, ಡಾಕ್ಟರ್ ಸಾಹೇಬ್. ನನ್ನಿಂದ ಈ ಸೆಕೆ ಸಹಿಸೋಕ್ಕೆ ಆಗ್ತಿಲ್ಲ."

ಡಾಕ್ಟರ್ ಶೇರ್‌ವುಡ್ ಜ್ವಾಲಾಪ್ರಸಾದನ ಕಡೆ ನೋಡಿದರು, "ಭುವಾಲೀ ಸ್ಯಾನಿಟೋರಿಯಮ್ಮಿಗೆ ನಾನು ಬರೀತೀನಿ. ಅಲ್ಲೊಂದು ಕಾಟೇಜಿನ ವ್ಯವಸ್ಥೆ ಮಾಡೋಕ್ಕಾಗುತ್ತೆ. ಸೆಪ್ಟೆಂಬರ್ ತನಕ ಅಲ್ಲಿದ್ದರೆ ಇವರು ಪೂರ್ತಿಯಾಗಿ ಗುಣವಾಗ್ತಾರೆ."

ಜ್ವಾಲಾಪ್ರಸಾದ ಮೆತ್ತಗೆ ಹೇಳಿದ, "ಭುವಾಲೀ ಸ್ಯಾನಿಟೋರಿಯಮ್! ಅಲ್ಲಿಗೆ ಕರಕೊಂಡು ಹೋಗಬೇಕಾಗುತ್ತೆಯೆ ಇವನನ್ನ? ಬೇರೆ ಎಲ್ಲೂ ಏರ್ಪಾಡು ಮಾಡೋಕ್ಕಾಗೋಲ್ಲವೆ?"

"ಯಾವ ಬೆಟ್ಟದ ಮೇಲಾದರೂ ಆಗಬಹುದು. ಆದರೆ ಬಾಕಿ ಕಡೆ ಗುಣವಾಗೋದಿಲ್ಲ."

ಜ್ವಾಲಾಪ್ರಸಾದ–ಡಾಕ್ಟರ್ ಶೇರ್‌ವುಡ್‌ರು ಆಡುತ್ತಿದ್ದ ಮಾತನ್ನು ಗಂಗಾಪ್ರಸಾದ ಅದರಲ್ಲಿ ತನಗೆ ಆಸಕ್ತಿಯಿಲ್ಲವೋ ಎಂಬಂತೆ ಮೌನವಾಗಿ ಕೇಳುತ್ತಿದ್ದ. ಅವರು ಹೋದ ಮೇಲೆ ಗಂಗಾಪ್ರಸಾದ ನವಲನಿಗೆ ಹೇಳಿದ, "ನಿಮ್ಮ ತಾತನಿಗೆ ಹೇಳು, ಭುವಾಲಿಯೇ ಸರಿ ಅಂತ. ಅಲ್ಲಿ ಚಿಕಿತ್ಸೆಗೆ ಸರಿಯಾದ ವ್ಯವಸ್ಥೆಯಿದೆ. ಅಲ್ಲಿಗಾದರೆ ನೀವು ಯಾರೂ ನನ್ನ ಜೊತೆ ಬರಬೇಕಾದ ಅಗತ್ಯ ಇರೋಲ್ಲ."

"ಅಲ್ಲಿ ನೀವೊಬ್ಬರೇ ಒಂಟಿಯಾಗಿ ಹೇಗಿರೋಕ್ಕಾಗುತ್ತೆ, ಅಪ್ಪ? ಡಾಕ್ಟರ್ ಶೇರ್‌ವುಡ್ ಒಂದು ಕಾಟೇಜ್ ವ್ಯವಸ್ಥೆ ಮಾಡೋಕ್ಕೆ ಹೇಳಿದಾರೆ. ನಾನು ನಿಮ್ಮ ಜೊತೆ ಬರ್‍ತೀನಿ!"

ನೀನು ನನ್ನ ಜೊತೆ ಬರ್‍ತೀಯಾ? ಇಲ್ಲ ನವಲ್, ನೀನು ಇಂಗ್ಲಂಡಿಗೆ ಹೋಗ ಬೇಕು. ನಿಮ್ಮ ತಾತ ನನ್ನ ಜೊತೆ ಬರ್‍ತಾರೆ."

"ನಿಮಗೆ ಪೂರ್ಣವಾಗಿ ಗುಣವಾಗೋವರೆಗೂ ನಾನು ಇಂಗ್ಲಂಡಿಗೆ ಹೋಗೋಲ್ಲ, ಅಪ್ಪ," ನವಲ ದೃಢವಾಗಿ ಹೇಳಿದ.

ಗಂಗಾಪ್ರಸಾದ ಮಾತು ಮುಂದುವರಿಸಲಿಲ್ಲ. ಅವನು ಕಣ್ಣು ಮುಚ್ಚಿಕೊಂಡ. ನವಲ್ ಕೋಣೆಯಿಂದ ಹೊರಬಂದ. ಅವನ ಮನಸ್ಸು ತುಂಬ ಖಿನ್ನವಾಗಿತ್ತು. ಅಪ್ಪ ತನಗೆ ಅಂಟಿದ್ದುದು ರಾಜರೋಗವೆಂದು ಹೇಳಿಕೊಂಡಿದ್ದುದು ಸರಿಯಾಗಿಯೇ ಇತ್ತು. ಮಿರ್ಜಾಪುರದಿಂದ ಅಲಹಾಬಾದ್, ಅಲಹಾಬಾದಿನಿಂದ ಭುವಾಲಿ!

ಗಂಗಾಪ್ರಸಾದ ಅಲಹಾಬಾದಿಗೆ ಬಂದು ಸುಮಾರು ತಿಂಗಳಾಗಿತ್ತು. ಅವನ ಶರೀರ ಒಣಗಿ ಮೂಳೆಯ ಹಂದರವಷ್ಟೇ ಉಳಿದಿತ್ತು. ಅವನಿಗೆ ಈಗ ಎದ್ದು ಓಡಾಡು ವುದಕ್ಕೂ ಕಷ್ಟವಾಗುತ್ತಿತ್ತು. ಗಂಗಾಪ್ರಸಾದನ ಈ ಸ್ಥಿತಿಯನ್ನು ನೋಡಿದಾಗಲೆಲ್ಲಾ ನವಲನ ಎದೆ ಗೋಳಿಡುತ್ತಿತ್ತು. ಆದರೆ ಅವನಿಗೆ ಏನು ಮಾಡುವುದೂ ಶಕ್ಯವಿರಲಿಲ್ಲ. ಕೋಣೆ ಬಿಟ್ಟು ಹೊರಬಂದಾಗ ಬಿಸಿಲು ಜೋರಾಗಿ ಉರಿಯುತ್ತಿತ್ತು. ತಾತ ಬರುತ್ತಿರು ವುದನ್ನು ಅವನು ವರಾಂಡದಿಂದಲೇ ನೋಡಿ ನಿಂತ. ಜ್ವಾಲಾಪ್ರಸಾದ ಡಾಕ್ಟರ್ ಶೇರ್‌ವುಡ್ಡರನ್ನು ಮನೆ ಮುಟ್ಟಿಸಿ ಹಿಂದಿರುಗುತ್ತಿದ್ದ.

"ಏನು ತಾತ? ಏನು ಸಮಾಚಾರ?" ಜ್ವಾಲಾಪ್ರಸಾದನ ಮುಖದ ಮೇಲೆ ಚಿಂತೆಯ ಆಳವಾದ ಗೆರೆ ಮೂಡಿದ್ದುದನ್ನು ನೋಡಿ ನವಲ್ ಕೇಳಿದ.

ಜ್ವಾಲಾಪ್ರಸಾದ ಗದ್ಗದ ಧ್ವನಿಯಲ್ಲಿ ಹೇಳಿದ, "ಮಗೂ, ದೇವರಿಗೆ ಮೊರೆಯಿಡು! ಗಂಗಾ ಭುವಾಲೀಗೆ ಹೋಗಲೇಬೇಕಾಗುತ್ತೆ. ಅಲ್ಲಿಗೆ ಹೋಗೋರಲ್ಲಿ ಗುಣವಾಗಿ ಹಿಂದಿರಿಗೋರು ತೀರಾ ಕಡಿಮೆ ಮಂದಿ. ಡಾಕ್ಟರ್ ಸಹ ಹೆಚ್ಚು ಆಸೆ ಇಟ್ಟುಕೊಂಡಿಲ್ಲ."

"ಭುವಾಲೀಗೆ ಯಾವಾಗ ಹೋಗಬೇಕು, ತಾತ?" ನವಲ್ ಕೇಳಿದ.

"ಬರೋ ವಾರದ ಹೊತ್ತಿಗೆ ನಾವು ಹೊರಡಬೇಕು. ನಾಳೆ ನಾಡಿದ್ದರಲ್ಲಿ ಕಾಟೇಜ್ ಸಿದ್ಧವಾಗುತ್ತೆ. ಗಂಗಾ ನಿದ್ರೆ ಮಾಡ್ತಿದಾನೆಯೆ?"

"ಇಲ್ಲ, ಹಾಗೇ ಮಲಗಿದಾರೆ, ಬನ್ನಿ."

ಇವರಿಬ್ಬರೂ ಬಂದ ಕೂಡಲೇ ಗಂಗಾಪ್ರಸಾದ ಕಣ್ಣುತೆರೆದ. ಜ್ವಾಲಾಪ್ರಸಾದ ಹೇಳಿದ, "ಮುಂದಿನ ವಾರ ನೀನು ಭುವಾಲೀಗೆ ಹೊರಡಲೇಬೇಕು ಅಂತ ಡಾಕ್ಟರು ಹೇಳಿದಾರೆ. ಅವರು ಕಾಟೇಜಿಗೆ ಬರೆದಿದಾರೆ. ಮೇಲೆ ಒಂದು ತಂತೀನೂ ಕಳಿಸಿದಾರೆ."

"ಒಳ್ಳೇದು," ಗಂಗಾಪ್ರಸಾದ ಹೇಳಿದ. "ನನ್ನ ಜೊತೆ ನೀವು ಯಾರೂ ಬರೋ ಅಗತ್ಯವಿಲ್ಲ. ಭೀಖೂ ಇರ್‍ತಾನೆ ನನ್ನ ಜೊತೇಗೆ."

"ಅದು ಹ್ಯಾಗಾಗುತ್ತೆ, ಮಗು," ಜ್ವಾಲಾಪ್ರಸಾದ ಹೇಳಿದ. "ನಿನ್ನ ಊಟ-

ತಿಂಡಿ ವ್ಯವಸ್ಥೆ ಯಾರು ಮಾಡ್ತಾರೆ ಅಲ್ಲಿ. ನಿಮ್ಮ ತಾಯಿ, ನಾನು ಬರ್ತೀವಿ. ಸೊಸೆ ಇಲ್ಲಿ ಮಕ್ಕಳನ್ನ ನೋಡಿಕೊಂಡು ಇರ್ತಾಳೆ."

"ಇಲ್ಲ ತಾತ. ಅಜ್ಜಿ ಜೊತೆ ನಾನು ಹೋಗ್ತೀನಿ. ನೀವು ಇಲ್ಲೇ ಇರಬೇಕು. ಮನೆಯ ಯಜಮಾನಿಕೆ ನೋಡಿಕೊಳ್ಳೋರು ನೀವು."

ಗಂಗಾಪ್ರಸಾದ ನವಲನನ್ನು ನೋಡಿದ—ಆತ್ಮವಿಶ್ವಾಸದಿಂದ ತುಂಬಿದ ತನ್ನ ಸಮರ್ಥ ಮಗ, ಭವಿಷ್ಯದ ಪ್ರತೀಕ! ಗಂಗಾಪ್ರಸಾದ ನಗಲು ಪ್ರಯತ್ನಿಸುತ್ತ ತಂದೆಗೆ ಹೇಳಿದ, "ನವಲ್ ಹೇಳೋದು ಸರಿ. ನನ್ನ ಜೊತೇಗೆ ಇವನು ಬರೋದೇ ಸರಿ. ಜುಲೈ ಹೊತ್ತಿಗೆ ನೀವು ಬರೋರಂತೆ. ಆಗ ನವಲ್ ಅಲ್ಲಿಂದ ಹಿಂದಿರುಗಿ ತನ್ನ ಓದು-ಬರೆಹದ ವ್ಯವಸ್ಥೆ ಮಾಡಿಕೋತಾನೆ."

ಜ್ವಾಲಾಪ್ರಸಾದ ನಿರುತ್ತರನಾದ. ಆ ಸಾಂಕ್ರಾಮಿಕ ರೋಗದ ಸ್ಯಾನಿಟೋರಿಯಮ್ಮಿನಲ್ಲಿ ನವಲ್ ಹೋಗಿ ಇರುವುದು ಅವನಿಗೆ ಇಷ್ಟವಿರಲಿಲ್ಲ. ಆದರೆ ಅವನಿಗೆ ಹಾಗೆ ಹೇಳುವ ಧೈರ್ಯವಾಗಲಿಲ್ಲ. ತನ್ನ ಮಗನೇ ಆ ಭಯಂಕರ ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿದ್ದನಲ್ಲವೇ! ಹೇಳುವುದಾದರೆ ಯಾರಿಗೆ ಹೇಳುವುದು! ಏನೆಂದು ಹೇಳುವುದು! ಜ್ವಾಲಾಪ್ರಸಾದ ಮಾತಾಡದೆ ಖಿನ್ನನಾಗಿ ಹೊರಬಂದ. ಅವನು ಹೋದ ಮೇಲೆ ಗಂಗಾಪ್ರಸಾದ ಮಗನಿಗೆ ಹೇಳಿದ. "ನವಲ್, ಭುವಾಲೀಗೆ ಹೋಗೋ ಸಿದ್ಧತೆ ಮಾಡಿಕೊ! ಇನ್ನು ಇಲ್ಲಿಯ ಸೆಕೇನ ನನ್ನಿಂದ ಸಹಿಸೋಕ್ಕೆ ಆಗೋಲ್ಲ. ಸಾಯೋದೇ ನಿಜವಾದರೆ ಸುಖವಾಗಿ ಯಾಕೆ ಸಾಯಬಾರದು!"

"ಹಾಗೆ ಮಾತಾಡಬೇಡಿ, ಅಪ್ಪ. ನೀವು ಅಲ್ಲಿಗೆ ಹೋದ ಮೇಲೆ ಗುಣವಾಗ್ತೀರಿ. ಇಷ್ಟೊಂದು ಯಾಕೆ ನಿರಾಶರಾಗ್ತೀರಿ ನೀವು?"

ಗಂಗಾಪ್ರಸಾದ ಹೇಳಿದ, "ನಿರಾಶೆ ಅಂತಲ್ಲ, ಜಗತ್ತು ನಿಂತಿರೋದೇ ಆಸೆಯ ಮೇಲೆ. ಹಾಗೇ ಹೇಳಿದೆ ಅಷ್ಟೆ."

ಮಾರನೆಯ ದಿನ ಗಂಗಾಪ್ರಸಾದ ಭುವಾಲಿಯಲ್ಲಿ ಇಳಿದುಕೊಳ್ಳುವ ಹಾಗೂ ಅಲ್ಲಿ ಅವನ ಚಿಕಿತ್ಸೆಯ ಏರ್ಪಾಡಾಯಿತು. ಅವತ್ತು ಬೆಳಗಿನಿಂದಲೇ ಬಿಸಿಗಾಳಿ ಹೊಡೆಯುತ್ತಿತ್ತು. ಗಂಗಾಪ್ರಸಾದನ ತಳಮಳ ಹೆಚ್ಚಾಗಿತ್ತು. "ಸೋಮವಾರಕ್ಕೆ ಬರೇಲಿಗೆ ಒಂದು ಸೆಕೆಂಡ್ ಕ್ಲಾಸ್ ಕಂಪಾರ್ಟ್‌ಮೆಂಟ್ ರಿಸರ್ವ್ ಮಾಡಿಸು. ಬರೇಲಿಯಿಂದ ಕಾಠ್‌ಗೋದಾಮಿನವರೆಗಿನ ರಿಸರ್ವೇಷನ್ನಿಗೆ ತಂತಿಕೊಡು. ಸಾಯಂಕಾಲ ಐದಾರು ಗಂಟೆ ಹೊತ್ತಿಗೆ ಸ್ಟೇಷನ್ನಿಗೆ ಹೋಗಿ ಈ ಕೆಲಸ ಮಾಡಿಬಿಡು. ಇಲ್ಲಿ ಇನ್ನು ಹೆಚ್ಚು ದಿನ ಇರೋದರಿಂದ ಪ್ರಯೋಜನವಿಲ್ಲ." ಗಂಗಾಪ್ರಸಾದ ನವಲನಿಗೆ ಹೇಳಿದ.

ಸಂಜೆ ನವಲ್ ಸ್ಟೇಷನ್ನಿಗೆ ಹೋದ. ರಿಸರ್ವೇಷನ್ ಮುಗಿಸಿ ಸ್ಟೇಷನ್ ಬಿಡುವಾಗ ಅವನ ಮನಸ್ಸು ಸ್ವಲ್ಪ ಹಗುರವಾಗಿತ್ತು. ಅವನು ಸೈಕಲನ್ನು ಅನಾಯಾಸವಾಗಿ ರಾಯ್‌ಬಹದ್ದೂರ್ ಕಾಮತಾನಾಥರ ಮನೆಯ ಕಡೆ ತಿರುಗಿಸಿದ.

ರಾಯ್‌ಬಹದ್ದೂರ್ ಕಾಮತಾನಾಥರು ಒಳಗಿನ ತೋಟದಲ್ಲಿ ಒಂಟಿಯಾಗಿ ಕುಳಿತು ಏನನ್ನೋ ಓದುತ್ತಿದ್ದರು. ನವಲನನ್ನು ಕಂಡೊಡನೆಯೇ ಅವರಂದರು, "ಅರೆ ನವಲ್, ನೀನು! ಬಹಳ ದಿನದ ಮೇಲೆ ಮುಖ ತೋರಿಸ್ತಿದೀಯಲ್ಲ. ನಿಮ್ಮ ತಂದೆಯ ದೇಹಸ್ಥಿತಿ ಹೇಗಿದೆ?"

"ಡಾಕ್ಟರು ಅವರಿಗೆ ಭುವಾಲೀಗೆ ಹೋಗಿ ಅಂತ ಸಲಹೆ ಕೊಟ್ಟಿದಾರೆ. ಇಲ್ಲಿ ಅವರ ಆರೋಗ್ಯ ಅಂಥ ವಿಶೇಷವಾಗಿ ಏನೂ ಸುಧಾರಿಸಲಿಲ್ಲ."

"ಏನು ಸುಧಾರಿಸುತ್ತೆ, ಮಣ್ಣು! ನೋಡ್ತಿದೀಯಲ್ಲ, ಬೇಸಿಗೆ ಹೇಗೆ ಹೊಡೀತಿದೆ ಅಂತ! ಮೇ ಆರಕ್ಕೆ ಜಹಜಿನಲ್ಲಿ ಜಾಗ ಸಿಕ್ಕಿದೆ. ನಾವು ಇಲ್ಲಿಂದ ಮೇ ಮೂರಕ್ಕೆ ಬೊಂಬಾಯಿಗೆ ಹೊರಡ್ತೀವಿ. ಇವತ್ತು ಏಪ್ರಿಲ್ ಇಪ್ಪತ್ತೆರಡು. ನೀನು ಮೇ ಮೂರಕ್ಕೆ ಇಲ್ಲಿಂದ ಹೊರಡೋಕ್ಕೆ ತಯಾರಿ ಮಾಡಿಕೊ! ಮೂರು ಬರ್ತ್ ಬುಕ್ ಆಗಿದೆ—ನನಗೆ, ಉಷಳಿಗೆ, ನಿನಗೆ."

"ನಾನು ನಿಮ್ಮಗಳ ಜೊತೆ ಬರೋಕ್ಕಾಗೋಲ್ಲ. ಸೋಮವಾರ ನಾನು ತಂದೆಯವರ ಜೊತೆ ಭುವಾಲೀಗೆ ಹೋಗ್ತಿದೀನಿ."

"ನೀನು ಭುವಾಲೀಗೆ ಹೋಗ್ತಿದೀಯಾ? ಗಂಗಾ ನಿನ್ನನ್ನ ತನ್ನ ಜೊತೆ ಭುವಾಲೀಗೆ ಹೇಗೆ ಕರಕೊಂಡು ಹೋಗ್ತಿದಾನೆ?" ರಾಯ್‌ಬಹದ್ದೂರ್ ಕಾಮತಾನಾಥರು ಆಶ್ಚರ್ಯದಿಂದ ಕೇಳಿದರು. "ಬುದ್ಧಿಯಿಲ್ಲದ ಕೆಲಸ! ಇಲ್ಲ, ನೀನು ನನ್ನ ಜೊತೆ ಸ್ವಿಟ್ಜರ್‌ಲ್ಯಾಂಡಿಗೆ ಬರ್ತಿ. ಗಂಗನ ಜೊತೆ ಬಾಬು ಜ್ವಾಲಾಪ್ರಸಾದ್ ಹೋಗಲಿ."

ಈ ಹೊತ್ತಿಗೆ ಉಷಾ ಒಳಗಿನಿಂದ ಬಂದಳು. ನವಲನನ್ನು ಕಂಡೊಡನೆಯೇ ಅವಳು ಹೇಳಿದಳು, "ಬಂದಿರಾ, ನವಲ್‌ಬಾಬು! ಪಾಪನಿಗೆ ನಿನ್ನೆ ತಾನೇ ಬೊಂಬಾಯಿಂದ ಕಾಗದ ಬಂತು. ನಾವು ಮೇ ಆರಕ್ಕೆ ಜಹಜು ಹತ್ತಬೇಕು. ಮೇ ಮೂರಕ್ಕೆ ಇಲ್ಲಿಂದ ಬೊಂಬಾಯಿಗೆ ಹೊರಡಬೇಕು."

ನವಲ್ ಖಿನ್ನನಾಗಿ ಹೇಳಿದ, "ಆದರೆ ನಾನು ನಿಮ್ಮ ಜೊತೆ ಬರೋಕ್ಕಾಗೋಲ್ಲ, ಉಷಾ. ತಂದೆಯವರ ಕಾಹಿಲೆಯ ಸ್ಥಿತಿ ಪೂರ್ತಿಯಾಗಿ ಬದಲಾಗಿದೆ. ಡಾಕ್ಟರು ಅವರಿಗೆ ಭುವಾಲೀಗೆ ಹೋಗಬೇಕು ಅಂತ ಹೇಳಿದಾರೆ. ನಾನೂ ಅವರ ಜೊತೆ ಭುವಾಲೀಗೆ ಹೊರಟಿದೀನಿ."

ಕಾಮತಾನಾಥರು ಮತ್ತೆ ಬಾಯಿ ಹಾಕಿದರು, "ಏನೇ ಆಗಲಿ, ನೀನು ಕ್ಷಯರೋಗದ ಕೀಟಾಣುಗಳಿಂದ ತುಂಬಿರೋ ಆ ಭುವಾಲೀ ಸ್ಯಾನಿಟೋರಿಯಮ್ಮಿಗೆ ಹೋಗೋದು ಸಾಧ್ಯವಿಲ್ಲ. ನಿನ್ನನ್ನ ಗಂಗಾ ತನ್ನ ಜೊತೆ ಹೇಗೆ ಬಾ ಅಂತಿದಾನೆ ಅಂತ ಆಶ್ಚರ್ಯವಾಗ್ತಿದೆ! ಅಲ್ಲದೆ ನೀನು ಇಂಗ್ಲಂಡಿನಲ್ಲಿ ಐ.ಸಿ.ಎಸ್ ಗೆ ಓದಬೇಕಾಗಿದೆ, ಪರೀಕ್ಷೆಗೆ ಕೂಡಬೇಕಾಗಿದೆ."

"ಅದಕ್ಕಿನ್ನೂ ತುಂಬಾ ಸಮಯವಿದೆ," ನವಲಕಿಶೋರ ಹೇಳಿದ. "ಮೇ-ಜೂನ್ ಎರಡು ತಿಂಗಳು ತಂದೆಯವರ ಜೊತೆ ಇರ್ತೀನಿ. ಆಮೇಲೆ ಅಜ್ಜ ಅಲ್ಲಿ ಬರ್ತಾರೆ."

ಈಗ ಉಷಾ ನವಲನಿಗೆ ಸಮಜಾಯಿಷಿ ಹೇಳಲು ಪ್ರಯತ್ನಿಸಿದಳು, "ನೀವು ಬರ್ತೀರಿ ಅಂತ ಅದೆಷ್ಟು ಆಸೆ ಇಟ್ಟುಕೊಂಡಿದ್ದೆ. ಕಷ್ಟ ಎಲ್ಲಾ ರೀತೀಲೂ ಬರ್ತಾನೇ ಇರುತ್ತೆ. ಅದರಲ್ಲಿ ನಮ್ಮನ್ನ ನಾವು ಕಳಕೊಳ್ಳೋದೇಕೆ ಅಂತ ನನಗೆ ಅರ್ಥವಾಗೋಲ್ಲ. ನೀವು ಇಲ್ಲಿರಲಿ, ವಿಲಾಯಿತಿಗೆ ಹೋಗಲಿ, ಅದರಿಂದ ತಂದೆಯವರ ಕಾಹಿಲೆ ಮೇಲೆ ಯಾವ ಪ್ರಭಾವವೂ ಆಗೋಲ್ಲ. ನೀವು ನಮ್ಮ ಜೊತೆ ಹೊರಡದೇ ಇದ್ದರೆ ನೀವು ಇಂಗ್ಲಂಡಿಗೆ ಹೋಗೋದೇ ನಿಂತುಹೋಗಬಹುದು."

ನವಲ್ ಉಷಳನ್ನು ನೋಡಿದ. ಅವಳ ಮುಖದ ಮೇಲೆ ಯಾವ ರೀತಿಯ ಭಾವನೆಯೂ ಇರಲಿಲ್ಲ; ನವಲನಿಗೆ ಬಂದಿದ್ದ ವಿಪತ್ತಿನ ಬಗೆಗೆ ಯಾವ ಬಗೆಯ ಸಹಾನುಭೂತಿಯೂ ಇರಲಿಲ್ಲ. ನವಲನ ಮನಸ್ಸು ವಿಲಿವಿಲಿ ಒದ್ದಾಡಿತು. ಅವನಂದ, "ಹೌದು, ಉಷಾರಾಣಿ. ನಾನು ಹೋಗೋದು ನಿಂತುಹೋಗೋ ಸಂಭವವೇ ಹೆಚ್ಚು ಅತ ನನಗೆ ಗೊತ್ತಿದೆ. ಆದರೆ ತಂದೆಯ ಕಾಹಿಲೆಯ ಸ್ಥಿತೀಲಿ ನಾನು ಹೇಗೆ ಹೊರಡಲಿ! ಈ ಹೊತ್ತಿನಲ್ಲಿ ನಾನು ಅವರ ಜೊತೆ ಇಲ್ಲದೆ ಹೋದರೆ ಅವರಿಗೆ ಎಷ್ಟು ಕಷ್ಟವಾಗುತ್ತೆ ಅನ್ನೋದನ್ನ ಸ್ವಲ್ಪ ಯೋಚಿಸು. ನಾವು ಮನುಷ್ಯರು ನಮ್ಮ ಭಾವನೇನ ಬಿಟ್ಟು ಹೇಗೆ ಮೇಲೆ ಏರೋಕ್ಕೆ ಆಗುತ್ತೆ."

ರಾಯ್‌ಬಹದ್ದೂರ್ ಕಾಮತಾನಾಥ್ ಉತ್ತರ ಕೊಟ್ಟರು, "ಹೇಳ್ತೀನಿ ಕೇಳು. ಈ ಭಾವನೆಯೇ ನಿನ್ನನ್ನ ನಷ್ಟಗೊಳಿಸಿಬಿಡುತ್ತೆ. ಬಾಬು ಜ್ವಾಲಾಪ್ರಸಾದ್ ಇಲ್ಲವೇ ಗಂಗಾಪ್ರಸಾದರು ನಿನ್ನನ್ನ ಭುವಾಲೀಗೆ ಬಾ ಅಂತ ಕರೆದಿರಲಾರರು. ಅವರು ಬೇಡ ಅಂತಾನೇ ಅಂದಿರಬೇಕು. ನಾನು ಹೇಳ್ತಿರೋದು ತಪ್ಪಲ್ಲ ತಾನೆ?"

"ಅಜ್ಜನಿಗೆ ನಾನು ಹೋಗೋದು ಇಷ್ಟವಿಲ್ಲ. ಆದರೆ ಅಪ್ಪ ಬೇಡ ಅನ್ನಲಿಲ್ಲ."

ಕಹಿ ತುಂಬಿದ ಧ್ವನಿಯಲ್ಲಿ ಕಾಮತಾನಾಥ್ ಹೇಳಿದರು, "ನಿಮ್ಮ ಅಪ್ಪನ ಬುದ್ಧಿ ಕೆಟ್ಟಿದೆ. ಅವರ ಕಾಹಿಲೆ ಅವರ ವಿವೇಕಾನ ಹಾಳುಮಾಡಿದೆ. ನಾನು ಬಂದು ಅವರ ಜೊತೆ ಮಾತಾಡ್ತೀನಿ. ನೀನು ನಮ್ಮ ಜೊತೆ ಸ್ವಿಟ್ಜರ್‌ಲ್ಯಾಂಡಿಗೆ ಬಾ ಇಲ್ಲವೇ ಬಿಡು. ಆದರೆ ನೀನು ಭುವಾಲೀಗೆ ಹೋಗೋದಂತೂ ಸರಿಯಲ್ಲ. ಕನಿಷ್ಠ ಇದನ್ನ ತಡೆಯೋಕ್ಕಾದರೂ ನಾನು ಖಂಡಿತ ಪ್ರಯತ್ನಿಸ್ತೀನಿ. ಇದು ಅಂಟುರೋಗ. ನೀನು ನಿಮ್ಮ ತಂದೆಯಿಂದ ದೂರ ಇರಬೇಕು."

ರಾಯ್‌ಬಹದ್ದೂರ್ ಕಾಮತಾನಾಥರ ಈ ಮಾತನ್ನು ಕೇಳಿ ನವಲನಿಗೆ ಮರ್ಮಾಘಾತವಾಯಿತು. ತಾನು ತಂದೆಯಿಂದ ದೂರ ಇರಲೇಬೇಕು; ಯಾಕೆಂದರೆ ತಂದೆಗೆ ಬಂದಿರುವುದು ಅಂಟುರೋಗ. ಮಗನೇ ತಂದೆಯ ಜೊತೆಗಿರಲು ನಿರಾಕರಿಸಿದರೆ, ತಂದೆಗೆ ಯಾರು ಜೊತೆ? ಇದೇ ಪ್ರಪಂಚದ ರೀತಿಯೆ? ಇದೇ ಪ್ರಾಪಂಚಿಕ ವಿವೇಕವೆ? ಅವನು ಹೇಳಿದ, "ಪಾಪಾ, ನಾನು ತಂದೆಯಿಂದ ದೂರ ಇರಬೇಕು ಅಂತ ತಾನೆ ನೀವು ಹೇಳೋದು! ಈ ಘೋರಪಾಪ ಮಾಡು ಅಂತ ನೀವು ನನಗೆ

ಸಲಹೆ ಕೊಡ್ತಿದೀರಾ? ಹಾಗಾದಲ್ಲಿ ಪ್ರಪಂಚದಲ್ಲಿ ಇವರು ನಮ್ಮವರು, ಅವರು ಪರರು ಅನ್ನೋ ವ್ಯತ್ಯಾಸವೇನೂ ಉಳಿಯೋದಿಲ್ಲ. ಪ್ರಪಂಚ ಪ್ರಪಂಚವಾಗಿರೋ ಬದಲು ನರಕವಾಗಿಬಿಡುತ್ತೆ. ಇಲ್ಲ, ಅದು ಸಾಧ್ಯವಿಲ್ಲ. ಕೊನೇವರೆಗೆ ನಾನು ತಂದೆಯ ಜೊತೆ ಇರ್ತೀನಿ. ಸೋಮವಾರ ಅವರ ಸಂಗಡ ಹೋಗ್ತಿದೀನಿ. ಇದನ್ನ ಹೇಳೋಕ್ಕೆ ಅಂತಾನೇ ನಾನು ಬಂದದ್ದು. ನಾನಿನ್ನು ಬರ್ತೀನಿ, ತಂದೆಯವರು ನನ್ನ ದಾರಿ ಕಾಯ್ತಿರ್ತಾರೆ."

ಉಷಾ ನವಲನನ್ನು ತಡೆದಳು, "ಸ್ವಲ್ಪ ಹೊತ್ತು ಕೂತುಕೊಳ್ಳಿ. ಎಷ್ಟೊಂದು ದಿನದ ಮೇಲೆ ಬಂದಿದೀರಿ ನೀವು! ವಿದ್ಯಾಳೂ ವಾಪಸು ಬಂದಿರಬೇಕು ಅಲ್ಲವೆ? ಅವಳು ಬನಾರಸ್ಸಿಗೆ ಓದೋಕ್ಕೆ ಹೋದಾಗಿನಿಂದ ಅವಳನ್ನ ನೋಡೇ ಇಲ್ಲ. ನೋಡ ಬೇಕು ಅಂತ ಮನಸ್ಸಾಗಿದೆ."

"ಅವಳೂ ಅಪ್ಪನ ಸೇವೇಲಿ ತೊಡಗಿದಾಳೆ, ಇಪ್ಪತ್ತನಾಲ್ಕು ಗಂಟೆ ಅವರನ್ನ ನೋಡ್ಕೋತಾಳೆ. ನೀನು ಅವಳನ್ನ ನೋಡೋಕ್ಕೆ ಆ ಕಾಹಿಲೆಯ ಮನೆಗೆ ಬರೋದು ಪಾಪನಿಗೆ ಸರಿಬೀಳೋಲ್ಲ. ಸೋಮವಾರ ನಾವು ಹೋದ ಮೇಲೆ ಅವಳಿಗೆ ಪುರಸೊತ್ತಾ ಗುತ್ತೆ. ನೀನು ಕೇಳಿದೆ ಅಂತ ಹೇಳ್ತೀನಿ."

ನವಲನ ಮಾತಿನ ಹಿಂದಿದ್ದ ವ್ಯಂಗ್ಯ ಉಷಳಿಗೆ ಅರ್ಥವಾಗಲಿಲ್ಲ, ಆದರೆ ರಾಯ್ ಬಹದ್ದೂರ್ ಕಾಮತಾನಾಥರು ಅದನ್ನು ಗ್ರಹಿಸಿದರು. "ನಾನು ನಾಳೆಯೋ ನಾಡಿದ್ದೋ ಉಷಳ ಜೊತೆ ಬರ್ತೀನಿ. ಉಷಾ ತುಂಬ ಜ್ಞಾಪಿಸಿಕೊಳ್ತಿದ್ದಳು ಅಂತ ವಿದ್ಯಳಿಗೆ ಹೇಳು," ಎಂದು, ಆಮೇಲೆ ಉಷಳ ಕಡೆ ತಿರುಗಿ, "ಅಡಿಗೆಯಾಗಿದೆಯೆ ನೋಡು. ನವಲನನ್ನ ಊಟಕ್ಕೆಬ್ಬಿಸು. ಹಾಗೇ ಹೋಗೋಕ್ಕೆ ಬಿಡಬೇಡ" ಎಂದು ಹೇಳಿದರು.

ಕಾಮತಾನಾಥರ ಮನೆಯಲ್ಲಿ ನವಲನಿಗೆ ಉಸಿರು ಕಟ್ಟಿದಂತಾಗಿತ್ತು. "ಕ್ಷಮಿಸಿ. ಪಾಪಾ. ಅಪ್ಪ ನನ್ನ ದಾರಿ ನೋಡ್ತಿರ್ತಾರೆ. ಆದ್ದರಿಂದ ಈಗ ಇಲ್ಲಿ ಊಟಮಾಡೋ ಕ್ಕಾಗೋಲ್ಲ" ಎಂದು ಹೇಳಿ ಅಲ್ಲಿಂದ ಎದ್ದು ಹೊರಟ.

ನವಲ ಮನೆಗೆ ಹಿಂದಿರುಗಿದಾಗ ಅವನ ಮುಖ ಸಪ್ಪಗಾಗಿತ್ತು. ಕಾಮತಾನಾಥರ ಮನೆಯಲ್ಲಿ ಅವನಿಗಾದ ಅನುಭವ ಭಯಂಕರ ಕಟುವಾಗಿತ್ತು. ಅದರಿಂದಾಗಿ ಅವನು ಕೆರಳಿದ್ದ. ಅವನ ಸಪ್ಪೆಮೋರೆಯನ್ನು ಕಂಡು ವಿದ್ಯಾ ಕೇಳಿದಳು, "ತುಂಬ ಪೆಚ್ಚಾಗಿ ದೀಯಲ್ಲ, ಏನು ಸಮಾಚಾರ, ಅಣ್ಣ? ಎಲ್ಲಿ ಹೋಗಿದ್ದೆ?"

"ಉಷಳ ಮನೆಗೆ ಹೋಗಿದ್ದೆ, ವಿದ್ಯಾ! ಅವಳು ನಿನ್ನನ್ನ ಜ್ಞಾಪಿಸಿಕೊಳ್ತಿದ್ದಳು, ನಿನ್ನನ್ನ ನೋಡಿ ಬಹಳ ದಿವಸವಾಯಿತು ಅಂದಳು."

"ಏನು ಹೇಳಲಿ, ಅಣ್ಣ. ಇಲ್ಲಿಗೆ ಬಂದಾಗಿನಿಂದ ಈ ರಗಳೇಲಿ ಸಿಕ್ಕಿಬಿದ್ದಿರೋದನ ನೀನೇ ನೋಡ್ತಾಇದೀಯೆ. ನೀವು ಭುವಾಲೀಗೆ ಹೋದ ಮೇಲೆ ಪುರಸೊತ್ತಾಗುತ್ತೆ.

ಆಗ ಹೋಗಿ ನೋಡಿಕೊಂಡು ಬರ್ತೀನಿ. ಆದರೆ ಅದಕ್ಕೆ ನೀನು ಯಾಕೆ ಪೆಚ್ಚಾಗ ಬೇಕು?"

"ಇಲ್ಲ, ನಾನು ಅದರಿಂದಾಗಿ ಪೆಚ್ಚಾಗಿಲ್ಲ." ಸ್ವಲ್ಪ ತಡೆದು ನವಲ್ ಹೇಳಿದ, "ನಿನಗೆ ಗೊತ್ತೆ, ವಿದ್ಯಾ? ಬಾಬು ಕಾಮತಾನಾಥರು ಅಪ್ಪನ್ನ ಬಿಟ್ಟು ತಮ್ಮ ಜೊತೆ ವಿಲಾಯಿತಿಗೆ ಬಾ ಅಂತ ಕರೀತಿದಾರೆ. ಸ್ವಿಟ್ಜರ್‌ಲ್ಯಾಂಡಿಗೆ ಹೋಗೋಕ್ಕೆ ಅವರು ನನ್ನ ಟಿಕೆಟ್ ಸಹ ಕೊಂಡುಕೊಂಡಿದಾರೆ."

ವಿದ್ಯಾ ಗಾಬರಿಯಾದಳು, "ನೀನು ಅವರ ಜೊತೆ ಹೋಗ್ತಿದೀಯಾ, ಅಣ್ಣ?"

"ನೀನೆಲ್ಲೋ ಹುಚ್ಚಿ," ನವಲ್ ನಕ್ಕ. "ಕಾಹಿಲೇಲಿರೋ ಅಪ್ಪನ್ನ ಬಿಟ್ಟು ನಾನು ವಿಲಾಯಿತಿಗೆ ಹೋಗ್ತೀನೆಯೆ? ಇಲ್ಲ ಅಂದು ಬಂದೆ. ಅವರು ತಾವು ಹೇಳಿದ್ದೇ ಆಗಬೇಕು ಅಂತ ಹೇಗೆ ಹಟ ಹಿಡಿದಿದಾರೋ ಅರ್ಥವಾಗೋಲ್ಲ!"

ವಿದ್ಯಳ ಕಣ್ಣು ತುಂಬಿ ಬಂದಿತು. "ನೀನು ಇಲ್ಲ ಅಂತ ಹೇಳಿಬಂದೆಯಲ್ಲವೆ ಅಣ್ಣ? ನನಗೆ ಆ ಭರವಸೆಯಿತ್ತು. ಅಪ್ಪನ ಕಾಹಿಲೆ ನಮ್ಮ ಕಾಹಿಲೆ; ವಿಪತ್ತು ಬಂದಿರೋದು ನಮ್ಮ ಮೇಲೆ. ಅವರಿಗೆ ನಮ್ಮ ಭಾವನೆ ಅರ್ಥವಾಗೋದು ಹೇಗೆ ಸಾಧ್ಯ? ನೀನು ಅವರ ಮನೇಲಿ ಊಟಾನೂ ಮಾಡಲಿಲ್ಲ ಅಂತ ಕಾಣುತ್ತೆ. ನಡಿ, ಊಟಕ್ಕೇಳು."

ಭುವಾಲಿಗೆ ಹೋಗಲು ಅವಶ್ಯಕವಾದ ಸಾಮಾನು ಕೊಂಡು ಬರಲು ಶನಿವಾರ ಬೆಳಗಿನಲ್ಲೇ ನವಲ್ ಪೇಟೆಯ ಕಡೆ ಹೊರಟ. ಹೆಚ್ಚೇನೂ ಕೊಳ್ಳುವುದಿರಲಿಲ್ಲ. ಹತ್ತು ಹೊಡೆಯುವ ಹೊತ್ತಿಗೆ ವಾಪಸು ಬಂದ. ಹಿಂದಿರುಗಿದಾಗ ಅವನಿಗೆ ಡ್ರಾಯಿಂಗ್ ರೂಮಿನಿಂದ ರಾಯ್‌ಬಹದ್ದೂರ್ ಕಾಮತಾನಾಥರ ಧ್ವನಿ ಕೇಳಿಸಿತು. ಅವರು ಜ್ವಾಲಾ ಪ್ರಸಾದನಿಗೆ ಹೇಳುತ್ತಿದ್ದರು, "ನಿಮಂಥ ತಿಳಿವಳಿಕಸ್ಥರು ಈ ಮೂರ್ಖತನ ಮಾಡೋದ್ದು ಅಂದರೇನು? ಗಂಗನ ಜೊತೆ ನವಲನನ್ನು ಭುವಾಲೀಗೆ ಕಳಿಸ್ತಿದೀರಿ. ಇದರ ಪರಿಣಾಮ ಏನಾಗಬಹುದು ಅಂತ ನೀವು ಯೋಚಿಸಿದೀರಾ?"

ಜ್ವಾಲಾಪ್ರಸಾದ ದುರ್ಬಲವಾದ ಧ್ವನಿಯಲ್ಲಿ ಉತ್ತರಕೊಟ್ಟ, "ನಾನು ಅವನಿಗೆ ಎಷ್ಟು ಬೇಡ ಅಂದೆ ಅಂತೀರಿ, ರಾಯ್‌ಬಹದ್ದೂರ್ ಸಾಹೇಬ್? ಆದರೆ ಅವನು ಒಪ್ಪೋದಿಲ್ಲ. ಗಂಗನಿಗೆ ಸಹ ಅವನ ಮೇಲೆ ಯಾಕೆ ಅಷ್ಟು ಮೋಹವೋ ಗೊತ್ತಿಲ್ಲ! ನನಗೆ ಇದನ್ನೆಲ್ಲಾ ಗಂಗನಿಗೆ ಹೇಳೋಕ್ಕೆ ಇಷ್ಟವಿಲ್ಲ."

"ಹೇಳೋಕ್ಕೆ ಇಷ್ಟವಿಲ್ಲ ಅಂದರೆ ನಿಮ್ಮ ಪುಕ್ಕಲತನದಿಂದಾಗಿ ನಿಮ್ಮ ಮನೆತನಕ್ಕೆ ಮನೆತನವೇ ನಾಶವಾಗಿ ಹೋಗೋದು ಇಷ್ಟವೇ? ಏನೇ ಆಗಲಿ, ನವಲ್ ಭುವಾಲೀಗೆ ಹೋಗಕೂಡದು. ಒಂದು ವಿಪತ್ತಾಗಲೇ ಮೈಮೇಲೆ ಬಂದು ಕೂತಿದೆ, ಇನ್ನೊಂದರಿಂದಲಾದರೂ ತಪ್ಪಿಸಿಕೊಳ್ಳಬಹುದು."

"ತಪ್ಪಿಸಿಕೊಳ್ಳೋದು ಹೇಗೆ ಅಂತ ನನಗೆ ಬೇರೆ ಗೊತ್ತಾಗೋಲ್ಲ," ಜ್ವಾಲಾಪ್ರಸಾದ ವಿವಶತೆ ತುಂಬಿದ ಧ್ವನಿಯಲ್ಲಿ ಕೇಳಿದ.

"ಅದನ್ನೇ ಹೇಳ್ತಿದೀನಿ. ನಾವು ಸ್ವಿಟ್ಜರ್‌ಲ್ಯಾಂಡಿಗೆ ಹೋಗ್ತಿದೀವಿ. ನವಲನನ್ನೂ ನಮ್ಮ ಜೊತೆ ಕರಕೊಂಡು ಹೋಗ್ತೀವಿ. ಅವನು ಅಲ್ಲಿಂದಲೇ ನೇರವಾಗಿ ಇಂಗ್ಲಂಡಿಗೆ ಹೋಗ್ತಾನೆ.

ಜ್ವಾಲಾಪ್ರಸಾದ ಕೊಂಚ ಹಿಂಜರಿಯುತ್ತ ಹೇಳಿದ, "ರಾಯ್‌ಬಹದ್ದೂರ್ ಸಾಹೇಬ್, ಗಂಗನ ಸ್ಥಿತಿ ನಿಮಗೆ ಗೊತ್ತೇ ಇದೆ. ಇಂಗ್ಲಂಡಿಗೆ ಹೋಗೋ ಖರ್ಚು, ಅಲ್ಲಿ ಇರೋ ಖರ್ಚು, ಇವುಗಳ ಬಗ್ಗೆ ಗಂಗನ ಜೊತೆ ಈಗ ಮಾತಾಡೋದು ಸರಿಯಲ್ಲ."

ರಾಯ್‌ಬಹದ್ದೂರ್ ಕಾಮತಾನಾಥರು ಜೋರಾಗಿ ನಕ್ಕರು, "ಡಿಪ್ಟಿಸಾಹೇಬ್, ನವಲ್ ಹೇಗೆ ಗಂಗನ ಮಗನೋ ಹಾಗೇ ನನ್ನ ಮಗನೂವೇ. ನಾನು ಇವನನ್ನ ನಿಮ್ಮ ದುಡ್ಡಿನಲ್ಲಿ ಕರಕೊಂಡು ಹೋಗ್ತೀನಿ ಅಂತ ಅಂದುಕೊಂಡಿದೀರಾ? ಇಂಗ್ಲಂಡಿಗೆ ಹೋಗೋದು, ಅಲ್ಲಿದ್ದು ಓದೋದು, ಅಲ್ಲಿಂದ ವಾಪಸು ಬರೋದು—ಇವೆಲ್ಲದರ ಖರ್ಚೂ ನನ್ನದು."

ಜ್ವಾಲಾಪ್ರಸಾದನಿಗೆ ಹೋದ ಪ್ರಾಣ ಬಂತು. "ಹಾಗಾದರೆ ನೀವು ಗಂಗನ ಜೊತೆ ಮಾತಾಡಿ. ನವಲನಂತೂ ನನ್ನ ಮಾತು ಕೇಳೋಲ್ಲ. ಸ್ವಲ್ಪ ಒತ್ತಿಹೇಳಿದರೆ ಗಂಗಾ ಇಲ್ಲ ಅನ್ನಲಾರ, ನಾನು ಗಂಗನಿಗೆ ನೀವು ಬಂದಿರೋ ಸುದ್ದಿ ತಿಳಿಸ್ತೀನಿ."

ಕಾಮತಾನಾಥರು ಜ್ವಾಲಾಪ್ರಸಾದನ ಜೊತೆ ಗಂಗಾಪ್ರಸಾದನ ಕೋಣೆಗೆ ಬಂದರು. ಗಂಗಾಪ್ರಸಾದ ಒಂದು ಕ್ಷೀಣವಾದ ನಗೆಯೊಂದಿಗೆ ಕಾಮತಾನಾಥರನ್ನು ಸ್ವಾಗತಿಸಿದ, "ಬನ್ನಿ, ರಾಯ್‌ಬಹದ್ದೂರ್ ಸಾಹೇಬ್! ನೀವು ಬಂದದ್ದು ದೊಡ್ಡ ಕೃಪೆ!"

ರಾಯ್‌ಬಹದ್ದೂರರು ಗಂಗಾಪ್ರಸಾದನ ಮಂಚದಿಂದ ಸ್ವಲ್ಪ ದೂರದಲ್ಲಿಯೇ ಕುರ್ಚಿಯ ಮೇಲೆ ಕುಳಿತುಕೊಂಡರು. ಆಮೇಲೆ ಗಂಟಲು ಸರಿಪಡಿಸಿಕೊಳ್ಳುತ್ತ ಹೇಳಿದರು, "ನೀವು ಭುವಾಲೀಗೆ ಹೋಗ್ತಿದೀರಿ ಅಂತ ಕೇಳಿದೆ. ನೀವು ಈ ಮೊದಲೇ ಹೋಗಿದ್ದಿದ್ದರೆ ಚೆನ್ನಾಗಿತ್ತು ಅಂತ ನನಗೆ ಅನ್ನಿಸುತ್ತೆ. ಈ ಸೆಕೇಲಿ ಯಾವ ಔಷಧಿ ತಾನೇ ಪರಿಣಾಮ ಮಾಡಬಲ್ಲದು!"

"ಡಾಕ್ಟರೂ ಅದೇ ಹೇಳ್ತಾರೆ," ಗಂಗಾಪ್ರಸಾದ ಹೇಳಿದ. "ಸೆಪ್ಟೆಂಬರ್‌ವರೆಗೆ ಅಲ್ಲಿರಬೇಕು ಅಂತ ಹೇಳಿದಾರೆ."

"ಹೌದು, ಕನಿಷ್ಠ ಅಂತಂದರೆ ಸೆಪ್ಟೆಂಬರ್‌ವರೆಗೆ. ಆಮೇಲೆ ನೆಟ್ಟಗಾದನಂತರವೂ ಸ್ವಲ್ಪ ವರ್ಷ ಬೇಸಿಗೇಲಿ ನೀವು ಬೆಟ್ಟಕ್ಕೆ ಹೋಗಬೇಕಾಗುತ್ತೆ. ಇದು ಬಲು ಕಠಿಣವಾದ ಕಾಹಿಲೆ. ಇದಕ್ಕೆ ಚಿಕಿತ್ಸೆ ಅಂದರೆ ಬೆಟ್ಟದ ತಾಜಾ ಹವೆ, ವಿಶ್ರಾಂತಿ!"

ಸ್ವಲ್ಪ ತಡೆದು ಕಾಮತಾನಾಥ್ ಮತ್ತೆ ಹೇಳಿದ, "ಕಲೆಕ್ಟರ್ ಸಾಹೇಬ್, ನಾನು ನವಲನ ಯೋಚನೆ ಮಾಡ್ತಿದ್ದೆ. ನಾನು ಸ್ವಿಟ್ಜರ್‌ಲ್ಯಾಂಡಿಗೆ ಹೋಗ್ತಿದೀನಿ. ನವಲನನ್ನೂ

ನನ್ನ ಜೊತೆ ಕರಕೊಂಡು ಹೋಗಬೇಕು ಅಂತ ನನ್ನ ಆಸೆ. ಐ.ಸಿ.ಎಸ್. ಮಾಡೋಕ್ಕೆ ಅವನು ಹೇಗಿದ್ದರೂ ಇಂಗ್ಲಂಡಿಗೆ ಹೋಗಬೇಕಾಗಿದೆ. ಅವನು ಹಾಗಿಂದ ಹಾಗೇ ಸ್ವಿಟ್ಜರ್‌ಲ್ಯಾಂಡಿನಿಂದ ಇಂಗ್ಲಂಡಿಗೆ ಹೋಗಬಹುದು. ಅವನ ಓದು-ಬರೆಹದ ಖರ್ಚು ಏನೇ ಇರಲಿ, ಅದರ ಬಗ್ಗೆ ನೀವು ಏನೂ ಚಿಂತಿಸಬೇಕಾಗಿಲ್ಲ. ಅವನು ನಿಮ್ಮ ಮಗ ಹೇಗೋ, ಹಾಗೇ ನನ್ನ ಮಗನೂವೇ. ಖರ್ಚೆಲ್ಲಾ ನಾನು ವಹಿಸಿಕೋತೀನಿ."

ಕಾಮತಾನಾಥರ ಮಾತು ಕೇಳಿ, ಗಂಗಾಪ್ರಸಾದನ ಮುಖದ ಮೇಲೆ ಕಾಹಿಲೆ ಬಿದ್ದ ಮೇಲೆ ಮೊದಲ ಬಾರಿಗೆ ಸಂತೋಷ ಬೆಳಗಿತು. ತನ್ನ ಕಾಹಿಲೆಯು ಕಾರಣದಿಂದಾಗಿ ಅವನಿಗೆ ಸಂಸಾರದ ಬಗ್ಗೆ ಅತ್ಯಂತ ಚಿಂತೆಯಾಗಿತ್ತು. ಬದುಕಿನಲ್ಲಿ ಸಂಪಾದಿಸಿದ್ದುದನ್ನು ಅವನು ಕೈಬಿಟ್ಟು ಖರ್ಚುಮಾಡಿದ್ದ. ಅವನಿಗೆ ತನ್ನ ನಿಜಸ್ಥಿತಿಯ ಅರಿವಾದದ್ದು ತಲೆಯ ಮೇಲೆ ಸಾವು ಹೆಡೆಯಾಡಿದಾಗಲೇ.

"ಆಗಲಿ, ನೀವು ನವಲನನ್ನ ನಿಮ್ಮ ಜೊತೆ ಕರಕೊಂಡು ಹೋಗಿ. ಅಪ್ಪ ಹೇಗಿದ್ದರೂ ನನ್ನ ಬಳಿ ಇರ್‍ತಾರೆ. ನೀವು ಉಷಳನ್ನು ನವಲನಿಗೆ ಕೊಟ್ಟು ಮದುವೆ ಮಾಡೋದು ಅಂತ ನಿರ್ಧರಿಸಿದ ದಿನವೇ ಅವನು ನಿಮ್ಮವನಾದ." ಗಂಗಾಪ್ರಸಾದ ತಂದೆಯ ಕಡೆ ನೋಡಿ ಹೇಳಿದ, "ಸ್ವಲ್ಪ ನವಲನನ್ನ ಇಲ್ಲಿ ಕರೀರಿ. ಅವನಿಗೆ ಹೇಳ್ತೀನಿ."

ಜ್ವಾಲಾಪ್ರಸಾದ ನವಲನನ್ನು ಕರೆತಂದ. ನವಲ ತಂದೆಯ ಮುಂದೆ ಮೌನವಾಗಿ ತಲೆತಗ್ಗಿಸಿಕೊಂಡು ನಿಂತು "ಏನು ?" ಅಂದ.

"ನವಲ್, ರಾಯ್‌ಬಹದ್ದೂರ್ ಕಾಮತಾನಾಥರು ಉಷಳ ಜೊತೆ ಸ್ವಿಟ್ಜರ್ ಲ್ಯಾಂಡಿಗೆ ಹೋಗ್ತಿದಾರೆ. ನಿನ್ನ ಪ್ಯಾಸೇಜನ್ನೂ ಬುಕ್ ಮಾಡಿಸಿದಾರೆ," ಗಂಗಾಪ್ರಸಾದ ಹೇಳಿದ.

"ಹೌದು, ನನಗೆ ಗೊತ್ತಿದೆ."

"ನೀನು ಇವರ ಜೊತೆ ಹೊರಟುಬಿಡು. ಅಲ್ಲಿಂದ ಇಂಗ್ಲಂಡಿಗೆ ಹೋಗುವೆಯಂತೆ !"

"ಹೌದು, ನಾನು ಈ ಮಾತನ್ನೂ ಕೇಳಿದೀನಿ. ಅಷ್ಟೇ ಅಲ್ಲ, ವಿಲಾಯಿತೀಲಿ ನನ್ನ ಖರ್ಚೇನಾಗುತ್ತೋ ಅದನ್ನ ರಾಯ್‌ಬಹದ್ದೂರ್ ಸಾಹೇಬರು ವಹಿಸಿಕೋತೀನಿ ಅಂತಿದಾರೆ. ಆದರೆ ನಾನು ನಿಮ್ಮ ಜೊತೆ ಭುವಾಲಿಗೆ ಬರಬೇಕು. ನಿಮಗೆ ಹುಷಾ ರಾದಮೇಲೆ ಮುಂದೇನು ಅಂತ ಯೋಚನೆಮಾಡ್ತೀನಿ."

ನವಲನ ಈ ಮಾತು ಗಂಗಾಪ್ರಸಾದನಿಗೆ ಕೆಟ್ಟನಿಸಲಿಲ್ಲ. ಅವನು ಕಾಮತಾನಾಥರ ಕಡೆ ನೋಡಿದ. "ಕೇಳಿದಿರಲ್ಲವೆ ಇವನ ಮಾತನ್ನ. ನೀವೇ ಅವನಿಗೆ ಹೇಳಿ."

ಕಾಮತಾನಾಥ್ ನವಲನ ಕಡೆ ನೋಡಿದರು, "ನವಲ್ ಹೀಗೆ ಹಟಮಾಡಬಾರದು. ಇದು ನಿನ್ನ ಕೆರಿಯರ್‌ನ ಪ್ರಶ್ನೆ."

ನವಲ್ ಶಾಂತನಾಗಿ ಉತ್ತರ ಕೊಟ್ಟ, "ಪಾಪಾ, ಮನುಷ್ಯನ ಜೀವನದಲ್ಲಿ ಮಮತೆ ಭಾವನೆಗಳಿಗಿಂತ ಹೆಚ್ಚಿನ ಕೆರಿಯರ್ ಯಾವುದೂ ಇಲ್ಲ. ನಾನು ಅಪ್ಪನ್ನ

ಈ ಸ್ಥಿತೀಲಿ ಬಿಟ್ಟು ಹೋಗೋ ಕಲ್ಪನೆ ಸಹ ಮಾಡೋಕ್ಕಾಗೋಲ್ಲ. ನೀವು ನನ್ನನ್ನ ಕರ್ತವ್ಯದ ದಾರಿಯಿಂದ ಸರಿಸೋಕ್ಕೆ ವ್ಯರ್ಥವಾಗಿ ಪ್ರಯತ್ನಿಸ್ತಿದೀರಿ. ನಾನು ಆಗಲೇ ಬರೋಲ್ಲ ಅಂತ ಹೇಳಿದೆ. ಬರೋಲ್ಲ ಅಂದರೆ 'ಬರೋಲ್ಲ' ಅಂತಾನೇ ಅರ್ಥ."

ಕಾಮತಾನಾಥರಿಗೆ ನವಲನ ಈ ಹಟವನ್ನು ಕಂಡು ರೋಷ ಉಕ್ಕಿತು, "ನವಲ್, ಶಾಸ್ತ್ರಗಳಲ್ಲಿ ಸರಿಯಾಗೇ ಬರೆದಿದೆ, ವಿನಾಶ ಕಾಲೇ ವಿಪರೀತ ಬುದ್ಧಿಃ ಅಂತ. ನಾನು ಏನು ಹೇಳೋದಿತ್ತೋ ಅದನ್ನ ಹೇಳಿದ್ದಾಯಿತು!" ಹೀಗಂದು ಅವರು ಎದ್ದು ನಿಂತರು.

ಕಾಮತಾನಾಥರ ಈ ಮಾತಿಗೆ ನವಲ್ ಖಡಾಖಂಡಿತವಾಗಿ ಉತ್ತರಕೊಡಬಹುದಾಗಿತ್ತು. ಒಮ್ಮೆ ಅವನ ಮನಸ್ಸಿನಲ್ಲಿ ಆ ಯೋಚನೆಯೂ ಬಂತು. ಆದರೆ ಅವನು ಸಂಯಮ ತಂದುಕೊಂಡ. "ನೀವು ಹೇಳೋದು ಸರಿ. ಆದರೆ ಈ ವಿಪತ್ಕಾಲದಲ್ಲಿ ನನ್ನ ಬುದ್ಧಿ ನನ್ನನ್ನ ಕಾಪಾಡಲಿ! ನನಗೆ ಜನ್ಮ ಕೊಟ್ಟ ತಂದೆಯಿಂದ ನನ್ನನ್ನ ದೂರ ಮಾಡೋ ನಿಮ್ಮ ಪ್ರಯತ್ನ ಮೆಚ್ಚುವಂಥಾದ್ದಲ್ಲ. ಭವಿಷ್ಯದ ಬಗ್ಗೆ ಹೇಳೋದಾದರೆ ಐ.ಸಿ.ಎಸ್. ಮಾಡದೇನೂ ನಾನು ಬದುಕಿರಬಲ್ಲೆ." ಹೀಗಂದು ನವಲ್ ದಡದಡನೆ ಮನೆಯೊಳಕ್ಕೆ ಹೋದ.

ಗಂಗಾಪ್ರಸಾದ ಕಾಮತಾನಾಥರನ್ನು ಸಮಾಧಾನಪಡಿಸಲು ಪ್ರಯತ್ನಿಸಿದ, "ಅವನು ಅಂದದ್ದನ್ನ ತಪ್ಪುತಿಳಕೋಬೇಡಿ, ರಾಯ್‌ಬಹದ್ದೂರ್ ಸಾಹೇಬ್. ನನ್ನನ್ನ ಕಂಡರೆ ಅವನಿಗೆ ಮಿತಿಮೀರಿದ ಪ್ರೀತಿ. ನಾನು ಅವನನ್ನ ಜುಲೈ ಅಥವಾ ಆಗಸ್ಟಿನಲ್ಲಿ ಇಂಗ್ಲಂಡಿಗೆ ಕಳಿಸ್ತೀನಿ. ನೀವು ನಂಬಿ."

ನವಲ್ ದಿನವೆಲ್ಲಾ ಭುವಾಲಿಗೆ ಹೊರಡುವ ತಯಾರಿ ನಡಸುತ್ತಿದ್ದ. ಸಂಜೆ ಅವನು ತನ್ನ ಕೋಣೆಗೆ ಬಂದಾಗ ಗಂಗಾಪ್ರಸಾದ ಹೇಳಿದ, "ಕೂತುಕೋ, ನವಲ್. ಇವತ್ತು ನನ್ನ ದೇಹಸ್ಥಿತಿ ತುಂಬ ಹಗುರಾಗಿದೆ ಅಂತ ಅನ್ನಿಸುತ್ತೆ."

ನವಲ್ ಗಂಗಾಪ್ರಸಾದನ ಹತ್ತಿರ ಕುರ್ಚಿ ಹಾಕಿಕೊಂಡು ಕುಳಿತ.

ಸ್ವಲ್ಪ ತಡೆದು ಗಂಗಾಪ್ರಸಾದ ಹೇಳಿದ, "ನವಲ್, ಇದನ್ನ ಕೇಳಿ ನಿನಗೆ ಆಶ್ಚರ್ಯವಾಗಬಹುದು. ಇವತ್ತು ಬಾಬು ಕಾಮತಾನಾಥರ ಮುಂದೆ ನಿನ್ನ ಸ್ವರೂಪಾನ ನೋಡಿ ನಾನು ದಂಗುಬಡಿದುಹೋದೆ."

"ನನ್ನಿಂದ ಏನಾದರೂ ಅಪಚಾರವಾಗಿದ್ದರೆ ಕ್ಷಮಿಸಿ, ಅಪ್ಪ!"

ಗಂಗಾಪ್ರಸಾದ ನಕ್ಕ. ಆ ನಗೆ ದೈನ್ಯ ಇಲ್ಲವೇ ಸಂಕಟದ ನಗೆಯಾಗಿರಲಿಲ್ಲ. ಹಿಂದಿನ ಉನ್ಮತ್ತವೂ ಸ್ವಾಭಾವಿಕವೂ ಆದ ನಗೆಯಾಗಿತ್ತು. "ಇಲ್ಲ ನವಲ್, ಕ್ಷಮೆ ಕೇಳೋ ಅಗತ್ಯವಿಲ್ಲ. ನಿನ್ನ ಸ್ವರೂಪಾನ ನೋಡಿ ನನಗೆ ಹೆಮ್ಮೆಯಾಯಿತು. ನನ್ನೊಳಗೆ ತುಂಬಿಕೊಂಡಿದ್ದ ಒಂದು ಭೀಕರ ಭಯ ಇದ್ದಕ್ಕಿದ್ದಹಾಗೇ ಕರಗಿಹೋಯಿತು."

"ನೀವು ಹೇಳಿದ್ದು ತಿಳೀಲಿಲ್ಲ, ಅಪ್ಪ," ನವಲ್ ತಬ್ಬಿಬ್ಬಾಗಿ ಹೇಳಿದ.

"ನಾನು ಹೇಳಿದ್ದು ತಿಳೀಲಿಲ್ಲ! ಹಾಗಾದರೆ ಕೇಳು. ನವಲ್! ನಿನಗೆ ಗೊತ್ತಿರ

ಬಹುದು, ನನಗೆ ಬಂದಿರೋ ರೋಗ 'ಗ್ಯಾಲಪಿಂಗ್ ಥೈಸಿಸ್', ಅದಕ್ಕೆ ಯಾವ ಔಷಧ ಚಿಕಿತ್ಸೆಯೂ ಇಲ್ಲ. ಮೊದಲನೇ ಸಲ ಯಾವತ್ತು ನನಗೆ ರಕ್ತವಾಂತಿಯಾಯಿತೋ ಅವತ್ತೇ ಅದು ನನಗೆ ಗೊತ್ತಾಯ್ತು. ಆ ಕ್ಷಣ ನನ್ನೊಳಗೆ ಭೀಕರವಾದ ಭಯ ತುಂಬಿಕೊಂಡಿತು. ನಿನ್ನ ಗತಿಯೇನು? ವಿದ್ಯಳ ಗತಿಯೇನು? ಸುಧಳ ಗತಿಯೇನು? ಕೇವಲನ ಗತಿಯೇನು? ಅಂತೆಲ್ಲಾ ಯೋಚಿಸುತ್ತಿದ್ದೆ. ನೀನು ಓದ್ತಿದಿ, ವಿದ್ಯಳ ಮದುವೆ ಯಾಗಬೇಕು, ಸುಧಾ, ಕೇವಲ್ ಇನ್ನೂ ಚಿಕ್ಕವರು. ಆ ಭಯ ಎಂಥಾದ್ದು ಅಂತ ನಿನಗೆ ಊಹಿಸೋಕ್ಕೆ ಆಗೋಲ್ಲ. ಅಪ್ಪನಿಗೆ ವಯಸ್ಸಾಯಿತು, ಅವರದು ಏನು ನೆಚ್ಚಿಕೆ! ಅದ ಕ್ಕೋಸ್ಕರವೇ ನನಗೆ ಸಾಯೋಕ್ಕೆ ಇಷ್ಟವಿರಲಿಲ್ಲ. ಬದುಕಿನಲ್ಲಿ ನಾನು ಏನನ್ನೂ ಉಳಿಸ ಲಿಲ್ಲ, ನಿಮ್ಮಗಳಿಗೆ ಏನೂ ವ್ಯವಸ್ಥೆ ಮಾಡಲಿಲ್ಲ. ನನ್ನ ಮಕ್ಕಳ ಗತಿಯೇನು ಅಂತ ಯೋಚಿಸೋಕ್ಕೆ ಆಗದ ಹಾಗಾಗಿತ್ತು. ಆ ಭಯದಿಂದ ನನ್ನ ಜೀವ ಚಡಪಡಿಸುತ್ತಿತ್ತು."

ನವಲ್ ಮೌನವಾಗಿ ಅಪ್ಪನ ಮಾತನ್ನು ಕೇಳುತ್ತಿದ್ದ. ಗಂಗಾಪ್ರಸಾದ ಒಮ್ಮೆ ಉಸಿರೆಳೆದುಕೊಂಡು "ಒಂದು ಲೋಟ ನೀರು ಕೊಡು. ಮಾತನಾಡೋಕ್ಕೂ ತ್ರಾಣ ವಿಲ್ಲದ ಹಾಗಾಗಿದೆ" ಅಂದ.

ನವಲ್ ಎದ್ದು ಗಂಗಾಪ್ರಸಾದನಿಗೆ ನೀರು ಕುಡಿಸಿದ.

ನೀರು ಕುಡಿದು ಗಂಗಾಪ್ರಸಾದ ಮುಂದುವರಿಸಿದ, "ಇವತ್ತು ನಾನು ನಿನ್ನ ಆ ಸ್ವರೂಪಾನ ನೋಡಿದಾಗ, ಅದು ಯಾಕೋ ಕಾಣೆ, ಆ ಭಯ ಹಾರಿಹೋಯಿತು! ನೀನು ಸ್ವಾಭಿಮಾನಿ, ಸಮರ್ಥ, ಸಿಕ್ಕ ಅವಕಾಶಗಳನ್ನು ಕಾಲಿಂದ ದೂಡಬಲ್ಲೆ, ಕಷ್ಟಗಳ ಗುಡ್ಡಾನ ತಲೆ ಮೇಲೆ ಹೊತ್ತುಕೊಳ್ಳಬಲ್ಲೆ ಅನ್ನೋದು ಗೊತ್ತಾಯ್ತು."

ನವಲನಿಗೆ ಈ ಹೊಗಳಿಕೆ ಸರಿಬೀಳಲಿಲ್ಲ. ಅವನಂದ, "ಇನ್ನು ಸಾಕು, ಅಪ್ಪ. ನೀವು ಬಹಳ ದಣಿದಿದೀರಿ."

"ಹೇಳೋದನ್ನ ಪೂರ್ತಿ ಕೇಳು, ಮಾತಿಗೆ ಅಡ್ಡ ಬರಬೇಡ!" ಗಂಗಾಪ್ರಸಾದ ಅಟ್ಟಿಕೊಂಡ. "ನನ್ನ ಜೀವದ ದಣಿವು ಅಳಿದಿದೆ, ನನಗೆ ಈಗ ಯಾವ ಚಿಂತೆಯೂ ಇಲ್ಲ, ಕ್ಲೇಶವೂ ಇಲ್ಲ ಅಂತ ನೀನು ಕಾಣೆ. ನಾನು ಈಗ ಶಾಂತಿಯಿಂದ ಸಾಯ ಬಹುದು. ನೀನು ಎಲ್ಲಾನ್ನೂ ನೋಡಿಕೊಂಡು ಹೋಗ್ತಿ ಅಂತ ಗೊತ್ತಾಗಿದೆ. ನನಗಿಂತ ಚೆನ್ನಾಗಿಯೇ ನೋಡಿಕೊಂಡು ಹೋಗ್ತಿ." ಸ್ವಲ್ಪ ತಡೆದು ಗಂಗಾಪ್ರಸಾದ ಮತ್ತೆ ಹೇಳಿದ, "ನವಲ್, ನಾನು ಯಾಕೆ ಮುರಿದುಬಿದ್ದೆ, ಹೇಗೆ ಮುರಿದುಬಿದ್ದೆ ಅಂತ ಗೊತ್ತೆ? ಕೇಳಿದರೆ ನಿನಗೆ ಆಶ್ಚರ್ಯವಾಗಬಹುದು. ನನ್ನನ್ನ ಹಾಳುಮಾಡಿಕೊಂಡವನು ನಾನೇ. ನನ್ನೊಳಗಿನ ಹೇಡಿತನ, ಆ ಹೇಡಿತನದ ನೋವು ನನ್ನನ್ನ ಹಾಳುಮಾಡಿದವು."

ನವಲನ ಕುತೂಹಲ ಕೆರಳಿತು. ಅವನು ಕೇಳಿದ, "ಅದು ಹೇಗೆ, ಅಪ್ಪ?"

"ಅದನ್ನೇ ಹೇಳ್ತಿದೀನಿ. ಒಂದು ದಿನ ನಾನು ನನ್ನ ನೌಕರಿ, ಗುಲಾಮಗಿರಿ, ಹತಾಶೆ ಗಳ ವಿರುದ್ಧ ಬಂಡಾಯವೆದ್ದೆ. ನನ್ನೊಳಗಿನ ಆ ಬಂಡಾಯ ವಾಸ್ತವಿಕವಾಗಿತ್ತು.

ಜ್ಞಾನಚಿಕ್ಕಪ್ಪನಿಗೆ ಗೊತ್ತು ಆ ವಿಷಯ. ನಾನು ರಾಜೀನಾಮೆ ಕೊಡೋದು ಅಂತ ನಿಶ್ಚಯಿಸಿದೆ. ಆದರೆ ನನ್ನೊಳಗಿನ ಹೇಡಿತನಕ್ಕೆ ಅನಾಯಾಸವಾಗಿ ಒಂದು ಊರೆ ಸಿಕ್ಕಿತು. ಆ ಹೇಡಿತನ ನನ್ನ ತಲೆ ಮೇಲೆ ಹೇರಿಕೊಂಡಿತು. ನಾನು ಆ ರಾಜೀನಾಮೇನ ಹರಿದುಹಾಕಿ ಅವಮಾನದ ವಿಷ ಕುಡಕೊಂಡೆ. ಆದರೆ ಆ ವಿಷ ಎಷ್ಟು ಕಹಿಯಾಗಿತ್ತು, ಎಷ್ಟು ಘಾತಕವಾಗಿತ್ತು, ಹೇಗೆ ನಿಧಾನವಾಗಿ ಕೆಲಸ ಮಾಡಿತು! ರಾಜೀನಾಮೇನ ಹರಿದು ಹಾಕಿದ ಕ್ಷಣವೇ ನಾನು ಮುರಿದುಬಿದ್ದೆ. ಕಳೆದ ಎಂಟು ಹತ್ತು ವರ್ಷಗಳಲ್ಲಿ ಹಾಗೂ ಹೀಗೂ ಜೀವ ಎಳೆದದ್ದಾಯ್ತು. ಈಗ ಅದರ ಕೊನೆಗಾಲವೂ ಬರೋದಿದೆ. ಇವತ್ತು ನಾನು ಸಂತೋಷವಾಗಿದೀನಿ."

ನವಲ್ ಜ್ಞಾನಪ್ರಕಾಶನ ಬಾಯಿಂದ ಆ ಘಟನೆಯನ್ನು ವಿವರವಾಗಿ ಕೇಳಿದ್ದ. ಆದರೆ ಆ ಘಟನೆಯ ಪರಿಣಾಮ ತನ್ನ ತಂದೆಯ ಮೇಲೆ ಇಷ್ಟೊಂದು ತೀವ್ರವಾಗಿತ್ತೆ!

ಗಂಗಾಪ್ರಸಾದ ಮತ್ತೆ ಹೇಳಿದ, "ನವಲ್, ಒಂದು ಮಾತನ್ನ ನಡಸಿಕೊಡು. ದೇವರನ್ನ ಬಿಟ್ಟು ಬೇರೆ ಯಾರ ಒತ್ತಾಯಕ್ಕೂ ಮಣೀ ಬೇಡ. ನಿನ್ನ ಆತ್ಮಕ್ಕೆ ವಿರುದ್ಧ ವಾಗಿ ಯಾವ ಕೆಲಸಾನೂ ಮಾಡಬೇಡ. ನಿನ್ನನ್ನ ನೀನು ಮರೆಯೋದಕ್ಕೋಸ್ಕರ ಯಾವಾಗಲೂ ಕುಡಿತಕ್ಕೆ ಶುರುಮಾಡಬೇಡ!"

ನವಲ್ ಭಾವಾವೇಶದಿಂದ ಹೇಳಿದ, "ಪ್ರಮಾಣ ಮಾಡಿ ಹೇಳ್ತೀನಿ, ಅಪ್ಪ. ಈ ಮೂರನ್ನೂ ನಾನು ಮಾಡೋಲ್ಲ. ಈಗ ನೀವು ಮಲಕ್ಕೊಳಿ."

"ಹೌದು, ಇವತ್ತು ನನ್ನ ದೇಹಸ್ಥಿತಿ ಹಗುರವಾಗಿದೆ. ಸ್ವಲ್ಪ ಹಸಿವೂ ಆಗ್ತಿದೆ. ಊಟಮಾಡಿ ಮಲಕ್ಕೊತೀನಿ. ಇವತ್ತು ನಿದ್ರೆಯೂ ಚೆನ್ನಾಗಿ ಬರುತ್ತೆ."

ಮಾರನೆಯ ದಿನ ಗಂಗಾಪ್ರಸಾದ ಸಾಕಷ್ಟು ಸಂತೋಷದಿಂದಿದ್ದ. ಜ್ವರ ಒಂದು ಡಿಗ್ರಿ ಇಳಿದಿತ್ತು. ಮಗನನ್ನು ಕರೆದು ಹೇಳಿದ, "ನವಲ್, ನನ್ನ ದೇಹಸ್ಥಿತಿ ಇಷ್ಟರಲ್ಲೇ ನೆಟ್ಟಗಾಗುತ್ತೆ ಅಂತ ಅನ್ನಿಸುತ್ತೆ. ಭುವಾಲೀಗೆ ಹೋಗೋ ಅಗತ್ಯವಿದೆಯೆ?"

"ಏರ್ಪಾಡೆಲ್ಲಾ ಮಾಡಿಯಾಗಿದೆ. ಅಲ್ಲಿ ಹೋದರೆ ನಿಮಗೆ ಬೇಗ ಗುಣವಾಗುತ್ತೆ," ನವಲ್ ಹೇಳಿದ.

"ಹೌದು, ಅಲ್ಲೀಗೇ ಹೋಗಬೇಕು. ಇಲ್ಲಿ ಸೆಕೆಯೂ ಜಾಸ್ತಿಯಾಗ್ತಿದೆ. ಭುವಾಲಿ ಯಿಂದ ಪೂರ್ತಿ ಸ್ವಸ್ಥವಾಗಿ ವಾಪಸು ಬರ್ತೀನಿ ಅಂತ ಅಂದುಕೊಂಡಿದೀನಿ," ಗಂಗಾ ಪ್ರಸಾದನ ಮುಖದ ಮೇಲೆ ಮುಗುಳುನಗೆ ಕಾಣಿಸಿಕೊಂಡಿತು.

ನವಲ್ ತಂದೆಯ ಮುಖದಲ್ಲಿ ಒಂದು ಬಗೆಯ ಕಾಂತಿ ಮೂಡಿದ್ದುದನ್ನು ಕಂಡ. ಪ್ರಸನ್ನ ಮನಸ್ಸಿನಿಂದ ಡ್ರಾಯಿಂಗ್ ರೂಮಿನಲ್ಲಿ ಬಂದು ಕುಳಿತುಕೊಂಡ. ಸಾಮಾನೆಲ್ಲ ವನ್ನೂ ಕಟ್ಟಿಯಾಗಿತ್ತು. ಮರುದಿನ ಬೆಳಗ್ಗೆ ಅವನು ಗಂಗಾಪ್ರಸಾದನ ಜೊತೆ ಭುವಾಲಿಗೆ ಹೊರಡಬೇಕಾಗಿತ್ತು. ಅಷ್ಟು ಹೊತ್ತಿಗೆ ಸತ್ಯವ್ರತ-ಮಾಯಾ ದಂಪತಿಗಳು ಡ್ರಾಯಿಂಗ್ ರೂಮಿಗೆ ಬಂದರು. ಸತ್ಯವ್ರತ ಗಂಗಾಪ್ರಸಾದನ ಹಳೆಯ ಗೆಳೆಯ.

ಬಂದವಳೇ ಮಾಯಾ ಹೇಳಿದಳು, "ಅಯ್ಯೋ, ಏನು ಅನರ್ಥವಾಗಿ ಹೋಯ್ತು, ನವಲ್! ಎಂಥ ಸಿಡಿಲು ಬಡೀತು! ಎಲ್ಲಿದಾರೆ ಅವರು? ನಮಗೆ ಕಾಹಿಲೆ ವಿಷಯ ತಿಳಿದದ್ದು ಕಾನಪುರದಲ್ಲಿ, ಅದೂ ತುಂಬ ತಡವಾಗಿ. ಅಲ್ಲಿಂದ ನಾವು ಸೀದಾ ಮಿರ್ಜಾಪುರಕ್ಕೆ ಹೋದೆವು. ಅಲ್ಲಿ ಹೋದಮೇಲೆ ನೀವು ಅಲಹಾಬಾದಿಗೆ ಹೊರಟು ಹೋದಿರಿ ಅಂತ ತಿಳಿಯಿತು. ಅವರ ದೇಹಸ್ಥಿತಿ ಹೇಗಿದೆ, ಹೇಳು."

ನವಲ್ ಇಬ್ಬರನ್ನೂ ಕೂರಿಸಿದ. "ಭುವಾಲೀಗೆ ಹೋಗಬೇಕು ಅಂತ ಡಾಕ್ಟರು ಹೇಳಿದಾರೆ. ನಾಳೆ ಬೆಳಗ್ಗೆ ಹೊರಡ್ತಿದೀವಿ."

"ಅಯ್ಯೋ ದೇವರೆ! ಭುವಾಲೀಗೆ ಹೋಗೋ ಅಂಥ ದುರ್ಗತಿ ಬಂತೆ ಅವರಿಗೆ!" ಮಾಯಾ ಬೊಬ್ಬೆಯಿಟ್ಟಳು. "ನಮ್ಮನ್ನ ಅವರ ಹತ್ತಿರ ಕರಕೊಂಡು ಹೋಗು. ನಮ್ಮ ಭಾಗದ ದೇವರು ಅವರು, ದರ್ಶನ ಮಾಡ್ತೀವಿ!"

"ತಾಳಿ, ನಿದ್ರೆ ಹತ್ತಿದೆಯೆ ಅಂತ ನೋಡ್ತೀನಿ. ನಿನ್ನೆ ಸಾಯಂಕಾಲದಿಂದ ದೇಹ ಸ್ಥಿತಿ ಸ್ವಲ್ಪ ವಾಸಿಯಾಗಿದೆ. ನೀವು ಕೂತುಕೊಳ್ಳಿ, ಬಂದೆ."

ನವಲ್ ವಾಪಸು ಬಂದು, "ಬನ್ನಿ, ನಿಮ್ಮನ್ನ ಕರೀತಿದಾರೆ," ಎಂದು ಮಾಯಾ, ಸತ್ಯವ್ರತರನ್ನು ಗಂಗಾಪ್ರಸಾದನ ಕೋಣೆಗೆ ಕರೆದೊಯ್ದ.

ಗಂಗಾಪ್ರಸಾದನನ್ನು ನೋಡಿದೊಡನೆಯೇ ಮಾಯಾ ಚೀತ್ಕರಿಸಿದಳು. "ಅಯ್ಯೋ ದೇವರೆ! ಇದೇನಾಯಿತು ನಿಮಗೆ! ಇಂಥ ದಿನಾನೂ ನೋಡೋದು ಹಣೇಲಿ ಬರೆ ದಿತ್ತೆ?" ಮಾಯಾ ಮುನ್ನುಗ್ಗಿ ಗಂಗಾಪ್ರಸಾದನ ಕಾಲುಗಳನ್ನು ಅಪ್ಪಿಕೊಂಡು ಜೋರುಜೋರಾಗಿ ಅಳತೊಡಗಿದಳು.

ಗಂಗಾಪ್ರಸಾದ ಬಹಳ ಪ್ರಯಾಸದಿಂದ ಅವಳಿಂದ ಕಾಲು ಬಿಡಿಸಿಕೊಂಡು ಹೇಳಿದ, "ಕೂತುಕೋ ಮಾಯಾದೇವಿ. ಹೇಗಿದಿ? ಮಕ್ಕಳೆಲ್ಲಾ ಚೆನ್ನಾಗಿದಾರೆ ತಾನೆ? ಯಾವಾಗ ಬಂದೆ?"

ಆದರೆ ಮಾಯಾ ಅಳುತ್ತಿದ್ದಳು, ಕಣ್ಣೀರು ಕರೆಯುತ್ತಿದ್ದಳು, ಹುಚ್ಚಿಯಂತೆ ಅರಚು ತ್ತಿದ್ದಳು. "ನಿಮಗೆ ಇದೇನಾಯಿತು? ಯಾಕಾಯಿತು? ಹೇಳಿ. ನಮಗೆ ನೀವು ನಿಮ್ಮ ಕಾಹಿಲೆ ವಿಷಯಾನೇ ತಿಳಿಸಿರಲಿಲ್ಲವಲ್ಲ. ಮಿರ್ಜಾಪುರಕ್ಕೆ ಹೋದೆವು. ಕಾನಪುರ ದಲ್ಲಿ ಕಾಯಿಲೆ ಬಗ್ಗೆ ಗಾಳಿವರ್ತಮಾನ ತಿಳೀತು. ಮಿರ್ಜಾಪುರಕ್ಕೆ ಹೋಗಿ, ಅಲ್ಲಿಂದ ಸೀದಾ ಇಲ್ಲಿಗೆ ಬಂದೆವು. ಅಯ್ಯೋ ರಾಮ, ಇದೇನು ನೋಡೋಹಾಗಾಯ್ತು!"

ಸತ್ಯವ್ರತ ಮೌನವಾಗಿ ಗಂಗಾಪ್ರಸಾದನನ್ನು ಅವನ ಗುರುತು ಸಿಗುತ್ತಿಲ್ಲವೋ ಎಂಬಂತೆ ಎಡೆಬಿಡದೆ ನೋಡುತ್ತಿದ್ದ. ದುರ್ಬಲವಾದ, ಶಿಥಿಲವಾದ, ಅಸಮರ್ಥವಾದ ಮೂಳೆಚಕ್ಕಳಗಳ ಒಂದು ಹಂದರ ಅವನ ಮುಂದಿತ್ತು. ಯಾರ ದರ್ಪಕ್ಕೆ ಜನ ನಡುಗುತ್ತಿದ್ದರೊ, ಯಾವನು ದೊಡ್ಡದೊಡ್ಡ ಇಂಗ್ಲೀಷಿನವರೊಡನೆ ಹೋರಾಡಬಲ್ಲವ ನಾಗಿದ್ದನೊ, ಆ ಗಂಗಾಪ್ರಸಾದ ಇವನೇಯೆ? ಯಾವನು ಉಲ್ಲಾಸ, ಉತ್ಸಾಹ, ಶಕ್ತಿ,

ಕರ್ಮಗಳ ಸಂಗಮದಂತಿದ್ದು, ಆ ಸಂಗಮದ ಮುಂದೆ ತಾನು ಪೆಚ್ಚಾಗಿ ತಲೆತಗ್ಗಿಸುತ್ತಿದ್ದನೊ, ಆ ಗಂಗಾಪ್ರಸಾದ ಎಲ್ಲಿ ಹೋದ? ಅವನ ಸ್ಥಳದಲ್ಲಿ ಈಗ ಒಬ್ಬ ದುರ್ಬಲ, ರೋಗಗ್ರಸ್ತ ವ್ಯಕ್ತಿ ತನ್ನ ಮುಂದೆ ಮಲಗಿದ್ದ. ಆ ವ್ಯಕ್ತಿಯ ಗುರುತು ಹಿಡಿಯುವುದು ಸಹ ಕಷ್ಟವಾಗುತ್ತಿತ್ತು.

ಆ ಹೊತ್ತಿಗೆ ಸತ್ಯವ್ರತನಿಗೆ ಗಂಗಾಪ್ರಸಾದನ ಹಿಂದಿನ ಪರಿಚಿತ ಧ್ವನಿ ಕೇಳಿಸಿತು, "ಏನು ಸತ್ಯವ್ರತ್? ಏನು ಯೋಚಿಸ್ತಿದಿ? ನೀವುಗಳು ಸೈಮನ್ ಕಮೀಷನ್ನಿಗೆ ಒಳ್ಳೇ ಭರ್ಜರೀ ಬಹಿಷ್ಕಾರ ಹಾಕಿದಿರಿ! ನಿಮ್ಮ ಮುಂದಿನ ಕಾರ್ಯಕ್ರಮ ಏನು?"

ಈ ವ್ಯಕ್ತಿಯಲ್ಲಿ ಇನ್ನೂ ಚೇತನವಿದೆ, ಇವನು ವರ್ತಮಾನವನ್ನು ಹಿಡಿತದಲ್ಲಿಟ್ಟುಕೊಂಡಿದ್ದಾನೆ ಎಂಬುದು ಸತ್ಯವ್ರತನಿಗೆ ಅನುಭವವಾಯಿತು. "ಈಗ ಸದ್ಯಕ್ಕೆ ನಮ್ಮ ಮುಂದೆ ಯಾವ ವಿಶೇಷ ಕಾರ್ಯಕ್ರಮವೂ ಇಲ್ಲ. ಹಿಂದೂ-ಮುಸ್ಲಿಂ ದೊಂಬಿ ಒಂದು ರೀತೀಲಿ ನಮ್ಮ ರಾಜಕೀಯ ಜೀವನಾನ ಚೂರುಚೂರುಮಾಡಿದೆ, ದೇಶದಲ್ಲಿ ಬಡತನ ತುಂಬಾ ಹೆಚ್ಚಿದೆ, ಬಡತನದ ಜೊತೇಗೆ ಅಸಂತೋಷವೂ ಬೆಳೆದಿದೆ."

ಗಂಗಾಪ್ರಸಾದ ನಕ್ಕ, "ದೇಶದ ಚೇತನ ಇದೆಲ್ಲಕ್ಕಿಂತ ದೊಡ್ಡದು, ಸತ್ಯವ್ರತ! ಸದ್ಯದಲ್ಲಿ ಯಾವದಾದರೂ ಆಂದೋಳನ ಷುರುವಾಗುತ್ತೆ ಅಂತ ನಿನಗೆ ಅನ್ನಿಸುತ್ತೆಯೆ?"

ಸತ್ಯವ್ರತ ನಿರಾಶನಾಗಿ ಹೇಳಿದ, "ನನಗೆ ಒಂದೂ ಹೊಳೀತಿಲ್ಲ. ಇಷ್ಟೊಂದು ಬಡತನ, ನಿರುದ್ಯೋಗಗಳಿದ್ದರೂ ಜನರಲ್ಲಿ ಯಾವ ಬಂಡಾಯದ ಭಾವನೆಯೂ ಕಾಣಬರೋಲ್ಲ. ನನ್ನ ಮನಸ್ಸಿನಲ್ಲಿ ಒಂದು ಬಗೆಯ ನಿರಾಶೆ ತುಂಬಿದೆ, ನನ್ನ ಸುತ್ತ ಮುತ್ತಲೂ ಒಂದು ವಿಚಿತ್ರವಾದ ಯಾತನೆ, ಕೊಳಕು, ದುರ್ಗಂಧ ಇರೋದು ಕಾಣ್ತಿದೆ."

"ಈ ಯಾತನೆ, ಕೊಳಕು, ದುರ್ಗಂಧಗಳಲ್ಲೇ ಬಂಡಾಯದ ಬೀಜವಿರೋದು, ಸತ್ಯವ್ರತ. ಜೀವನದ ನಿಯಮ ಅಂದರೆ ಕ್ರಿಯೆ; ಕ್ರಿಯೆ ಇರೋ ಕಡೆ ಪ್ರತಿಕ್ರಿಯೆಯೂ ಇರುತ್ತೆ. ಈ ಪ್ರತಿಕ್ರಿಯೆ ಕೊನೆಗಾಣಲೇಬೇಕು." ಗಂಗಾಪ್ರಸಾದ ಈಗ ಮಾಯಳ ಕಡೆ ತಿರುಗಿದ, "ನೀನು ಕಾಂಗ್ರೆಸ್ಸಿನ ಮುಂದಾಳಾಗಲಿಲ್ಲವಲ್ಲ, ಯಾಕೆ? ಈಚೆಗೆ ಪತ್ರಿಕೆಗಳಲ್ಲೆಲ್ಲೂ ನಿನ್ನ ಹೆಸರು ಕಾಣಲಿಲ್ಲವಲ್ಲ? ಸತ್ಯವ್ರತನಿಗೆ ನಿನ್ನನ್ನ ಕಂಡರೆ ಅಸೂಯೆ ಅಂತ ಕಾಣುತ್ತೆ."

"ಈ ಮುಂದಾಳುತನಕ್ಕೆ ಬೆಂಕಿ ಬಿತ್ತು! ನನಗೆ ನನ್ನ ಮಕ್ಕಳು ಪುರಸೊತ್ತು ಕೊಡಬೇಕಲ್ಲ! ಮನೆ-ಸಂಸಾರದ ಕೆಲಸ ಮುಗಿಸಿ ಒಂದಿಷ್ಟು ಬಿಡುವು ಸಿಕ್ಕಿದರೆ ಚರಖಾ-ಗಿರಖಾ ನೂಲ್ತೀನಿ. ಆದರೆ ನನಗೆ ಇದೆಲ್ಲಾ ವ್ಯರ್ಥ ಅಂತ ಅನ್ನಿಸುತ್ತೆ. ಅಯ್ಯೋ ಬಿಡಿ, ಈ ಮಾತನ್ನ. ನೀವು ನಿಮ್ಮ ವಿಷಯ ಹೇಳಿ."

"ನನ್ನದೇನು ಹೇಳಲಿ, ನೀವೇ ನೋಡ್ತಿದೀರಲ್ಲ. ನಿನ್ನೆಯಿಂದ ದೇಹಸ್ಥಿತಿ ಸ್ವಲ್ಪ ಸುಧಾರಿಸಿದೆ. ಸೆಪ್ಟೆಂಬರ್ ಹೊತ್ತಿಗೆ ಪೂರ್ತಿಯಾಗಿ ಗುಣವಾಗ್ತೀನಿ ಅಂತ ಅಂದುಕೊಂಡಿದೀನಿ. ನಾಳೆ ಬೆಳಗಿನ ಗಾಡೀಗೆ ಭುವಾಲೀಗೆ ಹೋಗ್ತಿದೀನಿ. ಇಲ್ಲಿ ಇಷ್ಟೊಂದು ಭಯಂಕರ ಸೆಕೆ; ಗುಣವಾಗೋದು ಸಾಧ್ಯವೇ ಇಲ್ಲ."

"ನಾವು ನಾಳೆ ಬೆಳಗ್ಗೆ ಸ್ಟೇಷನ್ನಿಗೆ ಬರ್ತೀವಿ," ಸತ್ಯವ್ರತ ಏಳುತ್ತ ಹೇಳಿದ. "ಈಗ ನೀವು ವಿಶ್ರಾಂತಿ ತೊಗೊಳ್ಳಿ. ಮಾತಾಡಿ ಸುಸ್ತಾಗಿದೆ ಅಂತ ಕಾಣುತ್ತೆ."

ಸತ್ಯವ್ರತ ಹೇಳಿದುದು ನಿಜ. ಗಂಗಾಪ್ರಸಾದ ನಿಜವಾಗಿಯೂ ದಣಿದಿದ್ದ. ಮಗ್ಗಲು ಬದಲಾಯಿಸಿಕೊಳ್ಳುತ್ತ ಅವನಂದ, "ಹೌದು, ಸುಸ್ತಂತೂ ಇದ್ದೇ ಇದೆ. ತುಂಬಾ ನಿಶ್ಶಕ್ತನಾಗಿದೀನಿ. ಒಳ್ಳೇದು, ನಾಳೆ ಬೆಳಗ್ಗೆ ಸ್ಟೇಷನ್ನಲ್ಲಿ ನೋಡೋಣ." ಗಂಗಾ ಪ್ರಸಾದ ಕಣ್ಣು ಮುಚ್ಚಿಕೊಂಡ.

ಇಡೀ ದಿನ ಗಂಗಾಪ್ರಸಾದನನ್ನು ನೋಡಿಹೋಗಲು ಜನ ಎಡೆಬಿಡದೆ ಬರುತ್ತಿದ್ದರು. ರಾತ್ರಿ ಸುಮಾರು ಎಂಟು ಗಂಟೆಯ ಹೊತ್ತಿಗೆ ಗಂಗಾಪ್ರಸಾದ ನವಲನನ್ನು ಕರೆದ. "ಏನು ನವಲ್, ನಾಳೆ ಬೆಳಗ್ಗೆ ನಾವು ಭುವಾಲೀಗೆ ಹೋಗಲೇಬೇಕೆ?"

ನವಲ್ ಆಶ್ಚರ್ಯದಿಂದ ಕೇಳಿದ, "ಯಾಕಪ್ಪ? ಏನು ಸಮಾಚಾರ? ಸಾಮಾ ನೆಲ್ಲಾ ಕಟ್ಟಿಆಗಿದೆ. ನಾಳೆ ಬೆಳಗ್ಗೆ ಬರೀ ಹಾಸಿಗೆ ಕಟ್ಬೋದೆಷ್ಟೋ ಅಷ್ಟೆ."

"ನಿನ್ನೆ, ಇವತ್ತು ನನ್ನ ದೇಹಸ್ಥಿತಿ ಇಷ್ಟೊಂದು ಸುಧಾರಿಸಿದೆ. ಪ್ರಾಯಶಃ ಇಲ್ಲೇ ಗುಣವಾಗುತ್ತೋ ಏನೋ ಅಂತ ಯೋಚಿಸ್ತಿದ್ದೆ." ಮತ್ತೆ ಏನೋ ಯೋಚಿಸಿ ಗಂಗಾ ಪ್ರಸಾದ ಹೇಳಿದ, "ಇಲ್ಲ, ಅಲ್ಲೇ ಹೋಗೋದು ವಾಸಿ. ವಾಸ್ತವವಾಗಿ ನಾನು ವಿದ್ಯಳ ಮದುವೆ ವಿಷಯ ಯೋಚಿಸ್ತಿದ್ದೆ. ನವಂಬರ್‌ನಲ್ಲಿ ಅವಳ ಮದುವೆಯಾಗಬೇಕು. ನಾನು ಭುವಾಲೀಗೆ ಹೋಗಿ ಇದ್ದರೆ ಅವಳ ಮದುವೆಯ ಏರ್ಪಾಡು ಯಾರು ಮಾಡ್ತಾರೆ? ಮಿರ್ಜಾಪುರದಿಂದ ಬಾಬು ವಿಂದೇಶ್ವರೀಪ್ರಸಾದರ ಕಾಗದ ಬಂದಿತ್ತು. ಅವರು ನವರಾತ್ರೀಲಿ 'ತಿಲಕ' ಕಳಿಸಿ ಅಂತಿದಾರೆ."

ನೀವು ಆ ಯೋಚನೆ ಮಾಡಬೇಡಿ. ನಾನು ಜುಲೈನಲ್ಲಿ ಇಲ್ಲೀಗೆ ವಾಪಸು ಬರ್ತೀನಿ. ಆಗ ಎಲ್ಲಾ ಏರ್ಪಾಡನ್ನೂ ಮಾಡ್ತೀನಿ. ಅಲ್ಲದೆ, ಮದುವೇನ ಬೇಕಾದರೆ ಮುಂದಕ್ಕೂ ಹಾಕ ಬಹುದು. ನಿಮ್ಮ ದೇಹಸ್ಥಿತಿ ಚೆನ್ನಾಗಿಲ್ಲ ಅನ್ನೋದು ಅವರಿಗೂ ತಿಳಿದುಬಂದಿರುತ್ತೆ."

ಗಂಗಾಪ್ರಸಾದ ಏನೋ ಯೋಚಿಸಿ ಹೇಳಿದ, "ನಾನು ಅವರಿಗೆ ಏನೂ ಉತ್ತರ ಬರೆದಿಲ್ಲ. ಭುವಾಲೀಗೆ ಹೋದಮೇಲೆ ಅಲ್ಲಿಂದ ಕಾಗದ ಬರೀತೀನಿ." ಇದ್ದಕ್ಕಿದ್ದಹಾಗೆ ಗಂಗಾಪ್ರಸಾದನ ಮುಖ ಬಿಗಿಯಿತು. "ಸ್ವಲ್ಪ ಉಗುಳೋದಕ್ಕೆ ತಟ್ಟೆ ಕೊಡು" ಅಂದ. ನವಲ್ ಬೇಗ ತಟ್ಟೆಯನ್ನು ಎತ್ತಿ ಹಿಡಿದ. ಆದರೆ ಅಷ್ಟರಲ್ಲಾಗಲೇ ಗಂಗಾಪ್ರಸಾದನಿಗೆ ಜೋರಾಗಿ ಕೆಮ್ಮು ಬಂದಿತು. ಕೆಮ್ಮಿನ ಹಿಂದೆಯೇ ರಕ್ತ ವಾಂತಿಯಾಯಿತು. ಆ ರಕ್ತದಿಂದ ಹಾಸಿಗೆಯೆಲ್ಲಾ ಒದ್ದೆಯಾಯಿತು.

ನವಲ್ ಗಾಬರಿಯಾದ. ಅವನು ಅಲ್ಲಿಂದಲೇ ಕೂಗಿಕೊಂಡ, "ತಾತ, ಸ್ವಲ್ಪ ಇಲ್ಲಿ ಬನ್ನಿ!"

ಅದೇ ಹೊತ್ತಿಗೆ ಗಂಗಾಪ್ರಸಾದ ಎರಡನೆಯ ಬಾರಿ ವಾಂತಿ ಮಾಡಿದ—ಗಂಟು ಗಂಟು ಮಾಂಸ, ರಕ್ತ! ಅವನ ಮುಖ ಕಪ್ಪಿಟ್ಟಿತು, ಕಣ್ಣುಗುಡ್ಡೆ ಮೇಲೆ ಸಿಕ್ಕಿಹಾಕಿ

ಕೊಂಡಿತು. ಜ್ವಾಲಾಪ್ರಸಾದ ಬರುವ ಹೊತ್ತಿಗೆ ಮೂರನೆಯ ಬಾರಿ ವಾಂತಿಯಾಯಿತು —ಹಾಗೆಯೇ ಕಪ್ಪಾದ, ಕೊಳೆತು ದುರ್ಗಂಧದಿಂದ ಕೂಡಿದ ಮಾಂಸದ ಗೆಡ್ಡೆ. ಗಂಗಾ ಪ್ರಸಾದ ಪ್ರಜ್ಞೆ ತಪ್ಪಿದ.

ಮನೆಯವರೆಲ್ಲಾ ಕೋಣೆಯಲ್ಲಿ ಗುಂಪುಗೂಡಿದರು. ಜ್ವಾಲಾಪ್ರಸಾದ ಡಾಕ್ಟರ್ ಶೇರ್‌ವುಡ್‌ರನ್ನು ಕರೆದು ತರಲು ಹೋದ.

ಡಾಕ್ಟರ್ ಶೇರ್‌ವುಡ್ ಬಂದು ಗಂಗಾಪ್ರಸಾದನನ್ನು ನೋಡಿದರು. ಅವನು ಪ್ರಜ್ಞೆತಪ್ಪಿ ಮಲಗಿದ್ದ. ಪೂರ್ಣವಾಗಿ ಪರೀಕ್ಷೆ ಮಾಡಿ ಡಾಕ್ಟರ್ ಶೇರ್‌ವುಡ್ ಹೇಳಿದರು, "ಇನ್ನು ಏನು ಮಾಡೋದೂ ಸಾಧ್ಯವಿಲ್ಲ. ಯಾವಾಗ ಬೇಕಾದರೂ ಸಾವು ಬರ ಬಹುದು. ಹೆಚ್ಚೆಂದರೆ ನಾಳೆ ಬೆಳಗಿನ ತನಕ ಜೀವ ಎಳೆದಾತು."

ಜ್ವಾಲಾಪ್ರಸಾದ ಗೋಳಾಡತೊಡಗಿದ, "ಹೇಗಾದರೂ ಮಾಡಿ ಇವನನ್ನ ಉಳಿಸಿ, ಡಾಕ್ಟರ್ ಸಾಹೇಬ್! ಏನಾದರೂ ಔಷಧಿ ಕೊಡಿ!"

"ಔಷಧಿ ಅಂದುಕೊಂಡು ಗಂಗಾಜಲ ಕೊಡಿ. ದೇವರು ಗ್ಯಾಲಪಿಂಗ್ ಟಿ.ಬಿ. ಕೊಟ್ಟವನನ್ನ ಯಾವ ಮನುಷ್ಯ ತಾನೇ ಬದುಕಿಸೋಕ್ಕೆ ಸಾಧ್ಯ! ಎಲ್ಲಾ ಮುಗೀತು!" ಹೀಗಂದು ಡಾಕ್ಟರ್ ಶೇರ್‌ವುಡ್ ಹೊರಟುಹೋದರು.

ಮನೆಯಲ್ಲೆಲ್ಲಾ ಗೋಳು ತುಂಬಿತು. ಜ್ವಾಲಾಪ್ರಸಾದ ನವಲರು ಸೇರಿಕೊಂಡು ಗಂಗಾಪ್ರಸಾದನನ್ನು ಮಂಚದಿಂದ ಎತ್ತಿ ನೆಲದ ಮೇಲೆ ಮಲಗಿಸಿದರು. ಬ್ರಾಹ್ಮಣ ರನ್ನು ಕರಸಿ ಗೋದಾನ ಮಾಡಿದ್ದಾಯಿತು. ಹೊರಗೆ ಪಂಡಿತರು ಮಹಾ ಮೃತ್ಯುಂಜಯ ಜಪ ಪಠಿಸಲು ಕುಳಿತರು. ಆ ಮನೆ ಈಗ ಮೃತ್ಯುವಿನ ಆಧಿಪತ್ಯದಲ್ಲಿದೆಯೋ ಎಂದು ನವಲನಿಗೆ ತೋರುತ್ತಿತ್ತು. ಕೋಣೆಯ ಹೊರಗಿನ ವರಾಂಡದಲ್ಲಿ ಯಮುನಾ ಪ್ರಜ್ಞೆ ತಪ್ಪಿ ಮಲಗಿದ್ದಳು. ರುಕ್ಮಿಣಿ ತಲೆತಲೆ ಬಡಿದುಕೊಳ್ಳುತ್ತಿದ್ದಳು. ಜ್ವಾಲಾಪ್ರಸಾದ ಮತ್ತು ನವಲರು ಗಂಗಾಪ್ರಸಾದನನ್ನು ಮೃತ್ಯುವಿನ ಪ್ರಹಾರದಿಂದ ರಕ್ಷಿಸಬಯಸಿದ್ದಾರೆಯೋ ಎಂಬಂತೆ ಕೋಣೆಯಲ್ಲಿ ಕುಳಿತಿದ್ದರು. ಕೇವಲ್, ಸುಧಾರನ್ನು ಕರೆದುಕೊಂಡು ವಿದ್ಯಾ ಹೊರಗಿನ ಅಂಗಳಕ್ಕೆ ಹೊರಟುಹೋಗಿದ್ದಳು. ಭೀಖೂ ಗಡಿಬಿಡಿಯಿಂದ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದ.

ಬೆಳಗಿನ ಜಾವ ಮೂರುಗಂಟೆಯ ಹೊತ್ತಿಗೆ ಗಂಗಾಪ್ರಸಾದ ಕಣ್ಣುತೆರೆದ. ಕಣ್ಣು ತೆರದ ತಕ್ಷಣ ಅವನ ದೃಷ್ಟಿ ನವಲನ ಮೇಲೆ ಬಿತ್ತು. "ನೀನು . . . ನೀನೆ!" ಎಂದ. ಆಮೇಲೆ ತಂದೆಯ ಕಡೆ ನೋಡಿ ಹೇಳಿದ, "ಅಪ್ಪ, ನವಲನ ಮೇಲೆ ಭರವಸೆ ಇಡಿ. ಅವನು ವಿದ್ಯಳ ಮದುವೆ ಮಾಡ್ತಾನೆ." ಆಮೇಲೆ ಒಮ್ಮೆ ಸುತ್ತಲೂ ನೋಡಿ ಸಂಜ್ಞೆ ಯಿಂದ ಯಮುನಳನ್ನು ಕರೆದು, "ನನ್ನ ಕೈಗೆ ನಿನ್ನ ಕಾಲು ಮುಟ್ಟಿಸಮ್ಮ!" ಅಂದ. ಮತ್ತೆ ರುಕ್ಮಿಣಿಯ ಕಡೆ ತಿರುಗಿ "ನಿನಗೆ ತುಂಬ ಕಷ್ಟಕೊಟ್ಟಿದೀನಿ, ಕ್ಷಮಿಸಿಬಿಡು!" ಅಂದ. ಮತ್ತೆ ಮಕ್ಕಳ ಕಡೆ ನೋಡಿದ. ಆದರೆ ಮಾತಾಡುವ ಶಕ್ತಿ ಕಡಿಮೆಯಾಗು

ತ್ತಿತ್ತು. ನವಲನ ಕಡೆ ನೋಡಿ, "ಇವರ ಭಾರವನ್ನು ನಿನ್ನ ಮೇಲೆ ಬಿಟ್ಟು ಹೋಗು ತ್ತಿದ್ದೀನಿ" ಎನ್ನುವವನಂತೆ ಮಕ್ಕಳ ಕಡೆ ಕೈಮಾಡಿ ತೋರಿಸಿದ. ಆಮೇಲೆ ಇದ್ದಕ್ಕಿದ್ದಂತೆ ಅವನ ದೃಷ್ಟಿ ವಿದ್ಯಳ ಕಡೆ ಹರಿದು ಅಲ್ಲೇ ನಿಂತುಕೊಂಡಿತು. ಅದೇ ಹೊತ್ತಿಗೆ ಅವನೊಮ್ಮೆ ಜೋರಾಗಿ ಬಿಕ್ಕಳಿಸಿದ. ತಲೆ ಜೋತುಬಿದ್ದಿತು.

ಮನೆಯಲ್ಲೆಲ್ಲಾ ಚೀತ್ಕಾರ ತುಂಬಿಕೊಂಡಿತು.

## ಮೂರು

ಮೂರು ದಿನಗಳಿಂದ ಎಡೆಬಿಡದೆ ಜಡಿಮಳೆ ಸುರಿಯುತ್ತಿದ್ದು ಅವತ್ತು ತಾನೇ ಮೋಡ ಚದುರತೊಡಗಿತ್ತು. ಸಂಜೆ ನವಲ್ ಚಹ ಕುಡಿದು ವರಾಂಡಕ್ಕೆ ಬಂದಾಗ ಆಕಾಶ ತಿಳಿ ಯಾಗಿತ್ತು. ಮುಳುಗುತ್ತಿದ್ದ ಸೂರ್ಯನ ಕಳೆಗುಂದಿದ ಕೆಂಬಿಸಿಲು ವರಾಂಡದಲ್ಲೆಲ್ಲಾ ಚೆಲ್ಲಿತ್ತು. ಜುಲೈ ತಿಂಗಳ ಕೊನೆಯ ವಾರ. ಎಲ್ಲೆಲ್ಲೂ ಹಸಿರೋ ಹಸಿರು. ಸ್ವಲ್ಪ ಹೊತ್ತಿಗೆ ಮುಂಚೆ ನವಲ್ ಯೂನಿವರ್ಸಿಟಿಯಿಂದ ದಣಿದು ಹಿಂದಿರುಗಿದ್ದ. ಕ್ಲಾಸು ಮುಗಿದಾಗ ಬಿಟ್ಟು ಬಿಟ್ಟು ಮಳೆ ಬರುತ್ತಿದ್ದುದರಿಂದ ಅವನು ತನ್ನ ಕೆಲ ಮಿತ್ರರೊಂದಿಗೆ ಕೊಂಚ ಹೊತ್ತು ಅಲ್ಲೇ ಇದ್ದ. ವಾಪಸು ಬರುವಾಗ ಯೂನಿವರ್ಸಿಟಿಯ ಗೇಟನ್ನು ಮುಟ್ಟುವ ಹೊತ್ತಿಗೆ ಅವನ ಸೈಕಲ್ ಪಂಕ್ಚರ್ ಆಗಿತ್ತು. ಪಂಕ್ಚರ್ ಹಾಕಿಸಲೆಂದು ಅವನು ಅಲ್ಲಿಂದ ಕರ್ನಲ್‌ಗಂಜಿಗೆ ಹೋಗಿದ್ದ.

ನವಲನ ಆ ದಣಿವು ಮಾನಸಿಕವಾದದ್ದು. ಒಂದು ವಾರದ ಹಿಂದೆ ಅವನು ವಿದ್ಯ ಳನ್ನು ಬನಾರಸ್ಸಿನಲ್ಲಿ ಬೋರ್ಡಿಂಗ್ ಹೌಸಿಗೆ ಸೇರಿಸಿ ಬಂದಿದ್ದ. ವಿದ್ಯಾ ಬಿ. ಎ. ಫೈನಲ್‌ನಲ್ಲಿದ್ದಳು. ಅವಳಿಗೆ ಬಿ. ಎ. ಪಾಸು ಮಾಡುವ ಇಚ್ಛೆ; ಜ್ವಾಲಾಪ್ರಸಾದನಿಗೆ ಮೊಮ್ಮಗಳು ಓದು ಮುಂದುವರಿಸುವುದು ಇಷ್ಟವಿರಲಿಲ್ಲ. ಆದರೆ ಅವಳು ಬಿ. ಎ. ಪಾಸುಮಾಡಿಯೇ ತೀರುವೆನೆಂದು ಹಟ ಹಿಡಿದಿದ್ದಳು. ನವಲ್ ವಿದ್ಯಳ ಪಕ್ಷವನ್ನು ಸಮರ್ಥಿಸಿದ್ದ. ಇವರಿಬ್ಬರ ಒತ್ತಾಯಕ್ಕೆ ಜ್ವಾಲಾಪ್ರಸಾದ ಮಣಿಯಲೇಬೇಕಾಗಿ ಬಂತು. ವಿದ್ಯಾ ಹೋದ ಮೇಲೆ ನವಲನಿಗೆ ಏನೋ ಒಂದು ತರಹದ ಏಕಾಕಿತನದ ಅನುಭವವಾಯಿತು. ವಿದ್ಯಾ ನವಲನಿಗಿಂತ ಎರಡೇ ವರ್ಷ ಚಿಕ್ಕವಳು. ಆದರೂ ಅವಳಿಂದ ಅವನಿಗೆ ತುಂಬ ಆಸರೆ ಸಿಗುತ್ತಿತ್ತು.

ನವಲ್ ಮೌನವಾಗಿ ವರಾಂಡದಲ್ಲಿ ಬಂದು ಕುಳಿತುಕೊಂಡ. ಅವನು ಯೋಚಿಸು ತ್ತಿದ್ದ. ಆದರೆ ಏನು ಯೋಚಿಸುತ್ತಿದ್ದನೆಂದು ಅವನಿಗೇ ತಿಳಿಯದು. ಆದರೆ ಅವನು ಯೋಚಿಸುತ್ತಿದ್ದುದಂತೂ ನಿಜ. ಒಂದರ ಹಿಂದೆ ಒಂದರಂತೆ ವಿಚಾರಗಳು ಯಾವ

ಸರಣಿಯೂ ಇಲ್ಲದೆ ಅವನ ತಲೆಯಲ್ಲಿ ಬರುತ್ತಿದ್ದವು, ಹೋಗುತ್ತಿದ್ದವು. ಈಚೆಗೆ ಮೂರು ತಿಂಗಳಲ್ಲಿ ಅವನ ಪ್ರಪಂಚ ಬದಲಾಗಿತ್ತು; ಅವನ ಬೆಲೆಗಳು ಬದಲಾಗಿದ್ದವು; ಅವನ ದೃಷ್ಟಿಕೋನ ಬದಲಾಗಿತ್ತು. ಅಷ್ಟೇ ಅಲ್ಲ, ಸ್ವತಃ ತಾನೇ ಬದಲಾಗಿದ್ದುದು ಅವನಿಗೆ ಅರಿವಾಗಿತ್ತು.

ಈ ಹೊತ್ತಿಗೆ ನವಲನಿಗೆ ಜ್ಞಾನಪ್ರಕಾಶನ ಧ್ವನಿ ಕೇಳಿಸಿತು, "ಏನಪ್ಪಾ ನವಲ್, ಏನು ಯೋಚಿಸ್ತಿದಿ?"

ನವಲ್ ಬೆಚ್ಚಿಬಿದ್ದ. ಎದುರಿಗೆ ಜ್ಞಾನಪ್ರಕಾಶ ನಗುತ್ತ ನಿಂತಿದ್ದ. ಅವನ ಮುಖದ ಮೇಲೆ ನವಲ್ ಯಾವತ್ತೂ ನೋಡುತ್ತ ಬಂದಿದ್ದ ಅದೇ ಸೌಮ್ಯತೆ, ಅದೇ ಸಾತ್ವಿಕತೆ, ಅದೇ ದೃಢತೆಗಳಿದ್ದವು. "ಏನಿಲ್ಲ, ಜ್ಞಾನಬಾಬಾ. ಮನಸ್ಸಿಗೆ ಒಂದಿಷ್ಟು ಬೇಜಾರಾಗಿತ್ತು ಅಂತ ಇಲ್ಲಿ ಬಂದು ಕೂತುಕೊಂಡೆ. ಎಷ್ಟೊಂದು ದಿನದ ಮೇಲೆ ಇವತ್ತು ಬಿಸಿಲು ಬಂದಿದೆ. ಮನೆಯ ಹೊಸಲು ದಾಟಿ ಎಷ್ಟೋ ದಿನವಾಯಿತು. ಇವತ್ತು ಸ್ವಲ್ಪ ಸುತ್ತಾಡಿಕೊಂಡು ಬರೋಣ ಅಂತ ಅಂದುಕೋತಿದ್ದೆ. ಇವತ್ತು ನೀವು ಕಾಂಗ್ರೆಸ್ ಆಫೀಸಿನಿಂದ ಬೇಗ ಬಂದಿದೀರಿ?"

"ಹೌದು, ಇವತ್ತು ಇಡೀ ದಿನ ಹೇಳತೀರದಷ್ಟು ಕೆಲಸಮಾಡಬೇಕಾಯಿತು. ತುಂಬಾ ಸುಸ್ತಾಗಿತ್ತು ಅಂತ ಎದ್ದುಬಂದೆ. ನೀನು ಚಹ ಕುಡಿದಾಯಿತು ಅಂತ ಕಾಣುತ್ತೆ!"

"ಹ್ಞಾ, ಈಗ ತಾನೇ ಕುಡಿದುಬಂದೆ. ನೀವು ಕೂತುಕೊಳ್ಳಿ, ಇಲ್ಲೇ ಚಹ ತರ್ತೀನಿ." ನವಲ್ ಎದ್ದು ಹೋಗಿ ಭೀಖುವಿಗೆ ಹೇಳಿದ, "ಭೀಖೂಬಾಬಾ, ಜ್ಞಾನಬಾಬಾ ಬಂದಿದಾರೆ. ಅವರಿಗೆ ಅಲ್ಲಿ ವರಾಂಡದಲ್ಲೇ ಚಹ ತಂದುಕೊಡು."

"ಈಗ ತಂದೆ! ಅಣ್ಣಾನೂ ಈಗ ತಾನೇ ಮಲಗಿ ಎದ್ದಿದಾರೆ. ಅವರನ್ನೂ ಅಲ್ಲೇ ಕರೀತೀನಿ."

ಜ್ವಾಲಾಪ್ರಸಾದ ತನ್ನ ಕೋಣೆಯಲ್ಲಿ ಕುಳಿತು ಗೀತಾಪಾಠ ಮಾಡುತ್ತಿದ್ದ. ನವಲ್ ಹೇಳಿದ, "ಚಹ ಸಿದ್ಧವಾಗ್ತಿದೆ. ಜ್ಞಾನಬಾಬಾನೂ ಬಂದಿದಾರೆ. ಹತ್ತು ಹದಿನೈದು ನಿಮಿಷ ಬಿಟ್ಟು ನೀವೂ ವರಾಂಡಕ್ಕೆ ಬನ್ನಿ, ನಿಮಗೆ ಕಾಯ್ತಿರ್ತೀವಿ."

"ಸರಿ ನಡಿ, ಈ ಅಧ್ಯಾಯ ಮುಗಿಸಿ ಬರ್ತೀನಿ," ಜ್ವಾಲಾಪ್ರಸಾದ ಹೇಳಿದ.

ನವಲ್ ವಾಪಸು ಬಂದು ಜ್ಞಾನಪ್ರಕಾಶನ ಹತ್ತಿರ ಕುಳಿತುಕೊಂಡ.

"ಅಂತೂ ನೀನು ಎಲ್-ಎಲ್. ಬಿ. ಗೆ ಸೇರಿಕೊಂಡೆ. ಯಾಕೆ, ವಿಲಾಯಿತಿಗೆ ಹೋಗೋ ಇರಾದೆ ಇಲ್ಲವೆ?"

"ಖಂಡಿತವಾಗಿಯೂ ಇಲ್ಲ, ಜ್ಞಾನಬಾಬಾ. ಮನೆಯ ಸ್ಥಿತಿಗತಿ ನಿಮಗೆ ಗೊತ್ತಿದೆ. ಜೊತೆಗೆ ಈ ವರ್ಷ ಎದ್ಯಳ ಮದುವೆ ಬೇರೆ ಆಗಬೇಕು. ಆ ಮದುವೆಗೆ ತುಂಬ ಖರ್ಚಿದೆ. ತಾತ ಹೇಗೆ ಮದುವೇನ ನಿಭಾಯಿಸ್ತಾರೋ ಕಾಣೆ."

"ನವಲ್, ಒಂದು ಮಾತು ಹೇಳ್ತೀನಿ. ತಪ್ಪು ತಿಳಕೋಬೇಡ. ನೀನು ಹಣ ಕಾಸಿನ ಚಿಂತೆ ಮಾಡಬೇಡ. ನನ್ನ ಖರ್ಚಿನಲ್ಲಿ ನೀನು ವಿಲಾಯಿತಿಗೆ ಹೋಗಿ ಬಾ. ಇದು ನಿನ್ನ ಕೆರಿಯರ್‌ನ ಪ್ರಶ್ನೆ. ಏನು ಹೇಳಲಿ, ಗಂಗನಿಗೆ ಕಾಹಿಲೆಯಾಗಿದ್ದಾಗ ನಾನು ವಿಲಾಯಿತೀಲಿದ್ದೆ. ನೀವುಗಳು ನನಗೆ ಸುದ್ದಿ ಕೂಡ ತಿಳಿಸಲಿಲ್ಲ."

"ಹೇಗೆ ಸುದ್ದಿ ಕಳಿಸೋದು, ಬಾಬಾ. ಅಪೆಂಡಿಸೈಟಿಸ್ ಆಪರೇಷನ್ ಮಾಡಿಸಿ ಕೊಂಡು ನೀವೇ ಅಲ್ಲಿ ಆಸ್ಪತ್ರೇಲಿದ್ದಿರಲ್ಲ."

"ಸರಿ, ಆದದ್ದು ಆಗಿಹೋಯ್ತು. ನಿನ್ನ ಪಾಸ್‌ಪೋರ್ಟ್ ನಿನ್ನ ಹತ್ತಿರಾನೇ ಇದೆ. ನೀನು ಹೇಗಿದ್ದರೂ ಸೆಪ್ಟೆಂಬರ್‌ನಲ್ಲಿ ಹೋಗಬೇಕಾಗಿತ್ತು. ಈಗಲೂ ಏನೂ ನಷ್ಟ ವಾಗಿಲ್ಲ. ನಾನು ಹೇಳ್ತೀನಿ, ನೀನು ವಿಲಾಯಿತಿಗೆ ಹೊರಟುಬಿಡು. ಯಾವ ವಿಷಯ ವಾಗಿಯೂ ಚಿಂತಿಸಬೇಡ."

ನವಲ್ ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ, "ಇಲ್ಲ, ಜ್ಞಾನಬಾಬಾ. ನಾನು ಇಲ್ಲಿದ್ದು ಸಂಸಾರ ನೋಡಿಕೋಬೇಕಾಗಿದೆ. ತಾತ ವಿದ್ಯಳ ಮದುವೇನ ಗೊತ್ತು ಮಾಡಿದ್ದಾರೆ. ಇದೇ ನವಂಬರ್‌ನಲ್ಲಿ ಆಗಬೇಕಾಗಿದೆ. ಅಲ್ಲದೆ ನನಗೀಗ ಐ.ಸಿ.ಎಸ್. ನ ಮೋಹವೂ ಉಳಿದಿಲ್ಲ."

ಈ ಹೊತ್ತಿಗೆ ಜ್ವಾಲಾಪ್ರಸಾದ ವರಾಂಡಕ್ಕೆ ಬಂದ. ಅವನು ತುಂಬ ಚಿಂತೆಯಲ್ಲಿ ದ್ದಂತೆ ಕಾಣುತ್ತಿತ್ತು. ಅಷ್ಟು ಹೊತ್ತಿಗೆ ಭೀಖೂ ವರಾಂಡದಲ್ಲಿ ಚಹ ತಂದಿಟ್ಟು ಹೋಗಿದ್ದ. ಜ್ವಾಲಾಪ್ರಸಾದ ಬಂದವನೇ ಹೇಳಿದ, "ಕೇಳಿದೆಯಾ ಜ್ಞಾನೂ, ಇವತ್ತು ಬಾಬು ವಿಂದೇಶ್ವರಿ ಪ್ರಸಾದರಿಂದ ಕಾಗದ ಬಂದಿದೆ. ಇನ್ನು ಮದುವೇನ ಮುಂದಕ್ಕೆ ಹಾಕೋ ಹಾಗಿಲ್ಲ. ನವರಾತ್ರೀಲಿ 'ತಿಲಕ' ಬಂದುಬಿಡಬೇಕು ಅಂತ ಬರೆದಿದಾರೆ."

ಜ್ಞಾನಪ್ರಕಾಶ ಉತ್ತರ ಕೊಟ್ಟ, "ಮದುವೆ ಮಾಡಲೇ ಬೇಕಾಗಿರುವಾಗ ಅದನ್ನ ಮುಂದೆ ಹಾಕೋ ಅವಶ್ಯಕತೆ ಏನಿದೆ? ನನಗೂ ಅದೇ ಅನ್ನಿಸುತ್ತೆ, ನವರಾತ್ರೀಲಿ 'ತಿಲಕ' ಕಳಿಸಿಕೊಡಿ, ನವೆಂಬರ್‌ನಲ್ಲಿ ಮದುವೆ ಮಾಡಿಬಿಡಿ."

ಜ್ವಾಲಾಪ್ರಸಾದ ಸೊರಗಿದ ಧ್ವನಿಯಲ್ಲಿ ಹೇಳಿದ, "ಅದೇನೋ ಸರಿ, ಆದರೆ ಎಂಟು ಸಾವಿರ ರೂಪಾಯಿನ 'ತಿಲಕ' ಕಳಿಸಬೇಕು. ಅಂದರೆ ಎಂಟು ಸಾವಿರ ರೂಪಾಯಿ ಹೊಂದಿಸಬೇಕು. ತಿಲಕ ಕಳಿಸೋದು ಅಂದರೆ ಹುಡುಗಾಟವೆ!"

ಜ್ಞಾನಪ್ರಕಾಶ ಕುರ್ಚಿಯಿಂದ ಒಮ್ಮೆಂದೊಮ್ಮೆಗೇ ನೆಗೆದವನಂತೆ ಎದ್ದು ನಿಂತ. "ಎಂಟು ಸಾವಿರ ರೂಪಾಯಿನ ತಿಲಕ! ನಿನಗೇನು ಹುಚ್ಚು ಹಿಡಿದಿದೆಯೇ, ಅಣ್ಣಾ! ಮನೇಲಿ ನೋಡಿದರೆ ಈ ಸ್ಥಿತಿ, ಎಂಟು ಸಾವಿರ ರೂಪಾಯಿನ 'ತಿಲಕ'!"

"ಏನು ಹೇಳಲಿ, ಗಂಗ ಇದನ್ನ ಗೊತ್ತುಮಾಡಿದ್ದ. ಸಿದ್ಧೇಶ್ವರೀಪ್ರಸಾದ ಪ್ರೊವಿನ್ಷಿ ಯಲ್ ಸಿವಿಲ್ ಸರ್ವಿಸ್‌ನಲ್ಲಿ ತೇರ್ಗಡೆಯಾದ ವರ. ಮೇನಲ್ಲಿ ಬಾಬು ವಿಂದೇಶ್ವರೀ ಪ್ರಸಾದರಿಂದ ಗಂಗನ ಸಾವಿಗೆ ಶೋಕಸೂಚನೆ ತಿಳಿಸಿ ಕಾಗದ ಬಂದಿತ್ತು. ಅದರಲ್ಲಿ

ಅವರು ರಾಜಾ ಜಸವಂತರಾಯರಿಂದ ಸಿದ್ಧೇಶ್ವರೀಪ್ರಸಾದನ ಮದುವೆಗೆ ಪ್ರಸ್ತಾಪ ಬಂದಿದೆ, ಇಪ್ಪತ್ತೈದು ಸಾವಿರ ರೂಪಾಯಿ ವರದಕ್ಷಿಣೆ ಕೊಡೋಕ್ಕೆ ಮುಂದಾಗಿದಾರೆ. ಆದರೆ ಗಂಗನ ನಿವೇದನೇನ ಆಗಲೇ ಒಪ್ಪಿಕೊಂಡು ಬಿಟ್ಟಿರೋದರಿಂದ ಜಸವಂತರಾಯರ ಪ್ರಸ್ತಾಪಕ್ಕೆ ಒಪ್ಪಿಗೆ ಕೊಡಲಿಲ್ಲ ಅಂತ ಬರೆದಿದ್ದರು. ಆ ಕಾಗದಾನ ನವಲನಿಗೂ ತೋರಿಸಿದ್ದೆ."

"ಎಂಟು ಸಾವಿರ ರೂಪಾಯಿನ 'ತಿಲಕ' ಅಂದರೆ ಒಟ್ಟು ಹದಿನೈದು ಸಾವಿರ ರೂಪಾಯಿ ವರದಕ್ಷಿಣೆ! ಏನು ನವಲ್, ಬಾಬು ವಿಂದೇಶ್ವರೀ ಪ್ರಸಾದರಿಗೆ ಹದಿನೈದು ಸಾವಿರ ರೂಪಾಯಿ ಕೊಡೋಕ್ಕೆ ಒಪ್ಪಿಕೊಂಡು ವಿದ್ಯಳ ಮದುವೆ ಮಾಡ್ತೀಯಾ?"

ನವಲ್ ಉತ್ತರಿಸಿದ, "ಜ್ಞಾನಬಾಬಾ, ಅಪ್ಪ ಈ ಮದುವೇನ ಗೊತ್ತುಮಾಡಿದ್ದರು ಅಂದಮೇಲೆ ಹೇಗೇ ಆಗಲಿ ಈ ಮದುವೆ ಆಗೇತೀರಬೇಕು!"

ಜ್ವಾಲಾಪ್ರಸಾದ ಚಹ ಕುಡಿಯುತ್ತ ಹೇಳಿದ, "ನಿನಗೆ ಬಾಬೂ ವಿಂದೇಶ್ವರೀ ಪ್ರಸಾದರು ತಿಳಿದವರು. ಒಪ್ಪಂದದ ಹಣಾನ ಕೊಂಚ ಕಡಿಮೆ ಮಾಡೋಕ್ಕೆ ಹೇಳು. ಹದಿನೈದು ಸಾವಿರ ರೂಪಾಯಿ ಒಪ್ಪಂದದ ಹಣ. ಸುಮಾರು ಎರಡು-ಮೂರು ಸಾವಿರ ರೂಪಾಯಿ ಮೇಲು ಖರ್ಚು. ಒಟ್ಟು ಹದಿನೆಂಟು ಸಾವಿರ ರೂಪಾಯಿ ಅಂದರೆ ತುಂಬಾ ಆಯ್ತು. ಅಲ್ಲದೆ ಅವರು ಮದುವೇನ ಮುಂದೆ ಹಾಕೋಕ್ಕೂ ಒಪ್ತಾ ಇಲ್ಲ."

ಜ್ಞಾನಪ್ರಕಾಶ ಬಿರುಸಾಗಿ ಹೇಳಿದ, "ಅಣ್ಣಾ, ಈ ವಿಂದೇಶ್ವರೀ ಪ್ರಸಾದ ಮನುಷ್ಯ ನಲ್ಲ, ಸಾಕ್ಷಾತ್ ಧನಪಿಶಾಚಿ. ಫೈಜಾಬಾದಿನ ಡಿಸ್ಟ್ರಿಕ್ಟ್ ಅಂಡ್ ಸೆಷನ್ಸ್ ಜಡ್ಜಿ, ದೊಡ್ಡ ಸಂಬಳ, ಮಗ ಡೆಪ್ಯುಟಿ ಕಲೆಕ್ಟರ್ ಆಗಿದ್ದಾನೆ. ಇಷ್ಟಾದರೂ ಕಾಸುಕಾಸಿಗೆ ಪ್ರಾಣ ಬಿಡ್ತಾನೆ. ಈ ಸಂಬಂಧ ಬಿಟ್ಟುಬಿಡೋದು ವಾಸಿ, ಇದಕ್ಕಿಂತ ಒಳ್ಳೇ ಗಂಡು ಸಿಗದೇ ಏನಿಲ್ಲ ಅಂತ ನನಗೆ ಅನ್ನಿಸುತ್ತೆ."

"ಜ್ಞಾನೂ, ಸಂಬಂಧ ಮುರಿಯೋದು ಈಗ ಸಾಧ್ಯವಿಲ್ಲ. ಒಂದು ಪಕ್ಷ ನಾನು ಒಪ್ಪಿದೆ ಅಂತ ಇಟ್ಟುಕೊಂಡರೂ ನವಲ್ ಮಾತ್ರ ಅದಕ್ಕೆ ಒಪ್ಪೋನಲ್ಲ. ಗಂಗಾ ಏನೊಂದು ಗೊತ್ತುಮಾಡಿದಾನೋ ಅದು ಅವನ ಪಾಲಿಗೆ ಲಕ್ಷ್ಮಣರೇಖೆ."

ಜ್ಞಾನಪ್ರಕಾಶ ನವಲನ ಕಡೆ ನೋಡಿದ. ನವಲ್ ತಲೆತಗ್ಗಿಸಿಕೊಂಡು ಮೌನ ವಾಗಿ ಕುಳಿತಿದ್ದ. ಜ್ಞಾನಪ್ರಕಾಶ ಕೊಂಚ ಯೋಚಿಸಿ ಕೇಳಿದ, "ನಿಮ್ಮ ಹತ್ತಿರ ಒಟ್ಟು ಎಷ್ಟು ಹಣ ಇದೆ?"

"ನನ್ನ ಹತ್ತಿರ ಬ್ಯಾಂಕಿನಲ್ಲಿ ಒಟ್ಟು ಎರಡು ಸಾವಿರ ರೂಪಾಯಿ ಇದೆ. ಗಂಗನ ಸಾಲಾನೆಲ್ಲಾ ತೀರಿಸಿದ ಮೇಲೆ ಅವನದ್ದು ಸುಮಾರು ಸಾವಿರದ ಇನ್ನೂರು ರೂಪಾಯಿ ಇತ್ತು. ಅವನ ವಜ್ರದ ಉಂಗುರಾನ ಕಲಕತ್ತೇಲಿ ಮಾರಿಸಿದೆವು, ಐದೂವರೆ ಸಾವಿರ ರೂಪಾಯಿಗೆ ಹೋಯಿತು. ಒಟ್ಟು ಎಂಟೂಮುಕ್ಕಾಲು ಸಾವಿರ ಇದ್ದ ಹಾಗೆ ಆಗುತ್ತೆ."

"ಒಂಬತ್ತು ಅಂತ ಇಟ್ಕೊಳಿ. ಅಂದರೆ ವರದಕ್ಷಿಣೇಗೆ ಇನ್ನೂ ಆರು ಸಾವಿರ

ರೂಪಾಯಿ ಕಡಿಮೆ ಬೀಳುತ್ತೆ. ಒಂದು ಪಕ್ಷ ನೀವು 'ತಿಲಕ' ಕಳಿಸಿಕೊಟ್ಟಿರಿ ಅಂತಾನೇ ಇಟ್ಕೊಳಿ, ಆಗ ಮದುವೇಗೆ ಇನ್ನೂ ಎಂಟು ಒಂಬತ್ತು ಸಾವಿರ ರೂಪಾಯಿ ಹೊಂದಿಸ ಬೇಕಾಗುತ್ತೆ. ಇದರ ಬಗ್ಗೆ ಏನು ಯೋಚಿಸಿದ್ದೀರಿ?"

"ಇದುವರೆಗೂ ಏನೂ ಯೋಚಿಸಿಲ್ಲ, ಯೋಚಿಸಬೇಕಾಗಿದೆ. ಗಂಗನ ಕಾರಿನ ಕಡೇದು ಒಂದು ಸಾವಿರ ರೂಪಾಯಿ ಬರೋದಿದೆ. ಉಳಿದ ಆರೇಳು ಸಾವಿರ ರೂಪಾಯಿ ಸಾಲ ಎತ್ತಬೇಕಾಗುತ್ತೆ." ಸ್ವಲ್ಪ ಯೋಚಿಸಿ ಜ್ವಾಲಾಪ್ರಸಾದ ಮತ್ತೆ ಮುಂದುವರಿಸಿದ, "ಜ್ಞಾನೂ, ನಿಮ್ಮ ಅಣ್ಣ ಸತ್ಯಪ್ರಕಾಶನಿಗೆ ಬರೆದು ನೀನು ಎರಡು ಸಾವಿರ ರೂಪಾಯಿಗೆ ಏರ್ಪಾಡು ಮಾಡು. ಲಕ್ಷ್ಮೀಚಂದನ ಹತ್ತಿರ ಸುಮಾರು ಐದು ಸಾವಿರ ಸಿಗುತ್ತೆ ಅಂತ ಅಂದುಕೊಂಡಿದೀನಿ. ಹೇಗೆ ಆಗಲಿ, ಈ ಮದುವೇನ ಮಾಡಲೇಬೇಕು."

ಜ್ವಾಲಾಪ್ರಸಾದನ ಮಾತಿಗೆ ಜ್ಞಾನಪ್ರಕಾಶ ಏನೂ ಉತ್ತರ ಕೊಡಲಿಲ್ಲ. ಅವನು ಚಹ ಕುಡಿದು ಮೌನವಾಗಿ ತನ್ನ ಕೋಣೆಗೆ ಹೊರಟುಹೋದ.

ಜ್ಞಾನಪ್ರಕಾಶ ಹೋದ ಮೇಲೆ ಜ್ವಾಲಾಪ್ರಸಾದ ನವಲನನ್ನು ಕೇಳಿದ, "ನವಲ್, ಏನು ಮಾಡೋಣ ಹೇಳು."

"ತಿಲಕವನ್ನಂತೂ ಕಳಿಸಲೇಬೇಕು, ತಾತ. ಮಾತು ಕೊಟ್ಟಿದ್ದಾಗಿದೆ. ಹೇಗೇ ಆಗಲಿ, ಅವರ ಮನೇಗೆ ಕೊಟ್ಟೇ ವಿದ್ಯಳ ಮದುವೆ ಆಗಬೇಕು."

"ಒಳ್ಳೇದು," ಜ್ವಾಲಾಪ್ರಸಾದ ಹೇಳಿದ, "ಅವರು ಇಷ್ಟಪಟ್ಟಿರೋ ಹಾಗೆ ನವರಾತ್ರಿ ಹೊತ್ತಿಗೆ, ಎಂಟು ಸಾವಿರ ರೂಪಾಯಿನ 'ತಿಲಕ' ಬರುತ್ತೆ ಅಂತ ಬರೆದುಬಿಡ್ತೀನಿ."

ಬಿಸಿಲು ಈಗ ಪೂರ್ಣವಾಗಿ ಇಳಿದಿತ್ತು. ನವಲ್ ಮನೆಯೊಳಗೆ ಹೋಗಿ ಹೊರ ಹೋಗುವ ಉದ್ದೇಶದಿಂದ ಬಟ್ಟೆ ಬದಲಾಯಿಸಿಕೊಂಡು ಬಂದ. ಅವನು ಮತ್ತೆ ವರಾಂಡಕ್ಕೆ ಬಂದಾಗ ಜ್ಞಾನಪ್ರಕಾಶನ ಧ್ವನಿ ಕೇಳಿಸಿತು, "ನವಲ್, ಸ್ವಲ್ಪ ಇಲ್ಲಿ ಬಾ".

ನವಲ್ ಹೋಗಿ ನೋಡಿದ. ಜ್ಞಾನಪ್ರಕಾಶ ತನ್ನ ಕೋಣೆಯಲ್ಲಿ ಅತ್ತಿಂದಿತ್ತ ಜೋರಾಗಿ ಶತಪಥ ಹಾಕುತ್ತಿದ್ದ. ನವಲ್ ಬಂದೊಡನೆಯೇ ಅವನಂದ, "ನವಲ್, ನನ್ನ ಹತ್ತಿರ ಈಗ ಮೂರು ಸಾವಿರ ರೂಪಾಯಿ ಇದೆ. ಅದರಲ್ಲಿ ನೀನು ಎರಡುಸಾವಿರ ತೊಗೊ! ಆದರೆ ಅದನ್ನ ನಿಮ್ಮ ತಾತನಿಗೆ ಕೊಡಬೇಡ, ನಿಮ್ಮ ಅಮ್ಮನ ಹತ್ತಿರ ಇಟ್ಟಿರು. ನಾನು ಸತ್ಯಪ್ರಕಾಶಣ್ಣನಿಗೆ ಬರೀತೀನಿ. ಆದರೆ ಅವರು ಹೊತ್ತಿಗೆ ಸರಿಯಾಗಿ ಹಣ ಕಳಸ್ತಾರೆ ಅನ್ನೋ ಭರವಸೆಯಿಲ್ಲ."

"ಇಷ್ಟು ಬೇಗ ಏನು ಅವಸರ, ಜ್ಞಾನಬಾಬಾ," ನವಲ್ ಕೇಳಿದ. ಜ್ಞಾನಪ್ರಕಾಶ ಸಿಟ್ಟಾಗಿ ಹೇಳಿದ, "ನಾನು ಹೇಳಿದ ಹಾಗೆ ಮಾಡು! ನನ್ನದು ಸಹ ಏನು ನೆಚ್ಚಿಕೆ! ನನ್ನ ಹತ್ತಿರ ಯಾವಾಗ, ಹೇಗೆ ಈ ಹಣ ಖರ್ಚಾಗಿ ಹೋಗುತ್ತೋ! ಮೊದಲು ಈ ರೂಪಾಯಿಯನ್ನ ನಿಮ್ಮ ಅಮ್ಮನ ಹತ್ತಿರ ಇಟ್ಟು ಬಾ, ಆಮೇಲೆ ಹೋಗುವೆಯಂತೆ. ಈಗ ಹೋಗು!" ಜ್ಞಾನಪ್ರಕಾಶ ಮೊದಲಿನಂತೆಯೇ ಶತಪಥ ತಿರುಗಲಾರಂಭಿಸಿದ.

ಸೆಪ್ಟೆಂಬರ್ ತಿಂಗಳ ಕೊನೆಯ ವಾರದಲ್ಲಿ ವಿದ್ಯಳ ಮದುವೆಯ 'ತಿಲಕ' ಹೋಗುವುದಿತ್ತು. ದಸರಾ ರಜಾಕ್ಕೆ ವಿದ್ಯಾ ಬನಾರಸ್ಸಿನಿಂದ ಅಲಹಾಬಾದಿಗೆ ಬಂದಿದ್ದಳು. ಆದರೆ ಅವಳಿಗೆ ಸಂತೋಷವಿರಲಿಲ್ಲ. ತಿಲಕ ಹೋಗಲಿದ್ದ ಹಿಂದಿನ ದಿನ ಸಂಜೆ ವಿದ್ಯಾ ನವಲನಿಗೆ ಹೇಳಿದಳು, "ನಡಿ ಅಣ್ಣ, ಕೊಂಚ ಆಲ್‌ಫ್ರೆಡ್ ಪಾರ್ಕ್‌ವರೆಗೆ ಹೋಗಿಬರೋಣ. ಮನೆಯಲ್ಲಿ ಕೂತೂ ಕೂತೂ ಉಸಿರು ಕಟ್ಟಿಹೋಗಿದೆ."

ವಿದ್ಯಳ ಈ ಸೂಚನೆಯಿಂದ ನವಲನಿಗೆ ಆಶ್ಚರ್ಯವಾಯಿತು. ಅವನು ಅವಳ ಜೊತೆ ಆಲ್‌ಫ್ರೆಡ್ ಪಾರ್ಕಿನ ಕಡೆ ಹೊರಟ. ಮಳೆ ನಿಂತು ಸಾಕಷ್ಟು ದಿನವಾಗಿತ್ತು. ಆದರೆ ದಗೆ ಮಾತ್ರ ಇದ್ದ ಹಾಗೇ ಇತ್ತು. ರಾಮಲೀಲದ ಮೆರವಣಿಗೆ ನೋಡಲು ಜನ ಪೇಟೆಯ ಕಡೆ ಹೋಗಿದ್ದರು. ಪಾರ್ಕ್ ತಲಪಿದಾಗ ವಿದ್ಯಾ ಹೇಳಿದಳು, "ಅಣ್ಣಾ, ಒಂದು ಮಾತು ಕೇಳಬೇಕಾಗಿದೆ. ನನ್ನ ಮದುವೆಗೆ ಎಷ್ಟು ವರದಕ್ಷಿಣೆ ಕೊಡ್ತಿದೀರಿ?"

"ಅದನ್ನ ಕಟ್ಟಿಕೊಂಡು ನಿನಗೇನು?" ನವಲ್ ಕೇಳಿದ, "ಅಪ್ಪ ಎಷ್ಟು ಗೊತ್ತು ಮಾಡಿ ಹೋಗಿದ್ದರೋ ಅಷ್ಟನ್ನು ಕೊಡುತ್ತೆ."

"ಅದನ್ನ ಕಟ್ಟಿಕೊಂಡು ನಿನಗೇನು ಅಂದರೆ ವರದಕ್ಷಿಣೆ ಕೊಡ್ತಿರೋದು ನನ್ನ ಮದುವೇಗೆ. ಇಲ್ಲ ಅಣ್ಣ, ನೀನು ಹೇಳಲೇಬೇಕು."

"ಎಂಟು ಸಾವಿರ ರೂಪಾಯಿನ 'ತಿಲಕ' ಹೋಗ್ತಿದೆ. ನಾಲ್ಕು ಸಾವಿರ ರೂಪಾಯಿ ನಗದು, ಉಳಿದದ್ದು ಸಾಮಾನು."

"ನಾಲ್ಕು ಸಾವಿರ ರೂಪಾಯಿ ನಗದು, ಉಳಿದದ್ದು ಸಾಮಾನು!" ವಿದ್ಯಾ ಮತ್ತೆ ಅದನ್ನೇ ಉಚ್ಚರಿಸಿದಳು. "ಇದರ ಅರ್ಥ ಒಟ್ಟು ಹದಿನೈದು ಸಾವಿರ ರೂಪಾಯಿ ವರದಕ್ಷಿಣೆ ಗೊತ್ತಾಗಿದೆ ಅಂದಹಾಗಾಯ್ತು."

"ಹೌದು, ಈ ವರದಕ್ಷಿಣೇನ ಅಪ್ಪ ಗೊತ್ತುಮಾಡಿದ್ದರು," ನವಲ್ ಹೇಳಿದ.

"ನೀನು ವಿಲಾಯಿತಿಗೆ ಯಾಕೆ ಹೋಗಲಿಲ್ಲ ಅನ್ನೋದು ಈಗ ನನಗೆ ಗೊತ್ತಾಯ್ತು. ಅಪ್ಪ ಏನನ್ನೂ ಬಿಟ್ಟು ಹೋಗಿರಲಿಲ್ಲ, ಈ ಹಣ ಎಲ್ಲಿಂದ ಬಂತು?"

ನವಲ್ ಕೋಪದಿಂದ ಹೇಳಿದ, "ವಕೀಲಿ ಕಲೀತಿರೋನು ನಾನು. ಪಾಟೀ ಸವಾಲು ಮಾಡ್ತಿರೋಳು ನೀನು! ಈ ಮಾತನ್ನ ಅಷ್ಟಕ್ಕೆ ಬಿಡು, ತಾತ ಈ ಹಣದ ವ್ಯವಸ್ಥೆ ಮಾಡಿದಾರೆ; ಇನ್ನೂ ಒಂದಿಷ್ಟು ಮಾಡೋದಿದೆ. ಇದನ್ನೆಲ್ಲಾ ಕೇಳೋಕ್ಕೆ ಅಂತಾನೇ ನೀನು ನನ್ನನ್ನ 'ಹೊರಗೆ ಹೋಗೋಣ, ಬಾ' ಅಂದೆಯಾ?"

"ಹೌದಣ್ಣ, ಇದನ್ನೆಲ್ಲಾ ಕೇಳೋಕೆ ಅಂತಾನೇ. ನನ್ನ ಮದುವೆಯಿಂದಾಗಿ ಈ ಮನೆ ಹಾಳಾಗಿ ಹೋಗ್ತಿದೆ. ಬಾಬು ವಿಂದೇಶ್ವರೀ ಪ್ರಸಾದರಿಗೆ ವರದಕ್ಷಿಣೆ ಕಡಿಮೆ ಮಾಡಿ ಅಂತ ತಾತ ಬರೆದಿದ್ದರು, ಆದರೆ ಅವರು ಕಟ್ಟುನಿಟ್ಟಾಗಿ ಇಲ್ಲ ಅಂದುಬಿಟ್ಟರು ಅಂತ ಕೇಳಿದೆ. ಹೌದೆ, ಅಣ್ಣ?"

ನವಲ್ ನಕ್ಕ, "ನಿಮ್ಮ ಮಾವನೋರ ಹೆಸರು ಹೇಳ್ತಿದೀಯಲ್ಲ, ನಾಚಿಕೆಯಾಗೊಲ್ಲವೆ! ಹೌದು, ಅದು ನಿಜ."

ಸ್ವಲ್ಪ ಸುಮ್ಮನಿದ್ದು ವಿದ್ಯಾ ಹೇಳಿದಳು. "ಅಣ್ಣ, ನನ್ನ ಮದುವೇನ ಅವರ ಮನೇಗೆ ಕೊಟ್ಟು ಮಾಡಬೇಡಿ. ಅಲ್ಲದೆ, ನನಗೆ ಮದುವೆ ಮಾಡಿಕೊಳ್ಳೋಕ್ಕೂ ಇಷ್ಟ ವಿಲ್ಲ." ವಿದ್ಯಳ ಕಣ್ಣಿನ ಕಟ್ಟೆ ಒಡೆಯಿತು.

ನವಲ್ ವಿದ್ಯಳ ಕೈಹಿಡಿದುಕೊಂಡು ಹೇಳಿದ, "ವಿದ್ಯಾ, ಈಗಾಗಲೇ ಮದುವೆಯ ಮಾತು ತುಂಬಾ ಮುಂದೆ ಹೋಗಿದೆ. ಅಪ್ಪ ಕೊಟ್ಟಿದ್ದ ಮಾತನ್ನು ನಾವು ಉಳಿಸಿಕೊಳ್ಳಲೇ ಬೇಕು. ಇನ್ನು ಮನೆ ಹಾಳಾಗೋ ಮಾತು : ಮಾಡೋನೂ ದೇವರೇ, ಮುರಿಯೋನೂ ದೇವರೇ. ಈ ಮದುವೆಯಿಂದಾಗಿ ಸಂಸಾರಾನೂ ಹಾಳಾಗೋಲ್ಲ, ನಾನೂ ಹಾಳಾ ಗೋಲ್ಲ—ಇಷ್ಟು ಭರವಸೆ ಕೊಡ್ತೀನಿ."

"ಆದರೆ ನಾನು ಹಾಳಾಗಿಹೋಗ್ತೀನಿ, ಅಣ್ಣ! ಕೈಮುಗಿದು ಕೇಳಿಕೋತೀನಿ. ನನ್ನನ್ನ ಆ ಧನಪಿಶಾಚಿಗಳ ಮನೇಗೆ ಅಟ್ಟಬೇಡ. ಇನ್ನೂ ಕಾಲ ಮಿಂಚಿಲ್ಲ."

ತ್ಯಾಗ, ಉತ್ಕರ್ಷೆ, ಕರ್ತವ್ಯ, ನಿಷ್ಠೆಗಳ ಮತ್ತಿನಲ್ಲಿ ಕಳೆದುಹೋಗಿದ್ದ ನವಲನಿಗೆ ವಿದ್ಯಳ ಆಂತರಿಕ ಭಾವನೆ ಅರ್ಥವಾಗದೇ ಹೋಯಿತು. ವಿದ್ಯಳನ್ನು ಅಟ್ಟಿಕೊಳ್ಳುತ್ತ ಅವನಂದ, "ಇನ್ನು ಮುಂದೆ ಈ ತರಹದ ಮಾತಾಡಬೇಡ, ವಿದ್ಯಾ! ಅಪ್ಪ ಕೊಟ್ಟಿದ್ದ ವಚನ ಅದು. ಅಪ್ಪ ನಿನ್ನ ಮೇಲಿನ ಜವಾಬ್ದಾರೀನ ನನಗೆ ಬಿಟ್ಟು ಹೋಗಿದಾರೆ. ನಿಜ ಹೇಳ್ತೀನಿ, ಕೇಳು. ವಿಲಾಯಿತಿಗೆ ಹೋಗೋಕ್ಕೆ ಸ್ವತಃ ನನಗೇ ಇಷ್ಟವಿಲ್ಲ. ನಾನು 'ಹ್ಞೂ' ಅಂದರೆ ಜ್ಞಾನಬಾಬಾ ನನ್ನನ್ನ ತಮ್ಮ ದುಡ್ಡಿನಲ್ಲಿ ಕಳಿಸೋಕ್ಕೆ ಮುಂದೆ ಬಂದಿದಾರೆ. ನಡಿ, ಮನೇಗೆ ಹೋಗೋಣ. ಹೊತ್ತಾಗಿದೆ. ಇನ್ನು ಮುಂದೆ ಎಂದೆಂದಿಗೂ ಈ ವಿಷಯವಾಗಿ ತುಟಿ ಪಿಟಕ್ಕೆನ್ನಬೇಡ."

ವಿದ್ಯಾ ಕಣ್ಣೊರಸಿಕೊಳ್ಳುತ್ತ ಹೇಳಿದಳು, "ನೀನು ನನ್ನ ಮಾತನ್ನ ಅರ್ಥಮಾಡಿ ಕೋತಿಲ್ಲ; ಅದು ನಿನಗೆ ಅರ್ಥವೂ ಆಗೋಲ್ಲ." ಒಂದು ನಿಟ್ಟುಸಿರು ಬಿಟ್ಟು ಮುಂದು ವರಿಸಿದಳು, "ನೀನು ಹೇಳಿದ ಹಾಗೆ ಮಾಡ್ತೀನಿ. ಆದರೆ ಈಗ ನನ್ನ ಬಿ.ಎ. ಫೈನಲ್ ನಡೀತೀದೆ, ಈ ಮದುವೆಯಿಂದಾಗಿ ನನ್ನ ಓದು ನಿಲ್ಲೋ ಹಾಗಾಗಬಾರದು. ಬಿ.ಎ. ಪಾಸಾಗೋವರೆಗೆ ಓದಸ್ತೀನಿ ಅಂತ ಮಾತುಕೊಡು . . . ಹೇಳಣ್ಣ, ನನಗೆ ಬಿ.ಎ. ಪಾಸು ಮಾಡಸ್ತೀನಿ ಅಂತ."

ನವಲ್ ವಿದ್ಯಳ ಮಾತಿಗೆ ಕರಗಿಹೋದ, "ವಿದ್ಯಾ, ಬಿ.ಎ. ಪಾಸು ಮಾಡಸ್ತೀನಿ ಅಂತ ಮಾತುಕೊಡ್ತೀನಿ."

ನವಮಿಯ ದಿನ ಬೆಳಗ್ಗೆ ನವಲ 'ತಿಲಕ' ತೆಗೆದುಕೊಂಡು ಫೈಜಾಬಾದ್ ತಲಪಿದ. ಬಾಬು ವಿಂದೇಶ್ವರೀಪ್ರಸಾದರು ನವಲನನ್ನು ಎದುರುಗೊಳ್ಳಲು ತಾವೇ ಖುದ್ದಾಗಿ

ಸ್ಟೇಷನ್ನಿಗೆ ಬಂದಿದ್ದರು. ಅವರು ಎಷ್ಟು ಸೌಮ್ಯವಾಗಿದ್ದರು ! ವಿಂದೇಶ್ವರೀಪ್ರಸಾದರನ್ನು ನವಲ ಮೊದಲ ಬಾರಿಗೆ ನೋಡುತ್ತಿದ್ದ. "ಚೆನ್ನಾಗಿದೀಯ? ರೈಲುಪ್ರಯಾಣದಲ್ಲಿ ತೊಂದರೆ-ಗಿಂದರೆ ಆಗಲಿಲ್ಲ ತಾನೆ?" ವಿಂದೇಶ್ವರೀಪ್ರಸಾದರು ಕೇಳಿದರು.

ವಿಂದೇಶ್ವರೀಪ್ರಸಾದರ ಈ ನಡವಳಿಕೆಯನ್ನು ನೋಡಿ ನವಲನಿಗೆ ಸಂತೋಷವಾಯಿತು. ಸಂಜೆ 'ತಿಲಕ' ಒಪ್ಪಿಸಿಕೊಳ್ಳುವ ಮುಂಚೆ ವಿಂದೇಶ್ವರೀಪ್ರಸಾದರು ನವಲನನ್ನು ಕೇಳಿದರು, "ಎಲ್ಲಿ, ತಿಲಕದಲ್ಲಿ ಏನೇನು ಸಾಮಾನು ತಂದಿದಿ, ನೋಡೋಣ?"

ನವಲ್ ಟ್ರಂಕಿನ ಬಾಗಿಲು ತೆಗೆದು ಒಂದೊಂದಾಗಿ ಸಾಮಾನುಗಳನ್ನು ಹೊರತೆಗೆದ. ಅವನ್ನು ತಟ್ಟೆಗಳಲ್ಲಿ ಅಣಿಯಾಗಿ ಜೋಡಿಸಿದ್ದಾಯಿತು. ಸಾಮಾನುಗಳನ್ನು ನೋಡಿದ ಕೂಡಲೇ ವಿಂದೇಶ್ವರೀಪ್ರಸಾದರ ಮುಖ ಗಂಟಿಕ್ಕಿತು. ಅವರಂದರು, "ನಗದು ನಾಲ್ಕು ಸಾವಿರ ರೂಪಾಯಿಯೇನೋ ಸರಿ, ಆದರೆ ಬಾಕಿ ಸಾಮಾನು ನಾಲ್ಕು ಸಾವಿರದಷ್ಟಿಲ್ಲ. ಇದು ಸರಿಯಲ್ಲ!"

ನವಲ್ ಸಾಮಾನಿನ ಪಟ್ಟಿಯನ್ನು ತೆಗೆದು ವಿಂದೇಶ್ವರೀಪ್ರಸಾದರ ಕೈಲಿಡುತ್ತ ಹೇಳಿದ, "ತಾತ ಪಟ್ಟಿ ಕಳಿಸಿದಾರೆ."

"ಆ ಪಟ್ಟೀನ ತೊಗೊಂಡು ನೆಕ್ಕು!" ವಿಂದೇಶ್ವರೀಪ್ರಸಾದರು ವ್ಯಂಗ್ಯವಾಗಿ ಹೇಳಿದರು, "ಪ್ರತಿಯೊಂದು ಸಾಮಾನಿನ ಬೆಲೇನೂ ಒಂದಕ್ಕೆ ಒಂದೂವರೆಯಷ್ಟು ಬರೆದಿರಬೇಕು. ನಾನು ಕಾಣೆನೆ!" ಈಗ ನವಲ್ ವಿಂದೇಶ್ವರೀಪ್ರಸಾದರ ಇನ್ನೊಂದು ರೂಪವನ್ನು ನೋಡಿದ, "ನಿಮಗೆ ಯೋಗ್ಯತೆಯಿಲ್ಲದಿದ್ದರೆ ನಮ್ಮಲ್ಲಿ ಮದುವೆ ಯಾಕೆ ಗೊತ್ತುಮಾಡಿಕೋಬೇಕಾಗಿತ್ತು?"

ಪಟ್ಟಿಯಲ್ಲಿ ಪ್ರತಿಯೊಂದು ವಸ್ತುವಿನ ಬೆಲೆಯನ್ನೂ ಒಂದಕ್ಕೆ ಒಂದೂವರೆಯಷ್ಟು ಬರೆದಿತ್ತೆಂದು ನವಲನಿಗೆ ಗೊತ್ತಿತ್ತು. ಆದರೆ ಈ ಯೋಗ್ಯತೆಯ ಮಾತೆತ್ತಿದ್ದು ಅವನಿಗೆ ಸರಿಬೀಳಲಿಲ್ಲ. ಅವನಂದ, "ಹೆಣ್ಣಿನೋರಿಗೆ ಯೋಗ್ಯತೆ ಅನ್ನೋದು ಇರುತ್ತಾದರೂ ಎಲ್ಲಿ? ಅಲ್ಲದೆ ಯಾರಿಗೆ ಯೋಗ್ಯತೆ ಇತ್ತೋ ಅವರು ಈಗಿಲ್ಲ. ನಾವು ಮೊದಲೇ ನಿಮಗೆ ಈ ಮಾತನ್ನ ಬರೆದಿದ್ದೆವು. ಹೀಗೆ ಆಗೋ ಹಾಗೆ ಮಾಡಿದ ದೇವರಿಗೆ ಏನು ಹೇಳೋಣ!"

ನವಲನ ಈ ವಿನಯ ವಿಂದೇಶ್ವರೀಪ್ರಸಾದರ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. "ನೀನು ನಮ್ಮ ಮರ್ಯಾದೆ ಕಳೆದೆ. ಬರೋ ಜನ ಈ 'ತಿಲಕ'ವನ್ನ ನೋಡಿ ಏನು ಅನ್ನೋಲ್ಲ! ದೊಡ್ಡ ದೊಡ್ಡ ಆಫೀಸರು, ಜಮೀನ್ದಾರರು, ಸಾಹುಕಾರರುಗಳನ್ನ ಕರೆದಿದೀವಿ. ನನ್ನ ಹತ್ತಿರ ಈ ದಗಾಮೋಸವೆಲ್ಲಾ ನಡೆಯೋಲ್ಲ ಅಂತ ನಿಮ್ಮ ತಾತನಿಗೆ ಹೇಳು. ಮದುವೇಲಿ ನನಗೆ ನಗದು ನಾಲ್ಕುಸಾವಿರ ರೂಪಾಯಿ ಕೊಡಬೇಕು. ಈ ಸಾಮಾನುಗೀಮಾನೆಲ್ಲಾ ಬೇಕಾಗಿಲ್ಲ. ಇದು ನಮ್ಮಲ್ಲೇ ಕೊಳೆತು ಹೋಗೋ ಅಷ್ಟು ಬಿದ್ದಿದೆ."

ನವಲನಿಗೆ ಪ್ರಾಣ ಹಾರಿಹೋದಂತಾಯಿತು. 'ತಿಲಕ' ಒಪ್ಪಿಸಿ, ಮಾರನೆಯ ಬೆಳಗ್ಗೆಯೇ ಅವನು ಅಲಹಾಬಾದಿಗೆ ಹೊರಟ. ಊರು ಸೇರಿ ಜ್ವಾಲಾಪ್ರಸಾದನಿಗೆ 'ತಿಲಕ'ದ ವಿಷಯವನ್ನೆಲ್ಲಾ ವಿವರಿಸಿ ಹೇಳಿದ, "ತಾತ, ನಾವು ಎಂಥ ಧನಪಿಶಾಚಿಗಳ ಕೈಲಿ ಸಿಕ್ಕಿಬಿದ್ದಿದೀವಿ! ಜ್ಞಾನಬಾಬಾ ಸರಿಯಾಗಿ ಹೇಳಿದ್ದರು. ಅವರ ಮನೇಗೆ ನಮ್ಮ ವಿದ್ಯಳನ್ನ ಕೊಡೋಕ್ಕೆ ಒಪ್ಪಿ ತಪ್ಪು ಕೆಲಸ ಮಾಡಿದೆವು."

ಜ್ವಾಲಾಪ್ರಸಾದ ಇದನ್ನು ಕೇಳಿ ಗರಬಡಿದಂತಾದ. ಅವನ ಹತ್ತಿರ ಈಗ ಕೇವಲ ಮೂರು ಸಾವಿರ ರೂಪಾಯಿಗಳಿದ್ದವು. ಮದುವೆಗೆ ಉಳಿದಿದ್ದುದು ಎರಡು ತಿಂಗಳು ಮಾತ್ರ. ಅವನು ಚಿಂತೆ ತುಂಬಿದ್ದ ಧ್ವನಿಯಲ್ಲಿ ಹೇಳಿದ, "ಆದದ್ದಾಯಿತು, ನವಲ್. ನಮಗಿನ್ನೂ ಒಂಬತ್ತು ಸಾವಿರ ರೂಪಾಯಿಯ ಖರ್ಚಿದೆ. ನನ್ನ ಹತ್ತಿರ ಈಗ ಒಟ್ಟು ಮೂರು ಸಾವಿರ ರೂಪಾಯಿ ಇದೆ. ಅಂದರೆ ಇನ್ನೂ ಆರು ಸಾವಿರ ರೂಪಾಯಿ ಹೊಂದಿಸಬೇಕಾಗುತ್ತೆ."

"ಹೌದು, ತಾತ. ಇನ್ನೂ ಆರು ಸಾವಿರ ರೂಪಾಯಿ ಹೊಂದಿಸಬೇಕು. ಅದು ಬಿಟ್ಟು ಬೇರೆ ದಾರಿಯೇ ಇಲ್ಲ." ನವಲನ ಧ್ವನಿ ಇಳಿಬಿದ್ದಿತ್ತು.

ಜ್ವಾಲಾಪ್ರಸಾದ ಅಸಹಾಯಕ ಧ್ವನಿಯಲ್ಲಿ ಹೇಳಿದ, "ಏನು ಹೇಳಲಿ. ಸತ್ಯ ಪ್ರಕಾಶನಿಂದ ಎರಡು ಸಾವಿರ ರೂಪಾಯಿ ಇಸಕೊಡು ಅಂತ ಜ್ಞಾನಪ್ರಕಾಶನಿಗೆ ಹೇಳಿದ್ದೆ. ನಾನೂ ಸತ್ಯಪ್ರಕಾಶನಿಗೆ ಎರಡು ಕಾಗದ ಬರೆದಿದ್ದೆ. ಆದರೆ ಅವನಿಂದಲೂ ಜವಾಬಿಲ್ಲ, ಜ್ಞಾನಪ್ರಕಾಶನೂ ಈ ವಿಷಯವಾಗಿ ಮತ್ತೆ ಮಾತೆತ್ತಲಿಲ್ಲ."

ಜ್ಞಾನಪ್ರಕಾಶ ತನಗೆ ಕೊಟ್ಟಿದ್ದ ರೂಪಾಯಿಯ ವಿಷಯವನ್ನು ನವಲ್ ಮರೆತೇ ಬಿಟ್ಟಿದ್ದ. ಅವನಂದ, "ತಾತ, ಎರಡು ತಿಂಗಳ ಹಿಂದೇನೇ ಜ್ಞಾನಬಾಬಾ ನನಗೆ ಎರಡು ಸಾವಿರ ರೂಪಾಯಿ ಕೊಟ್ಟುಹೋಗಿದ್ದರು. ಅದನ್ನ ಅಮ್ಮನ ಹತ್ತಿರ ಇಟ್ಟಿದೀನಿ. ನೀವು ಇನ್ನು ಬರೀ ನಾಲ್ಕು ಸಾವಿರ ರೂಪಾಯಿ ಹೊಂದಿಸಿದರಾಯಿತು."

ಜ್ವಾಲಾಪ್ರಸಾದನ ಮುಖ ಅರಳಿತು. "ದೇವರು ಮನಸ್ಸುಮಾಡಿದರೆ ಅದೂ ಆಗುತ್ತೆ. ನಾನು ಇವತ್ತೇ ಲಕ್ಷ್ಮೀಚಂದನಿಗೆ ಬರೀತೀನಿ—ಅವನಿಂದ ಸುಮಾರು ಐದುಸಾವಿರ ರೂಪಾಯಿ ಸಿಗಬಹುದು."

ಅದೇ ಹೊತ್ತಿಗೆ ಜ್ಞಾನಪ್ರಕಾಶನ ಧ್ವನಿ ಕೇಳಿಸಿತು, "ನೀವು ಲಕ್ಷ್ಮೀಚಂದನ ಆಸೆ ಇಟ್ಟುಕೋಬೇಡಿ. ಇನ್ನು ಯಾರ ಬಾಗಿಲನ್ನಾದರೂ ನೋಡಿ. ಸತ್ಯಪ್ರಕಾಶಣ್ಣನೂ ಕಟ್ಟುನಿಟ್ಟಾಗಿ ಇಲ್ಲ ಅಂದುಬಿಟ್ಟರು."

"ಜ್ಞಾನೂ, ನೀನು ಹೇಗೂ ಎರಡು ಸಾವಿರ ರೂಪಾಯಿ ಕೊಟ್ಟೇ ಬಿಟ್ಟಿದಿ. ನಿನ್ನಿಂದ ದೊಡ್ಡ ಸಹಾಯವಾಗಿದೆ. ಲಕ್ಷ್ಮೀಚಂದ ಈ ಹೊತ್ತಿನಲ್ಲಿ ನನಗೆ ಸಹಾಯ ಮಾಡದೇ ಇರೋಲ್ಲ ಅಂತ ನನಗೆ ಪೂರಾ ವಿಶ್ವಾಸವಿದೆ. ಕಾನಪುರಕ್ಕೆ ಹೋಗಿ ಖುದ್ದಾಗಿ ಅವನನ್ನು ನೋಡಿ ಬರಲೆ ಅಂತ ಯೋಚಿಸ್ತಿದೀನಿ."

"ಹ್ಞಾ, ಖುದ್ದಾಗಿ ಹೋದರೆ ದಾಕ್ಷಿಣ್ಯಕ್ಕೆ ಗಂಟುಬಿದ್ದು ಐನೂರೋ ಸಾವಿರವೋ ಕೊಟ್ಟಾನು!"

ಅವತ್ತು ಸಂಜೆ ವಿದ್ಯಾ ನವಲನಿಗೆ ಹೇಳಿದಳು, "ಅಣ್ಣಾ, ನಾನು ಇನ್ನು ನಿನಗೆ ಏನೂ ಹೇಳೋಲ್ಲ. ಇದುವರೆಗೆ ಆದದ್ದನ್ನು ನೀನು ನೋಡಿಯೇ ಇದಿ. ಮುಂದಾಗೋದನ್ನ ನಾನು ಅನುಭವಿಸ್ತೀನಿ. ನೀನು ನಾಳೆ ನನ್ನನ್ನ ಬನಾರಸ್ಸಿಗೆ ತಲಪಿಸಿ ಬಾ!"

ನವಲನ ಜೀವ ಗೋಳಿಡುತ್ತಿತ್ತು. "ವಿದ್ಯಾ, ನನ್ನನ್ನ ಕ್ಷಮಿಸು. ನಮ್ಮಿಂದ ಮಹಾಪರಾಧವಾಗಿದೆ."

"ತಪ್ಪಂತೂ ಆಗಿಹೋಗಿದೆ, ಅದನ್ನ ಇನ್ನು ಸರಿಪಡಿಸೋಕ್ಕೆ ಆಗೋಲ್ಲ. ಆದರೆ ನಾನು ನೀನು ಕೊಟ್ಟಿದ್ದ ಮಾತನ್ನ ನೆನಪುಮಾಡಿಕೊಡ್ತೀನಿ. ನನಗೆ ಬಿ.ಎ. ಪಾಸು ಮಾಡಿಸ್ತೀನಿ ಅಂತ ನೀನು ಹೇಳಿದ್ದೆ."

"ಹೌದು, ವಿದ್ಯಾ. ನಾನು ಅದನ್ನ ನಡಸಿಕೊಡ್ತೀನಿ," ನವಲ ಹೇಳಿದ. "ನಾಳೆ ನಿನ್ನನ್ನ ಬನಾರಸ್ಸಿಗೆ ತಲಪಿಸಿ ಬರ್ತೀನಿ. ನೀನು ನಿಶ್ಚಿಂತೆಯಾಗಿ ಓದು. ನೀನು ಓದು ಮುಗಿಸೋದರಲ್ಲಿ ಯಾವ ತರಹದ ಅಡ್ಡಿಆತಂಕವೂ ಬರೋಲ್ಲ. ಇದು ನನ್ನ ಜವಾಬ್ದಾರಿ."

ದಿನ ಬೇಗಬೇಗನೆ ಕಳೆಯುತ್ತಿತ್ತು. ಆದರೆ ಜ್ವಾಲಾಪ್ರಸಾದನಿಗೆ ಮಾತ್ರ ಹಣದ ಏರ್ಪಾಡು ಮಾಡಲಾಗಲಿಲ್ಲ. ಜ್ಞಾನಪ್ರಕಾಶ ಹೇಳಿದ್ದಂತೆ ಲಕ್ಷ್ಮೀಚಂದ ಸಾಲಕೊಡಲು ತನ್ನ ಅಸಹಾಯತೆಯನ್ನು ವ್ಯಕ್ತಪಡಿಸುತ್ತ ಹೇಳಿದ, "ಚಿಕ್ಕಪ್ಪ, ನನ್ನ ಸ್ಥಿತಿಯೂ ಚೆನ್ನಾಗಿಲ್ಲ. ಹುಡುಗಿಯ ಮದುವೆಗೆ ಕನ್ಯಾದಾನದ ರೂಪದಲ್ಲಿ ಒಂದು ಸಾವಿರ ರೂಪಾಯಿ ಕೊಡ್ತೀನಿ; ಪ್ರಾಯಶಃ ನನಗೆ ಮದುವೆಗೆ ಬರೋಕ್ಕಾಗೋಲ್ಲ." ಹೀಗಂದು ಲಕ್ಷ್ಮೀಚಂದ ಜ್ವಾಲಾಪ್ರಸಾದನಿಗೆ ಸಾವಿರ ರೂಪಾಯಿ ತೆಗೆದುಕೊಟ್ಟ. ಇನ್ನೂ ಮೂರು ಸಾವಿರ ರೂಪಾಯಿ ಕಡಿಮೆ ಬಿದ್ದಿತ್ತು. ಉಡುಗೊರೆಗಳಿಂದ ಸುಮಾರು ಸಾವಿರ ರೂಪಾಯಿ ಸಿಗುವುದೆಂದು ಜ್ವಾಲಾಪ್ರಸಾದ ಬಲ್ಲ. ಆದರೆ ಅದು ಅನಿಶ್ಚಿತವಾದ ಮುಂದಿನ ಮಾತು.

ನವೆಂಬರ್ ತಿಂಗಳ ಮೂರನೆಯ ವಾರ ಮುಗಿದಿತ್ತು. ಜ್ವಾಲಾಪ್ರಸಾದನ ನೆಂಟರಿಷ್ಟರು ಬರಲಾರಂಭಿಸಿದರು. ಮನೆಯಲ್ಲಿ ಗದ್ದಲ, ಗಡಿಬಿಡಿ ಷುರುವಾಗಿತ್ತು. ನವಲ್ ವಿದ್ಯಳನ್ನು ಕರೆತರಲು ಬನಾರಸ್ಸಿಗೆ ಹೋಗಿದ್ದವನು ನವೆಂಬರ್ ಇಪ್ಪತ್ತಮೂರಕ್ಕೆ ವಾಪಸು ಬಂದ. ವಿದ್ಯಳಿಗೆ ಎಣ್ಣೆಶಾಸ್ತ್ರವಾಯಿತು.

ಬೀಗರ ಮನೆಯ ಮೇಲ್ವಿಚಾರಣೆ ನವಲನ ಪಾಲಿಗೆ ಬಂದಿತ್ತು. ಅವನು ಬನಾರಸ್ಸಿನಿಂದ ವಾಪಸು ಬಂದ ತಕ್ಷಣ ಕೆಲಸಕಾರ್ಯದಲ್ಲಿ ತೊಡಗಿದ. ವ್ಯವಸ್ಥೆಯೆಲ್ಲವನ್ನೂ ಸಂತೋಷದಿಂದ ಮಾಡಿದ. ಜ್ವಾಲಾಪ್ರಸಾದ ಮನೆಯ ಏರ್ಪಾಡು ನೋಡಿಕೊಳ್ಳುತ್ತಿದ್ದ. ಆದರೆ ಅದು ಹೆಸರಿಗೆ ಮಾತ್ರ; ವಾಸ್ತವವಾಗಿ ಆ ಕೆಲಸವೆಲ್ಲವೂ ಭೀಖುವಿನ

ಕೈಯಲ್ಲಿತ್ತು. ಹೊರಗಿನಿಂದ ಸಾಮಾನು ಸರಂಜಾಮು ತರುವುದರಲ್ಲಿ ನವಲ್ ಭೀಖು ವಿಗೆ ಸಹಾಯಮಾಡುತ್ತಿದ್ದ.

ಅವತ್ತು ಕೈಗಾಡಿಯಲ್ಲಿ ದಿನಸಿ ಹೇರಿಸಿಕೊಂಡು ನವಲ್ ಮನೆಗೆ ಬಂದಾಗ ಭೀಖೂ ಹೇಳಿದ, "ಒಳಗೆ ದಿವಾನಖಾನೇಲಿ ಅಣ್ಣನೂ ಜ್ಞಾನಣ್ಣನೂ ಏನೋ ಮಾತಾಡ್ತಿದಾರೆ. ಇಬ್ಬರಿಗೂ ಏನೋ ಜಗಳವಾಗ್ತಿದೆ ಅಂತ ಅನ್ನಿಸುತ್ತೆ. ಹೋಗಿ ಸ್ವಲ್ಪ ನೋಡು."

ನವಲ್ ಡ್ರಾಯಿಂಗ್ ರೂಮಿಗೆ ಹೋಗಿ ನೋಡಿದ, ಜ್ಞಾನಪ್ರಕಾಶ ಹೇಳುತ್ತಿದ್ದ, "ಏನೇ ಆಗಲಿ, ನಿಮಗೆ ಸಾಲ ಎತ್ತೋಕ್ಕೆ ಬಿಡೋದಿಲ್ಲ. ಬಟ್ಟೆಲಶಾಸ್ತ್ರದಲ್ಲಿ ಎರಡು ಸಾವಿರ ರೂಪಾಯಿ ಕೊಡಬೇಡಿ. ಆ ಹಣಾನ ಆಮೇಲೆ ಕಳಸ್ತೀವಿ ಅಂತ ಹೇಳಿಬಿಡಿ."

"ತುಂಬ ಅನರ್ಥವಾಗುತ್ತೆ, ಜ್ಞಾನೂ. ನಿನಗೆ ಗೊತ್ತಾಗೋಲ್ಲ," ಜ್ವಾಲಾಪ್ರಸಾದ ಹೇಳಿದ. "ಈ ಎರಡು ಸಾವಿರ ರೂಪಾಯಿಯನ್ನ ಹೇಗಾದರೂ ಜೊತೆಮಾಡಲೇಬೇಕು."

"ನಾಡಿದ್ದು ಮದುವೆ ಇಟ್ಟುಕೊಂಡು ಇವತ್ತು ಹಣ ಜೊತೆಮಾಡೋಕ್ಕೆ ಹೊರಟಿದೀರಿ," ಜ್ಞಾನಪ್ರಕಾಶ ಹೇಳಿದ. "ಹಣ ಬಜಾರಿನಲ್ಲಿ ಕೊಳ್ಳೇ ಹೋಗ್ತಿದೆ, ಗೋರಿಕೊಂಡು ಬರೋದೊಂದು ಬಾಕಿ ಅನ್ನೋಹಾಗೆ. ನಿಮ್ಮ ಹತ್ತಿರ ಎಷ್ಟು ಹಣ ಇದೆಯೋ ಅಷ್ಟರಲ್ಲಿ ಕೆಲಸಕಾರ್‍ಯಾನೆಲ್ಲಾ ಮುಗಿಸಿಕೊಳ್ಳಿ! ನೀವು ಮಗಳ ಮದುವೆ ಮಾಡ್ತಿದೀರಿ, ಮರ್ಯಾದೆ ಮಾರಿಕೊಳ್ಳೋಕೆ ಹೊರಟಿಲ್ಲ!"

ಜ್ವಾಲಾಪ್ರಸಾದ ಒಂದು ಕಹಿ ನಗೆ ನಕ್ಕ. "ಮಗಳ ಮದುವೆ ಮಾಡೋದು, ಮರ್ಯಾದೆ ಮಾರಿಕೊಳ್ಳೋದು ಎರಡೂ ಒಂದೇ, ಜ್ಞಾನೂ! ಈ ಮನೇನ ಯಾರಿಗಾದರೂ ಆಧಾರಕ್ಕೆ ಹಾಕಿಸು; ಕೊನೇ ಪಕ್ಷ ಸಾವಿರ ರೂಪಾಯಿ ಸಿಕ್ಕೇ ಸಿಗುತ್ತೆ. ಯಾರ ಹತ್ತಿರವಾದರೂ ಗೊತ್ತುಮಾಡು."

"ಮನೆ ಆಧಾರ ಮಾಡೋದು, ಕಾಗದಪತ್ರ ಸಿದ್ಧಮಾಡೋದು, ಸಾಲ ಕೊಡೋ ಸಾಹುಕಾರರನ್ನ ಹುಡುಕೋದು—ಏನಣ್ಣ, ನಿನ್ನ ಬುದ್ಧಿ ಕೆಟ್ಟಿದೆಯೋ ಹೇಗೆ? ಒಂದಕ್ಕೆರಡು ಬಡ್ಡಿ ಕೊಡಬೇಕಾಗುತ್ತೆ. ಉಹ್ಞೂ, ಇದೊಂದರಿಂದಾನೂ ಕೆಲಸ ಆಗೋಲ್ಲ. ನಮ್ಮ ಹತ್ತಿರ ಅಷ್ಟು ಸಮಯವೂ ಇಲ್ಲ."

ಜ್ವಾಲಾಪ್ರಸಾದ ಸ್ವಲ್ಪಹೊತ್ತು ಯೋಚಿಸುತ್ತಿದ್ದ. ಆಮೇಲೆ ನವಲನಿಗೆ, "ಸ್ವಲ್ಪ ನಿಮ್ಮ ಅಜ್ಜೀನ ಕರಿ" ಅಂದ.

ನವಲ ಯಮುನಳನ್ನು ಕರೆತಂದ. ಯಮುನಾ ಹೇಳಿದಳು, "ಅಂಗಳದಲ್ಲಿ ಎಲ್ಲರೂ ಸೇರಿದಾರೆ. ದೇವೀಪೂಜೆ ನಡೀತಿದೆ. ನಾನು ಬೇಗ ಹೋಗಬೇಕು."

ಜ್ವಾಲಾಪ್ರಸಾದ ಹೇಳಿದ, "ಎರಡುಸಾವಿರ ರೂಪಾಯಿ ಕಡಿಮೆ ಬಿದ್ದಿದೆ. ಎಲ್ಲೂ ಹೊಂದಿಸೋಕ್ಕೆ ಆಗ್ತಾ ಇಲ್ಲ."

"ನಾನೇನು ಮಾಡಲಿ? ಅದು ನಿಮ್ಮ ಗಂಡುಗಂಡಸರ ಕೆಲಸ. ನೀವಿದೀರಿ, ಜ್ಞಾನೂಲಾಲ ಇದಾನೆ..."

ಜ್ವಾಲಾಪ್ರಸಾದ ಕಿಡಿಕಿಡಿಯಾಗಿ ಹೇಳಿದ, "ನಮ್ಮ ಕೈಲಿ ಆಗೋ ಹಾಗಿದ್ದರೆ ನಿನ್ನನ್ನ ಯಾಕೆ ಕರೀತಿದ್ದೆವು?"

ಯಮುನಾ ಅನುಮಾನದಿಂದ ಕೇಳಿದಳು, "ಹಾಗಾದರೆ ಯಾಕೆ ಕರೆದಿರಿ, ಹೇಳಿ?"

"ಅದೇ ಹೇಳ್ತಿದೀನಿ. ನಿನ್ನದು, ಸೊಸೇದು ಒಂದಿಷ್ಟು ಒಡವೆ ಕೊಡು. ಅವನ್ನ ಗಿರಿವಿ ಇಟ್ಟು ಹಣ ಜೊತೆ ಮಾಡಬೇಕಾಗಿದೆ."

ಯಮುನಾ ಅರಚಿದಳು, "ಅಯ್ಯೋ ರಾಮ, ಈಗ ಈ ಗತಿ ಬಂತೆ?"

ಜ್ವಾಲಾಪ್ರಸಾದ ಹೇಳಿದ, "ಬೇರೆ ಉಪಾಯವೇ ಇಲ್ಲ. ಹತ್ತಿರ ಇದ್ದದ್ದೆಲ್ಲಾ ಖರ್ಚಾಗಿ ಹೋಗಿದೆ. ಮನೆ ಆಧಾರಮಾಡಿ ಹಣ ತರೋಣ ಅಂದರೆ ಅದಕ್ಕೆ ಸಾಕಷ್ಟು ಸಮಯವಿಲ್ಲ. ಹೊಳೀತಿರೋದು ಇದೊಂದೇ ದಾರಿ. ನಾಳೆ ಬೆಳಿಗ್ಗೆ ಹೊತ್ತಿಗೆ ಒಡವೆ ಕೊಡು. ನಾಡಿದ್ದು ದಿಬ್ಬಣ ಬರೋದಿದೆ."

ಯಮುನಳ ಕಣ್ಣಿನಲ್ಲಿ ನೀರು ತುಂಬಿತು, "ಯಾವ ಮುಖ ಇಟ್ಟುಕೊಂಡು ಸೊಸೇನ ಒಡವೆ ಕೊಡು ಅಂತ ಕೇಳಲಿ? ನಾನು ಒಡವೆ ಇಟ್ಟುಕೊಳ್ಳದಿದ್ದರೆ ಪರವಾಗಿಲ್ಲ. ಆದರೆ ತನ್ನ ಮಗಳ ಮದುವೇಲಿ ಸೊಸೆಯ ಮೈಮೇಲೆ ಒಂದಿಷ್ಟು ಚಿನ್ನ ಕಾಣಿಸದಿದ್ದರೆ ಹೇಗೆ! ಅಯ್ಯೋ ದೇವರೇ, ತುಂಬ ಅವಮಾನವಾಗುತ್ತೆ!"

"ಮಾನ, ಅವಮಾನಗಳ ಪ್ರಶ್ನೆಯೇ ಇಲ್ಲ. ಈ ಕೆಲಸ ಆಗಲೇಬೇಕು. ನಾಳೆ ಬೆಳಗ್ಗೆ ಹೊತ್ತಿಗೆ ಒಡವೆ ತಂದುಕೊಡು!"

ಕಣ್ಣಲ್ಲಿ ನೀರುಗರೆಯುತ್ತ ಯಮುನಾ ಹೊರಟುಹೋದಳು. ಅಂಗಳದಲ್ಲಿ ಹೆಂಗಸರು ಹಾಡುತ್ತಿದ್ದರು, ನಗಾಡುತ್ತಿದ್ದರು. ಯಮುನಾ ಯಾರಿಗೂ ಸುಳಿವು ಕೊಡದೆ ಅವರ ಮಧ್ಯೆ ಸೇರಿಕೊಂಡಳು. ಅತ್ತೆಯ ಈ ದುರವಸ್ಥೆ ರುಕ್ಮಿಣಿಗೆ ತಿಳಿದಾಗ ಅವಳು ಹತ್ತಿರ ಬಂದು ಕೇಳಿದಳು, "ಅಮ್ಮಾಜಿ, ಏನು ಸಮಾಚಾರ? ದೇಹಸ್ಥಿತಿ ಸರಿಯಾಗಿದೆ ತಾನೆ?" ಯಮುನಾ ರುಕ್ಮಿಣಿಯನ್ನು ಬೇರೆ ಕರೆದುಕೊಂಡುಹೋಗಿ ಇದ್ದ ಸ್ಥಿತಿಯನ್ನು ವಿವರಿಸಿದಳು.

ಮನೆಯಲ್ಲೆಲ್ಲಾ ಒಂದು ಬಗೆಯ ಖಿನ್ನತೆ ತುಂಬಿಕೊಂಡಿತು. ಶಾಸ್ತ್ರ ಪದ್ಧತಿ, ಗಳೇನೋ ನಡೆಯುತ್ತಿದ್ದವು. ಆದರೆ ಉತ್ಸಾಹ ಉಲ್ಲಾಸಗಳು ಒಮ್ಮಿಂದೊಮ್ಮೆಲೇ ಮಾಯವಾದವೋ ಎಂಬಂತೆ ಪ್ರತಿಯೊಬ್ಬರಿಗೂ ತೋರತೊಡಗಿತು. ಇದೆಲ್ಲಾ ಏಕಾಯಿತು, ಹೇಗಾಯಿತು ಎಂದು ಬಂದಿದ್ದ ಯಾವ ಅತಿಥಿಗೂ ತಿಳಿಯಲಿಲ್ಲ. ಆದರೆ ಪ್ರತಿಯೊಬ್ಬರಿಗೂ ಒಂದು ವಿಚಿತ್ರ ಬಗೆಯ ಗಾಬರಿ ಅನುಭವವಾಗತೊಡಗಿತು.

ಎಲ್ಲರಿಗಿಂತ ಹೆಚ್ಚಾಗಿ ವಾತಾವರಣದಲ್ಲಿ ಈ ಪರಿವರ್ತನೆಯ ಕಾವು ತಟ್ಟಿದುದು ಭೀಖುವಿಗೆ. ಹೀಗೇಕಾಯಿತೆಂದು ಅವನ ಬುದ್ಧಿಗೆ ಹೊಳೆಯಲಿಲ್ಲ. ಅವನಿಗೆ ತಡೆಯು ಲಾಗಲಿಲ್ಲ. ಯಮುನಳನ್ನು ಉಗ್ರಾಣಕ್ಕೆ ಕರೆದುಕೊಂಡು ಹೋಗಿ ಅವನು ಕೇಳಿದ, "ಅತ್ತಿಗೆ, ಇದೇನಾಗ್ತಿದೆ? ಇದ್ದಕ್ಕಿದ್ದಹಾಗೆ ಈ ನಗು, ಈ ಸಂತೋಷವೆಲ್ಲಾ ಎಲ್ಲಿ ಮಾಯವಾಯಿತು?"

ಯಮುನೆಳ ಕಣ್ಣಿನಲ್ಲಿ ನೀರು ತುಂಬಿತು, "ಭಗವಂತನ ಲೀಲೆ, ಭೀಖೂ. ದೇವರು ನಮ್ಮನ್ನ ಹಾಳುಮಾಡಬೇಕು ಅಂತ ನಿಶ್ಚಯಿಸಿದಾನೆ. ಮಗನ್ನ ಕಿತ್ತುಕೊಂಡ; ಈಗ ಮೈಮೇಲಿನ ಒಡವೆ ಕಿತ್ತುಕೊಳ್ಳೋಕೆ ಹೊರಟಿದಾನೆ." ಯಮುನಾ ಇದ್ದ ಸ್ಥಿತಿಯನ್ನೆಲ್ಲಾ ಭೀಖುವಿಗೆ ಹೇಳಿದಳು.

"ಇಷ್ಟೇಯೇ !" ಭೀಖುವಿನ ಮುಖದ ಮೇಲೆ ಒಂದು ನಗೆ ಕಾಣಿಸಿಕೊಂಡಿತು. "ನಿನ್ನ ಒಡವೆ ಭದ್ರವಾಗಿರುತ್ತೆ. ಸಂತೋಷದಿಂದ ಹೋಗಿ ಮಗುವಿನ ಮದುವೆ ಮಾಡುವೆಯಂತೆ. ಅಣ್ಣ ಮನೇಲಿದಾನಲ್ಲವೆ ? "

"ಹ್ಞೂ, ನವಲ್ ಜ್ಞಾನಲಾಲರ ಜೊತೆ ಕೂತ್ಕೊಂಡು ಮಾತಾಡ್ತಿದಾರೆ," ಯಮುನಾ ಹೊರಟುಹೋದಳು.

ನವಲ್, ಜ್ಞಾನಪ್ರಕಾಶರು ಕುಳಿತುಕೊಂಡು ವರಪೂಜೆಯ ದಿನ ಕೊಡಬೇಕಾದ ಊಟದ ಏರ್ಪಾಡಿನ ಸಂಬಂಧವಾಗಿ ಮಾತಾಡುತ್ತಿದ್ದರು. ದಿಬ್ಬಣ ಬರುತ್ತಿದ್ದುದು ಕೇವಲ ನೂರು ಮಂದಿಯದಷ್ಟೇ; ಆದರೆ ಊರಿನ ನಂಟರಿಷ್ಟರ ಸಂಖ್ಯೆ ಸುಮಾರು ನಾನೂರಷ್ಟಾಗುತ್ತಿತ್ತು. ಜ್ವಾಲಾಪ್ರಸಾದ ತುಸುದೂರದಲ್ಲಿ ಕುಳಿತು ಮೌನವಾಗಿ ಇವರ ಮಾತು ಕೇಳುತ್ತಿದ್ದ. ಅವನ ಮನಸ್ಸಿನಲ್ಲಿ ಯಾವ ಉತ್ಸಾಹವೂ ಇರಲಿಲ್ಲ. ಆ ಹೊತ್ತಿಗೆ ಭೀಖೂ ಕೈಯಲ್ಲೊಂದು ಟಿನ್ನಿನ ಡಬ್ಬ ಹಿಡಿದುಕೊಂಡು ಡ್ರಾಯಿಂಗ್ ರೂಮಿಗೆ ಬಂದ. ಬಂದವನೇ ಡಬ್ಬವನ್ನ ಜ್ವಾಲಾಪ್ರಸಾದನ ಮುಂದಿಟ್ಟು, "ಅಣ್ಣಾ, ವಿದ್ಯಳ ಮದುವೆಗೆ ನನ್ನ ಕನ್ಯಾದಾನ ಇದು !" ಅಂದ.

ಜ್ವಾಲಾಪ್ರಸಾದ ದಂಗಾದ. "ನಿನ್ನ ಕನ್ಯಾದಾನ ! ಇದೇನು ಹೇಳ್ತಿದಿ ? ಇದರಲ್ಲಿ ಏನಿದೆ ? "

"ನನಗೆ ಎಣಿಸೋಕಂತೂ ಬರೋದಿಲ್ಲ ! ಆದರೆ ಇದರಲ್ಲಿ ಸಾಕಷ್ಟು ಹಣ ಇದೆ. ಅತ್ತಿಗೆ,ಸೊಸೆಮಗಳ ಒಡವೇನ ಗಿರವಿ ಇಡಬೇಕಾದ ಅಗತ್ಯವಿಲ್ಲ. ವಿದ್ಯಳ ಮೇಲೆ ನನ್ನದೂ ಒಂದಿಷ್ಟು ಹಕ್ಕಿದೆ. ಅವಳನ್ನ ತೊಡೆಮೇಲೆ ಎತ್ಕೊಂಡು ಆಡಿಸಿದೀನಿ, ಬೆಳಸಿದೀನಿ !"

ನವಲ್, ಜ್ಞಾನಪ್ರಕಾಶರು ಎದ್ದು ಭೀಖುವಿನ ಹತ್ತಿರ ಬಂದರು. ಜ್ಞಾನಪ್ರಕಾಶ ಕೇಳಿದ, "ಇದರಲ್ಲಿ ಎಷ್ಟು ಹಣ ಇದೆ ? "

"ನಾನು ಹೇಳಿದೆನಲ್ಲ, ನನಗೆ ಎಣಿಸೋಕ್ಕೆ ಬರೋಲ್ಲ ಅಂತ. ನನ್ನ ಸಂಪಾದನೆ ಯೆಲ್ಲಾ ಈ ಡಬ್ಬದಲ್ಲಿದೆ. ನನ್ನ ಬದುಕೆಲ್ಲಾ ಈ ಮನೇಲಿ ಕಳೀತು, ನನಗೆ ಸಿಕ್ಕಿದ್ದನ್ನೆಲ್ಲಾ ಇದರಲ್ಲಿ ಇಡ್ತಾ ಬಂದಿದೀನಿ. ನಮ್ಮವ್ವ ಏನು ಬಿಟ್ಟು ಹೋಗಿದ್ದಳೋ ಅದೂ ಇದರಲ್ಲಿದೆ. ನೀನೇ ನೋಡು."

ಜ್ವಾಲಾಪ್ರಸಾದ ಹೇಳಿದ, "ಭೀಖೂ, ಇದು ನಿನ್ನ ಇಡೀ ಬದುಕಿನ ಸಂಪಾದನೆ. ಇದನ್ನ ನಾವು ತೊಗೊಳ್ಳೋಕ್ಕಾಗೋದಿಲ್ಲ."

"ನಾನು ಬೇರೆ, ನೀವು ಬೇರೆ ಅಂತ ಯಾಕೆ ತಿಳೀತಿ, ಅಣ್ಣ ? ನನಗೆ ಯಾವ ಮನೆ

ಮಠ ಇದೆ? ಇರೋದೇನಿದ್ರೂ ಈ ಮಕ್ಕಳು. ಇವರನ್ನ ಎದೆಯ ಮೇಲೆ ಎತ್ತಿಕೊಂಡು ಬೆಳಸಿದೀನಿ, ದೊಡ್ಡವರನ್ನಾಗಿ ಮಾಡಿದೀನಿ," ಭೀಖೂ ಬಿಕ್ಕಿ ಬಿಕ್ಕಿ ಅಳತೊಡಗಿದ. "ಅಣ್ಣಾ, ಗಂಗಾ ನನ್ನನ್ನ ನಿನಗಿಂತ ಹೆಚ್ಚಾಗಿ ಕಾಣ್ತಿದ್ದ, ನನ್ನನ್ನ ಕಂಡರೆ ಅವನಿಗೆ ಅದೇನು ಹೆಮ್ಮೆ ಅಂತಿ! ಆದರೆ ದೇವರು ನಿಷ್ಕರುಣಿ. ಅವನನ್ನ ಕಿತ್ತುಕೊಂಡ," ಭೀಖುವಿನ ಬಿಕ್ಕಳಿಕೆ ನಿಂತಿತು. "ಗಂಗನ ಮಗಳ ಕೈ ಅರಿಶಿನ ಕಾಣಲಿ, ಅಷ್ಟು ಸಾಕು, ದೇವರು ಆ ದಿನ ಬೇಗ ಬರೋಹಾಗೆ ಮಾಡಲಿ. ಇದು ವಿದ್ಯಳಿಗೆ ಕನ್ಯಾದಾನ, ಈ ಡಬ್ಬಾನ ಕಾಪಾಡ ಬೇಕು ಅಂತ ನಾನು ಅವಳ ಹೆಸರಿನಲ್ಲಿ ಸಂಕಲ್ಪಮಾಡಿದ್ದೆ."

ಜ್ವಾಲಾಪ್ರಸಾದನ ಕಣ್ಣಲ್ಲಿ ನೀರು ತುಂಬಿತು. ಅವನು ಭೀಖುವಿನ ಕಡೆ ನೋಡಿದ. ಕುರೂಪವಾದ ಆ ಮುದಿಮುಖದಲ್ಲಿ ಎಲ್ಲೆಯಿಲ್ಲದ ಮಮತೆ, ಕರುಣೆ ತುಂಬಿತ್ತು. ಜ್ವಾಲಾಪ್ರಸಾದ ನಡುಗುವ ಧ್ವನಿಯಲ್ಲಿ ನವಲನಿಗೆ ಹೇಳಿದ, "ನನಗೆ ಈ ಡಬ್ಬ ಮುಟ್ಟೋ ಅಧಿಕಾರವಿಲ್ಲ, ನವಲ್. ನೀನು ಇದನ್ನ ತೆಗೆ."

ನವಲ್ ಡಬ್ಬದ ಮುಚ್ಚಳ ತೆಗೆದ. ಅದರಲ್ಲಿ ಧಿನಕಿ ಭೀಖುವಿಗೆ ಬಿಟ್ಟುಹೋಗಿದ್ದ ಒಂದಿಷ್ಟು ಬೆಳ್ಳಿಯ ಒಡವೆಗಳಿದ್ದವು, ಐವತ್ತು ಸವರನ್‌ಗಳಿದ್ದವು, ಸುಮಾರು ಒಂದೂ ವರೆ ಸಾವಿರದಷ್ಟು ನಗದು ಹಣವಿತ್ತು. ಜ್ಞಾನಪ್ರಕಾಶ ಸಾವಿರದ ಇನ್ನೂರು ರೂಪಾಯಿ ಗಳನ್ನೂ ಐವತ್ತು ಸವರನ್ನುಗಳನ್ನೂ ಬೇರೆ ತೆಗೆದಿಟ್ಟು ಭೀಖುವಿಗೆ ಹೇಳಿದ, "ಈ ಕನ್ಯಾ ದಾನಕ್ಕೆ ಇಷ್ಟು ಹಣ ಕಡಿಮೆ ಬಿದ್ದಿತ್ತು. ಉಳಿದದ್ದು ನಿನ್ನಲ್ಲಿರಲಿ. ಮುಂದೆ ನವಲನ ಹೆಂಡತಿಗೂ ನೀನು ಸ್ವಲ್ಪ ಕೊಡಬೇಡವೆ? ಆಮೇಲೆ ಸುಧಳ ಕನ್ಯಾದಾನವನ್ನೂ ನೀನು ಮಾಡಬೇಕಲ್ಲ."

ಭೀಖುವಿನ ಮುಖದಲ್ಲಿ ಸಂತೋಷ ನಗೆಯಾಡಿತು. "ಮಾಡದೇ? ಬದುಕಿ ದ್ದರೆ ಎಲ್ಲಾನ್ನೂ ಮಾಡ್ತೀನಿ." ಭೀಖು ಡಬ್ಬ ತೆಗೆದುಕೊಂಡು ಬೇಗಬೇಗನೆ ಅಲ್ಲಿಂದ ಹೊರಟುಹೋದ.

ಯಾರೋ ಮಾಯಮಂತ್ರ ಮಾಡಿದರೋ ಎಂಬಂತೆ ಇಡೀ ವಾತಾವರಣದಲ್ಲಿ ಮತ್ತೊಮ್ಮೆ ಸಂತೋಷ, ಉಲ್ಲಾಸಗಳು ತುಂಬಿಕೊಂಡವು.

ಮೂವತ್ತನೆಯ ತಾರೀಕು ದಿಬ್ಬಣ ಬಂತು. ಮದುವೆ ಸಾಂಗೋಪಾಂಗವಾಗಿ ನೆರವೇರಿತು. ಎಲ್ಲೂ ಯಾವ ತರಹದ ದೂರಿಗೂ ಎಡೆಯಿರಲಿಲ್ಲ. ಬೀಗರು ಹೊರಡುವ ದಿನ ನವಲ್ ಬೀಗರ ಮನೆಗೆ ಹೋಗಿ ವಿಂದೇಶ್ವರೀಪ್ರಸಾದರನ್ನು ಕಂಡ, "ಅತಿಥಿ ಸತ್ಕಾರದಲ್ಲಿ ಏನಾದರೂ ಕೊರತೆಯಾಗಿದ್ದರೆ ಕ್ಷಮೆ ಕೇಳಿಕೊಳ್ಳೋಕೆ ಬಂದೆ," ಎಂದು ಕೈಜೋಡಿಸಿ ಹೇಳಿದ.

ದಿಬ್ಬಣದ ಆದರಸತ್ಕಾರಗಳ ವೈಖರಿಯನ್ನು ಕಂಡು ವಿಂದೇಶ್ವರೀಪ್ರಸಾದ ಮೆಚ್ಚಿ ಕೊಂಡಿದ್ದ. ಅವನಂದ, "ನಿನ್ನ ಬಗ್ಗೆ ನಮಗೆಲ್ಲಾ ತುಂಬ ಸಂತೋಷವಾಗಿದೆ. ಯೋಗ್ಯ ತಂದೆಯ ಯೋಗ್ಯ ಮಗ ನೀನು. ಹೃದಯವಿದೆ, ಧೈರ್ಯವಿದೆ."

"ನಿಮ್ಮಲ್ಲಿ ಒಂದು ವಿನಂತಿ ಮಾಡಿಕೊಳ್ಳೋದಿದೆ, ತುಂಬ ಸಣ್ಣ ವಿನಂತಿ. ವಿದ್ಯಾ ಈ ವರ್ಷ ಬಿ.ಎ. ಫೈನಲ್‌ನಲ್ಲಿದ್ದಾಳೆ. ಅವಳು ಬಿ.ಎ. ಪರೀಕ್ಷೆ ಮುಗಿಸೋಕ್ಕೆ ಅಪ್ಪಣೆಯಾಗಬೇಕು."

ವಿಂದೇಶ್ವರೀಪ್ರಸಾದ ನಗುತ್ತ ಹೇಳಿದರು, "ಬಿ.ಎ. ಪಾಸು ಮಾಡಬೇಕು ಅನ್ನೋಕೆ ಅವಳು ಯಾವ ನೌಕರಿ ಮಾಡಬೇಕಾಗಿದೆ!"

"ನಿಮ್ಮ ಸೊಸೆಯಾಗಿ ನೌಕರಿ ಮಾಡೋದುಂಟೆ? ಆದರೆ ಸಿದ್ಧೇಶ್ವರೀಬಾಬು ಡೆಪ್ಯುಟಿ ಕಲೆಕ್ಟರ್, ನಾಳೆ ಕಲೆಕ್ಟರ್ ಆಗ್ತಾರೆ. ಅಂಥವರ ಪತ್ನಿ ಬಿ.ಎ. ಮಾಡಿದ್ದರೆ ಸಮಾಜದಲ್ಲಿ ಮರ್ಯಾದೆ ಹೆಚ್ಚುತ್ತೆ."

ನವಲ್ ಹೇಳಿದ್ದು ಸರಿಯೇ. ವಿಂದೇಶ್ವರೀ ಮಗನಕಡೆನೋಡಿದರು. "ಕೇಳಿದೆಯಾ ನವಲ್ ಹೇಳಿದ್ದು? ನಿನ್ನ ವಿಚಾರ ಏನು?"

"ನಿಮಗೆ ಹೇಗೆ ಸರಿಯೆನ್ನಿಸತ್ತೋ ಹಾಗಾಗಲಿ, ಲಾಲಾಜೀ. ಬಿ.ಎ. ಪಾಸು ಮಾಡಿದರೇನೋ ಚೆನ್ನವೇ. ಇವತ್ತೆಲ್ಲಾ ನಾಲ್ಕೈದು ತಿಂಗಳ ಮಾತು."

ವಿಂದೇಶ್ವರೀ ನಕ್ಕರು. "ಹೊಸ ಕಾಲ! ಎಲ್ಲರೂ ಒಂದೇ ತರಹ ಯೋಚನೆ ಮಾಡ್ತಾರೆ. ಒಂದು ವಾರ ಬಿಟ್ಟು ಹಿಂದಕ್ಕೆ ಕಳಿಸಿಕೊಡ್ತೀನಿ. ಆದರೆ ಹುಡುಗಿ ಬನಾರಸ್ಸಿನಲ್ಲಿ ಬೋರ್ಡಿಂಗ್ ಹೌಸ್‌ನಲ್ಲಿದ್ದುಕೊಂಡು ಓದಬೇಕು ಅಲ್ಲವೇ?"

"ಹೌದು," ನವಲ್ ಹೇಳಿದ.

"ಹಾಗಾದರೆ ಬೋರ್ಡಿಂಗ್ ಹೌಸಿನ ಖರ್ಚನ್ನ ನೀವು ವಹಿಸಿಕೋಬೇಕಾಗುತ್ತೆ. ಏನು ಸಿದ್ಧೇಶ್ವರಿ, ನಾನು ಹೇಳಿದ್ದು ತಪ್ಪಲ್ಲ ತಾನೇ?"

"ಅದೂ ಒಂದು ಹೇಳೋ ಮಾತೆ, ಲಾಲಾಜಿ! ಇಷ್ಟು ದಿನ ತಂಗೀನ ಓದಿಸಿದವರು ಇನ್ನೊಂದು ಐದಾರು ತಿಂಗಳು ಓದಿಸಲಾರರೆ!" ಸಿದ್ಧೇಶ್ವರೀ ಜೋರಾಗಿ ನಕ್ಕ.

ಸಿದ್ಧೇಶ್ವರೀಪ್ರಸಾದನ ನಗೆ ಅದೆಷ್ಟು ವಿಕಾರವಾಗಿತ್ತು. ವಿಂದೇಶ್ವರೀಪ್ರಸಾದನ ಮಾತು ಎಷ್ಟು ಸ್ವಾರ್ಥ, ಕೃತ್ರಿಮತೆಗಳಿಂದ ತುಂಬಿತ್ತು! ಆದರೆ ನವಲನಿಗೆ ಒಂದೇ ಸಂತೋಷ—ತಂಗಿಗೆ ಕೊಟ್ಟ ಮಾತನ್ನು ನಡಸಲಾಗುತ್ತದಲ್ಲ ಎಂದು.

## ನಾಲ್ಕು

"ಅವರು ಸ್ವರಾಜ್ಯ ಕೊಡೋಕ್ಕೆ ಬಂದರೆ ಇವರು ಅವರ ಜೊತೆ ಮಾತನಾಡೋಲ್ಲ ಅಂದರೆ ಅದಕ್ಕಿಂತ ದೊಡ್ಡ ಮೂರ್ಖತನ ಉಂಟೆ!" ರಾಯ್‌ಬಹದ್ದೂರ್ ಕಾಮತಾನಾಥರು ತಮ್ಮ ಎತ್ತರದ ಧ್ವನಿಯಲ್ಲಿ ಹೇಳಿದರು, "ಹಿಂದುಸ್ತಾನಕ್ಕೆ ಸ್ವರಾಜ್ಯವೇನು, ಕುಂಬಳ ಕಾಯಿ ಸಿಗುತ್ತೆ, ನೋಡ್ತಿರಿ!"

ಜ್ಞಾನಪ್ರಕಾಶ ನಕ್ಕ, "ರಾಯ್‌ಬಹದ್ದೂರ್ ಸಾಹೇಬ್, ಕೊಡೋ ಹೆಸರಿನಲ್ಲಿ ಕುಂಬಳಕಾಯಿಯೇ ಅವರು ಕೊಡೋದು! ಅದಕ್ಕೋಸ್ಕರವೇ ನಾವು ಸೈಮನ್ ಕಮಿಷನ್ನಿಗೆ ಬಹಿಷ್ಕಾರ ಹಾಕಿದೆವು. ಅವರನ್ನ ಕಾಣೋದರಿಂದ ಲಾಭವಾಗೋ ಹಾಗಿದ್ದರೆ ಖಂಡಿತವಾಗಿಯೂ ಕಾಣ್ತಿದ್ದೆವು."

"ಅರೆ, ನಾವು ನಮ್ಮ ಹಿಂದಿನ ನಡವಳಿಕೇನ ಕಳಕೊಂಡು ಕೂತಿದೀವಿ. ಸಪ್ತ ಸಮುದ್ರ ದಾಟಿಕೊಂಡು ಅವರು ನಮ್ಮ ದೇಶಕ್ಕೆ ಬಂದಿದಾರೆ. ಅವರಿಗೆ ಔತಣ ಹಾಕಿ, ದೇಶ ತೋರಿಸಿ, ಚೆನ್ನಾಗಿ ಮಾತನಾಡಿಸೋದು ನಮ್ಮ ಕರ್ತವ್ಯ! ವಿಷಯ ಚಟ್ಟನೆ ಬಗೆಹರೀತಿತ್ತು. ನೀವು ಒಂದು ಕೇಳಿದರೆ ಅವರು ಒಂದೂಕಾಲು ಕೊಡ್ತಿದ್ದರು! ಅದಂತೂ ದೂರ ಉಳೀತು. ಅದರ ಬದಲು ಈ ಕಾಂಗ್ರೆಸ್ಸಿನವರು ಬೈಯೋಕ್ಕೆ ಷುರುಮಾಡಿದರು. ಈ ಜನಕ್ಕೆ ಒಂದಿಷ್ಟು ಬುದ್ಧಿ ಬಂದರೂ ಬರಬಹುದು; ಇವರಿಗೆ ತಮ್ಮ ಮಾತು ಹೇಳಿ, ಇವರು ಏನು ಹೇಳ್ತಾರೆ ಕೇಳೋಣ ಅಂತ ಅವರು ಒಂದು ವರ್ಷ ಇಲ್ಲಿದ್ದರು. ಆದರೆ ಪ್ರಯೋಜನವಾಗಲಿಲ್ಲ. ಪಾಪ! ಅವರು ತಮ್ಮ ಮುಖ ಉಳಿಸಿಕೊಂಡು ವಾಪಸು ಹೋದರು. ಎಂಥ ಹಳ್ಳಿಗಮಾರರ ಜೊತೆ, ಕಾಡುಜನಗಳ ಜೊತೆ ವ್ಯವಹಾರ ಮಾಡ ಬೇಕಾಗಿ ಬಂತು ಅಂತ ಅವರು ಅಂದುಕೊಂಡಿರಬೇಕು."

ಜ್ಞಾನಪ್ರಕಾಶನಿಗೆ ರಾಯ್‌ಬಹದ್ದೂರರ ಮಾತು ಮೋಜೆನಿಸಿತು. ಅವನಂದ, "ರಾಯ್‌ಬಹದ್ದೂರ್ ಸಾಹೇಬ್, ನಿಮ್ಮನ್ನ ಕಮಿಷನ್ನಿನ ಮುಂದೆ ಯಾಕೆ ಕರಸಲಿಲ್ಲ ಅಂತ ಆಶ್ಚರ್ಯವಾಗುತ್ತೆ. ನಿಮಗೆ ಇಷ್ಟು ದೊಡ್ಡ ಪ್ರಶಸ್ತಿಯಿದೆ, ಆಸ್ತಿಪಾಸ್ತಿಯಿದೆ, ಮರ್ಯಾದೆಯಿದೆ, ನಡವಳಿಕೆಯಿದೆ, ಆದರೆ ಅವರು ನಿಮ್ಮನ್ನ ಕೇಳಲೇಬೇಡವೆ!"

"ಏನು ಹೇಳಲಿ, ಈ ಸೂಳೇಮಕ್ಕಳು ಇಂಗ್ಲಿಷ್ ಆಫೀಸರುಗಳಿದಾರಲ್ಲ, ತಮಗೆ ಬೇಕಾದಾಗ ಬಂದು ಸಾವಿರಾರು ರೂಪಾಯಿ ಚಂದಾ ಇಸಕೊಂಡು ಹೋಗ್ತಾರೆ. ಕಮಿಷನ್ನಿನ ಭೇಟಿ ಮಾಡೋ ಮಾತು ಬಂದಾಗ ಕಾಂಗ್ರೆಸ್ಸಿನವರನ್ನ ಪುಸಲಾಯಿಸ್ತಾರೆ. ನಾನೇನಾದರೂ ಭೇಟಿಮಾಡಿದ್ದರೆ ಸ್ವರಾಜ್ಯ ಖಂಡಿತ ಕೊಡದೇ ಇರೋ ಹಾಗೆ ಕಮಿಷನ್ನಿನವರನ್ನ ಒಪ್ಪಿಸ್ತಿದ್ದೆ. ನಾನು ಲೆಫ್ಟಿನೆಂಟ್ ಗವರ್ನರ್‌ಗೆ ಬರೆದಿದ್ದೆ. ಆದರೆ ಆ ಜನ ನನ್ನ ಕಾಗದಕ್ಕೆ ಒಂದು ಜವಾಬು ಸಹ ಕೊಡಲಿಲ್ಲ. ಇನ್ನೊಂದು ಸಲ ಚಂದಾ ಕೇಳೋಕ್ಕೆ ಬರಲಿ, ಆ ಲುಚ್ಚಾ ಜನರಿಗೆ ಒಂದು ಕಾಸೂ ಸಹ ಕೊಡೋಲ್ಲ."

"ನೀವು ಯೂರೋಪಿನಿಂದ ಹಿಂದಿರುಗೋದು ತುಂಬ ತಡಮಾಡಿದಿರಿ. ಅಕ್ಟೋಬರ್‌ನಲ್ಲಿ ಬರಬೇಕಾಗಿತ್ತು, ಡಿಸೆಂಬರ್‌ನಲ್ಲಿ ಬಂದಿರಿ. ಇಡೀ ಯೂರೋಪ್‌ನೇ ಜಾಲಾಡಿಬಿಟ್ಟಿರಿ ಅಂತ ಅನ್ನಿಸುತ್ತೆ," ಜ್ವಾಲಾಪ್ರಸಾದ ಈಗ ಬಾಯಿಹಾಕಿದ.

ರಾಯ್‌ಬಹದ್ದೂರರು ನಕ್ಕರು. "ಏನು ಹೇಳಲಿ, ಉಷಾ ಹಟ ಹಿಡಿದಳು. ಅವಳಿಗೆ ಯೂರೋಪಿನಿಂದ ಹಿಂದಿರಿಗೋದು ಇಷ್ಟವಿರಲಿಲ್ಲ. ಆದರೆ ಯೂರೋಪಿನ ಚಳಿ ನನ್ನಿಂದ ಸಹಿಸೋಕ್ಕಾಗೋಲ್ಲ, ಸ್ವಾಮಿ. ಇಲ್ಲಿಗೆ ವಾಪಸು ಬಂದ ಮೇಲೆ ನಿಮ್ಮ

ಗಳನ್ನು ನೋಡೋಕ್ಕೆ ಪುರಸೊತ್ತೇ ಆಗಲಿಲ್ಲ. ಉಷಳ ಓದು ಒಂದು ವರ್ಷ ವ್ಯರ್ಥ ವಾಯಿತು. ಮುಂದಿನ ವರ್ಷ ಯೂನಿವರ್ಸಿಟಿಗೆ ಸೇರಿಕೋತಾಳೆ ಅಂತ ಅಂದುಕೊಳ್ಳಿ."

ಈ ಹೊತ್ತಿಗೆ ನವಲ್ ಕೋಣೆಗೆ ಬಂದ; ಅವನ ಹಿಂದೆ ಭೀಖೂ ತಟ್ಟೆಯಲ್ಲಿ ನಾಲ್ಕು ಗ್ಲಾಸು ಶರಬತ್ತು ತಂದ.

ಜ್ಞಾನಪ್ರಕಾಶ ಕೇಳಿದ, "ಈ ಸಲ ಬೇಸಿಗೇಲಿ ಎಲ್ಲಿ ಹೋಗಬೇಕು ಅಂತ ಇದೀರಿ?"

"ಮಸ್ಸೂರಿಯಲ್ಲಿ ಒಂದು ಮನೆ ಕೊಂಡುಕೊಂಡಿದೀನಿ. ಪ್ರತಿವರ್ಷವೂ ಬೇಸಿಗೇಲಿ ಒಂದಲ್ಲ ಒಂದು ಕಡೆ ಹೋಗಬೇಕಾಗುತ್ತೆ, ಒಂದು ಮನೇನೇ ಯಾಕೆ ಕೊಂಡುಕೊಳ್ಳ ಬಾರದು, ಸದಾಕಾಲಕ್ಕೆ ಆಗುತ್ತೆ ಅಂತ ಯೋಚಿಸಿದೆ! ತುಂಬ ಅಗ್ಗದಲ್ಲಿ ಸಿಕ್ಕಿಬಿಟ್ಟಿತು; ಒಟ್ಟು ಎಲ್ಲಾ ಹನ್ನೆರಡು ಸಾವಿರಕ್ಕೆ." ಆಮೇಲೆ ಜ್ವಾಲಾಪ್ರಸಾದನ ಕಡೆ ತಿರುಗಿ, "ನನ್ನ ಕಡೆಯಿಂದ ಆಮಂತ್ರಣವಿದ್ದೇ ಇದೆ. ಮೇ ಷುರುವಾಗಿದೆ. ಇನ್ನೊಂದು ಮೂರುನಾಲ್ಕು ದಿನದಲ್ಲಿ ನಾನೊಬ್ಬನೇ ಹೋಗ್ತಿದೀನಿ. ನೀವೂ ನನ್ನ ಜೊತೆ ಬರಬಹುದಲ್ಲ?"

ಜ್ವಾಲಾಪ್ರಸಾದ ನಗುತ್ತ ಹೇಳಿದ, "ನಾನೆಲ್ಲಿ ಬರಲಿ ಮಸ್ಸೂರೀಗೆ! ನನಗೆ ಇಲ್ಲಿ ಅಲಹಾಬಾದಿನಲ್ಲಿ ಸ್ವಲ್ಪವೂ ಕಷ್ಟವಾಗೋಲ್ಲ."

ರಾಯ್‌ಬಹದ್ದೂರರು ಶರಬತ್ತು ಕುಡಿಯುತ್ತ ಹೇಳಿದರು, "ಏನು ನವಲ್, ಈಚೆಗೆ ನೀನು ನಮ್ಮ ಮನೆಯ ಕಡೆ ಬರೋದನ್ನೇ ನಿಲ್ಲಿಸಿಬಿಟ್ಟೆಯಲ್ಲ, ಏನು ಸಮಾಚಾರ? ನೀನು ವಿಲಾಯಿತಿಗೆ ಯಾವಾಗ ಹೋಗ್ತಿ? ಈ ವರ್ಷವಂತೂ ನಿನ್ನದು ಹಾಳಾಯಿತು."

"ಈಗ ಸದ್ಯಕ್ಕೆ ವಿಲಾಯಿತಿಗೆ ಹೋಗೋ ವಿಚಾರವಿಲ್ಲ. ಎಲ್‌ಎಲ್.ಬಿ. ಪ್ರೀವಿಯಸ್ ಪರೀಕ್ಷೆಗೆ ಕೂತಿದೀನಿ. ಪೇಪರ್ ಚೆನ್ನಾಗಿ ಆಗಿದೆ."

"ಹಾಗಾದರೇನು, ವಕೀಲಿ ಮಾಡಬೇಕು ಅಂತಲೇ?" ರಾಯ್‌ಬಹದ್ದೂರರು ಚಿಂತೆಯಿಂದ ಕೇಳಿದರು.

ಅದಕ್ಕೆ ಉತ್ತರ ಕೊಟ್ಟವನು ಜ್ಞಾನಪ್ರಕಾಶ. "ಯಾಕೆ, ವಕೀಲಿ ಮಾಡೋದರಲ್ಲಿ ನಿಮ್ಮ ಆಕ್ಷೇಪಣೆಯೇನಾದರೂ ಇದೆಯೆ? ನಿಮ್ಮ ಮಗ ಗೌರೀನಾಥನೇ ವಕೀಲಿ ಮಾಡ್ತಿದಾನೆ."

"ಏನು ವಕೀಲಿ ಮಾಡ್ತಿದಾನೆ, ಮಣ್ಣು. ಕತ್ತೆ ಕಾಯ್ತಿದಾನೆ," ರಾಯ್‌ಬಹದ್ದೂರರು ಹೇಳಿದರು. "ತಿಂಗಳಿಗೆ ಐವತ್ತು ಅರವತ್ತು ರೂಪಾಯಿ ಹುಟ್ಟೋದು ಕಷ್ಟ. ಇಲ್ಲ ನವಲ್, ವಕೀಲಿ ಉಪಯೋಗವಿಲ್ಲ. ನನ್ನ ಮಾತು ಕೇಳು, ನೀನು ವಿಲಾಯಿತಿಗೆ ಹೊರಟುಬಿಡು." ರಾಯ್‌ಬಹದ್ದೂರರು ಜ್ವಾಲಾಪ್ರಸಾದನ ಕಡೆ ನೋಡಿದರು. "ನಮ್ಮ ಮನೆತನದಲ್ಲಿ ಯಾರಾದರೂ ದೊಡ್ಡ ಆಫೀಸರ್ ಆಗ್ತಾರೆ ಅಂದುಕೊಂಡಿದ್ದೆ. ಗೌರೀನಾಥ ಕತ್ತೆಯಾದ. ಬಹಳ ಕಷ್ಟದಿಂದ ಅತ್ತೂ ಕರೆದು ವಕೀಲಿ ಪಾಸುಮಾಡಿದ ಅವನು. ಮೂರು ವರ್ಷವಾದ ಮೇಲೆ ಈಗ ಒಂದು ಐವತ್ತು ರೂಪಾಯಿ ಸಿಗೋಕ್ಕೆ ಷುರುವಾಗಿದೆ. ಸೀತಾನಾಥ ಬಿಸಿನೆಸ್ ನೋಡಿಕೋತಾನೆ, ಅರ್ಥಾತ್ ಮನೆ ನೋಡಿಕೊಳ್ಳೋನು ಅವನೇಯೇ ಅನ್ನಿ. ಈ ವರ್ಷ ಒಂದೂ

ಕಾಲು ಲಕ್ಷ ರೂಪಾಯಿ ನಷ್ಟವಾಯಿತು. ಮಕ್ಕಳಿಲ್ಲದೆ ಹೋದರೆ ಅಳಿಯನೇ ಸರಿ, ಮನೇಲಿ ಒಬ್ಬರು ಕಲೆಕ್ಟರ್ ಆಗಲಿ ಅಂತ ನನ್ನ ಯೋಚನೆ. ನನ್ನ ಮನಸ್ಸಿನ ಒಂದು ಅಭಿಲಾಷೆ ತೀರುತ್ತೆ! ಖರ್ಚಿನದು ಏನೂ ಯೋಚನೆಯಿಲ್ಲ!"

ನವಲನಿಗೆ ಕಾಮತಾನಾಥರ ಈ ಮಾತಿನಿಂದ ಬೇಸರ ಬಂದಿತು. ಅವನಂದ, "ಎಲ್‌ಎಲ್.ಬಿ. ಫೈನಲ್‌ನಂತೂ ನಾನು ಮುಗಿಸಲೇಬೇಕು. ಅಲ್ಲದೆ ನಾನೂ ನಮ್ಮ ಮನೆತನದ ಸರಕಾರೀ ನೌಕರಿಯ ಪರಂಪರೇನ ಮುರೀಬೇಕಾಗಿದೆ. ವಕೀಲಿಯಲ್ಲೇ ಯಶಸ್ಸು ಪಡೆಯಬಲ್ಲೆ ಅಂತ ಅಂದುಕೊಂಡಿದೀನಿ."

ಕಾಮತಾನಾಥರು ಎದ್ದು ನಿಂತರು. "ನನ್ನ ಕರ್ತವ್ಯವೇನಿದೆಯೋ ಅದನ್ನ ಮಾಡೋಕ್ಕೆ ನಾನೂ ತಯಾರಾಗಿದೀನಿ. ನನ್ನ ಮಾತನ್ನ ಸ್ವಲ್ಪ ಶಾಂತವಾಗಿ ವಿಚಾರ ಮಾಡಿ ನೋಡು, ವಕೀಲಿಯಲ್ಲಿ ಏನೂ ಉಳಿದಿಲ್ಲ ಅಂತ ನಿನಗೂ ಅನ್ನಿಸದೆ ಇರದು. ನಾನು ಎರಡು ತಿಂಗಳು ಇದ್ದು ಬರೋಕ್ಕೆ ಮಸ್ಸೂರಿಗೆ ಹೋಗ್ತಿದೀನಿ. ಅಂದಹಾಗೆ, ನವಲ್, ಉಷಾ ನಿನ್ನನ್ನ ಎಷ್ಟೋಂದು ಜ್ಞಾಪಿಸಿಕೊಳ್ತಾಳೆ. ಆಗಾಗ ನಮ್ಮಲ್ಲಿಗೆ ಬರ್ತಿರು. ಅವಳ ಮನಸ್ಸಿಗೂ ಸಂತೋಷವಾಗುತ್ತೆ. ಒಳ್ಳೇದು, ಸಾಕಷ್ಟು ಹೊತ್ತಾಯಿತು. ಒಳಗೆ ಹೋಗಿ ಸ್ವಲ್ಪ ಉಷನ್ನ ಕರಿ."

ಉಷಾ ಒಳಗೆ ವಿದ್ಯಳ ಜೊತೆ ಕುಳಿತು ಮಾತನಾಡುತ್ತಿದ್ದಳು. ವಿದ್ಯಾ ಮೂರು ದಿನಗಳ ಹಿಂದೆ ತಾನೇ ಬಿ.ಎ. ಪರೀಕ್ಷೆ ಮುಗಿಸಿ ಬನಾರಸ್ಸಿನಿಂದ ಹಿಂದಿರುಗಿದ್ದಳು.

ಉಷಳನ್ನು ಮೋಟರಿನಲ್ಲಿ ಮನೆ ಮುಟ್ಟಿಸಿ ನವಲ್ ಮತ್ತು ವಿದ್ಯಾ ಹಿಂದಿರುಗು ತ್ತಿದ್ದಾಗ ವಿದ್ಯಾ ಹೇಳಿದಳು, "ಅಣ್ಣ, ನೀನು ವಿಲಾಯಿತಿಗೆ ಯಾಕೆ ಹೋಗಲಿಲ್ಲ? ನಿನಗೆ ಒತ್ತಾಯ ಮಾಡು ಅಂತ ಉಷಾ ಹೇಳ್ತಿದ್ದಳು."

ನವಲ್ ಸಿಟ್ಟಿನ ಧ್ವನಿಯಲ್ಲಿ ಹೇಳಿದ, "ನಾನು ಹೋಗೋಲ್ಲ, ನಾನು ಹೋಗೋಲ್ಲ, ನಾನು ಹೋಗೋಲ್ಲ. ನಾನು ಕಾಮತಾನಾಥರ ಮಗಳನ್ನ ಮದುವೆಯಾಗಬೇಕಾಗಿ ದೆಯೇ ಹೊರತು ಅವರ ಗುಲಾಮಗಿರಿ ಮಾಡಬೇಕಾಗಿಲ್ಲ."

"ಹಾಗಾದರೆ ನೀನು ಕಾಮತಾನಾಥರ ಮಗಳನ್ನ ಮದುವೆಯಾಗೋಕ್ಕೂ ಸಾಧ್ಯವಿಲ್ಲ. ಉಷಳಿಗೆ ಅವಳದೇ ಕನಸುಗಳಿವೆ, ಅವಳದೇ ಆಶೆಆಕಾಂಕ್ಷೆಗಳಿವೆ," ವಿದ್ಯಾ ಒಂದು ನಿಟ್ಟುಸಿರುಬಿಟ್ಟಳು. "ಅಣ್ಣ, ಈ ಅಸಮಾನ ವಿಚಾರ, ಬೆಲೆಗಳಿರೋರ ನಡುವಿನ ಮದುವೆ, ಅಸಮಾನ ಸಂಸಾರಗಳ ನಡುವಿನ ಮದುವೆ ಅದೆಷ್ಟು ಭೀಕರವಾಗಿರುತ್ತೆ. ಉದಾಹರಣೆಗೆ ನನ್ನನ್ನೇ ನೋಡು. ಗಂಡನ ಮನೆಗೆ ಹೋಗೋ ದಿನ ಹತ್ತಿರ ವಾದಂತೆಲ್ಲಾ ನನ್ನ ಕಳವಳವೂ ಹೆಚ್ಚಾಗ್ತಿದೆ."

ವಿದ್ಯಳ ಮಾತನ್ನು ಕೇಳಿ ನವಲನಿಗೆ ಚಿಂತೆಗಿಟ್ಟುಕೊಂಡಿತು. "ವಿದ್ಯಾ ನಿಮ್ಮ ಅತ್ತೆಮನೆ ವಿಷಯವಾಗಿ ನೀನು ನನಗೆ ಯಾವಾಗಲೂ ಏನೂ ಹೇಳಿಲ್ಲ. ನಿಜ ಹೇಳು, ನಿನಗೆ ಅಲ್ಲಿ ಕಷ್ಟವಾಗುತ್ತೆಯೆ?"

ವಿದ್ಯಾ ನಕ್ಕಳು. "ಇದುವರೆಗೆ ನಾನು ಅಲ್ಲಿದ್ದದ್ದು ಅಂದರೆ ಒಟ್ಟು ಒಂದು ವಾರ. ಹೇಳು ಅಂದರೆ ಏನು ಹೇಳಲಿ! ಆದರೆ ಒಂದಂತೂ ಹೇಳಲೇಬೇಕು. ನಮ್ಮ ಅತ್ತೆಮನೆಯವರನ್ನ ಕಂಡರೆ ಅಸಹ್ಯ ಹುಟ್ಟುತ್ತೆ. ಯಾರು ನನ್ನ ಮನೇನ ಹಾಳು ಮಾಡಿದರೋ ಅವರ ಬಗ್ಗೆ ಏನು ಪ್ರೀತಿ ಹುಟ್ಟೋದು ಸಾಧ್ಯ? ಆ ಮನೇಲಿ ಪ್ರತಿಯೊಬ್ಬರೂ ನನಗೆ ಪಿಶಾಚಿ ಕಂಡ ಹಾಗೆ ಕಾಣ್ತಾರೆ. ಈ ಭಾವನೇನ ತೊಡೆದುಹಾಕಬೇಕು ಅಂತ ಲಕ್ಷ ಪ್ರಯತ್ನ ಮಾಡ್ತೀನಿ, ಆದರೆ ಸಾಧ್ಯವಾಗೋಲ್ಲ. ಆ ಮನೆಯವರ ಬಗ್ಗೆ ನನ್ನೊಳಗೆ ಒಂದು ಭಯಾನಕವಾದ ಜುಗುಪ್ಸೆ ಬೆಳೀತಿದೆ."

ವಿದ್ಯಳ ಈ ಮಾತನ್ನು ಕೇಳಿ ನವಲನಿಗೆ ಭಯವಾಯಿತು. "ವಿದ್ಯಾ, ಜೀವನ ಅನ್ನೋದು ಒಂದು ಒಪ್ಪಂದ. ಈ ತರಹದ ಭಾವನೇನ ಮನಸ್ಸಿನಿಂದ ತೆಗೆದುಹಾಕು! ನೀನು ಕೋಪದಲ್ಲಿ ಅವರ ಮುಂದೆ ಆಡಬಾರದ್ದು ಏನನ್ನೂ ಆಡೋಲ್ಲ ಅಂತ ಮಾತು ಕೊಡು."

"ಅಣ್ಣ, ನನ್ನ ಮೇಲೆ ಯಾವಾಗಲೂ ಯಾವ ತರಹದ ದೂರು ಬರೋಕ್ಕೂ ಅವಕಾಶ ಕೊಡೋಲ್ಲ, ಮಾತು ಕೊಡ್ತೀನಿ. ಜೀವನ ಅನ್ನೋದು ಒಂದು ಒಪ್ಪಂದ ನಿಜ. ಆದರೆ ಒಪ್ಪಂದದಲ್ಲಿ ಎರಡು ಪಕ್ಷಗಳಿರುತ್ತೆ. ನನ್ನ ಪಕ್ಷದ ಬಗ್ಗೆ ಹೇಳೋದಾದರೆ ನಾನು ಯಾವಾಗಲೂ ಮಾನಮರ್ಯಾದೆ ಮೇಲೆ ಭದ್ರವಾಗಿ ನಿಂತಿರ್ತೀನಿ." ಹೀಗೆಂದು ವಿದ್ಯಾ ಮನೆಯೊಳಕ್ಕೆ ಹೊರಟುಹೋದಳು.

ವಿದ್ಯಾ ಜೂನ್ ಮೂರನೆಯ ವಾರದಲ್ಲಿ ಗಂಡನ ಮನೆಗೆ ಹೋಗುವುದೆಂದು ಗೊತ್ತಾಯಿತು. ಸಿದ್ಧೇಶ್ವರೀಪ್ರಸಾದನಿಗೆ ಉನ್ನಾವ್ ಜಿಲ್ಲೆಗೆ ವರ್ಗವಾಗಿತ್ತು. ಇದಕ್ಕೆ ಮೊದಲು ಅವನಿಗೆ ರಜಾ ಸಿಗುವಂತಿರಲಿಲ್ಲ. ಸಿದ್ಧೇಶ್ವರಿ ಪ್ರಸ್ತ ಮುಗಿಸಿಕೊಂಡು ವಿದ್ಯಳ ಜೊತೆ ನೇರವಾಗಿ ಉನ್ನಾವಿಗೇ ಹೋಗುವುದೆಂದು ತೀರ್ಮಾನವಾಯಿತು. ವಿದ್ಯಾ ಫೈಜಾಬಾದಿನಲ್ಲಿ ಮಾವನ ಮನೆಗೆ ಹೋಗಬೇಕಾಗಿಬರಲಿಲ್ಲವಲ್ಲ ಎಂದು ನವಲನಿಗೆ ಸಂತೋಷವಾಯಿತು. ಅವನಿಗೆ ಬಾಬು ವಿಂದೇಶ್ವರೀಪ್ರಸಾದರನ್ನು ಕಂಡು ಜುಗುಪ್ಸೆಯಾಗಿತ್ತು.

ವಿದ್ಯಾ ಉನ್ನಾವಿಗೆ ಹೊರಟಳು. ನವಲ್ ಈಗ ತನ್ನ ಮನಸ್ಸನ್ನು ದೇಶದ ರಾಜಕೀಯ ಚಟುವಟಿಕೆಗಳ ಕಡೆ ಹರಿಸಿದ. ಈಗ ಅವನು ಹೆಚ್ಚಿನ ಸಮಯವನ್ನು ಜ್ಞಾನಪ್ರಕಾಶನೊಂದಿಗೆ ದೇಶದ ರಾಜಕಾರಣವನ್ನು ಕುರಿತು ಚರ್ಚಿಸುವುದರಲ್ಲಿ ಕಳೆಯುತ್ತಿದ್ದ. ದೇಶದಲ್ಲಿ ಎಲ್ಲೆಲ್ಲೂ ಉಗ್ರ ದಬ್ಬಾಳಿಕೆ ನಡೆದಿತ್ತು. ನಾಡಿನ ಮೂಲೆಮೂಲೆಗಳಿಂದ ಜನ ದಸ್ತಗಿರಿಯಾಗುತ್ತಿದ್ದ ಸುದ್ದಿ ಬರುತ್ತಿತ್ತು. ನವಲ್ ಈ ಮೊದಲು ರಾಜಕೀಯದ ಕಡೆ ಗಮನ ಕೊಟ್ಟಿರಲಿಲ್ಲ. ಈಗ ಅವನಿಗೆ ಅದರಲ್ಲಿ ಆಸಕ್ತಿ ಹುಟ್ಟತೊಡಗಿತ್ತು.

ಜುಲೈ ತಿಂಗಳು ಷುರುವಾಗಿತ್ತು. ಮಳೆ ಜೋರಾಗಿ ಬೀಳುತ್ತಿತ್ತು. ನವಲ್ ಎಲ್‌ಎಲ್.ಬಿ. ಪ್ರೀವಿಯಸ್ಸಿನಲ್ಲಿ ಮೊದಲನೆ ದರ್ಜೆಯಲ್ಲಿ ಪಾಸಾಗಿದ್ದ. ಹಿಂದಿನ

ದಿನ ತಾನೇ ವಿದ್ಯಳ ಕಾಗದ ಬಂದಿತ್ತು. ಅದರಲ್ಲಿ ಅವಳು ವ್ಯಕ್ತಪಡಿಸಿದ್ದ ದುಃಖ ಯಾತನೆಗಳಿಗೆ ಎಲ್ಲೆಯಿರಲಿಲ್ಲ. ಉನ್ನಾವಿನಲ್ಲಿ ಸಿದ್ಧೇಶ್ವರಿಯ ಒಬ್ಬ ವಿಧವೆ ಸೋದರತ್ತೆ ಮನೆಯ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಳು. ಮನೆಯಲ್ಲಿ ಅವಳದ್ದೇ ಆಡಳಿತ. ವಿದ್ಯಳಿಗೆ ಆ ಮನೆ ತನ್ನದೆಂಬ ಭಾವನೆ ಬರುವುದು ಶಕ್ಯವಿರಲಿಲ್ಲ. ಆದರೂ ವಿದ್ಯಾ ಧೈರ್ಯದಿಂದ ಕೆಲಸ ಸಾಗಿಸುತ್ತಿದ್ದಳು. ಒಂದು ರೀತಿಯಲ್ಲಿ ವಿದ್ಯಾ ಮನೆಯಲ್ಲಿ ಬಂದಿಯಾಗಿದ್ದಳು. ಡೆಪ್ಯುಟಿ ಕಲೆಕ್ಟರನ ಹೆಂಡತಿಯಾದರೂ ಅವಳು ಸಾಧಾರಣ ಮನೆತನಗಳ ಹೆಂಗಸರಂತೆ ಪರದೆಯಲ್ಲಿರಬೇಕಾಗುತ್ತಿತ್ತು.

ನವಲ್ ಅವತ್ತು ನಿದ್ರೆಯಿಂದ ಎದ್ದಾಗ ಮನಸ್ಸು ತುಂಬ ಭಾರವಾಗಿತ್ತು. ಜ್ಞಾನಪ್ರಕಾಶ ವರಾಂಡದಲ್ಲಿ ಕುಳಿತು ಚಹ ಕುಡಿಯುತ್ತ ಅವತ್ತಿನ ಪತ್ರಿಕೆ ಓದುತ್ತಿದ್ದ. ನವಲ್ ಜ್ಞಾನಪ್ರಕಾಶನ ಹತ್ತಿರ ಬಂದು ಕುಳಿತು 'ಲೀಡರ್' ಪತ್ರಿಕೆಯನ್ನು ಕೈಗೆತ್ತಿಕೊಂಡ. ಅಂಥ ವಿಶೇಷ ಸುದ್ದಿ ಯಾವುದೂ ಇರಲಿಲ್ಲ. ಕ್ರಾಂತಿಕಾರಿಗಳ ಮೇಲೆ ಮೊಕದ್ದಮೆ ನಡೆಯುತ್ತಿತ್ತು. ಅಸೆಂಬ್ಲಿಯಲ್ಲಿ ಸರಕಾರೀ ಹಾಗೂ ವಿರುದ್ಧಪಕ್ಷಗಳ ನಡುವೆ ಕಾದಾಟವಾಗುತ್ತಿತ್ತು.

ನವಲ್ ಪತ್ರಿಕೆಯನ್ನು ಕೆಳಗಿಟ್ಟು ಜ್ಞಾನಪ್ರಕಾಶನ ಕಡೆ ನೋಡಿದ. "ಜ್ಞಾನಬಾಬಾ, ಇದೆಲ್ಲದರಿಂದ ಭಾರತಕ್ಕೆ ಲಾಭ ಇದೆ ಅಂತ ನೀವಂತೀರಾ? ಸರಕಾರದ ದಬ್ಬಾಳಿಕೆ ಇಷ್ಟು ಜೋರಾಗಿ ನಡೀತಿದೆ. ಯಾವ ಆಂದೋಳನವೂ ಇಲ್ಲದೆ ಸರಕಾರ ಜನರನ್ನ ಮಾತುಮಾತಿಗೆ ಜೈಲಿಗೆ ತಳ್ತಿದೆ. ಜನ ತೆಪ್ಪಗಿದಾರೆ!"

ಜ್ಞಾನಪ್ರಕಾಶ ನಕ್ಕ, "ಹೌದು, ನವಲ್. ಇದೆಲ್ಲದರಿಂದ ಒಂದು ಮಾತು ಸ್ಪಷ್ಟವಾಗಿದೆ. ದೇಶದ ಚೇತನ ಜಾಗ್ರತವಾಗಿದೆ. ಮಧ್ಯಮವರ್ಗದವರಲ್ಲಿ ನಿರುದ್ಯೋಗ ಸಿಕ್ಕಾಪಟ್ಟೆ ಬೆಳೀತಿದೆ. ಅವರು ತಮ್ಮ ಕೈ ತೋರಿಸದೆ ಬಿಡ್ತಾರೆಯೆ?"

"ಮಧ್ಯಮವರ್ಗದವರ ನಿರುದ್ಯೋಗಕ್ಕೂ ದೇಶದ ಸ್ವಾತಂತ್ರ್ಯಕ್ಕೂ ಏನು ಸಂಬಂಧ, ಬಾಬಾ? ನನಗೆ ಅರ್ಥವಾಗಲಿಲ್ಲ."

"ತುಂಬ ಸ್ಪಷ್ಟವಾದ ವಿಷಯ ಇದು, ನವಲ್. ದೇಶದಲ್ಲಿ ಅವಿದ್ಯಾವಂತರ ಸಂಖ್ಯೆ ಶೇಕಡಾ ತೊಂಬತ್ತೆರಡು ಅಂತ ನಿನಗೆ ಗೊತ್ತಿದೆ. ಅವರಿಗೆ ತಮ್ಮದೇ ಸ್ವಂತ ಬುದ್ಧಿಯಿಲ್ಲ, ತಿಳಿವಳಿಕೆಯಿಲ್ಲ. ಅವರಿಗೆ ಮಾರ್ಗದರ್ಶನಕ್ಕೆ ಮುಂದಾಳುಗಳಿರಬೇಕು. ಮುಂದಾಳುತನ ಯಾವಾಗಲೂ ವಿದ್ಯಾವಂತರ ಕೈಯಲ್ಲಿರುತ್ತೆ. ವಿದ್ಯಾವಂತರಾಗಿರೋರು ಅಂದರೆ ಐಶ್ವರ್ಯವಂತರು, ಜಮೀನುದಾರರು, ದೊಡ್ಡದೊಡ್ಡ ಪದವೀಲಿ ಇರೋರು, ಅವರ ಹಿತ, ಜನಸಾಧಾರಣ ಹಿತ ಒಂದೇ ಅಲ್ಲ. ಅರ್ಥವಾಯಿತೆ?"

"ಹೌದು, ಇದು ಸ್ಪಷ್ಟ," ನವಲ್ ಕಿಶೋರ ಹೇಳಿದ.

ಆದರೆ ಈಗ ಪರಿಸ್ಥಿತಿ ಬೇರೆಯಾಗಿದೆ. ದೇಶದಲ್ಲಿ ಸಾವಿರಗಟ್ಟಲೆ, ಲಕ್ಷಗಟ್ಟಲೆ ಯುವಕರು ವಿದ್ಯಾವಂತರಾಗಿದಾರೆ. ಆದರೆ ಅವರಿಗೆ ಐಶ್ವರ್ಯವಿಲ್ಲ, ಉದ್ಯೋಗ

ವಿಲ್ಲ. ಈ ಕ್ರಾಂತಿಕಾರಿ ಆಂದೋಳನ... ಇದು ಈ ನಿರುದ್ಯೋಗಿಗಳ ಶಾಪ ತಾನೆ! ಬಹಳ ದಿನಗಳ ತನಕ ಇಂಗ್ಲೀಷಿನೋರು ಹಿಂದೂ-ಮುಸ್ಲಿಂ ಸಮಸ್ಯೆಯನ್ನು ಸೃಷ್ಟಿಸಿ, ಅವರಲ್ಲಿ ಒಬ್ಬರನ್ನ ಇನ್ನೊಬ್ಬರ ಮೇಲೆ ಎತ್ತಿಕಟ್ಟಿ ಆ ಮುಖಾಂತರ ವಿದ್ಯಾವಂತರಲ್ಲಿ ನಿರುದ್ಯೋಗದ ಕಾರಣದಿಂದಾಗಿ ಹುಟ್ಟಿದ ಅಸಂತೋಷ, ಅತೃಪ್ತಿಗಳನ್ನು ತುಳಿದಿಟ್ಟಿದ್ದರು. ಆದರೆ ಸುಳ್ಳುಪರಿಹಾರಗಳಿಂದ ನಿಜವಾದ ಸಮಸ್ಯೆಗಳನ್ನ ಬಗೆಹರಿಸೋಕ್ಕಾಗೋಲ್ಲ. ಈಗ ಹಿಂದೂ-ಮುಸ್ಲಿಮರ ಭೇದಭಾವದ ಪ್ರಶ್ನೆ ಅಡಗಿಹೋಗಿದೆ. ನಿರುದ್ಯೋಗ ಅಸಂತೋಷಗಳು ಹಿಂದೂ, ಮುಸಲಮಾನ ಇಬ್ಬರಲ್ಲಿಯೂ ಒಂದೇ ಸಮನಾಗಿವೆ. ಇವತ್ತಿನ ಘಟನೆಗಳನ್ನ ನೋಡಿದರೆ ಇದು ವ್ಯಕ್ತವಾಗುತ್ತೆ. ದೇಶದ ರಾಜಕೀಯ ಸ್ಥಿತಿಯಲ್ಲಿ ಈಗಿರೋ ಹಳಸು ಬಹಳ ದಿನ ಇರೋಲ್ಲ ಅಂತ ನನಗನ್ನಿಸುತ್ತೆ."

"ಅಂದರೆ ಇಂಗ್ಲಿಷಿನೋರು ಹಿಂದೂಸ್ತಾನದಲ್ಲಿ ಹೆಚ್ಚಿನ ಸುಧಾರಣೆ ಮಾಡ್ತಾರೆ ಅಂತ ಅಂತೀರಾ?"

ಜ್ಞಾನಪ್ರಕಾಶ ಸ್ವಲ್ಪ ಯೋಚಿಸಿ ಹೇಳಿದ, "ನವಲ್, ಸತ್ಯ ಅಂದರೆ ಬ್ರಿಟಿಷ್ ಸರಕಾರ ಒತ್ತಾಯಕ್ಕೆ ಕಟ್ಟುಬೀಳದೆ ಹಿಂದೂಸ್ತಾನಕ್ಕೆ ಏನನ್ನೂ ಕೊಡೋಲ್ಲ. ಸದ್ಯ ದಲ್ಲಿಯೇ ದೇಶದಲ್ಲಿ ಒಂದು ಭಾರೀ ಆಂದೋಳನ ಷುರುವಾಗಬೇಕಾಗುತ್ತೆ."

"ದೇಶ ಯಾವ ಆಂದೋಳನಕ್ಕೂ ಸಿದ್ಧವಾಗಿಲ್ಲ ಅಂತ ನನಗನ್ನಿಸುತ್ತೆ," ನವಲ್ ಹೇಳಿದ. "ಎಲ್ಲಿ ನೋಡಲಿ, ಏನೋ ಒಂದು ತರಹದ ವಿವಶತೆ, ವೇದನೆ ಕಾಣಿಸುತ್ತೆ. ಮಹಾತ್ಮ ಗಾಂಧಿಯವರು ಮೊದಲ ಆಂದೋಳನವನ್ನು ಹಿಂತೆಗೆದುಕೊಂಡು ತಪ್ಪು ಮಾಡಿದರು."

"ಯಾರಿಗೆ ಗೊತ್ತು, ನವಲ್? ಅವರು ಮಾಡಿದ್ದೇ ಸರಿ, ಅಂತ ನನ್ನ ಅಭಿಪ್ರಾಯ. ಆಗ ರಾಜಕೀಯ ಚೇತನ ಇನ್ನೂ ಹಳ್ಳಿಗಳನ್ನ ಮುಟ್ಟಿರಲಿಲ್ಲ. ಕಾಂಗ್ರೆಸ್ಸಿನ ಪ್ರಭಾವ ಬರೀ ಪಟ್ಟಣಗಳಲ್ಲಷ್ಟೇ ಇತ್ತು. ಆದರೆ ಕಳೆದ ಏಳೆಂಟುವರ್ಷಗಳಲ್ಲಿ ಕಾಂಗ್ರೆಸ್ ಹಳ್ಳಿಗಳಲ್ಲಿ ಬೇರು ಬಿಟ್ಟಿದೆ. ಒಂದು ಹಿಡಿ ವಿದ್ಯಾವಂತರ ಆಂದೋಳನ ಎಂದೂ ಯಶಸ್ವಿಯಾಗೋದು ಸಾಧ್ಯವಿರಲಿಲ್ಲ. ದೇಶದ ಕೋಟ್ಯಂತರ ಜನ ಯಾವಾಗ ಬ್ರಿಟಿಷ್ ಸಾಮ್ರಾಜ್ಯಾನ ಎದುರಿಸೋಕ್ಕೆ ಹೊರಡ್ತಾರೋ ಆಗ ಅದು ಯಶಸ್ವಿಯಾಗೇ ತೀರುತ್ತೆ."

ನವಲ್ ಸುಮ್ಮನೆ ಕೇಳುತ್ತಿದ್ದ. ಜ್ಞಾನಪ್ರಕಾಶ ಮತ್ತೆ ಹೇಳಿದ, "ಆದರೆ ಈ ಕೋಟ್ಯಂತರ ಜನಕ್ಕೆ ಮುಂದಾಳುತನ ಬೇಕು. ಗುಣವಂತರೂ ಪ್ರಾಮಾಣಿಕರೂ ಆಗಿರೋ ಜನಗಳ ಸಹಕಾರ ಬೇಕು. ನಮ್ಮ ದೇಶದಲ್ಲಂತೂ ಅಂಥವರ ಅಭಾವ ಬಹಳ."

ನವಲ್ ನಿಟ್ಟುಸಿರುಬಿಟ್ಟ. "ನೀವು ಹೇಳೋದು ಸರಿ, ಬಾಬಾ" ಎಂದು ಅವನೂ ಚಹ ಕುಡಿಯಲಾರಂಭಿಸಿದ.

# ಐದು

ಲಾರ್ಡ್ ಇರ್ವಿನ್ ಇಂಗ್ಲಂಡಿನಿಂದ ಹಿಂದಿರುಗಿ ಬಂದು ೧೯೨೯ ರ ಅಕ್ಟೋಬರ್ ೩೧ ರಂದು ಮಾಡಿದ ಘೋಷಣೆ ಎಲ್ಲೆಲ್ಲೂ ಚರ್ಚೆಯಾಗುತ್ತಿತ್ತು. ಯೂನಿವರ್ಸಿಟಿ ಯೂನಿಯನ್ನಿನ ಕಾನ್ವೋಕೇಷನ್ ಸಂದರ್ಭದಲ್ಲಿ ನಡೆಯಲಿದ್ದ ಭಾಷಣಸ್ಪರ್ಧೆಯ ವಿಷಯವೂ ಅದೇ: "ಭಾರತಕ್ಕೆ ಡೊಮಿನಿಯನ್ ಸ್ಟೇಟಸ್ ದೊರೆಯುವುದರಿಂದ ದೇಶದ ಸಮಸ್ಯೆಗಳು ಬಗೆಹರಿಯುವವೆ?" ನವಲ್ ಈ ವಿಷಯವಾಗಿ ಭಾಷಣ ಸಿದ್ಧ ಮಾಡುತ್ತಿದ್ದ. ಬಹುಕಷ್ಟದ ವಿಷಯ. ಈ ವಿಷಯವಾಗಿ ನವಲನಿಗೆ ಜ್ಞಾನಪ್ರಕಾಶ ನೊಡನೆ ಆಲೋಚನೆ ಮಾಡುವುದು ಅತ್ಯವಶ್ಯಕವಾಗಿತ್ತು.

ಒಂದು ದಿನ ಇನ್ನೂ ಬೆಳಗಿನಲ್ಲೇ ನವಲ್ ಜ್ಞಾನಪ್ರಕಾಶನನ್ನು ಹಿಡಿದ. ಜ್ಞಾನ ಪ್ರಕಾಶ ಅದೇ ತಾನೆ ಬೆಳಗಿನ ಉಪಾಹಾರ ಮುಗಿಸಿ ಕಾಂಗ್ರೆಸ್ ಕಮಿಟಿಯ ಕಚೇರಿಗೆ ಹೊರಟಿದ್ದ. ನವಲ್ ಅವನನ್ನು ಹಿಡಿದು ಕೂರಿಸಿದ. ಜ್ಞಾನಪ್ರಕಾಶ ವಿಷಯದ ಬಗ್ಗೆ ತನ್ನ ಅಭಿಪ್ರಾಯ ತಿಳಿಸಿದ. ಇದ್ದಕ್ಕಿದ್ದಂತೆ ಜ್ಞಾನಪ್ರಕಾಶನಿಗೆ ಏನೋ ನೆನಪಾಯಿತು. ಅವನು ಹೇಳಿದ, "ಅರೆ ನವಲ್, ಅಲಹಾಬಾದಿನಲ್ಲಿ ನವಂಬರ್ ಹದಿನಾರಕ್ಕೆ ಸರ್ವದಳ ಸಮ್ಮೇಳನ ನಡೆಯೋದಿದೆ ಅಂತ ನಿನಗೆ ಗೊತ್ತಲ್ಲ. ಆಗ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಭೆಯೂ ನಡೆಯುತ್ತೆ. ಅಲ್ಲಿ ಈ ವಿಷಯದ ಮೇಲೆ ಮಹತ್ವಪೂರ್ಣವಾದ ಚರ್ಚೆ ಯಾಗುತ್ತೆ."

"ಹೌದು ಜ್ಞಾನಬಾಬಾ, ಆದರೆ ಅಲ್ಲಿ ಬರೋಕ್ಕೆ ನನಗೆ ಅವಕಾಶ ಸಿಗೋ ಬಗೆ ಹೇಗೆ?" ನವಲ್ ಕೇಳಿದ.

"ಅದನ್ನೇ ಹೇಳೋಕ್ಕೆ ಹೊರಟಿದ್ದೆ. ಸರ್ವದಳ ಸಮ್ಮೇಳನದಲ್ಲಿ ದೇಶದ ಮೂಲೆ ಮೂಲೆಗಳಿಂದ ಜನ ಬರ್ತಾರೆ. ನಮಗೆ ವಿದ್ಯಾವಂತರೂ ಸುಸಂಸ್ಕೃತರೂ ಆದ ವಾಲಂಟಿ ಯರ್‌ಗಳು ಬೇಕಾಗಿದಾರೆ. ನೀನು ಯೂನಿವರ್ಸಿಟಿಯಿಂದ ಹದಿನೈದು ಇಪ್ಪತ್ತು ವಿದ್ಯಾರ್ಥಿ ವಾಲಂಟಿಯರ್‌ಗಳನ್ನ ತಯಾರು ಮಾಡೋಕ್ಕೆ ಆಗುತ್ತೆಯೆ?"

ನವಲ್ ಹುರುಪಿನಿಂದ ಹೇಳಿದ, "ವಾಹ್ ಜ್ಞಾನಬಾಬಾ; ಏನೂ ಕಷ್ಟವಿಲ್ಲದೆ ಮಾಡಬಹುದು! ನೀವು ಮೊದಲೇ ಯಾಕೆ ಹೇಳಲಿಲ್ಲ? ನಾಳೆ ಸಂಜೆ ಹೊತ್ತಿಗೆ ವಾಲಂಟಿಯರ್‌ಗಳ ಪಟ್ಟಿ ಕೊಡ್ತೀನಿ. ಆದರೆ ಈ ವಾಲಂಟಿಯರ್‌ಗಳಿಗೆ ಯೂನಿ ಫಾರಮ್ ಏನಾದರೂ ಇದೆಯೆ?"

ಜ್ಞಾನಪ್ರಕಾಶ ಸ್ವಲ್ಪ ಯೋಚಿಸಿ ಉತ್ತರಕೊಟ್ಟ, "ನಿರ್ದಿಷ್ಟವಾಗಿ ಇಂಥ ಯೂನಿ ಫಾರಮ್ಮೇ ಅಂತ ಏನಿಲ್ಲ. ಖದ್ದರ್ ಜುಬ್ಬ, ಖದ್ದರ್ ಧೋತಿ ಅಥವಾ ಪೈಜಾಮ, ಗಾಂಧೀಟೋಪಿ—ಇಷ್ಟಾದರೆ ಸಾಕು. ಸ್ವಲ್ಪ ಚಳಿ ಶುರುವಾಗಿದೆ, ಉಣ್ಣೆಯ ವೇಸ್ಟ್

ಕೋಟ್ ಇತ್ತು ಅಂದರೆ ಒಳ್ಳೇದು. ವಿದ್ಯಾರ್ಥಿಗಳು ಈ ಖರ್ಚನ್ನ ತಾವೇ ವಹಿಸಿಕೊಳ್ಳಬೇಕಾಗುತ್ತೆ. ಈ ಪೋಷಾಕು ಐದಾರು ರೂಪಾಯಿಗಳಲ್ಲಿ ಆಗಿಬಿಡುತ್ತೆ."

ಸರ್ವದಳ ಸಮ್ಮೇಳನವೇನೋ ಆಯಿತು. ಆದರೆ ಅದು ಆದದ್ದು ತುಂಬಾ ನಿರಾಶಾಜನಕ ವಾತಾವರಣದಲ್ಲಿ. ವೈಸ್‌ರಾಯರ ಘೋಷಣೆಯ ಮೇಲೆ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ನಡೆದ ಚರ್ಚೆ, ಬ್ರಿಟಿಷ್ ಮಂತ್ರಿಗಳು ಆ ಘೋಷಣೆಯನ್ನು ಸ್ಪಷ್ಟಗೊಳಿಸಿದ ರೀತಿ—ಇವೆಲ್ಲದರಿಂದ ದೇಶದ ಯುವಕ-ಸಮುದಾಯ ತುಂಬ ಕೆರಳಿತು. ದೇಶದ ಯುವಕರು ಬ್ರಿಟಿಷ್ ಶಾಸಕರ ಹಟ ಹಾಗೂ ವಂಚನೆಯ ನೀತಿಗೆ ತುತ್ತಾಗಲು ಸಿದ್ಧರಿರಲಿಲ್ಲ. ಅವರಲ್ಲಿ ಹುಮ್ಮಸ್ಸಿತ್ತು, ಉತ್ಸಾಹವಿತ್ತು, ಹೋರಾಟದ ಬಗೆಗೆ ಒಲವಿತ್ತು, ಪ್ರಾಣವನ್ನು ಪಣವಾಗಿ ಒಡ್ಡುವ ಛಲವಿತ್ತು. ಈ ಯುವಕ-ಸಮುದಾಯದ ನೇತೃತ್ವವಿದ್ದುದು ಜವಾಹರಲಾಲ್ ಹಾಗೂ ಸುಭಾಷ್‌ಚಂದ್ರ ಬೋಸರ ಕೈಯಲ್ಲಿ.

ನವಲ್ ಇದೆಲ್ಲವನ್ನೂ ನೋಡಿದ. ಅವನೊಳಗಿನ ಚೇತನ ಉಗ್ರತ್ಯಾಗಕ್ಕೆ ಸಿದ್ಧವಾಯಿತು. ಹೋರಾಟ ಅನಿವಾರ್ಯ, ತಾನೂ ಮುಂದೆ ನುಗ್ಗಿ ಆ ಹೋರಾಟದಲ್ಲಿ ಭಾಗವಹಿಸಬೇಕಾಗಿದೆ ಎಂಬುದು ಅವನಿಗೆ ಅರಿವಾಯಿತು. ಸ್ವಲ್ಪಸ್ವಲ್ಪವಾಗಿ ನವಲನ ವಿಚಾರಧಾರೆ ಅವನಿಗೆ ತಿಳಿಯದಂತೆಯೇ ಬದಲಾಗಿ ಸಕ್ರಿಯತೆಯ ಕಡೆ ತಿರುಗತೊಡಗಿತು.

ನವೆಂಬರ್ ತಿಂಗಳ ಕೊನೆಯ ವಾರ. ಚಳಿ ಜೋರಾಗಿತ್ತು. ಜ್ವಾಲಾಪ್ರಸಾದ ಮನೆಯವರಿಗೆ ಬೇಕಾದ ಉಣ್ಣೆಯ ಬಟ್ಟೆ, ರಜಾಯಿ, ಹಾಸಿಗೆಗಳಿಗೆ ಏರ್ಪಾಡು ಮಾಡಿದ್ದ. ನವಲನನ್ನು ಕರೆದು ಅವನು ಹೇಳಿದ, "ಮಗೂ ನವಲ್, ಹೋದ ವರ್ಷ ವಿದ್ಯಳ ಮದುವೆಯಿಂದಾಗಿ ನಿನಗೆ ಬಟ್ಟೆ ಹೊಲಿಸೋಕ್ಕೆ ಆಗಲಿಲ್ಲ. ನಿನ್ನ ಬಟ್ಟೆಗಳೆಲ್ಲಾ ಹರಿದು ಹಳೇದಾಗಿವೆ. ಈ ವರ್ಷ ನೀನೊಂದು ಸರ್ಜ್ ಸೂಟು ಹೊಲಿಸಿಕೊ; ಒಂದಿಷ್ಟು ಷರಟು ಪೈಜಾಮಾನೂ ಹೊಲಿಸಿಕೊ." ಹೀಗಂದು ಜ್ವಾಲಾಪ್ರಸಾದ ನವಲನಿಗೆ ಹಣ ಕೊಟ್ಟ.

ನವಲ್ ಹೇಳಿದ, "ನನ್ನ ಮನಸ್ಸಿಗೆ ಬಂದ ಬಟ್ಟೆ ಹೊಲಿಸಿಕೋತೀನಿ. ಇದರಲ್ಲಿ ನಿಮ್ಮ ಅಭ್ಯಂತರವೇನೂ ಇಲ್ಲವಲ್ಲ?"

"ನವಲ್, ಇವತ್ತಿನ ಪ್ರಪಂಚವೇ ತನ್ನ ಮನಸ್ಸಿಗೆ ಬಂದ ಹಾಗೆ ನಡೀತಿದೆ. ಅಡ್ಡಿ ಅಭ್ಯಂತರ ಮಾಡಿ ಏನು ಪ್ರಯೋಜನ? ಎಲ್ಲಾನ್ನೂ ನಿನಗೆ ಬಿಟ್ಟಿದೀನಿ. ಬಟ್ಟೆ ಹಾಕ್ಕೊಳೋನು ನೀನು, ನಾನಲ್ಲ."

ನವಲ್ ಹಣ ತೊಗೊಂಡು ಪೇಟೆಗೆ ಹೋದ. ಅವನ ಮನಸ್ಸು ಚುರುಕಾಗಿ ಯೋಚಿಸುತ್ತಿತ್ತು. ಕಣ್ಣುತೆರೆದು ನೋಡಿದಾಗ ತನಗೆ ಅರಿವಿಲ್ಲದಂತೆಯೇ ಅವನು ಖಾದಿ ಭಂಡಾರದಲ್ಲಿ ನಿಂತಿದ್ದ. ಅವನಿಗೆ ತನ್ನ ಬಗ್ಗೆಯೇ ಆಶ್ಚರ್ಯವಾಯಿತು.

ಅಲ್ಲಿಂದ ಹೊರಟು ಬಿಡಬೇಕೆಂದು ಒಮ್ಮೆ ಮನಸ್ಸಾಯಿತು. ಆದರೆ ಕಾಲು ಮುಂದೆ ಸರಿಯಲಿಲ್ಲ. ಅವನು ಉಣ್ಣೆಯ ಬಟ್ಟೆ ತೆಗೆಸಿದ. ಒಂದು ಥಾನಿನಲ್ಲಿ ಒಂದು ಕೋಟು, ಒಂದು ವೇಸ್ಟ್‌ಕೋಟು ಆಗುವುದೆಂದು ಅಂಗಡಿಯವನು ಹೇಳಿದ. ಅವನಿಗೆ ಅಗತ್ಯವಿದ್ದದ್ದೂ ಅಷ್ಟೇ. ಮೇಲೆ ಆರು ಜುಬ್ಬ, ಎರಡು ಪೈಜಾಮಗಳಿಗೆಂದು ಎರಡು ಥಾನು ಖಾದಿ ಕೊಂಡ. ನಾಲ್ಕು ಧೋತಿ ಕೊಂಡ. ಇಷ್ಟೆಲ್ಲ ಖರೀದಿ ಮಾಡಿ ಇನ್ನೂ ಇಪ್ಪತ್ತು ರೂಪಾಯಿ ಮಿಕ್ಕಿತ್ತು. ಅಂಗಡಿಯವನು ಕೇಳಿದ, "ಬಟ್ಟೆ ಹೊಲಿಯೋಕ್ಕೆ ಹಾಕ್ತೀರಾ? ಅಂಗಡಿಯ ದರ್ಜಿಯೇ ಇದಾನೆ. ಹೊಲಿಗೆಗೆ ಒಟ್ಟು ಹತ್ತು ರೂಪಾಯಿ ಆಗುತ್ತೆ." ನವಲ್ ಬಟ್ಟೆ ಹೊಲಿಯಲು ಹಾಕಿದ.

ಜ್ಞಾನಪ್ರಕಾಶನನ್ನು ಕಂಡು ಬರಲು ನವಲ್ ಖಾದೀ ಭಂಡಾರದಿಂದ ಕಾಂಗ್ರೆಸ್ ಕಮಿಟಿಗೆ ಹೋದ. ಕಾಂಗ್ರೆಸ್ಸಿನ ಮನವಿಯನ್ನು ಮುಂದೆ ಹರಡಿಕೊಂಡು ಜ್ಞಾನಪ್ರಕಾಶ ಚಹ ಕುಡಿಯುತ್ತಿದ್ದ. ನವಲನನ್ನು ಕಂಡವನೇ ಅವನು ಕೇಳಿದ, "ಇವತ್ತು ಸವಾರಿ ಕಾಂಗ್ರೆಸ್ ಕಮಿಟಿಯ ಕಡೆ ಹೇಗೆ ತಿರುಗಿತು, ನವಲ್? ಕೂತುಕೊ, ಚಹ ಕುಡಿಯುವೆಯಂತೆ! ನನ್ನಿಂದ ಏನಾದರೂ ಕೆಲಸವಿತ್ತೆ?"

ನವಲ್ ಕುಳಿತುಕೊಂಡು ಚಹ ಮಾಡಿಕೊಳ್ಳುತ್ತ ಹೇಳಿದ, "ಜ್ಞಾನಬಾಬಾ, ನಾನೊಂದು ದೊಡ್ಡ ಹೆಜ್ಜೆ ಹಾಕಿದೀನಿ!"

"ನಿನ್ನ ಮುಖದ ಗಂಭೀರ ಮುದ್ರೇನ ನೋಡಿದರೆ ಅದು ಗೊತ್ತಾಗುತ್ತೆ. ಹೇಳು, ಏನು ಮಾಡಿಬಂದೆ?"

"ನಾನು ಇವತ್ತಿನಿಂದ ಖದ್ದರ್ ತೊಡೋಕ್ಕೆ ಷುರುಮಾಡಿದೆ. ತಾತ ಸರ್ಜ್ ಸೂಟಿಗೆ ಅಂತ ಐವತ್ತು ರೂಪಾಯಿ ಕೊಟ್ಟಿದ್ದರು. ಅದರಲ್ಲಿ ಖದ್ದರ್ ಬಟ್ಟೆ ಹೊಲಿಯೋಕ್ಕೆ ಹಾಕಿಬಂದಿದೀನಿ. ನಲವತ್ತು ರೂಪಾಯಿಯಲ್ಲಿ ಆರು ಜುಬ್ಬ, ಎರಡು ಪೈಜಾಮ, ನಾಲ್ಕು ಧೋತಿ, ಒಂದು ಉಣ್ಣೆಯ ಕೋಟು, ವೇಸ್ಟ್‌ಕೋಟು, ಆರು ಗಾಂಧಿ ಟೋಪಿ! ಇದರಲ್ಲಿ ಹೊಲಿಗೆಯ ಖರ್ಚೂ ಸೇರಿದೆ. ಎಷ್ಟು ಅಗ್ಗ!"

"ಅದೇನೋ ಸರಿ, ಆದರೆ ನೀನು ಮೊದಲು ಎಲ್‌ಎಲ್.ಬಿ. ಪಾಸುಮಾಡಬೇಕು. ವಕೀಲಿ ಪಾಸು ಮಾಡಿ ಮುಗಿಸೋ ತನಕ ನಾನು ನಿನ್ನನ್ನ ಸಕ್ರಿಯ ರಾಜಕೀಯದಲ್ಲಿ ಇಳಿಯೋಕ್ಕೆ ಬಿಡೋಲ್ಲ, ನೆನಪಿರಲಿ. ಇಲ್ಲದೆ ಹೋದರೆ, ಅಣ್ಣ ತಪ್ಪು ನನ್ನದು ಅಂತಾನೆ."

"ನೀವು ನಂಬಿ, ನನಗಿನ್ನೂ ಸಕ್ರಿಯ ರಾಜಕೀಯದಲ್ಲಿ ಇಳಿಯೋ ಯೋಚನೆ ಎಳ್ಳಷ್ಟೂ ಇಲ್ಲ. ಬರಿ ಖದ್ದರ್ ತೊಡೋಕ್ಕೆ ಷುರುಮಾಡ್ತೀನಿ, ಅಷ್ಟೇ."

"ಆದರೆ ಒಂದು ಅಪಾಯ ಇದೆ, ಸಿ.ಐ.ಡಿ. ಗಳು ನಿನ್ನ ಮೇಲೆ ಕಣ್ಣಿಡ್ತಾರೆ, ನೋಡು. ನೀನು ಸಕ್ರಿಯವಾಗಿ ಏನನ್ನೂ ಮಾಡದೆ ಇದ್ದರೆ ಸರಿ, ಪೋಲೀಸಿನವರು ನಿನ್ನ ತಂಟೆಗೆ ಬರೋಲ್ಲ. ಹೇಗೂ ನಿನಗೆ ಸರಕಾರೀ ನೌಕರಿ ಬೇಕಾಗಿಲ್ಲ."

ಡಿಸೆಂಬರ್ ಷುರುವಾದೊಡನೆಯೇ ಚಳಿ ಜೋರಾಗಿ ಹೊಡೆಯತೊಡಗಿತು. ಶನಿವಾರ ಸಂಜೆ ರಾಯ್‌ಬಹದ್ದೂರ್ ಕಾಮತಾನಾಥರು ಜ್ವಾಲಾಪ್ರಸಾದನನ್ನು ಕಂಡುಹೋಗಲು ಬಂದರು. ಅವತ್ತು ಅವರು ಸಾಕಷ್ಟು ಗಂಭೀರರಾಗಿದ್ದರು. ಜ್ವಾಲಾಪ್ರಸಾದ ಕಾಮತಾ ನಾಥರನ್ನು ಡ್ರಾಯಿಂಗ್ ರೂಮಿನಲ್ಲಿ ಕೂರಿಸುತ್ತ ಹೇಳಿದ, "ಏನು ಸಮಾಚಾರ, ರಾಯ್ ಬಹದ್ದೂರ್ ಸಾಹೇಬ್? ತುಂಬ ಗಂಭೀರವಾಗಿದೀರಿ?"

"ಏನೂ ಇಲ್ಲ, ಈ ವ್ಯಾಪಾರ–ವ್ಯವಹಾರದ ಗೋಳುಕರೆ ಅಂತ ಇಟ್ಟುಕೊಳ್ಳಿ. ಸೀತಾನಾಥ ವ್ಯಾಪಾರ-ವ್ಯವಹಾರಾನ ಸಿಕ್ಕಾಪಟ್ಟೆ ಬೆಳಸಿಬಿಟ್ಟಿದಾನೆ. ಹೀಗಾಗಿ ನನಗೂ ಓಡಾಟ ತಪ್ಪಿದ್ದಲ್ಲ. ಇವತ್ತು ಇಡೀ ದಿನ ಕೆಲಸಮಾಡ್ತಿದ್ದೆ. ಬಹಳ ದಿನದಿಂದ ನಿಮ್ಮನ್ನ ನೋಡಿರಲಿಲ್ಲ. ಇವತ್ತು ನೋಡಿಹೋಗೋಣ ಅಂತ ಬಂದೆ."

ಜ್ವಾಲಾಪ್ರಸಾದ ಭೀಖುವಿಗೆ ಚಹ ತರಲು ಹೇಳಿದ; ಆಮೇಲೆ ಲೋಕಾಭಿರಾಮ ವಾಗಿ, "ಹೌದು ರಾಯ್‌ಬಹದ್ದೂರ್ ಸಾಹೇಬ್, ವ್ಯಾಪಾರ-ವ್ಯವಹಾರ ಅಂದಮೇಲೆ ಶ್ರಮಪಡಬೇಕಾಗುತ್ತೆ. ಆದರೆ ತಲೆ ಮೇಲೆ ಇಲ್ಲದ ಪ್ರಯಾಸ ಹೇರಿಕೊಳ್ಳೋದು ಎಂಥ ವ್ಯಾಪಾರ-ವ್ಯವಹಾರ ಹೇಳಿ" ಅಂದ.

"ಡಿಪ್ಟಿ ಸಾಹೇಬ್, ಈ ಜೀವನವೇ ಒಂದು ಪ್ರಯಾಸ, ನೋಡಿ. ನಾವೂ ಸಾಕಷ್ಟು ಹಣ ಸಂಪಾದಿಸಿದೀವಿ, ಅಷ್ಟಗ್ರಾಮ ಕೊಂಡುಕೊಂಡಿದೀವಿ, ಪಟ್ಟಣದಲ್ಲಿ ಐದು ಬಂಗಲೆ ಇದೆ ಅಂತೆಲ್ಲಾ ಅಂದುಕೊಂಡು ಸುಮ್ಮನಿದ್ದೆ. ಆದರೆ ಈ ಸೀತಾನಾಥ ಇದಾನಲ್ಲ, ಇವನಿಗೆ ಸುಮ್ಮನೆ ಕೂತುಕೊಳ್ಳೋಕ್ಕೆ ಆಗೋಲ್ಲ ನೋಡಿ. ಆಸ್ತಿಪಾಸ್ತೀನ ಗೌರೀ ನಾಥನ ವಿಚಾರಣೆಗೆ ಬಿಟ್ಟು, ವ್ಯಾಪಾರ-ವ್ಯವಹಾರಾನ ಸೀತಾನಾಥನಿಗೆ ಹಚ್ಚಿ ನಾನು ನಿಶ್ಚಿಂತನಾಗಿದ್ದೆ. ಆದರೆ ಈ ಸೀತಾನಾಥ ವ್ಯಾಪಾರ-ವ್ಯವಹಾರಾನ ಇಷ್ಟು ಬೆಳಸ್ತಾನೆ ಅಂತ ನಾನು ಅಂದುಕೊಂಡಿರಲಿಲ್ಲ. ಇನ್ನೂ ಒಂದು ತಿಂಗಳೂ ಆಗಿಲ್ಲ, ಅವನೊಂದು ಫ್ಲೋರ್‌ಮಿಲ್ ಕೊಂಡುಕೊಂಡಿದಾನೆ."

ಕಾಮತಾನಾಥರಿಗೆ ತಮ್ಮ ವೈಭವವನ್ನು ಮೆರೆಯುವ ಖಯಾಲಿಯಿದೆಯೆಂದು ಜ್ವಾಲಾಪ್ರಸಾದನಿಗೆ ಚೆನ್ನಾಗಿ ಗೊತ್ತಿತ್ತು. ಒಮ್ಮೊಮ್ಮೆ ಅವರ ಆ ಪ್ರವೃತ್ತಿಯನ್ನು ಕಂಡು ಅವನಿಗೆ ಕೋಪವೂ ಬರುತ್ತಿತ್ತು. ಅವನಂದ, "ಅಯ್ಯೋ ಬಿಡಿ ಆ ಚಿಂತೇನ! ಈ ಕಾಲವೇ ವ್ಯಾಪಾರದ್ದು. ನವಾಬಗಿರಿ, ಜಮೀನುದಾರಿಗಳಲ್ಲಿ ಏನೂ ಉಳಿದಿಲ್ಲ. ಜಮೀನುದಾರರು, ತಾಲ್ಲೂಕ್‌ದಾರರುಗಳೆಲ್ಲಾ ಹಾಳಾಗ್ತಿದಾರೆ."

ಕಾಮತಾನಾಥರು ಚಹಕುಡಿಯುತ್ತ ಹೇಳಿದರು, "ಡಿಪ್ಟಿ ಸಾಹೇಬ್, ನವಲನ ವಿಷಯ ಏನು ಯೋಚನೆ ಮಾಡಿದಿರಿ?"

ಜ್ವಾಲಾಪ್ರಸಾದ ಹೇಳಿದ, "ನಾನು ಯೋಚಿಸೋದನ್ನೇ ಬಿಟ್ಟುಬಿಟ್ಟಿದೀನಿ. ಯಾಕೆ ಅಂದರೆ, ಮನುಷ್ಯ ಯೋಚಿಸಿದ ಹಾಗೆ ನಡೆಯೋಲ್ಲ. ಅಲ್ಲದೆ ನವಲನೂ ದೊಡ್ಡವ ನಾಗಿದಾನೆ. ಅವನು ನನ್ನ ಮಾತನ್ನ ಕೇಳೋದು ಸಹ ಇಲ್ಲ. ನನ್ನ ಮಾತು ಕೇಳೋ

ದಿಲ್ಲ ಅನ್ನೋದಕ್ಕಿಂತ ನನ್ನನ್ನ ಏನೂ ಕೇಳೋಲ್ಲ, ತನಗೆ ಮನಸ್ಸು ಬಂದ ಹಾಗೆ ಮಾಡ್ತಾನೆ ಅನ್ನೋದು ಸರಿಯೇನೋ."

"ತುಂಬ ತಪ್ಪು ನೋಡಿ," ಕಾಮತಾನಾಥರು ಹೇಳಿದರು, "ಅವನು ಕಾಂಗ್ರೆಸ್ ಸ್ವಯಂಸೇವಕನಾಗಿದಾನೆ, ಖದ್ದರ್ ಬಟ್ಟೆ ಹಾಕ್ಕೊಂತಾನೆ ಅಂತ ಕೇಳಿದೀನಿ!"

"ಹೌದು, ಆಲ್ ಪಾರ್ಟೀಸ್ ಕಾನ್‌ಫರೆನ್ಸ್ ನಡೀತಲ್ಲವೆ, ಅದರಲ್ಲಿ ಸ್ವಯಂಸೇವಕ ನಾಗಿದ್ದ. ಅವನಿಗೆ ನಾನು ಬೇಡ ಅನ್ನಲಿಲ್ಲ. ಅವನು ಮಾಡಬಾರದ್ದು ಏನನ್ನೂ ಮಾಡಲಿಲ್ಲ. ಅಲ್ಲದೆ ಇದು ಹೊಸ ಕಾಲ, ಹೊಸ ಕಾಲದ ನಡವಳಿಕೆಗಳೂ ಹೊಸ ತರಹ ವಾಗಿರುತ್ತವೆ. ನಾನು ಬೇಡ ಅಂತ ತಡೆದು, ಅವನು ನನ್ನ ಮಾತು ಕೇಳದೇ ಹೋಗಿ ದ್ದಿದ್ದರೆ ನನಗೂ ತುಂಬ ಬೇಸರವಾಗಿರೋದು. ಆದರೆ ಸಂತೋಷದ ಸಂಗತಿ ಅಂದರೆ ಅವನಿಗೆ ಯಾವಾಗಲೂ ಒಳ್ಳೇದರ ಕಡೆಗೇ ಗಮನ. ಅವನು ಗುಣವಂತ, ಪ್ರಾಮಾಣಿಕ. ಜಗತ್ತಿನಲ್ಲಿ ಸದ್ಗುಣ, ಪ್ರಾಮಾಣಿಕತೆಗಳಿಗಿಂತ ದೊಡ್ಡ ಐಶ್ವರ್ಯವಿಲ್ಲ ಅಂತ ನನ್ನ ಅನುಭವಕ್ಕೆ ಬಂದಿದೆ."

"ಹೌದು, ನೀವು ಹೇಳೋದು ಸರಿ. ಆದರೆ ಅದು ನಡೆಯುತ್ತೆಲ್ಲಿ? ಪ್ರಪಂಚ ದಲ್ಲಿರಬೇಕಾದರೆ ಪ್ರಪಂಚ ಹೇಗಿದೆಯೋ ನಾವೂ ಹಾಗೇ ಆಗಬೇಕಾಗುತ್ತೆ. ಇಲ್ಲದೆ ಹೋದರೆ ಪ್ರಾಮಾಣಿಕತೆ, ನಿಯತ್ತುಗಳಿಗೆ ಅಂಟಿಕೊಂಡು ಹಣ ಸಂಪಾದಿಸೋದಕ್ಕೆ ಆಗೋದಿಲ್ಲ. ಪ್ರಾಯಶಃ ನಿಮಗೆ ತಿಳೀದು. ಸಿ.ಐ.ಡಿ. ಗಳ ರಿಕಾರ್ಡಿನಲ್ಲಿ ನವಲನ ಹೆಸರಿತ್ತು. ತುಂಬ ಪ್ರಯಾಸಪಟ್ಟು ಅಲ್ಲಿಂದ ಅವನ ಹೆಸರನ್ನ ತೆಗೆದುಹಾಕಿಸಿದೆ. ಇನ್ನೂರು ರೂಪಾಯಿ ಕೊಡಬೇಕಾಯಿತು!"

ಜ್ವಾಲಾಪ್ರಸಾದನಿಗೆ ಚಿಂತೆಗಿಟ್ಟುಕೊಂಡಿತು. "ಅಂದರೆ ಸಿ.ಐ.ಡಿ. ಗಳ ಕಣ್ಣು ನವಲನ ಮೇಲೆ ಬಿದ್ದಿದೆಯೆ? ಅವನು ಸರಕಾರದ ವಿರುದ್ಧ ಯಾವಾಗಲೂ ಏನೂ ಕೆಲಸ ಮಾಡಿಲ್ಲವಲ್ಲ?"

"ಅರೆ, ಅದನ್ನ ಮರೆತುಬಿಡಿ. ಅವನ ಹೆಸರನ್ನ ತೆಗೆದುಹಾಕಿಸಿದೆ ಅಂತ ಹೇಳಿದೆ ನಲ್ಲ. ಸ್ವಲ್ಪ ಯೋಚಿಸಿ ಕೆಲಸ ಮಾಡು ಅಂತ ಅವನಿಗೆ ತಿಳಿವಳಿಕೆ ಹೇಳೋಕ್ಕೆ ಬಂದೆ. ಬ್ರಿಟಿಷ್ ಸರಕಾರ ಬಹಳ ಕಠೋರವಾಗಿ ಕೆಲಸ ನಡಸಿದೆ. ಮಿಲಿಟರಿಗೆ ತಯಾರಾಗಿ ರೋಕ್ಕೆ ಅಪ್ಪಣೆಯಾಗಿದೆ. ಆ ಕರ್ನಲ್ ಡಿಗ್ಬಿ ಇದಾನಲ್ಲ—ದೇವರು ಒಳ್ಳೇದು ಮಾಡಲಿ ಅವನಿಗೆ, ಮೊನ್ನೆ ತಾನೇ ನನಗೆ ಎರಡು ಲಕ್ಷ ರೂಪಾಯಿನ ಕಾಂಟ್ರಾಕ್ಟ್ ಕೊಟ್ಟ!—ಅವನು ಹೇಳ್ತಿದ್ದ, ಇಂಗ್ಲಂಡಿನಿಂದ ಎರಡು ಲಕ್ಷ ಜನ ಮಿಲಿಟರಿಯವರು ಬರ್ತಾರಂತೆ, ಕಲಕತ್ತೆ, ಬೊಂಬಾಯಿ, ಕರಾಚಿಗಳಲ್ಲಿ ಬಂದೂಕು, ಮೆಷಿನ್‌ಗನ್ನುಗಳನ್ನ ರಾಶಿ ಹಾಕಿಟ್ಟಿ ದಾರಂತೆ!"

ಜ್ವಾಲಾಪ್ರಸಾದನಿಗೆ ಇದ್ದಿದ್ದೂ ಗಾಬರಿಯಾಯಿತು. "ರಾಯ್‌ಬಹದ್ದೂರ್ ಸಾಹೇಬ್, ಇದು ಬಲು ಕೆಟ್ಟ ಸುದ್ದಿ. ಆದರೆ ಇಂಗ್ಲಿಷಿನೋರು ಇಷ್ಟೆಲ್ಲಾ ಭಾರೀ

ಸಿದ್ಧತೆ ಮಾಡಿಕೊಂಡಿರೋದಾದರೆ ಅವರು ಈ ಡೊಮಿನಿಯನ್ ಸ್ಟೇಟಸ್‌ನ ಮಾತು ಯಾಕೆ ಆಡ್ತಿದಾರೆ?"

"ಅದೆಲ್ಲಾ ಬರೀ ಮೋಸ, ದಗಾ, ವಂಚನೆ! ವಸ್ತುಸ್ಥಿತಿ ಏನಪ್ಪ ಅಂದರೆ ಹಿಂದು ಸ್ಥಾನಕ್ಕೆ ಇನ್ನು ಕನಿಷ್ಠ ಐವತ್ತು ವರ್ಷ ಏನೂ ಸಿಗೋಲ್ಲ, ಏನೂ ಸಿಗಬಾರದು. ಐವತ್ತು ವರ್ಷದ ಮೇಲೆ ಏನಾಗುತ್ತೆ ಅಂತ ಯಾರಿಗೆ ಗೊತ್ತು!"

ಜ್ವಾಲಾಪ್ರಸಾದ ಈ ಮಾತಿಗೆ ಏನೂ ಉತ್ತರ ಕೊಡಲಿಲ್ಲ.

ಕಾಮತಾನಾಥರು ಮತ್ತೆ ಬಾಯಿ ತೆಗೆದರು, "ನವಲನ ಮದುವೆ ವಿಷಯ ಮಾತ ನಾಡೋಕ್ಕೆ ಅಂತ ಬಂದೆ. ಉಷಳಿಗೂ ಹದಿನೆಂಟು ಮುಗಿದು ಹತ್ತೊಂಬತ್ತು ನಡೀತಿದೆ. ಈ ಬೇಸಿಗೇಲಿ ಮದುವೆಯಾಗಿಬಿಡಬೇಕು ಅಂತ ಅಂದುಕೊಂಡಿದೀನಿ. ನಿಮಗೇನೂ ಅನಾನುಕೂಲವಾಗೋಲ್ಲ ತಾನೆ?"

"ನೀವು ನಿಮಗೆ ಅನಾನುಕೂಲವಿಲ್ಲವೋ ಹೇಗೆ ಅಂತ ನೋಡಿಕೊಳ್ಳಿ. ಹೆಣ್ಣಿ ನವರು ನೀವು. ನನ್ನದೇನು, ನೀವು ಹ್ಞೂ ಅಂದಾಗ ನಿಮ್ಮ ಮನೆ ಮುಂದೆ ದಿಬ್ಬಣ ತೊಗೊಂಡು ಬಂದು ನಿಂತುಕೋತೀನಿ."

"ಏನು ಹೇಳಲಿ, ಆಸೆಪಟ್ಟದ್ದು ಪೂರ್ತಿಯಾಗೋ ಹಾಗೆ ಕಾಣೋಲ್ಲ. ನವಲ್ ಐ.ಸಿ.ಎಸ್. ಮಾಡಲಿ ಅಂತ ಬಯಸಿದ್ದೆ. ಅವನು ಹಟ ಹಿಡಿದು ಕೂತಿದಾನೆ. ಗೌರೀ ನಾಥನಿಗಂತೂ ಈ ಹಟ ಏನೇನೂ ಸರಿಬೀಳೋಲ್ಲ. ವಿಲಾಯಿತಿಗೆ ಹೋಗಿ ಬರೋ ಖರ್ಚು, ಅಲ್ಲಿ ಇರೋ ಖರ್ಚು, ಓದೋ ಖರ್ಚು—ಎಲ್ಲಾನ್ನೂ ವಹಿಸಿಕೊಳ್ಳೋಕೆ ತಯಾರಾಗಿದೀನಿ. ಆದರೆ ನವಲ್ ಒಪ್ತಿಲ್ಲ."

"ಹೌದು, ಇದು ಭಗವಂತನ ಇಚ್ಛೆ." ಜ್ವಾಲಾಪ್ರಸಾದ ಹೇಳಿದ.

"ನಿಜ, ಡಿಪ್ಟಿ ಸಾಹೇಬ್. ಲಾಭ-ನಷ್ಟ, ಬದುಕು-ಸಾವು, ಯಶಸ್ಸು-ಅಪಯಶಸ್ಸು ಗಳೆಲ್ಲಾ ವಿಧಿಗೆ ಬಿಟ್ಟಿದ್ದು ಅಂತ ಯಾರೋ ಎಲ್ಲೋ ಹೇಳಿರೋದು ಸರಿಯಾಗೇ ಇದೆ!"

ಈ ಹೊತ್ತಿಗೆ ಜ್ವಾಲಾಪ್ರಸಾದನ ದೃಷ್ಟಿ ವರಾಂಡದ ಕಡೆಗೆ ಹರಿಯಿತು. ನವಲ್ ಕೈಯಲ್ಲಿ ಒಂದು ದೊಡ್ಡ ಪೊಟ್ಟಣ ಹಿಡಿದುಕೊಂಡು ಬರುತ್ತಿದ್ದ. "ನವಲ್, ಸ್ವಲ್ಪ ಇಲ್ಲಿ ಬಾ. ಬಟ್ಟೆ ಹೊಲಿಸಿಕೊಂಡು ಬಂದಿದೀಯಾ?" ಜ್ವಾಲಾಪ್ರಸಾದ ಕರೆದ.

ನವಲ್ ಕಾಮತಾನಾಥರು ಕುಳಿತಿದ್ದುದನ್ನು ನೋಡಲಿಲ್ಲ. ನೋಡಿದ್ದರೆ ಕೋಣೆ ಯೊಳಕ್ಕೆ ಆ ಪೊಟ್ಟಣವನ್ನು ತರುತ್ತಿರಲಿಲ್ಲವೇನೋ! ಜ್ವಾಲಾಪ್ರಸಾದ ನವಲನ ಕೈಯಿಂದ ಪೊಟ್ಟಣವನ್ನು ಇಸಕೊಂಡು, "ಎಲ್ಲಿ, ಏನು ಬಟ್ಟೆ ನೋಡೋಣ? ತುಂಬ ತುಂಬ ಹೊಲಿಸಿಕೊಂಡುಬಿಟ್ಟಿದೀಯಲ್ಲ," ಎಂದು ಅದನ್ನು ಬಿಚ್ಚಿದ.

ಬಟ್ಟೆಯನ್ನು ನೋಡಿ ಜ್ವಾಲಾಪ್ರಸಾದ ಬೆಚ್ಚಿದ. ಅವನಿಗಿಂತಲೂ ಹೆಚ್ಚು ಬೆಚ್ಚಿ ದವರೆಂದರೆ ಕಾಮತಾನಾಥರು. ಅವರು ಕೇಳಿದರು, "ಇಷ್ಟೊಂದು ಖದ್ದರ್ ಬಟ್ಟೆ ಹೊಲಿಸಿಕೊಂಡಿದಿ! ನೋಡಿದರೆ ಕಾಂಗ್ರೆಸ್ಸಿಗೆ ಸೇರಿರೋ ಹಾಗೆ ಕಾಣುತ್ತಲ್ಲ!"

ನವಲನಿಗೆ ಆ ಕೋಣೆಯಲ್ಲಿ ಕಾಮತಾನಾಥರಿದ್ದುದರ ಅರಿವಾದುದು ಆಗಲೇ. "ಇಲ್ಲ ಪಾಪಾ, ಕಾಂಗ್ರೆಸಿಗೆ ಸೇರಿಲ್ಲ; ಖದ್ದರ್ ತೋಡ್ಕೋಕೆ ಷುರು ಮಾಡ್ತಿದೀನಿ, ಅಷ್ಟೇ."

ಕಾಮತಾನಾಥರು ಮುಖ ಸಿಂಡರಿಸುತ್ತ ಹೇಳಿದರು, "ಇಷ್ಟು ದಪ್ಪ ಖದ್ದರ್! ಮೈಗೆ ಚುಚ್ಕೋಲ್ಲವೆ? ಖದ್ದರ್ ಹಾಕ್ಕೋಬೇಕು ಅಂತ ಅದೇನು ಹೊಳೀತು ನಿನಗೆ?"

"ಹಾಗೇ. ಮೋತೀಲಾಲ, ಜವಾಹರಲಾಲರೇ ಈ ಖದ್ದರ್ ಹಾಕ್ಕೊಳೋವಾಗ ನಾನು ಯಾಕೆ ಹಾಕ್ಕೋಬಾರದು ಅಂತ. ಬಂದೆ, ಈ ಬಟ್ಟೆ ಒಳಗಿಟ್ಟು ಬರ್ತೀನಿ." ನವಲ್ ಬಟ್ಟೆಯ ಪೊಟ್ಟಣ ತೆಗೆದುಕೊಂಡು ಒಳಹೋದ.

ಕಾಮತಾನಾಥರು ಕೊಂಚ ಹೊತ್ತು ಮರ್ಮಾಘಾತರಾದವರಂತೆ ಸುಮ್ಮನೆ ಕುಳಿತಿದ್ದರು. ಆಮೇಲೆ, "ಹುಡುಗ ಕೈಬಿಟ್ಟು ಹೋದ, ಡಿಪ್ಟಿಸಾಹೇಬ್!" ಅಂದರು.

ಜ್ವಾಲಾಪ್ರಸಾದ ನಿಟ್ಟುಸಿರು ಬಿಟ್ಟು, "ಹಾಗೇ ಕಾಣುತ್ತೆ. ದೇವರ ಇಚ್ಛೆ ಹೇಗಿದೆಯೋ ಹಾಗಾಗುತ್ತೆ! ಮನುಷ್ಯನ ಕೈಯಲ್ಲಿ ಏನಿದೆ?" ಅಂದ.

ಕಾಮತಾನಾಥರು ಸಿಟ್ಟಿನಿಂದ ಎದ್ದುನಿಂತರು, "ನಿಮ್ಮ ದೇವರನ್ನ ತೊಗೊಂಡು ಹೋಗಿ ಹೊಳೇಲಿ ಎಸೀರಿ. ನಾನು ಇವನನ್ನ ಸರಿಮಾಡ್ತೀನಿ. ಮದುವೆ ಏಪ್ರಿಲ್‌ನಲ್ಲಿ ಆಗಲೇಬೇಕು. ಅಲ್ಲೀವರೆಗೆ ಯಾವುದೂ ಲಗ್ನವಿಲ್ಲ. ಆಮೇಲೆ ಇವನನ್ನ ಉಷಳ ಜೊತೆ ವಿಲಾಯಿತಿಗೆ ಸಾಗಹಾಕ್ತೀನಿ. ಅವಳ ಹೆಸರಿನಲ್ಲಿ ಐವತ್ತು ಸಾವಿರ ರೂಪಾಯಿ ನಗದು ಜಮಾ ಮಾಡಿಯಾಗಿದೆ. ಒಂದು ಸಲ ಇವನು ಧನಪಿಶಾಚಿಯ ಕೈಯಲ್ಲಿ ಸಿಕ್ಕಿಬಿದ್ದ ಅಂದರೆ ಸಾಕು, ಆಗ ಇವನ ದೇಶಭಕ್ತಿಯೆಲ್ಲ ಮಣ್ಣು ಮುಕ್ಕುತ್ತೆ!"

ಜ್ವಾಲಾಪ್ರಸಾದನಿಗೆ ಕಾಮತಾನಾಥರ ಮಾತು ಸರಿಬೀಳಲಿಲ್ಲ. ಕಾಮತಾನಾಥರ ತಂದೆ ರಾಮಸಜೀವನ್ ಕಮಿಸೇರಿಯಟ್‌ನಲ್ಲಿ ಸ್ಟೋರ್‌ಕೀಪರ್ ಆಗಿದ್ದ. ಮೋಸ ವಂಚನೆಗಳಲ್ಲಿ ಅವನಿಗೆ ಸರಿಗಟ್ಟುವವರೇ ಇರಲಿಲ್ಲ. ಬರ್ಮಾ ಯುದ್ಧ, ಆಫ್ಘನ್ ಯುದ್ಧಗಳಲ್ಲಿ ಅವನು ಹೇಳತೀರದಷ್ಟು ಹಣ ಸಂಪಾದಿಸಿದ. ಮಗ ಕಾಮತಾನಾಥನನ್ನು ಮಿಲಿಟರಿ ಕಾಂಟ್ರಾಕ್ಟಿಗೆ ತೊಡಗಿಸಿದ. ೧೯೧೪–೧೮ ರ ಯುದ್ಧದಲ್ಲಿ ಕಾಮತಾನಾಥ ಸುಮಾರು ಐದು ಲಕ್ಷ ರೂಪಾಯಿ ಗಳಿಸಿದ. 'ರಾಯ್‌ಬಹದ್ದೂರ್' ಬಿರುದನ್ನೂ ಗಿಟ್ಟಿಸಿದ. ಮುನಿಷಿ ರಾಮಸಜೀವನ್ ಯಾವತ್ತೂ ಜ್ವಾಲಾಪ್ರಸಾದನ ಮುಂದೆ ಕೈ ಜೋಡಿಸಿಕೊಂಡೇ ಬರುತ್ತಿದ್ದವನು. ಈಗ ಕಾಮತಾನಾಥ ಜ್ವಾಲಾಪ್ರಸಾದನ ಮೊಮ್ಮಗನನ್ನು ಹಣ ಕೊಟ್ಟು ಕೊಳ್ಳಲು ಹೊರಟಿದ್ದ. ಕಾಮತಾನಾಥನ ಮಾತು ಕೇಳಿ ಜ್ವಾಲಾಪ್ರಸಾದನಿಗೆ ಮರ್ಮಾಘಾತವಾದಷ್ಟು ನೋವಾಯಿತು. ಆದರೆ ಅವನು ಏನೂ ಉತ್ತರ ಕೊಡಲಿಲ್ಲ.

ಕಾಮತಾನಾಥರು ಎದ್ದುನಿಂತರು. "ನಾನಿನ್ನು ಬರ್ತೀನಿ. ಗೌರೀನಾಥನ ಜೊತೆ ಮಾತನಾಡಿ ಮದುವೆಯ ತಾರೀಕು ಗೊತ್ತುಮಾಡ್ತೀನಿ. ನೀವು ಸಿದ್ಧವಾಗಿರಿ."

ಕಾಮತಾನಾಥರೊಂದಿಗೆ ಆದ ಮಾತುಕತೆಯನ್ನು ಜ್ವಾಲಾಪ್ರಸಾದ ನವಲನ ಜೊತೆ ಚರ್ಚೆ ಮಾಡಲಿಲ್ಲ. ಕೇವಲ ಇಷ್ಟು ಮಾತ್ರ ಹೇಳಿದ. "ನವಲ್, ರಾಯ್‌ಬಹದ್ದೂರರು

ಹೇಳ್ತಿದ್ದರು. ಏಪ್ರಿಲ್‌ನಲ್ಲಿ ಉಷಳ ಮದುವೆ ಮಾಡಬೇಕು ಅಂತ ಇದಾರಂತೆ. ಲಗ್ನ ಗೊತ್ತುಮಾಡಿ ತಿಳಿಸ್ತಾರಂತೆ."

"ಇಷ್ಟು ಯಾಕೆ ಅವಸರ, ತಾತ! ನಾನು ಎಲ್‌ಎಲ್.ಬಿ. ಮಾಡಿ ಮುಗಿಸ್ತೀನಿ."

ನವಲ್ ತಲೆಯಿಂದ ಕಾಲ ತನಕ ಖದ್ದರ್ ತೊಟ್ಟು ಹೊರಗೆ ಹೊರಟಿದ್ದ. ಜ್ವಾಲಾ ಪ್ರಸಾದ ಅವನನ್ನು ಸ್ವಲ್ಪ ಹೊತ್ತು ಹಾಗೆಯೇ ನೋಡುತ್ತಿದ್ದ. ಅವನ ಮುಖದ ಮೇಲೆ ಒಂದು ನಗೆ ಮೂಡಿತು. "ಈ ಬಟ್ಟೇಲಿ ನೀನು ಚೆನ್ನಾಗಿ ಕಾಣಿಸ್ತಿ. ದೇವರು ನಿನ್ನನ್ನ ಕಾಪಾಡಲಿ."

ಮರುದಿನ ಬೆಳಗ್ಗೆ ಜ್ಞಾನಪ್ರಕಾಶ ನವಲನಿಗೆ ಹೇಳಿದ, "ನವಲ್, ದೇಶದ ಯುವಕರು ಲಾಹೋರ್ ಕಾಂಗ್ರೆಸಿಗೆ ಹೋಗಿ, ಜವಾಹರಲಾಲರ ಬಲ ಹೆಚ್ಚಿಸಬೇಕು. ಅಲಹಾ ಬಾದ್ ಯೂನಿವರ್ಸಿಟಿಯಿಂದ ಹತ್ತು ಹುಡುಗರು ಬರೋಹಾಗೆ ನೀನು ಒಪ್ಪಿಸ್ತೀಯಾ?"

"ಒಂದಂತೂ ನನ್ನ ಹೆಸರು ಬರಕೊಳ್ಳಿ. ಇನ್ನೊಂದು ವಾರದೊಳಗೆ ಉಳಿದ ಒಂಬತ್ತು ಹೆಸರು ಕೊಡ್ತೀನಿ," ನವಲ್ ಉತ್ಸಾಹದಿಂದ ಹೇಳಿದ.

"ಕೆಲಸ ನೀನು ತಿಳಕೊಂಡಷ್ಟು ಸುಲಭವಲ್ಲ, ನವಲ್. ಲಾಹೋರಿಗೆ ಹೋಗೋಕ್ಕೆ ಪ್ರತಿಯೊಬ್ಬರಿಗೂ ನಲವತ್ತು ಐವತ್ತು ರೂಪಾಯಿ ಖರ್ಚಾಗುತ್ತೆ. ಯಾರ ಹತ್ತಿರ ಖರ್ಚಿಗೆ ದುಡ್ಡಿದೆಯೋ ಅವರು ಬರೋಲ್ಲ; ಯಾರು ಬರೋಕ್ಕೆ ಸಿದ್ಧವಾಗಿರ್ತಾರೋ ಅವರ ಹತ್ತಿರ ದುಡ್ಡಿರೋಲ್ಲ. ನನ್ನ ಹತ್ತಿರ ಒಂದು ಖಾಸಗೀ ಫಂಡಿದೆ. ಅದರಿಂದ ಅರ್ಧ ಖರ್ಚು ವಹಿಸಿಕೊಳ್ಳೋಕೆ ಆಗುತ್ತೆ."

"ಹಾಗಾದರೆ ಕೆಲಸ ಸುಲಭವಾಯಿತು."

"ಇಲ್ಲ ನವಲ್. ಆದರೂ ನಿನಗೆ ಕಷ್ಟವಾಗುತ್ತೆ. ಇವತ್ತಿನಿಂದಲೇ ನಿನ್ನ ಸ್ನೇಹಿತರ ಹತ್ತಿರ ಮಾತನಾಡೋಕ್ಕೆ ಷುರುಮಾಡು! ಲಾಹೋರಿನ ಕಾಂಗ್ರೆಸ್ ಅಧಿವೇಶನ ಬಹಳ ಮಹತ್ವಪೂರ್ಣವಾದದ್ದಾಗಿರುತ್ತೆ. ಡಿಸೆಂಬರ್ ಇಪ್ಪತ್ತಮೂರಕ್ಕೆ ದಿಲ್ಲಿಯಲ್ಲಿ ಲಾರ್ಡ್ ಇರ್ವಿನ್ ಮಹಾತ್ಮಗಾಂಧಿ-ಮೋತೀಲಾಲ ನೆಹರೂರ ಜೊತೆ ಮಾತುಕತೆ ನಡಸ್ತಾರೆ. ಆ ಮಾತುಕತೆಯಿಂದ ಏನು ಫಲವಾಗುತ್ತೆ ಅಂತ ನೋಡೋಣ. ಏನೇ ಆಗಲಿ, ಲಾಹೋರ್ ಕಾಂಗ್ರೆಸ್ ಮಹತ್ವಪೂರ್ಣವಾದದ್ದಾಗುತ್ತೆ."

ನವಲ್ ಜ್ಞಾನಪ್ರಕಾಶ ವಹಿಸಿದ್ದ ಕೆಲಸಕ್ಕೆ ಹೊರಟ. ಅದು ವಾಸ್ತವವಾಗಿ ಕಷ್ಟದ ಕೆಲಸ. ಅವತ್ತು ಬಹಳ ಪ್ರಯಾಸಪಟ್ಟು ಇಬ್ಬರು ವಿದ್ಯಾರ್ಥಿಗಳನ್ನು ಲಾಹೋರಿಗೆ ಬರಲು ಒಪ್ಪಿಸಿದ್ದಾಯಿತು. ಈ ಓಡಾಟದಲ್ಲಿ ಅವನು ಬಹಳ ದಣಿದಿದ್ದ. ಮನೆಗೆ ಹಿಂದಿರುಗಿದಾಗ ಒಂಬತ್ತು ಗಂಟೆಯಾಗಿತ್ತು.

ಮನೆಗೆ ಬಂದಾಗ ಅಲ್ಲಿಯ ವಾತಾವರಣ ವಿಚಿತ್ರವಾಗಿತ್ತು. ಡ್ರಾಯಿಂಗ್ ರೂಮಿ ನಲ್ಲಿ ಇಡೀ ಕುಟುಂಬವೇ ನೆರೆದಿತ್ತು. ಜ್ವಾಲಾಪ್ರಸಾದನ ಕೈಯಲ್ಲಿ ಒಂದು ತಂತಿಯಿತ್ತು. ಯಮುನಾ ಅಳುತ್ತಿದ್ದಳು. "ಎಂಥ ಕಟುಕರ ಮನೆಗೆ ವಿದ್ಯಳನ್ನ ಕೊಟ್ಟಿರಿ ನೀವು!

ಮನೇನ ಹಾಳುಮಾಡಿಕೊಂಡದ್ದಾಯಿತು. ಈಗ ಇದೆಲ್ಲಾ ! ನವಲನನ್ನ ಕಳಿಸೋದರ ಬದಲು ನೀವು ಹೋಗಿ ಬನ್ನಿ. ಹೋಗಿ ಏನು ವಿಷಯ ಅಂತ ನೋಡಿ. "

ನವಲ್ ಬಂದೊಡನೆಯೇ ಜ್ವಾಲಾಪ್ರಸಾದ ತಂತಿಯನ್ನು ಅವನ ಕೈಯಲ್ಲಿಟ್ಟ. ಆ ತಂತಿ ಸಿದ್ಧೇಶ್ವರೀಪ್ರಸಾದನದು; ಉನ್ನಾವಿನಿಂದ ಬಂದಿತ್ತು; ನವಲನ ಹೆಸರಿನಲ್ಲಿತ್ತು. ಅದರಲ್ಲಿ " ತಕ್ಷಣ ಬಂದು ನಿಮ್ಮ ತಂಗಿಯನ್ನು ಕರೆದುಕೊಂಡು ಹೋಗಿ " ಎಂದಿತ್ತು.

ನವಲ್ ಆ ತಂತಿಯನ್ನು ಎರಡು ಮೂರು ಸಲ ಓದಿ " ಒಂದೂ ಅರ್ಥವಾಗೋಲ್ಲ ! " ಅಂದ.

" ಇದರಲ್ಲಿ ಅರ್ಥವಾಗೋದು ಏನಿದೆ ! ಅವರು ವಿದ್ಯಳನ್ನ ಮನೆಯಿಂದ ಹೊರಗೆ ಹಾಕ್ತಿದಾರೆ. ನಿನ್ನೆ ಅವಳ ಕಾಗದ ಬಂದಿತ್ತು—ಇಡೀ ಕುಟುಂಬವೇ ಉನ್ನಾವಿನಲ್ಲಿ ಸೇರಿದೆ. ಎಲ್ಲರೂ ಯಮದೂತರಂತೆ ನನ್ನ ಮಗಳನ್ನ ಅರೀತಿದಾರೆ," ರುಕ್ಮಿಣಿ ಹೇಳಿದಳು.

" ನಾಳೆ ಬೆಳಗಿನ ಗಾಡಿಗೆ ಹೋಗು ! ನೋಡು, ವಿದ್ಯಳಿಗೆ ಸ್ವಲ್ಪ ಬುದ್ಧಿ ಹೇಳು. ಹುಡುಗೀದು ಕೊಂಚ ಬಿರುಸಿನ ಸ್ವಭಾವ. ಅತ್ತೇಮನೇಲಿ ತಗ್ಗಿ ಬಗ್ಗಿ ನಡೀಬೇಕಾಗುತ್ತೆ," ಜ್ವಾಲಾಪ್ರಸಾದ ಹೇಳಿದ.

" ಮಗೂ ನವಲ್, ವಿದ್ಯಳನ್ನ ನಿನ್ನ ಜೊತೆ ಕರಕೊಂಡು ಬಂದುಬಿಡು. ಆ ಮನೆಯವರೆಲ್ಲರೂ ಚಾಂಡಾಲರು, ಅವಳ ಜೀವ ತೆಗೆಯೋಕ್ಕೆ ಹೊರಟಿದಾರೆ. ಅಯ್ಯೋ ದೇವರೇ ? " ರುಕ್ಮಿಣಿ ಬಿಕ್ಕಿಬಿಕ್ಕಿ ಅಳತೊಡಗಿದಳು.

ಈ ಹೊತ್ತಿಗೆ ಜ್ಞಾನಪ್ರಕಾಶ ಬಂದ. ರುಕ್ಮಿಣಿ ಮುಖಕ್ಕೆ ಸೆರೆಗೆಳೆದುಕೊಂಡು ಒಂದು ಮೂಲೆಗೆ ಸರಿದಳು. ಜ್ಞಾನಪ್ರಕಾಶ ಕೇಳಿದ, " ಏನಣ್ಣಾ ಸಮಾಚಾರ ? ಯಾಕೆ ಹೀಗೆ ಎಲ್ಲರೂ ಗೋಳಾಡ್ತಿದೀರಿ ? "

ನವಲ್ ಜ್ಞಾನಪ್ರಕಾಶನಿಗೆ ತಂತಿ ತೋರಿಸಿದ. ತಂತಿ ನೋಡಿ ಜ್ಞಾನಪ್ರಕಾಶ ಹೇಳಿದ, " ಹ್ಞೂ, ವಿಷಯ ಇಲ್ಲೀತನಕ ಹೋಯಿತೆ ? ನವಲನನ್ನು ಕಳಿಸೋದು ಸರಿಹೋಗೋಲ್ಲ, ಅಣ್ಣ. ನೀನೇ ಹೋಗಿಬರಬೇಕಾಗುತ್ತೆ."

ಜ್ವಾಲಾಪ್ರಸಾದ ದುರ್ಬಲವಾದ ಧ್ವನಿಯಲ್ಲಿ ಹೇಳಿದ, " ನನ್ನನ್ನ ಹೋಗು ಅನ್ನ ಬೇಡ, ಜ್ಞಾನೂ. ನವಲ್ ಹೋಗೋದೇ ವಾಸಿ. ನಾಳೆ ಬೆಳಗಿನ ಗಾಡೀಲಿ ಅವನನ್ನ ಕಳಿಸ್ತಿದೀನಿ."

" ನಾಳೆ ಬೆಳಗಿನ ಗಾಡಿಗಲ್ಲ, ನವಲ್ ಇವತ್ತು ರಾತ್ರಿಯ ಗಾಡೀಗೆ ಹೋಗ್ತಾನೆ. ಇನ್ನೂ ಈಗ ಒಂಬತ್ತುಗಂಟೆ. ರಾತ್ರಿ ಹನ್ನೊಂದಕ್ಕೆ ಕಾನಪುರಕ್ಕೆ ಒಂದು ಪ್ಯಾಸೆಂಜರ್ ಹೋಗುತ್ತೆ. ಈ ವಿಷಯದಲ್ಲಿ ತಡಮಾಡಬಾರದು. ಏಳು, ನವಲ್, ತಯಾರಾಗು," ಹೀಗಂದು ಜ್ಞಾನಪ್ರಕಾಶ ಕೋಣೆ ಬಿಟ್ಟು ಹೊರಬಂದ.

ನವಲ್ ಹೊರಡಲು ಸಿದ್ಧನಾಗಿ ಬಂದಾಗ ಜ್ಞಾನಪ್ರಕಾಶನೂ ಹಾಸಿಗೆ ಕಟ್ಟಿಕೊಂಡು ತಯಾರಾಗಿ ನಿಂತಿದ್ದುದು ಕಂಡಿತು. " ನವಲ್, ಇದನ್ನ ನೀನು ಒಬ್ಬಂಟಿಯಾಗಿ ಸಂಬಾಳಿ

ಸೋಕ್ಕೆ ಆಗೋಲ್ಲ. ನಾನೂ ನಿನ್ನ ಜೊತೆ ಬರ್‍ತೀನಿ. ನೀನಿನ್ನೂ ಹುಡುಗ, ನಿನ್ನ ಕೈಯಲ್ಲಿ ಅವರನ್ನ ಎದುರಿಸಿ ಗೆಲ್ಲೋಕೆ ಆಗೋಲ್ಲ!"

ನವಲ್ ಜ್ಞಾನಪ್ರಕಾಶರು ಉನ್ನಾವ್ ನಿಲ್ದಾಣದಲ್ಲಿ ಇಳಿದಾಗ ಬೆಳಕು ಹರಿಯುತ್ತಿತ್ತು. ಸಾಮಾನನ್ನು ವೇಟಿಂಗ್ ರೂಮಿನಲ್ಲಿಟ್ಟು ಇಬ್ಬರೂ ಒಂದು ಕುದುರೆಗಾಡಿ ಮಾಡಿ ಕೊಂಡು ಹೊರಟರು. ಸಿದ್ಧೇಶ್ವರೀಪ್ರಸಾದನ ಬಂಗಲೆಯ ಮುಂದೆ ಇಳಿದು ಮನೆಯ ಕಾವಲಾಳಿಗೆ ಹೇಳಿದರು, "ಸಿದ್ಧೇಶ್ವರೀ ಬಾಬುಗಳಿಗೆ ತಿಳಿಸು, ಅಲಹಾಬಾದಿನವರು ಬಂದಿದಾರೆ ಅಂತ."

"ಚಿಕ್ಕ ಯಜಮಾನರು ಮಲಗಿದಾರೆ, ದೊಡ್ಡ ಯಜಮಾನರಿಗೆ ತಿಳಸ್ತೀನಿ," ಎಂದು ಕಾವಲಾಳು ಮನೆಯೊಳಗೆ ಹೋದ.

ನವಲ್, ಜ್ಞಾನಪ್ರಕಾಶರು ವರಾಂಡದಲ್ಲಿ ಕುಳಿತುಕೊಂಡರು. ಎರಡು ನಿಮಿಷ ಬಿಟ್ಟು ವಿಂದೇಶ್ವರೀಪ್ರಸಾದರು ಒಳಗಿನಿಂದ ಬಂದರು. "ನೀವು ಬಂದಿರಲ್ಲ! ತುಂಬ ಬೇಗ ಬಂದಿರಿ, ದೇವರಿಗೆ ಕೃತಜ್ಞತೆ ಅರ್ಪಿಸಬೇಕು."

ವಿಂದೇಶ್ವರೀಪ್ರಸಾದರು ಆಳಿಗೆ ಡ್ರಾಯಿಂಗ್ ರೂಮಿನ ಬಾಗಿಲು ತೆಗೆಯ ಹೇಳಿ "ನಿಮ್ಮ ಸಾಮಾನು?" ಅಂದರು.

"ಸ್ಟೇಷನ್ನಿನಲ್ಲೇ ಬಿಟ್ಟು ಬಂದೆವು," ನವಲ್ ಉತ್ತರ ಕೊಟ್ಟ.

"ಒಳ್ಳೇದು ಮಾಡಿದಿರಿ. ಇಲ್ಲದೆ ಹೋದರೆ ಸುಮ್ಮನೆ ಸಾಮಾನು ತಂದು, ತೊಗೊಂಡು ಹೋಗೋದೇ ಆಗ್ತಿತ್ತು. ನಿಮ್ಮ ಈ ರಾಕ್ಷಸೀ ತಂಗೀನ ಕರಕೊಂಡು ಹೋಗಿ. ನಮ್ಮ ಪ್ರಾಣ ಉಳಿಸಿ!"

"ಏನಾಯ್ತು? ಏನು ಸಮಾಚಾರ?" ಜ್ಞಾನಪ್ರಕಾಶ ಕೇಳಿದ.

"ಏನು ವಿಷಯ ಅಂತ ಅವಳನ್ನೇ ಕೇಳಿ. ನಿನ್ನೆಯಿಂದ ತನ್ನ ಕೋಣೆಯೊಳಗೆ ಅಗಳಿ ಹಾಕ್ಕೊಂಡು ಕೂತಿದಾಳೆ. ನಮ್ಮನ್ನು ಕೊಂದು ತಾನೂ ಸಾಯೋಕ್ಕೆ ಹೊರಟಿದಾಳೆ," ಹೀಗಂದು ವಿಂದೇಶ್ವರೀಪ್ರಸಾದರು ಕೂಗುಹಾಕಿದರು, "ಸಿದ್ಧೇಶ್ವರಿ, ಇವರು ಅಲಹಾಬಾದಿನಿಂದ ಬಂದಿದಾರೆ."

ಈ ಹೊತ್ತಿಗೆ ವಿದ್ಯಾ ಓಡೋಡುತ್ತ ಕೋಣೆಯೊಳಗೆ ನುಗ್ಗಿ ಬಂದಳು. "ಅಣ್ಣಾ, ಈ ಪಿಶಾಚಿಗಳ ಕೈಯಿಂದ ನನ್ನನ್ನ ಬಿಡಿಸು. ನೀವೂ ಬಂದಿದೀರಾ, ಬಾಬಾ. ನನ್ನ ಪ್ರಾಣ ಉಳೀತು."

ವಿದ್ಯಳ ಮೈಮೇಲೆ ಅಲ್ಲಲ್ಲಿ ಬಾಸುಂಡೆ ಬಂದಿದ್ದುದು ಜ್ಞಾನಪ್ರಕಾಶನಿಗೆ ಕಂಡಿತು. ವಿಂದೇಶ್ವರೀಪ್ರಸಾದರು ಹಲ್ಲು ಕಡಿಯುತ್ತ ಹೇಳಿದರು, "ಈ ಸೂಳೇಮುಂಡೇನ ಒಳಕ್ಕೆ ಕರಕೊಂಡು ಹೋಗಿ ಅವಳ ಸಾಮಾನು ಕಟ್ಟಿಸೋ. ಅಷ್ಟು ಹೊತ್ತಿಗೆ ನಾನು ಜ್ಞಾನ ಪ್ರಕಾಶರ ಜೊತೆ ಮಾತಾಡ್ತೀನಿ."

ನವಲ್ ವಿದ್ಯಳ ಕೈ ಹಿಡಿದುಕೊಂಡು ಅವಳ ಕೋಣೆಗೆ ಕರೆದೊಯ್ದ. ಅಷ್ಟರಲ್ಲಿ ಸಿದ್ಧೇಶ್ವರೀಪ್ರಸಾದ ಬಂದ. "ಏನಾಯಿತಂ, ಸಿದ್ಧೇಶ್ವರೀಪ್ರಸಾದ್? ನನಗೂ ಸ್ವಲ್ಪ ಹೇಳಿ, ಕೇಳೋಣ" ಜ್ಞಾನಪ್ರಕಾಶ ಕೇಳಿದ.

ಸಿದ್ಧೇಶ್ವರೀ ಸಾಕಷ್ಟು ಉತ್ತೇಜಿತನಾಗಿದ್ದ. "ನಮ್ಮ ತಾಯಿಗೂ ತಂಗಿಗೂ ಬೈತಿದ್ದಳು. ನಾನು ಸುಮ್ಮನೇನೇ ಇದ್ದೆ. ಅಪ್ಪ ಇವಳನ್ನ ಗದರಿಸಿಕೊಂಡರೆ ಅವರಿಗೂ ಬೈಯೋಕ್ಕೆ ಷುರುಮಾಡಿದಳು. ಆಗ ನನಗೆ ರೇಗಿತು, ಹೊಡೆಯಬೇಕಾಯ್ತು."

"ಇವನು ಕಪಾಳಕ್ಕೆ ಬರೀ ಒಂದೇಟು ಕೊಟ್ಟ ಅಷ್ಟೇ," ವಿಂದೇಶ್ವರೀಪ್ರಸಾದರು ಹೇಳಿದರು.

"ಹೌದು, ಕಪಾಳಕ್ಕೆ ಒಂದೇಟು ಕೊಟ್ಟದ್ದಕ್ಕೆ ಮೈಯೆಲ್ಲಾ ಊದಿಕೊಂಡಿದೆ! ಸರಿ, ಮುಂದೆ ಹೇಳಿ," ಜ್ಞಾನಪ್ರಕಾಶ ಅಂದ.

"ಆಗ ಕೈಕಾಲು ಬಡೀತಾ ಕಿರಚಿ ರಾದ್ಧಾಂತ ಎಬ್ಬಿಸಿದಳು. ಆಗ ಸಿದ್ಧೇಶ್ವರೀ ಇನ್ನೊಂದು ಕೊಟ್ಟ. ಓ ಪ್ರಳಯವೇ ಆಗಿಹೋಯಿತು, ನೋಡಿ! ಅರಚಿಕೊಂಡು ಕಿರಚಿಕೊಂಡು ಸಿದ್ಧೇಶ್ವರಿಯ ಕಪಾಳಕ್ಕೇ ಹೊಡೆಯೋದೆ! ಹೆಂಡತಿ ಗಂಡನ ಮೇಲೆ ಕೈಮಾಡೋದನ್ನ ಜೀವಮಾನದಲ್ಲಿ ನಾನು ನೋಡಿದ್ದು ಇದೇ ಮೊದಲು. ಅಂಥ ಹೆಂಗಸನ್ನ ಗುಂಡಿಟ್ಟು ಕೊಲ್ಲಬೇಕು!"

"ಏನು ಹೇಳಲಿ, ಓಡಿಹೋಗಿ ತನ್ನ ಕೋಣೇಲಿ ಸೇರಿಕೊಂಡು ಒಳಗಿನಿಂದ ಅಗಳಿ ಹಾಕಿಕೊಂಡಳು. ಇಲ್ಲದೇ ಹೋಗಿದ್ದರೆ ಈ ಸೂಳೇಮುಂಡೆಯ ಪ್ರಾಣ ತೆಗೀತಿದ್ದೆ, ಇವಳನ್ನ ನಿಮ್ಮ ಜೊತೆ ಕರಕೊಂಡು ಹೋಗಿ. ಇಲ್ಲದೆ ಹೋದರೆ ತುಂಬ ಅನರ್ಥ ವಾಗುತ್ತೆ" ಸಿದ್ಧೇಶ್ವರೀ ಹೇಳಿದ.

ಜ್ಞಾನಪ್ರಕಾಶ ಶಾಂತನಾಗಿ ಉತ್ತರಿಸಿದ, "ಹೌದು, ಅದಕ್ಕೋಸ್ಕರವೇ ನಾವು ಬಂದಿರೋದು. ಅವಳ ಪ್ರಾಣ ಒಂದೇ ಹೋಗ್ತಿರಲಿಲ್ಲ, ಜೊತೆಗೆ ನೀವುಗಳೂ ಗಲ್ಲಿಯ ಮರ ಹತ್ತಬೇಕಾಗ್ತಿತ್ತು. ಅವಳು ಗಂಗಾಪ್ರಸಾದನ ಮಗಳು."

"ಗಂಗಾಪ್ರಸಾದ ನರಕಕ್ಕೆ ಹೋದ; ಈ ಸೂಳೇಮುಂಡೇನೂ ಅಲ್ಲೀಗೆ ಕಳಿಸ್ತಿದ್ದೆವು," ವಿಂದೇಶ್ವರೀಪ್ರಸಾದ ಹೇಳಿದರು.

ಜ್ಞಾನಪ್ರಕಾಶ ರೋಷದಿಂದ ಎದ್ದುನಿಂತ, "ವಿಂದೇಶ್ವರೀಪ್ರಸಾದ, ಸ್ವಲ್ಪ ನಾಲಿಗೆ ಬಿಗಿಹಿಡಿದು ಮಾತಾಡು. ಗಂಗಾಪ್ರಸಾದ ಬದುಕಿಲ್ಲ ಅಂದಮಾತ್ರಕ್ಕೆ ಈ ಹುಡುಗಿ ಅನಾಥಳಾದಳು ಅಂತ ಅರ್ಥವಲ್ಲ."

ಸಿದ್ಧೇಶ್ವರೀ ತಂದೆಯನ್ನು ತಡೆದ, "ಲಾಲಾಜೀ, ಇವರ ಜೊತೆ ಮಾತನಾಡಿ ಉಪ ಯೋಗವಿಲ್ಲ."

ನವಲ್ ವಿದ್ಯಳ ಎರಡು ಟ್ರಂಕುಗಳ ಸಮೇತ ಡ್ರಾಯಿಂಗ್ ರೂಮಿಗೆ ಬಂದ. "ವಿದ್ಯಾ ಇಷ್ಟೇ ಸಾಮಾನು ತೊಗೊಂಡು ಹೋಗ್ತಾಳೆ. ನಾವಿನ್ನು ಹೊರಡ್ತೀವಿ," ನವಲ್ ಹೇಳಿದ.

ಜ್ಞಾನಪ್ರಕಾಶ ಸಿದ್ಧೇಶ್ವರೀಪ್ರಸಾದನ ಕಡೆ ತಿರುಗಿ, "ನಿಮ್ಮದೇ ಗಾಡಿ ಇದೆಯೋ, ತರಿಸ್ತೀರೋ ?" ಎಂದು ಕೇಳಿದ.

ವಿಂದೇಶ್ವರೀಪ್ರಸಾದ ಈಗ ಶಾಂತವಾದರು, "ಭವಾನೀ, ಡ್ರೈವರಿಗೆ ಮೋಟರ್ ತೊಗೊಂಬಾ ಅಂತ ಹೇಳು" ಎಂದು ಆಳಿಗೆ ಕೂಗು ಹಾಕಿದರು. ಆಮೇಲೆ ವಿದ್ಯಳ ಕಡೆ ನೋಡಿ, "ಇನ್ನು ಈ ಮನೇಲಿ ಕಾಲಿಡೋಕಾಗೋಲ್ಲ, ಇಷ್ಟು ತಿಳಕೋ. ನಿನ್ನ ಒಡವೆಗಳನ್ನ ತೆಗೆದು ಇಲ್ಲಿಡು," ಅಂದರು.

ವಿದ್ಯಾ ಗೋಳಿಡುತ್ತ, "ನಿಮ್ಮ ಇದು ಮನೆಯಲ್ಲ, ನರಕ, ಮತ್ತೆ ನಾನು ಇಲ್ಲಿ ಕಾಲಿಟ್ಟರೆ ನಮ್ಮಪ್ಪನಿಗೆ ಹುಟ್ಟಿದ ಮಗಳಲ್ಲ. ತೊಗೊಂಡುಹೋಗಿ ನಿಮ್ಮ ಒಡವೆ," ಎಂದು ಟ್ರಂಕಿನ ಬೀಗದ ಕೈಯನ್ನು ಸಿದ್ಧೇಶ್ವರಿಯ ಮುಂದೆಸೆದಳು. ಸಿದ್ಧೇಶ್ವರೀ ಕೈ ಹಾಕುವ ಮೊದಲೇ ಜ್ಞಾನಪ್ರಕಾಶ ಅದನ್ನು ಎತ್ತಿಕೊಂಡು ಹೇಳಿದ, "ಒಡವೆ ಈ ಹುಡುಗೀದು. ಅದರ ಮೇಲೆ ನಿಮ್ಮಗಳಿಗೆ ಯಾವ ಅಧಿಕಾರವೂ ಇಲ್ಲ."

ವಿಂದೇಶ್ವರೀಪ್ರಸಾದ ಗರ್ಜಿಸಿದರು, "ನಮ್ಮ ಮಧ್ಯೆ ಬಾಯಿ ಹಾಕಿಕೊಂಡು ಬರೋಕ್ಕೆ ನೀನು ಯಾರು ? ಬೀಗದ ಕೈ ಕೊಡಿಲ್ಲಿ !"

ಜ್ಞಾನಪ್ರಕಾಶ ಹೇಳಿದ, "ನಾನು ಈ ಹುಡುಗಿಯ ತಂದೆ, ಅವಳ ಪೋಷಕ." ಹೀಗನ್ನುತ್ತ ಜ್ಞಾನಪ್ರಕಾಶ ಬೀಗದ ಕೈಯನ್ನು ಜೇಬಿನಲ್ಲಿಟ್ಟುಕೊಂಡ.

ವಿಂದೇಶ್ವರೀ ಮಗನಕಡೆ ತಿರುಗಿ, "ಏನು ನೋಡ್ತಿ ? ಒಡವೆ ಇರೋ ಟ್ರಂಕನ್ನ ತೆಗೆದು ಒಳಗಿಡೋ" ಅಂದರು.

ಜ್ಞಾನಪ್ರಕಾಶ ರೋಷದಿಂದ, "ಟ್ರಂಕನ್ನ ಮುಟ್ಟಿದರೆ ನೋಡಿ, ಹುಷಾರ್. ಹದಿನೈದು ಸಾವಿರ ರೂಪಾಯಿ ವರದಕ್ಷಿಣೆ ತೊಗೊಂಡಿದಿ ನೀನು, ವಿಂದೇಶ್ವರೀಪ್ರಸಾದ್. ಈಗ ಹುಡುಗೀನ ಮನೆಯಿಂದ ಆಚೆಗೆ ಹಾಕ್ತಿದಿ. ಟ್ರಂಕಿಗೆ ಯಾರಾದರೂ ಕೈಹಾಕಿದರೆ ಸರಿಯಾಗಿರೋಲ್ಲ, ನೋಡಿ" ಎಂದವನೇ ಜೇಬಿನಿಂದ ಪಿಸ್ತೂಲು ತೆಗೆದು ಕೈಯಲ್ಲಿ ಹಿಡಿದುಕೊಂಡ. "ನೀನು ಬೇಕಾದರೆ ಪೋಲೀಸಿನೋರನ್ನ ಕರೆಸು, ವಿಂದೇಶ್ವರೀ ಪ್ರಸಾದ ! ನೀನು ಡಿಸ್ಟ್ರಿಕ್ಟ್ ಜಡ್ಜಿ. ನಿನಗೆ ಕಾನೂನು ಏನು ಅನ್ನೋದು ಗೊತ್ತಿದೆ. ನವಲ್, ಟ್ರಂಕ್ ತೊಗೊಂಡು ಕಾರಿನಲ್ಲಿಡು. ಏನು ವಿಂದೇಶ್ವರೀಪ್ರಸಾದ್, ನೀನು ಪೋಲೀಸಿನೋರನ್ನ ಕರೆಯೋದಾದರೆ ನಾನು ಇಲ್ಲೇ ಕಾಯ್ತೀನಿ. ಠಾಕೂರ್ ಕುಶಲ ಸಿಂಹ ಇಲ್ಲಿ ಪೋಲೀಸ್ ಸೂಪರಿಂಟೆಂಡೆಂಟು. ಗಂಗಾಪ್ರಸಾದನಿಗೂ ಅವನಿಗೂ ಎಂಥ ಸ್ನೇಹ ಇತ್ತು ಅಂತ ನಿನಗೆ ಗೊತ್ತಿದೆ !"

ವಿಂದೇಶ್ವರೀಪ್ರಸಾದರು ಹಲ್ಲು ಹಲ್ಲು ಕಡಿಯುತ್ತ ಹೇಳಿದರು, "ನಾನು ನಿನಗೆ ಬುದ್ಧಿ ಕಲಿಸ್ತೀನಿ, ನಿನ್ನ ಮಟ್ಟ ಹಾಕ್ತೀನಿ."

"ನನಗೆ ಬುದ್ಧಿ ಕಲಿಸೋಕ್ಕೆ ಅವಕಾಶ ಕೊಟ್ಟಿದೀನಿ, ತೊಗೋ. ಮತ್ತೆ ಹೇಳ್ತೀನಿ

ಪೋಲೀಸಿನೋರನ್ನ ಕರೆಸು. ದಮ್ಮಿದ್ದರೆ, ಕೊಳ್ಳೆಮಾಡಿದ ಅನ್ನೋ ಅಪರಾಧದ ಮೇಲೆ ದಸ್ತಗಿರಿ ಮಾಡಿಸು! ಎಲ್ಲಿಯ ಪಾಪಿಯೋ ನೀನು!"

"ಅಯ್ಯೋ, ಒಳಗೆ ನಡೀರಿ, ಲಾಲಾಜಿ, ಈ ಅಯೋಗ್ಯರ ಜೊತೆ ಏನು ಮಾತು!" ಸಿದ್ಧೇಶ್ವರೀ ಅಪ್ಪನ ಕೈಹಿಡಿದು ಒಳಗೆ ಕರೆದೊಯ್ದ.

ನವಲ್, ಜ್ಞಾನಪ್ರಕಾಶರು ವಿದ್ಯಳನ್ನೂ ಕರೆದುಕೊಂಡು ಮುಂದಿನ ಗಾಡಿ ಹಿಡಿದು ಅಲಹಾಬಾದಿಗೆ ಹೊರಟರು.

## ಆರು

"ಒಟ್ಟು ಎಷ್ಟಾಯಿತು?" ಜ್ಞಾನಪ್ರಕಾಶ ಕೇಳಿದ.

"ನನ್ನನ್ನೂ ಸೇರಿಸಿಕೊಂಡು ಏಳು," ನವಲ್ ಹೇಳಿದ. "ಜ್ಞಾನಬಾಬಾ, ನೀವು ಹೇಳ್ತಿದ್ದದ್ದು ಸರಿ! ಕೆಲಸ ನಾನು ಅಂದುಕೊಂಡಿದ್ದಷ್ಟು ಸುಲಭವಲ್ಲ. ನಾವು ಯಾವಾಗ ಹೊರಡಬೇಕಾಗುತ್ತೆ? ಡಿಸೆಂಬರ್ ಇಪ್ಪತ್ತೈದಕ್ಕೆ ತಾನೇ ಕಾಂಗ್ರೆಸ್ ಷುರುವಾಗೋದು. ಅಷ್ಟರಲ್ಲಿ ಇನ್ನು ಮೂವರನ್ನ ಒಪ್ಪಿಸ್ತೀನಿ."

ಜ್ಞಾನಪ್ರಕಾಶ ನಗುತ್ತ ಹೇಳಿದ, "ಬೇಡ, ಸಾಕಷ್ಟಾಯಿತು. ನಾನು ಎರಡು ದಿನ ಮುಂಚೆ ತಲಪಬೇಕು. ಆದ್ದರಿಂದ ಡಿಸೆಂಬರ್ ಇಪ್ಪತ್ತೆರಡಕ್ಕೆ ಇಲ್ಲಿಂದ ಹೊರಡ್ತೀನಿ. ನೀವುಗಳು ಇಪ್ಪತ್ತನಾಲ್ಕಕ್ಕೆ ಊರು ಬಿಡಿ. ಅಲ್ಲಿ ನೀವು ಇಳಿದುಕೊಳ್ಳೋಕ್ಕೆ ವ್ಯವಸ್ಥೆ ಮಾಡಿರ್ತೀನಿ."

ವಿದ್ಯಾ ಅಲ್ಲೇ ಹತ್ತಿರದಲ್ಲೇ ಅವತ್ತಿನ ಪತ್ರಿಕೆ ಓದುತ್ತ ಕುಳಿತಿದ್ದಳು. "ಅಣ್ಣಾ, ನಾನೂ ನಿಮ್ಮ ಜೊತೆ ಬರ್ತೀನಿ. ಅಂದರೆ, ಜ್ಞಾನಬಾಬಾ, ಏಳಿದ್ದದ್ದು ಎಂಟಾಯಿತು!" ಪತ್ರಿಕೆಯನ್ನು ಮುಚ್ಚಿ ಕೆಳಗಿಡುತ್ತ ವಿದ್ಯಾ ಹೇಳಿದಳು.

ಉನ್ನಾವಿನಿಂದ ವಾಪಸು ಬಂದಾಗಿನಿಂದ ವಿದ್ಯಾ ಸದಾ ತೆಪ್ಪಗಿರುತ್ತಿದ್ದಳು. ಮಾತು ಬಹಳ ಕಡಿಮೆಯಾಗಿತ್ತು. ಕೋಣೆಯಿಂದ ಅಪರೂಪವಾಗಿ ಹೊರಬರುತ್ತಿದ್ದಳು. ಸದಾ ಕೋಣೆಯೊಳಗೇ ಮೌನವಾಗಿ ಕುಳಿತು ಯೋಚನೆ ಮಾಡುತ್ತಿರುತ್ತಿದ್ದಳು. ನವಲನಿಗೆ ವಿದ್ಯಳ ಮಾತು ಕೇಳಿ ಆಶ್ಚರ್ಯವಾಯಿತು. ಅವನು ವಿದ್ಯಳ ಕಡೆ ತಿರುಗಿ, "ಏನು, ನೀನು ಕಾಂಗ್ರೆಸ್ ಅಧಿವೇಶನಕ್ಕೆ ಬರ್ತೀಯಾ?" ಎಂದು ಕೇಳಿದ.

"ಹೌದಣ್ಣ, ನಾನೂ ಬರ್ತೀನಿ. ಈ ಕೆಲಸವಿಲ್ಲದ ಉಸಿರು ಬಿಗಿಯುವ ಜೀವನ ಬೇಜಾರಾಗಿದೆ. ಏನು ಜ್ಞಾನಬಾಬಾ, ನಾನು ಲಾಹೋರ್ ಕಾಂಗ್ರೆಸಿಗೆ ಬರೋದಕ್ಕೆ ನಿಮ್ಮ ಅಭ್ಯಂತರವೇನೂ ಇಲ್ಲವಲ್ಲ? ಯಾಕೆ ಸುಮ್ಮಗಿದೀರಿ ಮಾತಾಡಿ."

ಜ್ಞಾನಪ್ರಕಾಶ ವಿದ್ಯಳ ಕಡೆ ನೋಡಿದ; ಕೊಂಚಹೊತ್ತು ಎಡಬಿಡದೆ ಹಾಗೆ ನೋಡು

ತ್ತಲೇ ಇದ್ದ. ಮುಖದ ಮೇಲೆ ದೃಢತೆ, ಕಠೋರತೆ, ಕಣ್ಣಿನಲ್ಲಿ ಸಂಕಲ್ಪದ ಅಪಾರವಾದ ಆಳ! ವಿದ್ಯಾ ಎಷ್ಟು ಶಾಂತವಾಗಿದ್ದಳು. ಎಷ್ಟು ಸುಂದರವಾಗಿದ್ದಳು. ಜ್ಞಾನ ಪ್ರಕಾಶನಿಗೆ ಮೆಡೋನಳ ಚಿತ್ರದ ನೆನಪಾಯಿತು. ಒಮ್ಮೆ ನಿಟ್ಟುಸಿರು ಬಿಟ್ಟು ಅವನು ಹೇಳಿದ, "ಇಲ್ಲ ಮಗೂ, ನೀನು ಬರೋದಕ್ಕೆ ಯಾವ ಅಭ್ಯಂತರವೂ ಇಲ್ಲ, ಆದರೆ ಈಗ ನೀನು ಲಾಹೋರಿಗೆ ಬರೋದು ಪ್ರಾಯಶಃ ಸರಿಯಲ್ಲ. ಜನ ಏನಂದಾರು?"

ವಿದ್ಯಾ ಸ್ವಲ್ಪ ಹೊತ್ತು ಸುಮ್ಮನಿದ್ದಳು. ಆಮೇಲೆ ದೈನ್ಯ ತುಂಬಿದ ಧ್ವನಿಯಲ್ಲಿ, "ಬಾಬಾ, ಜನ ಅನ್ನೋದರಿಂದ ಏನೂ ಆಗೋದೂ ಇಲ್ಲ, ಹೋಗೋದೂ ಇಲ್ಲ. ನಾನು ಬಲವಂತ ಮಾಡೋಲ್ಲ. ನಾನು ಹೀಗೇ ಕೊರಗ್ತಾ ಸಾಯಬೇಕು ಅನ್ನೋದು ನಿಮ್ಮ ಇಚ್ಛೆಯಾದರೆ ಹಾಗೇ ಮಾಡ್ತೀನಿ. ಹೆಂಗಸಿನ ಜೀವನವೇ ಗುಲಾಮಗಿರಿಯ ಜೀವನ. ಏನಣ್ಣಾ, ನಾನು ಹೇಳ್ತಿರೋದು ಸರಿ. ತಾನೆ?"

ವಿದ್ಯಳ ಧ್ವನಿಯಲ್ಲಿನ ಅಸಹಾಯತೆಯ ತೀಕ್ಷ್ಣವಾದ ವ್ಯಂಗ್ಯ ಜ್ಞಾನಪ್ರಕಾಶನ ಎದೆಯನ್ನು ನಾಟಿತು. ಅವನು ತನ್ನ ಹೇಡಿತನಕ್ಕೆ ತಾನೇ ಪೆಚ್ಚಾಗಿ ತಲೆ ತಗ್ಗಿಸಿದ. ಬಹಳ ಪ್ರಯಾಸದಿಂದ ತನ್ನನ್ನು ತಾನು ಹತೋಟಿಗೆ ತಂದುಕೊಳ್ಳುತ್ತ, "ಇಲ್ಲ ಮಗು, ನೀನು ಗುಲಾಮಗಿರಿ ಮಾಡಬೇಕಾಗಿಯೂ ಇಲ್ಲ, ಯಾತನೆ ಪಡಬೇಕಾಗಿಯೂ ಇಲ್ಲ. ಲಾಹೋರಿಗೆ ಬರುವೆಯಂತೆ. ಬೇಗ ಸಿದ್ಧತೆ ಮಾಡಿಕೊ. ನೀನು ನನ್ನ ಜೊತೆ ಹೊರಡಬೇಕಾಗುತ್ತೆ. ಇವರೆಲ್ಲಾ ಥರ್ಡ್ ಕ್ಲಾಸಿನಲ್ಲಿ ಹೋಗ್ತಾರೆ; ಇವರ ಜೊತೆ ನಿನಗೆ ಕಷ್ಟವಾಗುತ್ತೆ."

ವಿದ್ಯಾ ನಕ್ಕಳು, "ಜ್ಞಾನಬಾಬಾ, ನೀವೆಷ್ಟು ಒಳ್ಳೆಯವರು! ನೀವೂ ನವಲಣ್ಣ—ನನಗೆ ಅದೆಷ್ಟು ಆಸರೆಯಾಗಿದೀರಿ! ಇಲ್ಲ, ನಾನು ನವಲಣ್ಣನ ಜೊತೆಯೇ ಬರ್ತೀನಿ, ಥರ್ಡ್ ಕ್ಲಾಸಿನಲ್ಲಿ. ಜೀವನದಲ್ಲಿ ಹೋರಾಟವನ್ನೇ ನಮ್ಮದನ್ನಾಗಿಸಿಕೊಂಡಿರೋವಾಗ ಈ ಸಣ್ಣಪುಟ್ಟ ಸೌಕರ್ಯಗಳ ಬಗ್ಗೆ ಮೋಹ ಇಟ್ಟುಕೊಳ್ಳೋದು ತಪ್ಪು! ನವಲಣ್ಣ, ನನ್ನನ್ನ ನಿನ್ನ ಜೊತೆ ಕರಕೊಂಡು ಹೋಗ್ತೀಯಲ್ಲವೆ? ನಿಮ್ಮಗಳ ಊಟ-ತಿಂಡಿ ವ್ಯವಸ್ಥೆನ ನಾನು ನೋಡಿಕೋತೀನಿ."

ವಿದ್ಯಾ ಲಾಹೋರಿಗೆ ಹೋಗಬಯಸಿದ್ದಾಳೆಂಬ ಸುದ್ದಿಯಿಂದ ಮನೆಯಲ್ಲೆಲ್ಲಾ ಕೋಲಾಹಲವೆದ್ದಿತು. ಯಮುನಾ ರುಕ್ಮಿಣಿಗೆ ಹೇಳಿದಳು, "ವಿದ್ಯಾ ಲಾಹೋರಿಗೆ ಹೋಗದ ಹಾಗೆ ತಡಿ. ಉನ್ನಾವಿನವರು ಏನು ಅಂದುಕೋಬೇಡ? ಅವರ ಜೊತೆ ಮತ್ತೆ ಸಂಬಂಧ ಕೂಡಿಕೋಬಹುದು ಅಂತ ಇರೋ ಚೂರು ಆಸೇನೂ ಒಡೆದು ಹೋಗುತ್ತೆ. ಗೌರವಸ್ಥರ ಮನೆ ಹುಡುಗಿ. ಹೀಗೆ ಪರದೆ ತೆಗೆದು ಹಾಕಿ, ಊರೂರು ಅಲೀತಾ, ಗಂಡಸರ ಜೊತೆ ಬೆರೆತು ಮಾತನಾಡೋದು ಅಂದರೆ ತುಂಬ ಕೆಟ್ಟದ್ದು. ಲೋಕ ಮುಖಕ್ಕೆ ಉಗುಳುತ್ತೆ."

"ಹೌದು, ಅಮ್ಮಾಜಿ. ವಿದ್ಯಾ ಲಾಹೋರಿಗೆ ಹೋಗೋದು ನನಗೂ ಇಷ್ಟವಿಲ್ಲ. ಆದರೆ ಅವಳ ಸ್ಥಿತಿ ಹೀಗೇ ಮುಂದುವರಿದರೆ ಅವಳು ಬಹಳ ದಿನ ಬದುಕೋಲ್ಲ. ಅವಳ

ಸ್ಥಿತಿ ಹೇಗಿದೆ ಅಂತ ನೀವೇ ನೋಡ್ತಿದೀರಿ. ಒಣಗಿ ಅರ್ಧವಾಗಿ ಹೋಗಿದಾಳೆ," ರುಕ್ಮಿಣಿ ಕಣ್ಣಲ್ಲಿ ನೀರು ತಂದುಕೊಂಡು ಹೇಳಿದಳು.

"ಅದೇನೋ ನಿಜ. ಆದರೆ ಕುಲದ ಮರ್ಯಾದೇನೂ ನಾವು ನೋಡಬೇಕಲ್ಲ. ಈ ದುರ್ಭಾಗ್ಯೆ ಹುಟ್ಟಿದಾಗಲೇ ಸತ್ತುಹೋಗಿದ್ದರೆ ಚೆನ್ನಾಗಿತ್ತು. ಈಗ ಮನೆಯ ಮರ್ಯಾದೆ ಕಳೀತಾಳೆ ಅಂತ ಕಾಣುತ್ತೆ," ಯಮುನಳ ಧ್ವನಿ ಕೊಂಚ ಬಿರುಸಾಯಿತು.

"ಅಮ್ಮಾಜೀ, ನಿಮ್ಮ ಕೈ ಮುಗೀತೀನಿ. ಹೀಗೆಲ್ಲಾ ಮಾತನಾಡಬೇಡಿ. ವಿದ್ಯಾ ಇದನ್ನೆಲ್ಲಾ ಕೇಳಿದರೆ ಹೋಗಿ ಏನಾದರೂ ಮಾಡಿಕೋತಾಳೆ. ಅವಳು ಯಾವತ್ತೂ ಮಾಡಬಾರದ್ದನ್ನ ಮಾಡೋಲ್ಲ ಅಂತ ನನಗೆ ನಂಬಿಕೆ ಇದೆ."

"ಮಾಡಬಾರದ್ದನ್ನ ಮಾಡೋಲ್ಲ! ಗಂಡನ ಮೇಲೆ ಕೈ ಮಾಡಿದಳಲ್ಲ, ಅದು ಮಾಡಬಹುದಾದ ಕೆಲಸವೋ?"

"ಇನ್ನೇನು, ಅಲ್ಲಿ ತನ್ನ ಪ್ರಾಣ ತೆರಬೇಕಾಗಿತ್ತೆ? ನೀವೇ ಕಣ್ಣಾರೆ ನೋಡಿದೀರಿ, ಅವಳ ಮೈಮೇಲೆಲ್ಲಾ ಹೇಗೆ ಬಾಸುಂಡೆ ಬಂದಿತ್ತು ಅಂತ. ಮನೆಯೋರೆಲ್ಲಾ ಒಟ್ಟಾಗಿ ಸೇರಿ ಹೊಡೆದಿದ್ದರು. ಕಟುಕರ ಮನೇಗೆ ಹುಡುಗೀನ ಕಳಿಸಿದ್ದೆವು; ಅವಳು ಬದುಕಿ ಬಂದದ್ದು ಸಾಲದೆ?"

ಯಮುನಾ ಕೋಪದಿಂದ ಹೇಳಿದಳು, "ಅವಳನ್ನ ತಲೆಯ ಮೇಲೆ ಎತ್ತಿ ಕೂರಿಸಿಕೋ! ಅವಳ ಬದುಕನ್ನ ನೀನೇ ನಿಭಾಯಿಸೋಳ ಹಾಗೆ! ನನ್ನಿಂದ ಇದನ್ನೆಲ್ಲಾ ನೋಡೋಕ್ಕಾಗೋಲ್ಲ. ಅವರಿಗೇ ಹೋಗಿ ಹೇಳ್ತೀನಿ, ಅವರು ಅವಳನ್ನ ಹೋಗದ ಹಾಗೆ ತಡೀಬಲ್ಲರು." ಯಮುನಾ ಜ್ವಾಲಾಪ್ರಸಾದನ ಹತ್ತಿರ ಹೋದಳು.

ಜ್ವಾಲಾಪ್ರಸಾದ ಪೂಜೆ ಮುಗಿಸಿ ಬಂದು ಡ್ರಾಯಿಂಗ್ ರೂಮಿನಲ್ಲಿ ಕುಳಿತಿದ್ದ. ವಿದ್ಯಾ ಲಾಹೋರಿಗೆ ಹೋಗುವುದು ಅವನಿಗೆ ಸರಿಕಂಡಿರಲಿಲ್ಲ. ಅವನು ಜ್ಞಾನಪ್ರಕಾಶನಿಗೆ ಹೇಳುತ್ತಿದ್ದ, "ಏನೇ ಆಗಲಿ, ವಿದ್ಯಾ ಲಾಹೋರಿಗೆ ಹೋಗೋದು ಸರಿಯಲ್ಲ. ನಾವು ಅವಳ ಮನೆಯವರನ್ನ ಕೇಳಬೇಕಾಗುತ್ತೆ."

ಜ್ಞಾನಪ್ರಕಾಶ ಹೇಳಿದ, "ಅಣ್ಣ, ಅವರ ಮನೆಯವರು ಅಂದರೆ ಯಾರು ಅಂತ ನನಗೆ ಹೇಳಿ, ಮೊದಲು. ಯಾರು ಅವಳನ್ನ ಮನೆಯಿಂದ ಹೊರಗೆ ಅಟ್ಟಿದರೋ ಅವರು ಅವಳ ಮನೆಯವರೆ?"

ಜ್ವಾಲಾಪ್ರಸಾದನಿಗೆ ಕಷ್ಟಕ್ಕಿಟ್ಟುಕೊಂಡಿತು. "ಅವರಲ್ಲದೆ ಹೋದರೆ ಇನ್ಯಾರು? ನಾವೇ?"

"ಹೌದು, ಒಂದು ಕಾಲದಲ್ಲಿ ನೀವಾಗಿದ್ದಿರಿ. ಈಗಲ್ಲ. ಯಾಕೆ ಅಂದರೆ ನೀವು ಅವಳನ್ನ ಆ ಪಿಶಾಚಿಗಳಿಗೆ ಒಪ್ಪಿಸಿಬಿಟ್ಟಿರಿ. ಅಣ್ಣ, ಅವಳಿಗೆ ಈ ಜಗತ್ತಿನಲ್ಲಿ ಯಾರ ಮೇಲೂ ಅಧಿಕಾರವಿಲ್ಲ; ಯಾರ ಆಸರೆಯೂ ಇಲ್ಲ. ಅವಳಿಗೀಗ ಒಬ್ಬ ಬಿಕಾರಿಯ

ಹಾಗೆ ಬೇರೆಯುವರ ದಯದ ಮೇಲೆ ಜೀವಿಸಬೇಕಾಗಿದೆ. ಅವಳ ಮುಂದಿರೋದು ಅಂದರೆ ಗುಲಾಮಗಿರಿ, ಇಲ್ಲವೇ ಸಾವು."

ಇದೇ ಹೊತ್ತಿಗೆ ಯಮುನಾ ಕೋಣೆಗೆ ಬಂದಳು, "ಜ್ಞಾನಲಾಲಾ, ವಿದ್ಯಳಿಗೆ ಲಾಹೋರಿಗೆ ಹೋಗೋ ಸಲಹೇನ ನೀನು ಕೊಟ್ಟೆಯಾ?"

"ಇಲ್ಲ ಅತ್ತಿಗೆ, ನನಗೆ ಅನ್ನಿಸೋದು, ಕಳೆದ ಹತ್ತು ಹನ್ನೆರಡು ದಿನದಿಂದ ಸಾವಿನ ಜೊತೆ ಒಂದೇ ಸಮನೆ ಹೋರಾಟ ನಡಸ್ತಿರೋ ಅವಳ ಬದುಕು ಅವಳಿಗೆ ಈ ಸಲಹೆ ಕೊಟ್ಟಿದೆ. ನೀವು ನೋಡಿಲ್ಲ, ಅವಳು ಉನ್ನಾವ್ ಬಿಟ್ಟು ಬಂದಾಗಿನಿಂದ ಸಾವಿನ ಮೋರೆ ಹಾಕಿಕೊಂಡು ತನ್ನ ಕೋಣೇಲಿ ಮೌನವಾಗಿ ಮುಖ ಮುಚ್ಚಿಕೊಂಡು ಕುಳಿತಿರ್ತಾಳೆ. ಯಾರೂ ಅವಳ ಮುಖದ ಮೇಲೆ ನಗು ಅನ್ನೋದನ್ನ ಕಂಡಿಲ್ಲ. ಒಂದು ಕ್ಷಣ ಅವಳ ಕಣ್ಣಿಂದ ನೀರು ಆರಿಲ್ಲ. ಅವಳ ಬದುಕು ಇವತ್ತು ಮೊದಲ ಬಾರಿಗೆ ಸಾವಿನ ಜೊತೆ ಯುದ್ಧ ಹೂಡಿತು, ಮೊದಲ ಬಾರಿಗೆ ಚಲನೆ ಕಂಡಿತು. ಅವಳ ಬದುಕು ನವಲನ ಆಸರೆ ಬೇಡಿತು, ನನ್ನ ಆಸರೆ ಬೇಡಿತು. ನಾವು ಇನ್ನೇನು ಮಾಡಬೇಕಾಗಿತ್ತು ಅಂತ ನೀವೇ ಹೇಳಿ, ಅತ್ತಿಗೆ. ಅವಳು ಲಾಹೋರಿಗೆ ಬರ್ತೀನಿ ಅಂದಳು, ನಾವು ಒಪ್ಪಿಕೊಂಡೆವು. ಇಷ್ಟು ದಿನದ ಮೇಲೆ ಆಗ ಅವಳ ಮುಖದ ಮೇಲೆ ನಗೆ ಮೂಡಿತು, ಕಣ್ಣು ಹೊಳೆಯೋಕ್ಕೆ ಷುರುವಾಯಿತು. ಹುಡುಗಿ ಸತ್ತುಹೋಗಲಿ ಅಂತ ನಿಮ್ಮ ಆಸೆಯೆ, ಹೇಳಿ ಅತ್ತಿಗೆ?"

ಯಮುನಾ ಬಿಕ್ಕಿ ಬಿಕ್ಕಿ ಅಳತೊಡಗಿದಳು, "ಅಯ್ಯೋ ಮಗು, ಎಷ್ಟು ಪ್ರೀತಿ ಮಮತೇಲಿ ಸಾಕಿ ಬೆಳಸಿದ್ದೆವು; ಎಂಥ ಚಾಂಡಾಳರ ಕೈಲಿ ಸಿಕ್ಕಿಕೊಂಡಳು! ಜ್ಞಾನ ಲಾಲಾ, ಅವಳು ಮನಸ್ಸಿಗೆ ಬಂದ ಹಾಗೆ ಮಾಡಲಿ, ನಾನು ಅಡ್ಡಿ ಬರೋಲ್ಲ" ಎಂದು ಯಮುನಾ ಅಲ್ಲಿಂದ ಎದ್ದುಹೊರಟಳು. ಇದಾದಮೇಲೆ ಜ್ವಾಲಾಪ್ರಸಾದ ಮಾತು ಮುಂದುವರಿಸಲಿಲ್ಲ.

ಡಿಸೆಂಬರ್ ಇಪ್ಪತ್ತಮೂರರ ಸಂಜೆ ಅಲಹಾಬಾದಿನಲ್ಲಿ ಎಲ್ಲೆಲ್ಲೂ ಉದ್ವೇಗವೋ ಉದ್ವೇಗ. 'ಲೀಡರ್,' 'ಪಯನಿಯರ್' ಪತ್ರಿಕೆಗಳು ವಿಶೇಷಾಂಕ ಹೊರಡಿಸಿ ಆ ಬೆಳಗ್ಗೆ ವೈಸ್‌ರಾಯ್ ದಿಲ್ಲಿಯಿಂದ ವಾಪಸಾಗುತ್ತಿದ್ದಾಗ ಪುರಾನಾ ಕಿಲ್ಲೆಯ ಹತ್ತಿರ ಅವರ ಸ್ಪೆಷಲ್ ರೈಲುಗಾಡಿಯ ಕೆಳಗಡೆ ಬಾಂಬು ಸಿಡಿದ ಸುದ್ದಿಯನ್ನು ಪ್ರಕಟಿಸಿದವು. ಕೂದಲೆಳೆಯಷ್ಟರಲ್ಲಿ ವೈಸ್‌ರಾಯ್ ಬದುಕಿಕೊಂಡರು. ಆದರೆ ಸ್ಪೆಷಲ್ ರೈಲಿನ ಊಟದ ಗಾಡಿ ನಷ್ಟವಾಗಿತ್ತು, ಒಬ್ಬ ಆಳು ಗಾಯಗೊಂಡಿದ್ದ.

ಸುದ್ದಿಯನ್ನೋದಿ ಜ್ವಾಲಾಪ್ರಸಾದ ತುಂಬ ಚಿಂತೆಗೊಳಗಾದ. ರಾತ್ರಿ ಅವನು ನವಲ್ ವಿದ್ಯಾ ಇಬ್ಬರನ್ನೂ ಕರೆದ. "ಇವತ್ತಿನ ಸುದ್ದಿ ಓದಿರಬೇಕು ನೀವು, ನಿಮ್ಮ ವಿಚಾರ ಏನು?"

ನವಲ್ ಉತ್ತರಕೊಟ್ಟ, "ಬಲು ಕೆಟ್ಟ ಸುದ್ದಿ, ತಾತ. ಪ್ರಾಯಶಃ ಇದರ ಪರಿ

ಣಾಮವೂ ಒಳ್ಳೇದಾಗೋಲ್ಲ. ಲಾರ್ಡ್ ಇರ್ವಿನ್–ಮಹಾತ್ಮ ಗಾಂಧಿಯವರ ನಡುವೆ ಯಾವ ಒಪ್ಪಂದ ನಡೆಯೋದಿತ್ತೋ ಅದು ಯಶಸ್ವಿಯಾಗೋಲ್ಲ."

"ನಾನು ಅದನ್ನ ಕೇಳ್ತಿಲ್ಲ," ಜ್ವಾಲಾಪ್ರಸಾದ ಹೇಳಿದ, "ನೀನೂ ವಿದ್ಯಾ ಈಗ ಲಾಹೋರಿಗೆ ಹೋಗೋದು ಸರಿಯೇ ಹೇಗೆ ಅಂತ ಕೇಳ್ತಿದೀನಿ."

"ಸರಕಾರ ಕಾಂಗ್ರೆಸ್ಸಿನ ಮೇಲೆ ಯಾವ ನಿರ್ಬಂಧವನ್ನೂ ಹಾಕಿಲ್ಲ. ಹಾಕಿದ್ದಿದ್ದರೆ ಅದರ ಸುದ್ದಿಯೂ ಬಂದಿರೋದು. ನನಗೆ ಅನಿಸೋದು, ಅದು ಯಾವ ನಿರ್ಬಂಧ ವನ್ನೂ ಹಾಕೋಲ್ಲ. ಖಂಡಿತವಾಗಿ ಇದು ಹಿಂಸೆಯಲ್ಲಿ ವಿಶ್ವಾಸವಿಟ್ಟಿರೋ ಕ್ರಾಂತಿ ಕಾರಿಗಳ ಕೆಲಸ. ಗಾಂಧಿ ಹಾಗೂ ಕಾಂಗ್ರೆಸ್ಸಿನ ಮಾರ್ಗ ಅಂದರೆ ಅಹಿಂಸೇದು."

"ಅಂದರೆ ನೀವು ಲಾಹೋರಿಗೆ ಹೋಗೋದು ಅಂತ ನಿಶ್ಚಯಿಸಿದೀರಿ ಅಂದ ಹಾಗಾಯ್ತು," ಜ್ವಾಲಾಪ್ರಸಾದ ಹೇಳಿದ.

"ಈಗ ಈ ಘಟನೆಯಾದ ಮೇಲೆ ಲಾಹೋರ್ ಕಾಂಗ್ರೆಸ್ ನೋಡೋ ಹಾಗಿರುತ್ತೆ, ಮಜವಾಗಿರುತ್ತೆ."

"ಏನು ಮಜ ಬರುತ್ತೆ ಅಂತ ನನಗೆ ಚೆನ್ನಾಗಿ ಗೊತ್ತಿದೆ. ಆದರೆ ನಿಮಗೆ ಯಾರ ಕೈಲಿ ಹೇಳಿ ಪೂರೈಸೋಕ್ಕಾಗುತ್ತೆ ! ಒಳ್ಳೇದು, ಜೊತೇಲಿ ಸಾಕಷ್ಟು ಬಟ್ಟೆ ತೊಗೊಂಡು ಹೋಗಿರಿ. ಈ ಸಲ ಚಳಿ ಜೋರಾಗಿ ಹೊಡೀತಿದೆ. ಲಾಹೋರ್ ಹೇಗೂ ಚಳಿಗೆ ಹೆಸರುವಾಸಿಯಾದ ಜಾಗ. ಗಂಗನ ಓವರ್‌ಕೋಟ್ ಇದೆಯಲ್ಲ, ಅದನ್ನ ತೊಗೊಂಡಿರಿ ! ವಿದ್ಯಾ, ನನಗೆ ಯೋಚನೆ ಅಂದರೆ ನಿನ್ನದೇ !"

ವಿದ್ಯಾ ನಗುತ್ತ ಹೇಳಿದಳು, "ಅಪ್ಪ ನನಗೊಂದು ಫರ್‌ಕೋಟ್ ಹೊಲಿಸಿಕೊಟ್ಟಿದ್ದರು. ನೀವು ನನ್ನ ಬಗ್ಗೆ ಯೋಚನೆ ಮಾಡಬೇಕಾಗಿಲ್ಲ."

ಡಿಸೆಂಬರ್ ಇಪ್ಪತ್ತನಾಲ್ಕರ ಬೆಳಗ್ಗೆ ನವಲ್ ವಿದ್ಯಳೊಂದಿಗೆ ರೈಲ್ವೇ ನಿಲ್ದಾಣ ತಲಪಿದಾಗ ಚಳಿ ಭಯಂಕರವಾಗಿತ್ತು. ರಾತ್ರಿಯೆಲ್ಲಾ ಮಳೆ ಸುರಿಯುತ್ತಲೇ ಇತ್ತು. ಸದ್ಯ ಮಳೆ ನಿಂತಿದ್ದರೂ ಉತ್ತರದಿಕ್ಕಿನ ತಂಡಿಯ ಗಾಳಿ ಜೋರಾಗಿ ಬೀಸುತ್ತಿತ್ತು. ನವಲ್ ನಿಲ್ದಾಣಕ್ಕೆ ಬಂದು ನೋಡಿದಾಗ ಅವನ ಗುಂಪಿನ ಎಂಟು ಮಂದಿಯಲ್ಲಿ ಐದೇ ಮಂದಿ ಇದ್ದುದು ಕಾಣಿಸಿತು.

ಗಾಡಿ ಸಾಕಷ್ಟು ಖಾಲಿಯಿತ್ತು. ಆ ಚಳಿಯಲ್ಲಿ ಪ್ರಯಾಣಮಾಡುವ ಧೈರ್ಯ ಹೆಚ್ಚು ಜನರಿಗಿರಲಿಲ್ಲ. ಮೂರನೇ ದರ್ಜೆಯ ಗಾಡಿಯಲ್ಲಿ ಆ ಐವರೂ ಎದೆಯಲ್ಲಿ ಉಲ್ಲಾಸ ತುಂಬಿ ಆರಾಮವಾಗಿ ಕುಳಿತರು.

ಜ್ಞಾನಪ್ರಕಾಶ ಮಾತು ಕೊಟ್ಟಿದ್ದಂತೆ ಲಾಹೋರ್ ಸ್ಟೇಷನ್ನಿಗೆ ಬಂದಿದ್ದ. ಅವನಂದ, "ಚಳಿ ತುಂಬಾ ಜೋರಾಗಿ ಹೊಡೀತಿದೆ. ಹೀಗಾಗುತ್ತೆ ಅಂತ ಮೊದಲೇ ಗೊತ್ತಿದ್ದಿದ್ದರೆ ನಿಮಗೆ ಬನ್ನಿ ಅಂತ ಹೇಳ್ತಿರಲಿಲ್ಲ."

ನವಲ್ ನಕ್ಕ. "ಈಗಂತೂ ನಾವು ಬಂದಾಗಿದೆಯಲ್ಲ, ಬಾಬಾ. ಇಲ್ಲಿಯ ಚಳಿಯ ಮಜವನ್ನ ನಾವೂ ಕೊಂಚ ರುಚಿ ನೋಡೋಣ."

ನವಲನಿಗೂ ಅವನ ಮಿತ್ರರಿಗೂ ಒಂದು ದೊಡ್ಡ ಶಿಬಿರದಲ್ಲಿ ಇಳಿಯುವ ವ್ಯವಸ್ಥೆ ಮಾಡಲಾಗಿತ್ತು. ಜ್ಞಾನಪ್ರಕಾಶ ವಿದ್ಯಳನ್ನು ತನ್ನ ಶಿಬಿರದಲ್ಲಿಯೇ ಇಳಿಸಿಕೊಂಡ.

ಸಂಜೆ ಅಧಿವೇಶನ ಮುಗಿಯುವಾಗ ಮೈಮುದುಡಿಸುವಂತಹ ಚಳಿ ಹೊಡೆಯುತ್ತಿತ್ತು. ಆದರೆ ವಿದ್ಯಳಿಗೆ ಚಳಿಯೆನಿಸುತ್ತಿರಲಿಲ್ಲ. ಅವಳು ಅವತ್ತು ಒಂದು ಹೊಸ ಪ್ರಪಂಚವನ್ನು ನೋಡಿದ್ದಳು. ಅದರಲ್ಲಿ ಕ್ರಿಯೆಯಿತ್ತು, ಸಂಘರ್ಷಣೆಯಿತ್ತು. ಈ ಕ್ರಿಯೆ, ಸಂಘರ್ಷಣೆಗಳು ಅವಳ ಬದುಕಿನ ಒಂದು ಭಾಗವಾಗಿ ಬಿಟ್ಟಿದ್ದವು. ಸಹಸ್ರಾರು ಸ್ತ್ರೀಪುರುಷರು ಎಲ್ಲವನ್ನೂ ತೊರೆದು ತ್ಯಾಗ ಬಲಿದಾನಗಳಿಗೆ ತಮ್ಮ ಜೀವನವನ್ನು ಮುಡುಪಿಡಲು ಟೊಂಕ ಕಟ್ಟಿದ್ದರು. ಅದರ ಮುಂದೆ ಅವಳಿಗೆ ತನ್ನ ಬದುಕಿನ ದುಃಖ ತೀರಾ ಅಲ್ಪವೆಂದೆನಿಸತೊಡಗಿತು. ಕಾಂಗ್ರೆಸ್ ಅಧಿವೇಶನದಿಂದ ಹಿಂದಿರುಗಿ ಬಂದ ಮೇಲೆ ವಿದ್ಯಾ ನವಲನಿಗೆ ಹೇಳಿದಳು, "ಅಣ್ಣ, ಇನ್ನೂ ರಾತ್ರಿ ಬಹಳವಾಗಿಲ್ಲ. ನನ್ನನ್ನ ಕರಕೊಂಡು ಹೋಗಿ ಲಾಹೋರ್ ಪಟ್ಟಣ ತೋರಿಸು. ಅದರ ಬಗ್ಗೆ ಜನ ತುಂಬಾ ಹೊಗಳೋದನ್ನ ಕೇಳಿದೀನಿ."

ನವಲನಿಗೆ ಆ ಸುರಿಮಂಜಿನ ರಾತ್ರಿಯಲ್ಲಿ ಹೊರಗೆ ಹೊರಡುವ ಧೈರ್ಯವಿರಲಿಲ್ಲ. ಆದರೆ ವಿದ್ಯಳ ಮುಖದ ಮೇಲಿದ್ದ ಉಲ್ಲಾಸದ ಕಾಂತಿಯನ್ನು ನೋಡಿದಾಗ ಅವನಿಗೆ 'ಇಲ್ಲ'ವೆನ್ನುವ ಸಾಹಸವೂ ಆಗಲಿಲ್ಲ. ಆದರೂ ಅವನು ಜಾರಿಕೊಳ್ಳುವ ಒಂದು ಪುಟ್ಟ ಪ್ರಯತ್ನಮಾಡಿದ, "ಎಷ್ಟೊಂದು ಚಳಿ ಹೊಡೀತಿದೆ ಅಂತ ನೀನೇ ನೋಡ್ತಿದಿ, ವಿದ್ಯಾ!"

"ನಿಜ, ಅಣ್ಣ. ಆದರೆ ಈ ಚಳಿಯಿಂದ ಯಾತನೆಯಾಗೋಲ್ಲ. ಓವರ್ ಕೋಟ್ ಹಾಕಿಕೊ. ಎಂಥ ಚೆನ್ನಾಗಿದೆ ಈ ರಾತ್ರಿ! ನನಗೆ ಜೀವನದ ಬಗ್ಗೆ ಮೋಹ ಉಂಟಾದಹಾಗಿದೆ. ನಡಿಯಣ್ಣ, ಒಂದು ಗಂಟೆಯೊಳಗೆ ತಿರುಗಿ ಬರೋಣವಂತೆ."

ನವಲನಿಗೆ ವಿದ್ಯಳ ಒತ್ತಾಯವನ್ನು ಬದಿಗೊತ್ತಲಾಗಲಿಲ್ಲ. ಅವನು ಅವಳ ಜೊತೆ ಹೊರಟ. ಅವತ್ತಿನದು ಸುತ್ತಾಡಲು ಯೋಗ್ಯವಾದ ಹವೆಯಲ್ಲವೆಂಬುದು ನಿಜ. ರಸ್ತೆಗಳು ನಿಸ್ತಬ್ಧವಾಗಿದ್ದವು. ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ರಸ್ತೆಯಲ್ಲಿ ಓಡಾಡುತ್ತಿರುವುದು ಕಾಣುತ್ತಿತ್ತು. ಸಿನಿಮಾಮನೆಗಳ ಮುಂದೆ ಕೊಂಚ ಚಟುವಟಿಕೆಯೇನೋ ಇತ್ತು. ಹೋಟಲುಗಳಲ್ಲಿ ಒಂದಿಷ್ಟು ಮಂದಿ ಕುಳಿತು ಊಟ ಮಾಡುತ್ತಿದ್ದರು. ವಿದ್ಯಾ, ನವಲರು ಮಾಲ್‌ರೋಡಿನ ಹತ್ತಿರ ಟಾಂಗಾ ಬಿಟ್ಟಿಳಿದು ಕಾಲ್ನಡಿಗೆಯಲ್ಲಿ ಹೊರಟರು.

ವಿದ್ಯಾ ನವಲನನ್ನು ತುಂಬ ತುಂಬ ಕೇಳಬೇಕೆಂದಿದ್ದಳು, ಅವನಿಂದ ತುಂಬ ತುಂಬ ತಿಳಿದುಕೊಳ್ಳಬೇಕೆಂದಿದ್ದಳು. ಆದರೆ ಈಗ ಕೇಳಿ ತಿಳಿಯುವ ಅವಶ್ಯಕತೆಯೇ ಇಲ್ಲ

ವೆಂದು ತೋರತೊಡಗಿತ್ತು. ಅವಳು ಬದುಕಿನ ರೂಪವನ್ನು ನೋಡುತ್ತಿದ್ದಳು—ಮಂಜಿನ ರಾತ್ರಿಯಂತೆ ಚುಚ್ಚುವ, ಕುಟುಕುವ ಬದುಕು. ಆದರೆ ಅವಳಿಗೆ ಚಳಿಯಾಗುತ್ತಿರಲಿಲ್ಲ. ಅವಳ ಧಮನಿಗಳಲ್ಲಿ ಬಿಸಿ ರಕ್ತ ಹರಿಯುತ್ತಿತ್ತು. ಆ ಚುಚ್ಚುವ ಚಳಿಯ ಹವೆಯಿಂದಾಗಿ ಅವಳೊಳಗೆ ಪುಳಕವಾದಂತಾಗುತ್ತಿತ್ತು. ಈ ಚುಚ್ಚುವ, ಕುಟುಕುವ ಹಿಮಸದೃಶ ಜೀವನವನ್ನು ಎದುರಿಸಬಲ್ಲದ್ದೆಂದರೆ ಹೃದಯದ ಶಾಖ, ಧಮನಿಗಳಲ್ಲಿ ನಿರಂತರ ಗತಿಯಲ್ಲಿ ಸಂಚರಿಸುವ ಬಿಸಿ ರಕ್ತ ಎಂಬುದು ವಿದ್ಯಳ ಅನುಭವಕ್ಕೆ ಬಂದಿತು.

ಅವಳು ಅವತ್ತಿನ ಅಧಿವೇಶನದಲ್ಲಿ ದೇಶದ ನವಯುವಕರ ಮುಖಂಡರಾದ ಜವಾಹರಲಾಲರು ಅಧ್ಯಕ್ಷಪೀಠದಿಂದ ಮಾಡಿದ್ದ ಭಾಷಣವನ್ನು ಕೇಳಿದ್ದಳು. ಆ ಭಾಷಣದ ಹೆಚ್ಚು ಭಾಗ ಅವಳಿಗೆ ಅರ್ಥವಾಗಿರಲಿಲ್ಲ. ರಾಜಕೀಯವಾಗಿ ನೋಡಿದರೆ ಅದರಲ್ಲಿ ಆಳವಿತ್ತು, ತೊಡಕಿತ್ತು. ಆದರೂ ಅವಳು ಬಹಳಷ್ಟು ಅರ್ಥಮಾಡಿಕೊಂಡಿದ್ದಳು. ಮನುಷ್ಯ ಸ್ವತಂತ್ರ, ಅನ್ಯಾಯವನ್ನು ಸಕ್ರಿಯವಾಗಿ ವಿರೋಧಿಸುವುದು ಮನುಷ್ಯನ ಕರ್ತವ್ಯ. ಜೀವನವೆಂದರೆ ಹೋರಾಟ, ಕ್ರಿಯೆ. ಈ ಭಾಷಣವನ್ನು ಕೇಳಿ ಅವಳು ಮುಗ್ಧಳಾಗಿದ್ದಳು.

ವಿದ್ಯಾ ಪಕ್ಕದಲ್ಲಿ ನಡೆದುಬರುತ್ತಿದ್ದ ಅಣ್ಣನ ಕಡೆ ನೋಡಿದಳು. ಅಣ್ಣನ ಮುಖದ ಮೇಲೂ ದೃಢತೆಯಿತ್ತು, ಆತ್ಮವಿಶ್ವಾಸವಿತ್ತು. ತನ್ನಣ್ಣನೂ ಒಬ್ಬ ಜವಾಹರಲಾಲನಾಗಬಲ್ಲನೆ?

ವಿದ್ಯಳ ಮುಖ ಬಾಡಿತು. ಜವಾಹರಲಾಲರಿಗೆ ತಂದೆಯಿದ್ದಾರೆ, ಅವರ ಬಲ ಸಿಗುತ್ತಿದೆ. ಆದರೆ ನವಲ್ ತಂದೆಯಿಲ್ಲದ ಹುಡುಗ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಅವನ ಹೆಗಲ ಮೇಲೆ ಒಂದು ದೊಡ್ಡ ಸಂಸಾರದ ಹೊರೆ ಬಿದ್ದಿದೆ. ಬರಿಯ ಮಕ್ಕಳ ಹೊರೆಯಷ್ಟೇ ಅಲ್ಲ, ಸ್ವತಃ ತಾನೇ ಒಂದು ಹೊರೆಯಾಗಿ ಅಣ್ಣನ ಹೆಗಲ ಮೇಲೆ ಕೂತಿದ್ದಾಳೆ. ವಿದ್ಯಾ ಏಕಾಏಕಿ ಅಣ್ಣನ ಕೈಹಿಡಿದುಕೊಂಡಳು. "ಅಣ್ಣ, ನಾನು ಜೀವಮಾನ ಪೂರ್ತಿ ಅತ್ತೆಯ ಮನೆ ತೊರೆದು ಬಂದಿದೀನಿ, ನಿನಗೆ ಒಂದು ಭಾರೀ ಹೊರೆಯಾಗಿದೀನಿ ಅನ್ನೋದನ್ನ ನೀನು ಎಂದಾದರೂ ಯೋಚಿಸಿದೀಯಾ?"

ನವಲ್ ನಕ್ಕ, "ಏನು ಹುಚ್ಚು ಮಾತಾಡ್ತಿದಿ, ವಿದ್ಯಾ! ನೀನು ಯಾರಿಗಾದರೂ ಹೊರೆಯಾಗೋದು ಸಾಧ್ಯವೇ? ನಿನ್ನಲ್ಲಿ ಸಾಹಸವಿದೆ, ಶಕ್ತಿಯಿದೆ; ನೀನು ಇನ್ನೊಬ್ಬರಿಗೆ ಆಸರೆಯಾಗಬಲ್ಲೆ. ವಿಷಾದದ ಭರದಲ್ಲಿ ನಿನಗೆ ನಿನ್ನನ್ನೇ ಗುರುತಿಸಿಕೊಳ್ಳದಂತಾಗಿದೆ. ಆದರೆ ನಾನು ನಿನ್ನನ್ನ ಗುರುತಿಸಬಲ್ಲೆ."

ವಿದ್ಯಳ ವಿಷಾದ, ವ್ಯಾಕುಲತೆಗಳೆಲ್ಲವೂ ಒಮ್ಮೆಲೇ ಕರಗಿಹೋದಂತಾಯಿತು. ಈಗ ತಾನೇ ಒಂದು ಕ್ಷಣ ಅವಳು ಜೀವನದ ಮಂಜುಗೆಡ್ಡೆಯ ಕುಟುಕನ್ನು ಅನುಭವಿಸಿದ್ದಳು; ಆದರೆ ಮರುಕ್ಷಣ ಅವಳೊಳಗಿನ ಶಾಖ ಆ ಕುಟುಕನ್ನು ರೋಮಾಂಚವಾಗಿ

ಪರಿವರ್ತಿಸಿತ್ತು. “ಹೌದೇ ಅಣ್ಣ, ನನ್ನ ಹೊರೆಯನ್ನ ನಾನೇ ನಿಭಾಯಿಸಬಲ್ಲೆ ಅಂತೀಯ? ಈ ಜುಗುಪ್ಸೆಯ, ಗುಲಾಮಗಿರಿಯ ವಾತಾವರಣವನ್ನು ಚೂರುಚೂರಾಗಿ ಒಡೆದು, ನನ್ನ ದಾರೀನ ನಾನು ಸೃಷ್ಟಿಸಿಕೊಳ್ಳಬಲ್ಲೆನೆ? ಅದಕ್ಕೆ ನೀನು ಸಹಾಯಮಾಡ್ತೀಯ, ಅಣ್ಣ? ಹೇಳಣ್ಣ, ನೀನು ಸಹಾಯಮಾಡ್ತೀಯ?”

“ಬೇಕಾದರೆ ಹಾಗಂತ ಮಾತುಕೊಡ್ತೀನಿ, ವಿದ್ಯಾ! ಒಳ್ಳೇದು, ಈಗ ವಾಪಸು ನಡಿ. ಜೋರಾಗಿ ಚಳಿ ಹೊಡೀತಿದೆ.”

“ನಡಿಯಣ್ಣ, ನಿಜವಾಗಿಯೂ ತುಂಬ ಚಳಿ ಇದೆ. ಶಿಬಿರಕ್ಕೆ ಹೋದ ಮೇಲೆ ಚಹ ಮಾಡ್ತೀನಿ. ಜ್ಞಾನಬಾಬಾನೂ ಬಂದಿರಬಹುದು.”

ಲಾಹೋರ್ ಕಾಂಗ್ರೆಸಿನ ಸಮಸ್ತ ವಾತಾವರಣ ಉದ್ವಿಗ್ನತೆಯಿಂದ ತುಂಬಿತ್ತು. ಗಾಂಧಿ–ಇರ್ವಿನ್ನರ ಒಪ್ಪಂದದ ಮಾತುಕತೆ ಮುರಿದುಬಿದ್ದಿತ್ತು. ದೇಶದಲ್ಲಿ ಎಲ್ಲಿ ನೋಡಲಿ ನಿರಾಶೆ ಕ್ರೋಧಗಳ ವಾತಾವರಣವೇ. ಕಾದಬೇಕು, ಹೋರಾಡಬೇಕು, ಬೇಡದೆ ಏನೂ ಸಿಗುವುದಿಲ್ಲ. ಏನನ್ನು ತೆಗೆದುಕೊಳ್ಳುವುದಿದ್ದರೂ ಒತ್ತಾಯದಿಂದ ತೆಗೆದುಕೊಳ್ಳಬೇಕು. ಆದರೆ ಇದಕ್ಕೆಲ್ಲಾ ಅಗತ್ಯವಾದ ನೇತೃತ್ವವೆಲ್ಲಿದೆ! ಗಾಂಧೀಜಿ ಮೌನದಿಂದಿದ್ದಾರೆ, ಶಾಂತವಾಗಿದ್ದಾರೆ, ದೃಢವಾಗಿದ್ದಾರೆ, ಅಚಲರಾಗಿದ್ದಾರೆ. ನೇತೃತ್ವ ನೀಡಬಲ್ಲವರೆಂದರೆ ಗಾಂಧೀಜಿಯವರೊಬ್ಬರೇ. ಆದರೆ ಅವರು ತಮ್ಮದೇ ಷರತ್ತು ಗಳನ್ನು ಹಾಕುತ್ತಾರೆ. ಈ ಗಾಂಧೀಜಿಯ ಷರತ್ತುಗಳು ತುಂಬ ಕಠಿಣವಾದವು. ಆ ಷರತ್ತುಗಳನ್ನು ಪಾಲಿಸಲಾದೀತೆ? ಪ್ರೇಮ, ಅಹಿಂಸೆ, ತ್ಯಾಗ. ತಿರಸ್ಕಾರಮಾಡ ಬೇಡ, ಆದರೆ ಘೋರವಾಗಿ ವಿರೋಧಿಸು. ಹಿಂಸೆಗೆ ಕೈಹಚ್ಚಬೇಡ, ಅದರೆ ಸಾವು ಬದುಕಿನ ಹೋರಾಟ ನಡಸು. ಎಲ್ಲವನ್ನೂ ಬಿಟ್ಟುಬಿಡು, ಆದರೆ ನಿನ್ನ ಹಕ್ಕುಗಳನ್ನು ಬಲಾತ್ಕಾರದಿಂದ ಪಡಿ. ಈ ಷರತ್ತುಗಳನ್ನು ಪಾಲಿಸಲಾದೀತೆ? ಇಷ್ಟೇ ಅಲ್ಲ, ಹಾಗೆ ಪಾಲಿಸುವುದು ಮನುಷ್ಯಸಾಧ್ಯವೆ? ಜೈಲಿಗೆ ಹೋಗು, ಲಾಠಿಯ ಏಟು ತಿನ್ನು. ಆದರೆ ನೋವಿನಿಂದ ಅಯ್ಯೋ ಅನ್ನಬೇಡ. ಏನು, ಇದು ಸಾಧ್ಯವೆ? ಇದು ನಡೆಯಬಲ್ಲದೆ?

ಸಹಸ್ರಾರು ಜನರಿದ್ದರು—ಹೆಂಗಸರು, ಗಂಡಸರು; ಮುದುಕರು, ಯುವಕರು. ಅವರೆಲ್ಲರ ಮುಖದ ಮೇಲೂ ದೃಢತೆಯಿತ್ತು, ವಿಶ್ವಾಸವಿತ್ತು, ಸಂಕಲ್ಪವಿತ್ತು. ಏನು, ಈ ಜನ ಗಾಂಧೀಜಿ ತೋರಿಸಿದ ಪ್ರೇಮ ಅಹಿಂಸೆಗಳ ಮಾರ್ಗದಲ್ಲಿ ನಡೆಯಬಲ್ಲರೆ? ಗಾಂಧೀಜಿ ಕೇಳುತ್ತಿದ್ದರು—ಇದನ್ನೆಲ್ಲಾ ಮಾಡಬಲ್ಲಿರಾ?

ಗಾಂಧೀಜಿಯ ಈ ಪ್ರಶ್ನೆಗೆ ಉತ್ತರ ಕಾಂಗ್ರೆಸ್ಸಿನ ಅಧ್ಯಕ್ಷ ಜವಾಹರಲಾಲರಲ್ಲಿದೆ. ಇದೆಲ್ಲವೂ ಆಗುತ್ತೆ, ಆಗಲೇಬೇಕು ಎಂದು ಜವಾಹರಲಾಲ್ ಹೇಳುತ್ತಾರೆ. ಹಿಂಸೆ ಯಿಂದ ಕೆಲಸವಾಗದು, ಎಲ್ಲಿ ಹೋರಾಟ ಹಿಂಸಾತ್ಮಕವಾಗುತ್ತದೋ ಅಲ್ಲಿ ಅದಕ್ಕಿಂತ

ಹೆಚ್ಚು ಬಲವಾದ, ಹೆಚ್ಚು ಸಮರ್ಥವಾದ ಹಿಂಸೆಯೇ ವಿಜಯ ಪಡೆಯಬಲ್ಲದು. ಗಾಂಧೀಜಿಯ ಈ ಮಾತು ನೈತಿಕತೆಗೆ ಸಂಬಂಧಿಸಿದುದು, ನೀತಿಗೂ ಸಂಬಂಧಿಸಿದುದು. ಹರಿದು ಚೆಲ್ಲಾಡಿಹೋಗಿರುವ ಈ ಚರಿತ್ರಹೀನ ರಾಷ್ಟ್ರದಲ್ಲಿ ಹಿಂಸೆಯ ಸಂಘಟನೆ ಅಸಂಭವ. ಇಡೀ ಕಾಂಗ್ರೆಸ್ ಮಂಟಪದಲ್ಲಿ ನಮ್ಮಗಳ ನಡುವೆ, ಅದೆಷ್ಟು ಜನ ಬೇಹುಗಾರರು, ಗೂಢಚಾರರು ಇದ್ದಾರೆಂದು ಯಾರು ಬಲ್ಲರು? ಇವರನ್ನು ಗುರುತಿಸುವುದು ಅಶಕ್ಯ. ಇವರು ನಮ್ಮನಮ್ಮವರೇ, ನಮ್ಮ ಬಂಧುಬಳಗವೇ.

ಜವಾಹರಲಾಲರು ಹೇಳುತ್ತಾರೆ, ನಾವು ಅಹಿಂಸೆಯನ್ನು ಕೈಕೊಳ್ಳಬೇಕಾಗುತ್ತದೆ; ಕೇವಲ ನಂಬಿಕೆಯಿಂದಲ್ಲ, ಅದೊಂದು ಬದುಕಿನ ನೀತಿಯೆಂದು. ಜವಾಹರಲಾಲರು ವಾಸ್ತವಿಕತೆಯನ್ನು ಗುರುತಿಸಬಲ್ಲರು. ಅವರು ದೇಶದ ಆತ್ಮ, ಚೇತನಗಳ ಪ್ರತಿನಿಧಿ. ಅವರು ಗಾಂಧೀಜಿಯಂತೆ ದೇವರಲ್ಲ; ಕಳೆದುಹೋದ ಗತಕಾಲವನ್ನು ಪುನಃ ಸ್ಥಾಪಿಸುವುದರಲ್ಲಿ ಅವರಿಗೆ ನಂಬಿಕೆಯಿಲ್ಲ. ಅವರು ಋಷಿಮುನಿಗಳ ಪರಂಪರೆಯನ್ನು ಒಪ್ಪುವವರಲ್ಲ. ನಾಶವಾಗಿಹೋದದ್ದು ಅಸತ್ಯವೇ ಇರಬೇಕು. ಇಲ್ಲವಾದರೆ ಅದು ನಾಶವಾಗುತ್ತಿರಲಿಲ್ಲ. ಜವಾಹರಲಾಲ್ ಇಂದಿನ ಭೌತಿಕ ಯುಗದವರು. ಅವರು ಸಾಮ್ಯವಾದವನ್ನು ಅಧ್ಯಯನ ಮಾಡಿದ್ದಾರೆ. ಭವಿಷ್ಯದ ನಿರ್ಮಾಣ ಈ ಸಾಮ್ಯವಾದದ ಆಧಾರದ ಮೇಲೆಯೇ ಆಗಬೇಕು. ಆದರೆ ಜವಾಹರಲಾಲರ ಆತ್ಮ ಮಾತ್ರ ಭಾರತೀಯ ಸಂಸ್ಕೃತಿ, ಪರಂಪರೆಗಳದ್ದು. ಅವರಿಗೆ ಹಿಂಸೆಯೆಂದರೆ ಅಸಹ್ಯ; ಅಹಿಂಸೆ ಅವರ ಪಾಲಿಗೆ ಬರಿಯ ಒಂದು ಧೋರಣೆಯಲ್ಲ; ಅದು ಅವರ ಜೀವನ ವಿಶ್ವಾಸ. ಜವಾಹರಲಾಲರು ಗಾಂಧೀಜಿಗೆ ಪೂರಕ. ಆವೇಶದಿಂದ ತುಂಬಿದ ಬಿಸಿ ರಕ್ತದ ಸಕ್ರಿಯ ಯುವಜನರ ಪ್ರತಿನಿಧಿ ಅವರು. ಭಾರತ ಸ್ವಾತಂತ್ರ್ಯದ ಅಹಿಂಸಾತ್ಮಕ ಸಂಗ್ರಾಮವನ್ನು ಕಾದುವವರು ಯುವಕರೇ. ಯಾಕೆಂದರೆ ಭವಿಷ್ಯದ ಸ್ವಪ್ನವನ್ನು ಕಾಣುತ್ತಿರುವವರು ಅವರು. ಅವರಲ್ಲಿ ಆ ಸ್ವಪ್ನವನ್ನು ಸಾಕಾರಗೊಳಿಸುವ ಪ್ರವೃತ್ತಿಯಿದೆ, ಸಾಮರ್ಥ್ಯವಿದೆ.

ಆಶೆಗಳೆಲ್ಲವೂ ಮುರಿದುಬಿದ್ದಿವೆ; ಎದುರಿಗೆ ಒಂದು ಭಯಂಕರ ಕ್ಷೋಭೆ ಕಾಣಿಸಿಕೊಂಡಿದೆ. ಮುಂದೇನಾಗುವುದೆಂದು ಯಾರೂ ಅರಿಯರು. ಆದರೆ ಮುಂದೆ ಏನಾದರೂ ಆಗುವುದು ಅವಶ್ಯಕ; ಆಗೇ ತೀರಬೇಕು. ಲಾಹೋರ್ ಕಾಂಗ್ರೆಸ್ಸಿನ ಅಧಿವೇಶನ ಜನತೆಯ ಭಾವನಾತ್ಮಕ ಪ್ರದರ್ಶನ. ಮುಖಂಡರ ಬಳಿ ಯಾವ ಬೌದ್ಧಿಕ ಪರಿಹಾರವೂ ಇಲ್ಲ; ಹೋರಾಟ ಅನಿವಾರ್ಯ. ಆದರೆ ಈ ಹೋರಾಟದ ಸ್ವರೂಪ ಹೇಗಿರುತ್ತದೆ? ಈ ಹೋರಾಟಕ್ಕೆ ಯಾವ ನಿರ್ದಿಷ್ಟ ಯೋಚನೆಯೂ ಇಲ್ಲ.

ಲಾಹೋರ್ ಕಾಂಗ್ರೆಸಿನಲ್ಲಿ ಠರಾವುಗಳು ಬರುತ್ತವೆ; ಚರ್ಚೆ ನಡೆಯುತ್ತದೆ; ಭಾಷಣಗಳಾಗುತ್ತವೆ; ನಾಡಿನ ಪತ್ರಿಕೆಗಳಲ್ಲೆಲ್ಲಾ ಅದು ಪ್ರಕಟವಾಗುತ್ತದೆ. ಠರಾವು, ಭಾಷಣ, ಪ್ರಚಾರ—ಇದು ಕಾಂಗ್ರೆಸ್ಸಿಗೆ ಪರಿಪಾಟಿಯಾಗಿಬಿಟ್ಟಿದೆ. ಲಾಹೋರ್ ಕಾಂಗ್ರೆಸ್ಸಿನ ಮುಂದೆ ಯಾವ ಸ್ಪಷ್ಟ ಕಾರ್ಯಕ್ರಮವೂ ಇಲ್ಲ. ನಾಡಿನ ಕಣ್ಣು ಲಾಹೋರಿನ ಮೇಲೆ

ನೆಟ್ಟಿದೆ. ಆದರೆ ಅಲ್ಲಿ ಏನು ನಡೆದಿದೆಯೋ ಅದರಿಂದ ನಾಡಿಗೆ ಬರಿಯ ನಿರಾಶೆಯಷ್ಟೇ ಸಿಗುತ್ತಿದೆ.

ಆದರೆ ಲಾಹೋರಿನ ಆ ವಾತಾವರಣದಲ್ಲಿ ಮಾತ್ರ ನಿರಾಶೆಗೆ ಯಾವ ಸ್ಥಾನವೂ ಇಲ್ಲ. ಅಲ್ಲಿ ದೃಢವಾದ ಭಾವನೆಯಿದೆ; ಮಾಡುವ ಇಲ್ಲವೇ ಮಡಿಯುವ ಸಂಕಲ್ಪವಿದೆ. ಎಲ್ಲರೂ ಮಂಜುಗಟ್ಟಿಹೋಗುವರೇನೋ ಎನಿಸುವಂತಹ ಮೈ ನಡುಗಿಸುವ ಚಳಿ ಹೊಡೆಯುತ್ತಿದ್ದರೂ ಪ್ರತಿಯೊಬ್ಬರ ಹೃದಯದಲ್ಲಿಯೂ ಬಿಸಿ ರಕ್ತವಿದೆ; ಪ್ರತಿಯೊಬ್ಬರ ಉಸಿರಿನಲ್ಲಿಯೂ ವೇಗವಾದ ಹರಿವಿದೆ.

ನವಲ್ ಇದೆಲ್ಲವನ್ನೂ ನೋಡಿದ. ವಿದ್ಯಾ ಇದೆಲ್ಲವನ್ನೂ ನೋಡಿದಳು—ಹೊಸ ಪ್ರಪಂಚ, ಹೊಸ ವಾತಾವರಣ, ಹೊಸ ದೃಷ್ಟಿಕೋನ!

ಜ್ಞಾನಪ್ರಕಾಶ ಸ್ವಲ್ಪ ದಿನ ದಿಲ್ಲಿಯಲ್ಲಿ ಉಳಿಯಬೇಕಾಗಿ ಬಂತು; ನವಲ್ ಮತ್ತು ವಿದ್ಯಾ ದಿಲ್ಲಿಯ ಮುಖಾಂತರ ಅಲಹಾಬಾದಿಗೆ ಹಿಂದಿರುಗಿದರು. ಅವರು ಮನೆ ತಲಪಿ ನೋಡು ವಾಗ ಯಮುನಾ ಕಾಹಿಲೆಯಿಂದ ಹಾಸಿಗೆ ಹಿಡಿದಿದ್ದಳು. ಅವಳಿಗೆ ಮೊದಲು ಕೆಮ್ಮು ನೆಗಡಿಯಾಯಿತು, ಅಮೇಲೆ ಅದು ನ್ಯುಮೋನಿಯಾಕ್ಕೆ ತಿರುಗಿತು. ಕಾಹಿಲೆಯ ಸುದ್ದಿ ಕೇಳಿ ನವಲ್ ಮತ್ತು ವಿದ್ಯಾ ನೇರವಾಗಿ ಅವಳ ಕೋಣೆಗೆ ಹೋದರು. ಜ್ವರ ಸಾಕಷ್ಟು ಜೋರಾಗಿತ್ತು. ಯಮುನಾ ಸಂಕಟದಿಂದ ಕಣ್ಣುಮುಚ್ಚಿ ನರಳುತ್ತಿದ್ದಳು. ರುಕ್ಮಿಣಿ ಯಮುನಳ ಹತ್ತಿರ ಕುಳಿತಿದ್ದಳು. ಜ್ವಾಲಾಪ್ರಸಾದ ಡಾಕ್ಟರಲ್ಲಿಗೆ ಹೋಗಿದ್ದ. ರುಕ್ಮಿಣಿ ಯಮುನಳಿಗೆ ಹೇಳಿದಳು, "ಅಮ್ಮಾಜೀ, ನವಲ್ ವಿದ್ಯಾ ಲಾಹೋರಿನಿಂದ ವಾಪಸು ಬಂದಿದಾರೆ. ನೋಡಿ, ಇಲ್ಲಿ ನಿಂತಿದಾರೆ."

ರುಕ್ಮಿಣಿಯ ಧ್ವನಿ ಕೇಳಿ ಯಮುನಾ ಕಣ್ಣು ತೆರೆದಳು. ಅವಳಿಗೆ ಒಂದು ಬಗೆಯ ಶಾಂತಿ ಸಿಕ್ಕಿದೆಯೆಂಬುದು ಕಾಣುತ್ತಿತ್ತು. ವಿದ್ಯಾ, ನವಲರನ್ನು ನೋಡಿ ಅವಳು ಕ್ಷೀಣ ಸ್ವರದಲ್ಲಿ ಹೇಳಿದಳು, "ಇಬ್ಬರೂ ವಾಪಸು ಬಂದಿರಾ? ಯಾವಾಗಿನಿಂದ ನಿಮ್ಮ ದಾರಿ ಕಾಯ್ತಿದೀನಿ. ನಿಮ್ಮನ್ನ ನೋಡದೆಯೇ ಎಲ್ಲಿ ಹೋಗಬೇಕಾಗಿಬರುತ್ತೋ ಅಂತ ಒದ್ದಾಡ್ತಿದ್ದೆ."

ವಿದ್ಯಾ ಹೇಳಿದಳು, "ಇಲ್ಲ ಅಜ್ಜಿ, ನೀನು ಈಗಲೇ ಹೋಗೋಲ್ಲ. ನೀನು ಹುಷಾರಾಗ್ತಿ."

ಯಮುನಾ ಮುಖದ ಮೇಲೆ ಒಂದು ಸಪ್ಪೆನಗೆ ತಂದುಕೊಂಡು ಹೇಳಿದಳು, "ಯಾರು ಬಲ್ಲರು, ಮಗು! ಇಲ್ಲಿ ನನ್ನ ತಲೆದಸೀಲಿ ಬಂದು ಕೂತುಕೊ. ನನ್ನ ತಲೆ ಮೇಲೆ ಕೈಯಿಡು. ಹಾ, ಹಾಗೇ. ತುಂಬಾ ಹಿತವಾಗಿದೆ!" ಯಮುನಾ ಕಣ್ಣು ಮುಚ್ಚಿಕೊಂಡಳು.

ರುಕ್ಮಿಣಿ ನವಲನ ಕೈ ಹಿಡಿದುಕೊಂಡು ಕೋಣೆಯಿಂದ ಹೊರಗೆ ಬಂದಳು. "ಕೇಳಿ ದೆಯಾ, ನವಲ್? ವಿಂದೇಶ್ವರೀಪ್ರಸಾದರು ಸಿದ್ಧೇಶ್ವರೀಗೆ ಎರಡನೆ ಮದುವೆ ಮಾಡ್ತಾ

ರಂತೆ. ಜನವರಿ ಹದಿನೆಂಟಕ್ಕೆ ಲಗ್ನವಂತೆ. ಅಮ್ಮಾಜಿ ಈ ಸುದ್ದಿ ಕೇಳಿದಾಗಿನಿಂದ ಹಾಸಿಗೆ ಹಿಡಿದಿದಾರೆ." ಕೊಂಚ ತಡೆದು ರುಕ್ಮಿಣಿ ಮತ್ತೆ ಹೇಳಿದಳು, "ಮಗೂ ನವಲ್, ಇದೆಲ್ಲಾ ಏನು? ಅವರ ಜೊತೆ ಹೇಗಾದರೂ ಒಪ್ಪಂದಕ್ಕೆ ಬರೋಕ್ಕಾಗೋಲ್ವೆ?"

ಈ ಸುದ್ದಿ ಕೇಳಿ ನವಲನೂ ಖಿನ್ನನಾದ. ಕೊಂಚ ಯೋಚಿಸಿ ಅವನು ಹೇಳಿದ, "ಯಾವ ರೀತಿಯ ಒಪ್ಪಂದ, ಅಮ್ಮ! ಇದೆಲ್ಲಾ ಆಗೋದಿದ್ದರೆ ಮೊದಲೇ ಆಗ ಬೇಕಾಗಿತ್ತು. ಒಂದು ರೀತೀಲಿ ನೋಡಿದರೆ ಆಗ್ತಿರೋದೆಲ್ಲಾ ಸರಿಯಾಗೇ ಆಗ್ತಿದೆ."

"ಅಯ್ಯೋ ರಾಮ! ಇದೇನು ನೀನು ಹೇಳೋದು! ಈ ಹುಡುಗಿಯ ಮುಂದೆ ಇಡೀ ಜೀವನ ಕೂತಿದೆ! ಯಾರು ನೋಡಿಕೋತಾರೆ ಇವಳನ್ನ?"

"ಯಾರೂ ಇಲ್ಲ, ದೇವರು ನೋಡಿಕೋತಾನೆ, ಅಮ್ಮ! ತನ್ನನ್ನು ತಾನು ನೋಡಿ ಕೊಂಡು ಹೋಗೋ ಅಷ್ಟು ದೇವರು ಇವಳಿಗೆ ಶಕ್ತಿ ಕೊಡ್ತಾನೆ! ತಾತ ಎಲ್ಲಿ?"

"ಡಾಕ್ಟರನ್ನ ಕರಕೊಂಡು ಬರೋಕ್ಕೆ ಹೋಗಿದಾರೆ. ಅವರದ್ದು ಕಲ್ಲೆದೆ! ಅವರ ಮೈಮೇಲೆ ಕಷ್ಟಗಳ ಗುಡ್ಡ ಬಂದು ಬಿದ್ದಿದೆ. ಆದರೆ ಬಾಯಿ ಮುಚ್ಚಿಕೊಂಡು, ಒಂದು ಸಲ 'ಉಸ್ಸಪ್ಪ' ಅಂತ ಸಹ ಅನ್ನದೇ ತಮ್ಮ ಕರ್ತವ್ಯ ನೆರವೇರಿಸ್ತಾ ಇದಾರೆ. ಅಮ್ಮಾಜಿಯ ದೇಹಸ್ಥಿತೀಲಿ ಒಂದು ಗುಲಗಂಜಿಯಷ್ಟು ಸಹ ಗುಣ ಕಂಡುಬಂದಿಲ್ಲ. ಐದಾರು ದಿನದಿಂದ ಕಣ್ಣಿರೆಪ್ಪೆ ಮುಚ್ಚಿಲ್ಲ. ಹೋಗು, ಭೀಖೂಗೆ ಹೇಳಿ ನೀರು ಬಿಸಿ ಮಾಡಿಸಿಕೊಂಡು ಸ್ನಾನ ಮಡಿ ಮುಗಿಸು. ಸುಸ್ತಾಗಿ ಬಂದಿದಿ.!"

ರುಕ್ಮಿಣಿ ಯಮುನಳ ಹತ್ತಿರಕ್ಕೆ ಹಿಂದಿರುಗಿದಳು. ವಿದ್ಯಾ ಅಜ್ಜಿಯ ಹಣೆಯ ಮೇಲೆ ಕೈಯಿಟ್ಟು ತೆಪ್ಪಗೆ ಕುಳಿತಿದ್ದಳು. ಯಮುನಾ ಕಣ್ಣುಮುಚ್ಚಿ ನಿದ್ರೆಬಂದಿದೆಯೋ ಎಂಬಂತೆ ಮಲಗಿದ್ದಳು. "ನಾನು ಕೂತಿರ್ತೀನಿ, ನೀನು ಹೋಗಿ ಸ್ನಾನ-ಮಡಿ ಮುಗಿಸಿ ಬಾ."

ಯಮುನಾ ಕಣ್ಣು ತೆರೆದಳು, "ಇಲ್ಲ, ನಮ್ಮ ಮಗು ಇನ್ನೊಂದು ಸ್ವಲ್ಪ ಹೊತ್ತು ನನ್ನ ಹತ್ತಿರ ಕೂತಿರಲಿ, ಬಿಡು." ಯಮುನಳ ಕಣ್ಣಿನಲ್ಲಿ ನೀರು ತುಂಬಿದ್ದುದನ್ನು ರುಕ್ಮಿಣಿ ನೋಡಿದಳು. ಯಮುನಾ ಹೇಳಿದಳು, "ನಾವುಗಳು ನಿನಗೆ ತುಂಬಾ ಅನ್ಯಾಯ ಮಾಡಿದೀವಿ, ಮಗೂ. ನನ್ನನ್ನ ಕ್ಷಮಿಸು. ಇಲ್ಲದೆ ಹೋದರೆ ನಾನು ಶಾಂತೀಲಿ ಸಾಯೋಕ್ಕಾಗೋಲ್ಲ. ನನ್ನಿಂದ ನಿನಗೆ ತುಂಬಾ ಅಪರಾಧವಾಗಿದೆ. ಕ್ಷಮಿಸಿ ದೀನಿ ಅಂತ ಅಂದುಬಿಡು."

ವಿದ್ಯಾ ಆಶ್ಚರ್ಯದಿಂದ ತಾಯಿಯ ಕಡೆ ನೋಡಿದಳು, "ಏನು ವಿಷಯ, ಅಮ್ಮ. ಅಜ್ಜಿ ಇದೆಲ್ಲಾ ಏನು ಹೇಳ್ತಿದಾಳೆ."

ರುಕ್ಮಿಣಿ ತಲೆ ತಗ್ಗಿಸಿ ಹೇಳಿದಳು, "ಸಿದ್ಧೇಶ್ವರೀ ಇನ್ನೊಂದು ಮದುವೆ ಮಾಡಿಕೋ ತಿದಾನೆ! ಜನವರಿ ಇಪ್ಪತ್ತೆಂಟಕ್ಕೆ ಲಗ್ನ ಗೊತ್ತಾಗಿದೆ."

ವಿದ್ಯಳ ಮುಖದ ಮೇಲೆ ಒಂದು ನಗೆ ಮೂಡಿತು. "ಹೌದೇ ಅಮ್ಮ. ಹಾಗಾದರೆ ನನ್ನ ಬಂಧನ ಹರೀತು, ನನಗೆ ಮುಕ್ತಿ ಸಿಕ್ಕಿತು," ಎನ್ನುತ್ತ ವಿದ್ಯಾ ಅಜ್ಜಿಯ ಕೈಯನ್ನು

ತನ್ನ ಕೈಗಳಲ್ಲಿ ತೆಗೆದುಕೊಂಡಳು. "ಅಜ್ಜಿ, ಇದು ಒಳ್ಳೆಯ ಸುದ್ದಿ. ನನಗೆ ಮುಕ್ತಿ ಸಿಕ್ಕಿತು. ನನ್ನ ಬಂಧನ ಹರೀತು. ದೇವರಿಗೆ ಎಷ್ಟು ಋಣಿಯಾಗಿದ್ದರೂ ಸಾಲದು! ಇದರಲ್ಲಿ ದುಃಖ ಪಡೋಕ್ಕೆ ಏನಿದೆ, ಅಜ್ಜಿ!"

ಯಮುನಾ ಕರುಣೆಯ ಧ್ವನಿಯಲ್ಲಿ ಹೇಳಿದಳು, "ನಿನಗೆ ಅರ್ಥವಾಗೋಲ್ಲ, ಮಗು. ಕನಿಷ್ಠ ಈಗಂತೂ ಅರ್ಥವಾಗೋಲ್ಲ. ಅಯ್ಯೋ ದೇವರೇ, ಏನೆಲ್ಲಾ ಆಗಿಹೋಯ್ತು!"

"ಹೊಸದೇನೂ ಆಗಿಲ್ಲ, ಅಜ್ಜಿ. ಇದೆಲ್ಲಾ ಜಗತ್ತಿನಲ್ಲಿ ನಡೀತಾನೇ ಇರುತ್ತೆ. ಇದರಲ್ಲಿ ಯಾರದ್ದೂ ಏನೂ ತಪ್ಪಿಲ್ಲ. ಇದೆಲ್ಲಾ ದೇವರ ಲೀಲೆ! ಈ ಸುದ್ದಿ ಕೇಳಿ ನನಗೆ ಇವತ್ತು ಸಂತೋಷವಾಯಿತು!"

ಯಮುನಾ ಗೋಳಿಟ್ಟಳು, "ಮಗೂ, ಕ್ಷಮಿಸಿದೀನಿ ಅಂತ ಒಂದು ಸಲ ಬಾಯಿ ಬಿಟ್ಟು ಹೇಳಿಬಿಡು."

"ಅಮ್ಮಾಜಿಗೆ ಅದರಿಂದ ಶಾಂತಿ ಸಿಗೋದಾದರೆ, ಯಾಕೆ ಹೇಳಿಬಿಡಬಾರದು, ವಿದ್ಯಾ?"

ವಿದ್ಯಾ ಅಜ್ಜಿಯ ಕೈಯೆತ್ತಿಹಿಡಿದುಕೊಂಡಳು. "ಅಜ್ಜೀ, ನೀವುಗಳು ಮಾಡಿದ್ದೆಲ್ಲಾ ನನ್ನ ಒಳ್ಳೆಯದಕ್ಕೇ ಮಾಡಿದಿರಿ. ನನಗೋಸ್ಕರ ಸ್ವತಃ ನೀವು ಹಾಳಾಗೋದನ್ನೂ ಲೆಕ್ಕಿಸಲಿಲ್ಲ—ಈ ಮಾತಿಗೆ ದೇವರು ಸಾಕ್ಷಿ. ಆದರಿಂದ ನೀವು ತಿಳಿಯದೆ ನನಗೇನಾದರೂ ಅಹಿತ ಮಾಡಿದ್ದರೆ ನಾನು ನಿಮ್ಮನ್ನ ಕ್ಷಮಿಸಿದೀನಿ. ದೇವರಲ್ಲಿ ನನ್ನದು ಒಂದೇ ಪ್ರಾರ್ಥನೆ: ನಿಮಗೆ ಬೇಗ ಗುಣವಾಗಲಿ, ಅಜ್ಜಿ."

ಯಮುನಾ ಭಾವಾವೇಶದಿಂದ ಬಿಕ್ಕುತ್ತಿದ್ದುದು ನಿಂತಿತು. ಅವಳು ಮೂರ್ಛೆ ಹೋದಳು. ಹೋದ ಪ್ರಜ್ಞೆ ಮತ್ತೆ ಬರಲಿಲ್ಲ.

ಜ್ಞಾನಪ್ರಕಾಶ ದಿಲ್ಲಿಯಿಂದ ಬೊಂಬಾಯಿಗೆ ಹೋಗಿದ್ದ. ಬೊಂಬಾಯಿಯಿಂದ ಅಲಹಾಬಾದ್ ತಲಪಿದಾಗ ರಾತ್ರಿ ತುಂಬ ಹೊತ್ತಾಗಿತ್ತು. ನವಲ್ ಕೋಣೆಯಲ್ಲಿ ಕುಳಿತು ಓದುತ್ತಿದ್ದನು. ಜ್ಞಾನಪ್ರಕಾಶನ ಟಾಂಗದ ಸದ್ದು ಕೇಳಿ ಹೊರಬಂದ. ಟಾಂಗಾದವನಿಂದ ಸಾಮಾನು ಇಳಿಸಿ, ವರಾಂಡದಲ್ಲಿಡಿಸಿ, ಅವನನ್ನು ಕಳಿಸಿದ ಮೇಲೆ ಜ್ಞಾನಪ್ರಕಾಶ ಕೇಳಿದ, "ಮನೆ ಹೀಗೇಕೆ ನಿಶ್ಶಬ್ದವಾಗಿದೆ, ನವಲ್. ನೀನೇಕೆ ಇಷ್ಟು ಪೆಚ್ಚಾಗಿದಿ?"

ನವಲ್ ಮೆಲುದನಿಯಲ್ಲಿ ಹೇಳಿದ, "ಜ್ಞಾನಬಾಬಾ, ಅಜ್ಜಿ ಹೋಗಿಬಿಟ್ಟಳು. ಇವತ್ತಿಗೆ ಎಂಟು ದಿನವಾಯಿತು."

"ಏನಂದೆ? ಅತ್ತಿಗೆ ಹೋಗಿಬಿಟ್ಟರೆ? ಏನಾಗಿತ್ತು ಅವರಿಗೆ?"

"ನಾವು ಲಾಹೋರಿಗೆ ಹೋದ ಮೇಲೆ ಅವಳಿಗೆ ನ್ಯುಮೋನಿಯಾ ಆಯ್ತಂತೆ. ಅವಳು ನಮ್ಮ ದಾರೀನೆ ಕಾಯ್ತಿದ್ದಹಾಗಿತ್ತು. ನಾವು ವಾಪಸು ಬಂದ ರಾತ್ರಿಯೇ ಅವಳು ತೀರಿಕೊಂಡಳು."

ಜ್ಞಾನಪ್ರಕಾಶ ಸಾಮಾನನ್ನು ತನ್ನ ಕೋಣೆಯಲ್ಲಿ ಇಡಿಸಿ, ನವಲನ ಜೊತೆ ಜ್ವಾಲಾ ಪ್ರಸಾದನ ಕೋಣೆಗೆ ಹೋದ. ಜ್ವಾಲಾಪ್ರಸಾದ ನೆಲದ ಮೇಲೆ ಕಂಬಳಿ ಹೊದ್ದು ಮಲಗಿದ್ದ. ಇನ್ನೂ ಹತ್ತನೆಯ ದಿನ ಮುಗಿದಿರಲಿಲ್ಲ. ಜ್ವಾಲಾಪ್ರಸಾದನಿಗೆ ನಿದ್ರೆ ಬಂದಿತ್ತು. ಆದರೆ ಅದು ಗಾಢವಾದ ನಿದ್ರೆಯಲ್ಲ. ಜ್ಞಾನಪ್ರಕಾಶ ನವಲರ ಹೆಜ್ಜೆಯ ಸಪ್ಪಳಕ್ಕೆ ಅವನ ನಿದ್ರೆ ಹರಿಯಿತು. ಜ್ಞಾನಪ್ರಕಾಶನ ಮುಖ ಕಂಡವನೇ ಅವನಂದ, "ಜ್ಞಾನೂ, ನೀನು ಬರೋದು ತುಂಬಾ ತಡಮಾಡಿಬಿಟ್ಟೆ. ನಿಮ್ಮ ಅತ್ತಿಗೆ ಹೋಗಿ ಬಿಟ್ಟಳು. ಇದನ್ನೆಲ್ಲಾ ಅವಳಿಂದ ಸಹಿಸೋಕ್ಕೆ ಆಗಲಿಲ್ಲ. ಅವಳಿಗೆ ಎಷ್ಟು ಹೇಳಿದೆ, ಎಷ್ಟು ಧೈರ್ಯ ಕೊಟ್ಟೆ. ಆದರೂ ಸೋತುಹೋದಳು."

ಜ್ಞಾನಪ್ರಕಾಶ ನೆಲದಮೇಲೆ ಸ್ವಲ್ಪ ದೂರ ಸರಿದು ಕುಳಿತುಕೊಂಡ—ಮೌನ! ಮಾತಾಡಲು ಅವನಲ್ಲಿ ಪದವೇ ಇರಲಿಲ್ಲ.

ಜ್ವಾಲಾಪ್ರಸಾದ ಹೇಳಿದ, "ಸಿದ್ಧೇಶ್ವರೀಗೆ ಎರಡನೆ ಮದುವೆಯಾಗುತ್ತೆ ಅಂತ ಸುದ್ದಿ ಬಂದಿತ್ತು. ಅದರಿಂದ ಅವಳ ಎದೆ ಒಡೀತು. ಅವತ್ತು ಮಲಗಿದವಳು ಮತ್ತೆ ಏಳಲೇ ಇಲ್ಲ," ಜ್ವಾಲಾಪ್ರಸಾದನ ಗಂಟಲು ಕಟ್ಟಿತು.

ಸ್ವಲ್ಪ ಹೊತ್ತು ಸುಮ್ಮನಿದ್ದು ಜ್ಞಾನಪ್ರಕಾಶ ಹೇಳಿದ, "ಧೈರ್ಯತಂದುಕೋ ಅಣ್ಣ! ನೀನೇ ಧೈರ್ಯ ಕಳೆದುಕೊಂಡರೆ ಹೇಗೆ?"

ಜ್ವಾಲಾಪ್ರಸಾದ ತನ್ನೊಳಗಿನ ಅಳುವನ್ನು ಬಲಾತ್ಕಾರವಾಗಿ ಅದುಮಿ ಹಿಡಿದು ಹೇಳಿದ, "ಗೊತ್ತಿದೆ ಜ್ಞಾನೂ, ಎಲ್ಲಾ ಗೊತ್ತಿದೆ. ಧೈರ್ಯ ತಂದುಕೊಳ್ಳಲೇಬೇಕು. ಆದರೆ ಒಂದು ಜೀವಮಾನದ ನಂಟು ಕಳಚಿಬಿತ್ತು. ದೇವರು ಅವಳಿಗೆ ಶಾಂತಿ ಕೊಡಲಿ!"

ನವಲ್ ತಾತನ ಕಡೆ ನೋಡಿದ. ಅವನ ಆ ಮಾತಿನಲ್ಲಿ ಎಂಥ ಆಳವಾದ ವೇದನೆ ಯಿತ್ತು! ಅರವತ್ತಾರು ವರ್ಷದ ಮುದುಕ, ಮುಖ ನೆರಿಗೆಗಳಿಂದ ತುಂಬಿತ್ತು... ಆ ವ್ಯಕ್ತಿ ಅದೆಷ್ಟು ಏರಿಳಿತಗಳನ್ನು ನೋಡಿದ್ದನೋ!

ಜ್ವಾಲಾಪ್ರಸಾದ ಮಾತು ಮುಂದುವರಿಸಿದ, "ಜ್ಞಾನೂ, ಮನೆ ಹಾಳಾಗ್ತಿರೋ ದನ್ನ ಅವಳು ನೋಡಿದಳು, ಮುರಿದುಬಿದ್ದಳು. ಹೊಸದನ್ನ ಕಟ್ಟೋದು ಹಾಳಿನ ಮೇಲೆಯೇ ಅನ್ನೋದನ್ನ ಅವಳಿಗೆ ಅರ್ಥಮಾಡಿಕೊಳ್ಳೋಕೆ ಆಗಲಿಲ್ಲ." ಇದ್ದಕ್ಕಿದ್ದ ಹಾಗೆ ಪ್ರಜ್ಞೆ ಬಂದವನಂತೆ ಜ್ವಾಲಾಪ್ರಸಾದ ಹೇಳಿದ, "ಸ್ಟೇಷನ್ನಿಂದ ನೇರವಾಗಿ ಬಂದಿರೋ ಹಾಗಿದೆ. ಹೋಗಿ ಕೈಕಾಲುಮುಖ ತೊಳಕೊ, ಬಟ್ಟೆ ಬದಲಾಯಿಸು. ನವಲ್, ಜ್ಞಾನೂಗೆ ಊಟ-ಗೀಟ ಮಿಕ್ಕಿದೆಯೆ? ಇಲ್ಲದೆ ಹೋದರೆ ನಿಮ್ಮಮ್ಮನ್ನ ಎಬ್ಬಿಸಿ ಏನಾದರೂ ಮಾಡು ಅನ್ನು."

"ವಿದ್ಯಾ ಪೂರಿ ಮಾಡ್ತಿದಾಳೆ, ತಾತ. ನೀವು ಈಗ ಮಲಕ್ಕೊಳ್ಳಿ," ನವಲ್ ಏಳುತ್ತ ಹೇಳಿದ. "ನಡೀರಿ, ಜ್ಞಾನಬಾಬಾ. ನೀರು ಬಿಸಿಯಾಗಿರಬೇಕು. ಮನಸ್ಸು ಬಂದರೆ ಸ್ನಾನಾನೇ ಮಾಡಿಬಿಡಿ. ಅಷ್ಟುಹೊತ್ತಿಗೆ ಅಡಿಗೆಯಾಗಿರುತ್ತೆ."

ಬೆಳಗ್ಗೆ ಜ್ಞಾನಪ್ರಕಾಶ ನಿದ್ರೆಯಿಂದ ಎದ್ದಾಗ ಜ್ವಾಲಾಪ್ರಸಾದ ಮನೆಯವರನ್ನೆಲ್ಲಾ ಕರೆದು ಕೊಂಡು ಗಂಗಾಸ್ನಾನಕ್ಕೆ ಹೊರಟಿದ್ದ. ಅವತ್ತು ಪುಣ್ಯಾವರ್ಜನೆಯ ದಿನ. ಜ್ಞಾನ ಪ್ರಕಾಶನೂ ಅವರೊಂದಿಗೆ ಗಂಗಾಸ್ನಾನ ಮಾಡಿಬರಲು ಹೊರಟ. ಎಲ್ಲರೂ ಮಧ್ಯಾಹ್ನ ತ್ರಿವೇಣಿಯಿಂದ ವಾಪಸು ಬಂದರು.

ಸಂಜೆ ಜ್ವಾಲಾಪ್ರಸಾದ ಗಾಳಿಸವಾರಿ ಮಾಡಿಬರಲು ಹೊರಟ. ಸವಲ್, ಜ್ಞಾನ ಪ್ರಕಾಶರು ಚಹ ಕುಡಿಯುತ್ತ ಕುಳಿತಿದ್ದರು. ವಿದ್ಯಳೂ ಅಲ್ಲಿಯೇ ಇದ್ದಳು. ಚಹ ಕುಡಿಯುತ್ತ ಜ್ಞಾನಪ್ರಕಾಶ ವಿದ್ಯಳ ಕಡೆ ನೋಡಿದ. ಅವಳು ತೆಪ್ಪಗೆ ಕುಳಿತಿದ್ದಳು. ಜ್ಞಾನಪ್ರಕಾಶ ನಕ್ಕ, "ವಿದ್ಯಾ, ಮುಂದೆ ನಿನ್ನದೇನು ಕಾರ್ಯಕ್ರಮ? ನಿನಗೆ ಬಿಡು ಗಡೆಯಂತೂ ಸಿಕ್ಕಿತು."

ವಿದ್ಯಳ ಮುಖ ಕಳೆಗೊಂಡಿತು. "ನಿಜವೇ ಬಾಬಾ? ನನಗೆ ಬಿಡುಗಡೆ ಸಿಕ್ಕಿತು ಅಂತ ನೀವೂ ತಿಳೀತೀರಾ?"

"ಹೌದು, ವಿದ್ಯಾ. ನಿನಗೆ ಬಿಡುಗಡೆ ಸಿಕ್ಕಿದೆ. ಕನಿಷ್ಠ ಆ ಪಿಶಾಚಿಗಳಿಂದಂತೂ ಬಿಡುಗಡೆ ಸಿಕ್ಕಿದೆ. ಈ ಬಿಡುಗಡೆಯಿಂದ ನಿನಗೆ ಸಂತೋಷವಾಗಬೇಕು. ಆದರೆ ನೀನು ಪೆಚ್ಚಾಗಿದಿ. ಇದು ಸರಿಯಲ್ಲ."

"ಏನು ಹೇಳಲಿ, ಜ್ಞಾನಬಾಬಾ. ನನ್ನಿಂದಾಗಿ ಅಜ್ಜಿ ತೀರಿಕೊಂಡಳು," ವಿದ್ಯಾ ಅಳುತ್ತ ಹೇಳಿದಳು.

ಜ್ಞಾನಪ್ರಕಾಶ ನಕ್ಕ, "ಯಾರೂ ಯಾರಿಂದಾಗಿಯೂ ಹೋಗೋಲ್ಲ, ವಿದ್ಯಾ. ಅವರಿಗೆ ಹೋಗಬೇಕಾಗಿ ಬಂದಿರುತ್ತೆ ಅಂತ ಹೋಗ್ತಾರೆ. ನಿಮ್ಮ ತಾತನೂ ಹೋಗ್ತಾರೆ, ನಾನೂ ಹೋಗ್ತೀನಿ, ಒಂದು ದಿನ ನೀನೂ ಹೋಗ್ತಿ. ಆದದ್ದನ್ನ ತಡೆಯೋಕ್ಕೆ ಆಗ್ತಿರ ಲಿಲ್ಲ; ಆಗೋದನ್ನೂ ತಡೆಯೋಕ್ಕೆ ಆಗೋಲ್ಲ. ಈಗ ಹೇಳು, ನೀನು ಏನು ಮಾಡಬೇಕೂ ಅಂತಿದಿ? ಕಾಂಗ್ರೆಸಿನ ಕೆಲಸ ಮಾಡ್ತೀಯಾ? ಬೊಂಬಾಯಿಂದ ಬರೋವಾಗ ಇದನ್ನೇ ಯೋಚಿಸ್ತಿದ್ದೆ. ಎಷ್ಟೊಂದು ಜನ ಹೆಂಗಸರು ಈ ಆಂಧೋಳನದಲ್ಲಿ ಭಾಗ ವಹಿಸೋಕ್ಕೆ ಮುಂದೆ ಬಂದಿದಾರೆ ಅನ್ನೋದನ್ನ ನೀನು ಲಾಹೋರಿನಲ್ಲಿ ನೋಡಿದೆ."

ವಿದ್ಯಾ ಸ್ವಲ್ಪ ಯೋಚಿಸಿದಳು. ಆಮೇಲೆ ತಲೆ ಅಲ್ಲಾಡಿಸುತ್ತ "ಇಲ್ಲ, ಬಾಬಾ, ಇದೆಲ್ಲಾ ನನ್ನಿಂದ ಆಗೋದಿಲ್ಲ."

"ಇದೆಲ್ಲಾ ನಿನ್ನಿಂದ ಆಗೋಲ್ಲ! ಹಾಗಂದರೆ ಹೇಗೆ? ನೀನು ಈ ಭಯಾನ ಬಿಡಲೇಬೇಕು."

ವಿದ್ಯಾ ಕೊಂಚ ಸಂಕೋಚದಿಂದ ಉತ್ತರ ಕೊಟ್ಟಳು, "ಬಾಬಾ, ನನಗೆ ಗಂಡಸರ ಮಧ್ಯೆ ಕೂತು ಕೆಲಸ ಮಾಡೋಕ್ಕಾಗೋಲ್ಲ. ಗಂಡಸರನ್ನ ಕಂಡರೆ ನನಗೆ ನಾಚಿಕೆ ಇಲ್ಲವೇ ಹೆದರಿಕೆ ಅಂತೇನಲ್ಲ. ನಿಜಸ್ಥಿತಿ ಅಂದರೆ ನನ್ನನ್ನ ಕಂಡರೆ ನನಗೇ ಭಯವಾಗುತ್ತೆ. ತುಂಬ

ಕಠೋರವಾದ ಜೀವನವನ್ನ ಕೈಗೊಂಡಿದೀನಿ!" ವಿದ್ಯಳ ಮಾತಿನಲ್ಲಿ ಮಿತಿಮೀರಿದ ಕರುಣೆ ತುಂಬಿತ್ತು.

ಜ್ಞಾನಪ್ರಕಾಶನ ಎದೆಯಲ್ಲಿ ಮುಳ್ಳು ಮುರಿದಂತಾಯಿತು. ಅವನು ಮತ್ತೆ ವಿದ್ಯಳ ಕಡೆ ನೋಡಿದ. ಶಾಂತ, ಸೌಮ್ಯ ಹಾಗೂ ಸಾತ್ವಿಕತೆಯಿಂದ ಕೂಡಿದ ಅಸೀಮ ಸೌಂದರ್ಯ! ಅದೆಂತಹ ವಿಧಿಯ ವಿಡಂಬನೆ! ಅವಳು ಬಲವಂತವಾಗಿ ವೈವಿಧ್ಯ ವನ್ನು ತನ್ನದಾಗಿಸಿಕೊಳ್ಳಬೇಕಾಗಿದೆ. ಜ್ಞಾನಪ್ರಕಾಶ ಹೇಳಿದ, "ನೀನು ಹೇಳೋದು ಸರಿ, ಮಗು. ಇಲ್ಲಿ ಪಟ್ಟಣದಲ್ಲಿ 'ನಾರೀ ಶಿಕ್ಷಣ ಸದನ' ಅನ್ನೋ ಹೆಸರಿನ ಒಂದು ಸ್ಕೂಲಿದೆ. ನಾನು ಅದರ ಮ್ಯಾನೇಜಿಂಗ್ ಕಮಿಟಿಯ ಮೆಂಬರಾಗಿದೀನಿ. ಒಬ್ಬ ಮೇಡಮ್ ರಾಜೀನಾಮೆ ಕೊಟ್ಟಿದಾಳೆ. ಮಾರ್ಚ್ ಒಂದರಿಂದ ಆ ಜಾಗ ಖಾಲಿಯಾಗುತ್ತೆ. ಒಂದು ಅರ್ಜಿ ಬರೆದು ಕೊಡು. ಆ ಕೆಲಸಾನಾದರೂ ಮಾಡೋಕ್ಕಾಗುತ್ತಲ್ಲವೆ?"

"ಹ್ಞೂ, ಬಾಬಾ, ಅದನ್ನ ಮಾಡ್ತೀನಿ. ಆದಷ್ಟು ಬೇಗ ನನ್ನನ್ನ ಅಲ್ಲಿ ಸೇರಿಸಿಬಿಡಿ. ಬಾಬಾ, ಒಂದೊಂದು ಸಲ ಹೊತ್ತು ಕಳೆಯೋದು ಬಹಳ ಕಷ್ಟವಾಗುತ್ತೆ. ಆ ಕೆಲಸ ದಲ್ಲಾದರೆ ಮನಸ್ಸು ತೊಡಗಿಸಿಕೊಂಡಿರಬಹುದು."

ಜನವರಿ ಇಪ್ಪತ್ತಾರರಂದು ಇಡೀ ದೇಶದಲ್ಲೆಲ್ಲಾ 'ಸ್ವಾತಂತ್ರ್ಯ ದಿವಸ'ವನ್ನು ಆಚರಿಸು ವುದೆಂದಾಗಿತ್ತು. ಇದುವರೆಗೆ ಕಾಂಗ್ರೆಸ್ ಬೇಡುತ್ತಿದ್ದದ್ದು ಡೊಮಿನಿಯನ್ ಸ್ಟೇಟಸ್ ಸ್ವರಾಜ್ಯವನ್ನು; ಆದರೆ ಈಗ ಪರಿಸ್ಥಿತಿ ಬದಲಾಗಿತ್ತು. ಸ್ವರಾಜ್ಯಕ್ಕೆ ಹೋರಾಡಲೇ ಬೇಕಾಗಿರುವಾಗ ಸಂಪೂರ್ಣ ಸ್ವರಾಜ್ಯಕ್ಕೇ ಹೋರಾಡಬಾರದೇಕೆ? ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ಮೊದಲಬಾರಿಗೆ ಸ್ವಾತಂತ್ರ್ಯದ ಠರಾವು ಪಾಸಾಗಿತ್ತು. ಈ ಠರಾವನ್ನು ಕಾರ್ಯಗತಗೊಳಿಸುವ ಸಂಕಲ್ಪ ಕೈಗೊಂಡದ್ದು ಲಾಹೋರ್ ಕಾಂಗ್ರೆಸ್ಸಿನಲ್ಲಿ. ಸ್ವಾತಂತ್ರ್ಯದ ಘೋಷಣಾಪತ್ರ ಸಿದ್ಧವಾಯಿತು. ಜನವರಿ ಇಪ್ಪತ್ತಾರರಂದು ದೇಶದ ಮೂಲೆಮೂಲೆ ಗಳಲ್ಲಿ ಪ್ರತಿಯೊಬ್ಬರೂ ಸ್ವಾತಂತ್ರ್ಯವ್ರತವನ್ನು ಧಾರಣೆ ಮಾಡಬೇಕಾಗಿತ್ತು. ಜ್ಞಾನ ಪ್ರಕಾಶ ಠರಾವನ್ನು ಹಂಚುವ ಹಾಗೂ ಸ್ವಾತಂತ್ರ್ಯದಿನಾಚರಣೆಯನ್ನು ಸಂಘಟಿಸುವ ಗಡಿಬಿಡಿಯಲ್ಲಿದ್ದ. ನವಲನಿಗೂ ಈ ಕೆಲಸದಲ್ಲಿ ಜ್ಞಾನಪ್ರಕಾಶನಿಗೆ ನೆರವಾಗುವುದು ಮೋಜೆನಿಸಿತ್ತು.

ಯಮುನಳ ಹದಿಮೂರನೆಯ ದಿನದ ಕ್ರಿಯೆ ಮುಗಿಸಿ ಜ್ವಾಲಾಪ್ರಸಾದ ಗೀತಾ ಧ್ಯಯನಕ್ಕೆ ಪ್ರಾರಂಭಮಾಡಿದ. ಆ ಅಧ್ಯಯನದಲ್ಲಿ ವಿದ್ಯಾ ಅವನಿಗೆ ಜೊತೆಕೊಡು ತ್ತಿದ್ದಳು. ನವಲನಿಗಾದರೋ ಇಡೀ ದಿನ ಹೊರಗಡೆ ಕಳೆದುಹೋಗುತ್ತಿತ್ತು. ಹಗಲು ವಿಶ್ವವಿದ್ಯಾಲಯಕ್ಕೆ ಹೋಗುತ್ತಿದ್ದ. ಉಳಿದ ಸಮಯವನ್ನು ಕಾಂಗ್ರೆಸ್ ಕಮಿಟಿಯ ಕಚೇರಿಯಲ್ಲಿ ಕಳೆಯುತ್ತಿದ್ದ. ಹುಡುಗರು ಸ್ಕೂಲಿಗೆ ಹೋಗುತ್ತಿದ್ದರು. ರುಕ್ಮಿಣಿ ಮನೆ ನೋಡಿಕೊಳ್ಳುತ್ತಿದ್ದಳು.

ಅವತ್ತು ಸಂಜೆ ಜ್ವಾಲಾಪ್ರಸಾದ ಡ್ರಾಯಿಂಗ್ ರೂಮಿನಲ್ಲಿ ಕುಳಿತು ವಿದ್ಯಾ ಓದಿ ಹೇಳುತ್ತಿದ್ದ ಗೀತಾಪಾಠವನ್ನು ಕೇಳುತ್ತಿದ್ದಾಗ ಮನೆಯ ಮುಂದೆ ಒಂದು ಟಾಂಗಾ ಬಂದು ನಿಂತಿತು. "ಯಾರು ಬಂದಿದಾರೆ, ನೋಡು ಮಗೂ," ಜ್ವಾಲಾಪ್ರಸಾದ ಹೇಳಿದ.

ವಿದ್ಯಾ ವರಾಂಡಕ್ಕೆ ಬಂದು ನೋಡಿದಾಗ ವಿಂದೇಶ್ವರೀಪ್ರಸಾದರು ಟಾಂಗಾದಿಂದ ಇಳಿದು ಮೆಟ್ಟಲು ಹತ್ತಿ ಬರುತ್ತಿದ್ದರು. ವಿದ್ಯಾ ಶಾಂತಳಾಗಿ ಹೇಳಿದಳು, "ತಾತ, ಡ್ರಾಯಿಂಗ್ ರೂಮಿನಲ್ಲಿದ್ದಾರೆ, ಬನ್ನಿ!"

ವಿಂದೇಶ್ವರೀಪ್ರಸಾದರು ವಿದ್ಯಳ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಮುಖ ಬಿಗಿದುಕೊಂಡು ಡ್ರಾಯಿಂಗ್ ರೂಮಿನೊಳಗೆ ಬಂದರು.

"ಬನ್ನಿ, ಕೂತುಕೊಳ್ಳಿ," ಜ್ವಾಲಾಪ್ರಸಾದ ಎದ್ದು ವಿಂದೇಶ್ವರೀಪ್ರಸಾದರನ್ನು ಬರಮಾಡಿಕೊಂಡ.

ವಿಂದೇಶ್ವರೀ ಮೌನವಾಗಿ ಕುರ್ಚಿಯಮೇಲೆ ಕುಳಿತುಕೊಂಡರು. "ಮಗೂ, ಭೀಖೂಗೆ ಹೇಳು, ಚಹಾ ಮಾಡಿ ತಾ ಅಂತ," ಜ್ವಾಲಾಪ್ರಸಾದ ವಿದ್ಯಳಿಗೆ ಹೇಳಿದ.

ಈಗ ವಿಂದೇಶ್ವರಿಯ ಮುಖ ಸಡಿಲಿತು, "ಬೇಡ, ತಿಂಡಿ-ಚಹ ಮುಗಿಸಿಕೊಂಡೇ ಬಂದಿದೀನಿ. ನಿಮ್ಮ ಜೊತೆ ಸ್ವಲ್ಪ ಸ್ವಂತದ ವಿಷಯ ಮಾತಾಡೋದಿತ್ತು. ಅಂತಲೇ ಬಂದೆ. ಇವಳನ್ನ ಸ್ವಲ್ಪ ಒಳಕ್ಕೆ ಕಳಿಸಿ."

ವಿದ್ಯಾ ಎದ್ದು ನಿಂತಳು. ಆಮೇಲೆ ಏನೋ ಯೋಚಿಸಿ ನಿಂತಳು. "ಇವರು ಮಾತನಾಡಬೇಕಾಗಿರೋದು ನನ್ನ ಸಂಬಂಧವಾಗಿ. ಆದ್ದರಿಂದ ಇಲ್ಲಿ ನಾನು ಇರೋದು ತುಂಬ ಅವಶ್ಯಕ. ಏನು ಹೇಳೋಕ್ಕೆ ಬಂದಿದಾರೆ ಅಂತ ನಾನೂ ಸ್ವಲ್ಪ ಕೇಳ್ತೀನಿ."

ವಿಂದೇಶ್ವರೀಪ್ರಸಾದರ ಧ್ವನಿ ಬಿರುಸಾಯಿತು, "ನಿನಗೂ ನಮಗೂ ಸಂಬಂಧವಿಲ್ಲ. ನಾನೂ ಬಾಬೂ ಜ್ವಾಲಾಪ್ರಸಾದರ ಜೊತೆ ಮಾತಾಡಬೇಕಾಗಿದೆ. ನನಗೆ ನಿನ್ನ ಮುಖ ನೋಡೋಕ್ಕೆ ಇಷ್ಟವಿಲ್ಲ."

ವಿದ್ಯಾ ಗರ್ಜಿಸಿದಳು, "ನನ್ನ ಮೇಲೆ ಏನು ವಿಷ ಕಾರೋದಿದ್ದರೂ, ನನ್ನ ಮುಂದೆ ಕಾರಿಬಿಡು. ನಾನು ಆ ವಿಷಾನ ಕುಡಕೋತೀನಿ. ಆದರೆ ಆ ವಿಷದಿಂದ ಉಳಿದೋರನ್ನ ಸಾಯಿಸಬೇಡ. ಈಗಾಗಲೇ ನಿಮ್ಮಗಳ ವಿಷಕ್ಕೆ ಅಜ್ಜೀನ ಬಲಿ ತೆಗೆದುಕೊಂಡದ್ದು ಸಾಕು."

ಜ್ವಾಲಾಪ್ರಸಾದ ಹೇಳಿದ, "ವಿದ್ಯಾ ಇಲ್ಲಿರೋದು ಅವಶ್ಯಕ ಅಂತ ನನಗೂ ಅನ್ನಿಸುತ್ತೆ. ಯಾಕೆಂದರೆ ಅದು ಇವಳ ಬದುಕಿನ ವಿಷಯ, ಭಾಗ್ಯದ ವಿಷಯ. ಮೇಲಾಗಿ ಇವಳು ವಯಸ್ಸಿಗೆ ಬಂದಿದಾಳೆ. ತನ್ನ ಒಳ್ಳೇದು-ಕೆಟ್ಟದ್ದನ್ನ ತಾನೇ ನೋಡಿ ತಿಳಿಯ ಬೇಕಾಗಿದೆ. ನನ್ನದೇನು ನೆಚ್ಚಿಕೆ, ದೇವರು ಯಾವಾಗ ನನ್ನನ್ನ ಕರೆಸಿಕೋತಾನೋ! ನಾನೇನು ಅಮೃತ ಕುಡಿದು ಹುಟ್ಟಿಲ್ಲ."

"ಒಳ್ಳೇದು, ನಿಮ್ಮ ಇಷ್ಟ!" ವಿಂದೇಶ್ವರೀ ವ್ಯಂಗ್ಯವಾಗಿ ಹೇಳಿದರು. "ಹಾಗಾದರೆ ಕೇಳಿ. ಸಿದ್ಧೇಶ್ವರೀಗೆ ಮುಂದಿನ ವಾರ ಮದುವೆ ಅಂತ ನಿಮಗೊಂದು ಕಾಗದ ಬರೆಸಿದ್ದೆ."

"ಹೌದು, ಆ ವಿಷಯವಾಗಿ ಕಾಗದ ಬಂದಿತ್ತು. ಹಿಂದೂ ಲಾ ಪ್ರಕಾರ ಸಿದ್ಧೇಶ್ವರೀಗೆ ತನಗೆ ಬೇಕಾದಷ್ಟು ಮದುವೆ ಮಾಡಿಕೊಳ್ಳೋಕ್ಕೆ ಸಂಪೂರ್ಣ ಅಧಿಕಾರವಿದೆ. ಮುಂದೆ ಏನು ಹೇಳೋದಿದೆ, ಹೇಳಿ."

"ಇವಳು ಈ ಮದುವೇನಲ್ಲಿ ಶರೀಕಾಗಿ ಆಮೇಲೆ ಸಿದ್ಧೇಶ್ವರಿಯ ಜೊತೆ ಇರೋಕ್ಕೆ ಸಿದ್ಧಳಾಗಿದಾಳೆಯೇ ಅಂತ ನಿಮ್ಮನ್ನ ಕೇಳಬೇಕಾಗಿದೆ."

ಜ್ವಾಲಾಪ್ರಸಾದ ಉತ್ತರ ಕೊಡುವ ಮೊದಲೇ ವಿದ್ಯಾ ಬಾಯಿ ತೆಗೆದಳು, "ಮದುವೇಗೆ ಮೊದಲೇನು, ಆಮೇಲೇನು—ನಿಮ್ಮ ಜೊತೇಲಿರೋದು ನರಕದಲ್ಲಿರೋದಕ್ಕಿಂತ ಭೀಕರ."

"ಕೇಳ್ತಿದೀರಾ, ಈ ದುಷ್ಟ ಹೆಂಗಸು ಹೇಳ್ತಿರೋದನ್ನ" ವಿಂದೇಶ್ವರೀಪ್ರಸಾದರು ಹೇಳಿದರು. "ಇವಳಿಗೆ ನಮ್ಮಿಂದ ಯಾವ ರೀತಿಯ ಜೀವನ ನಿರ್ವಹಣೆಯನ್ನ ಅಪೇಕ್ಷಿಸೋಕ್ಕೂ ಹಕ್ಕಿಲ್ಲ ಅನ್ನೋದನ್ನ ತಿಳಕೊಳ್ಳಿ. ನಾನು ನಿಮಗೆ, ನಿಮಗಿಂತ ಹೆಚ್ಚಾಗಿ ತಾವು ಬಹಳ ಕಾನೂನು ಬಲ್ಲವರು ಅಂತ ತಿಳಕೊಂಡಿದಾರಲ್ಲ ಆ ಜ್ಞಾನಪ್ರಕಾಶ್, ಅವರಿಗೆ ಈ ಮಾತನ್ನ ತಿಳಿಸಿ ಹೋಗೋಕ್ಕೆ ಬಂದೆ."

"ನಿಮ್ಮಗಳ ಪಾಪದ ಸಂಪಾದನೇಲಿ ನನಗೆ ಒಂದು ಕಾಸೂ ಬೇಡ," ವಿದ್ಯಾ ಉತ್ತರ ಕೊಟ್ಟಳು. "ಈ ವಿಷಯವಾಗಿ ತಾತನ ಹತ್ತಿರವಾಗಲೀ, ಜ್ಞಾನಬಾಬನ ಹತ್ತಿರವಾಗಲೀ ಮಾತನಾಡೋ ಅಗತ್ಯವಿಲ್ಲ. ಬೇಕಾದರೆ ನಾನು ನಿಮಗೆ ಬರೆದುಕೊಡ್ತೀನಿ."

ವಿಂದೇಶ್ವರೀಪ್ರಸಾದರು ಜ್ವಾಲಾಪ್ರಸಾದನ ಕಡೆ ನೋಡಿದರು. "ಕೇಳಿದಿರಾ! ಇನ್ನು ನಮ್ಮ ಮೇಲೆ ತಪ್ಪು ಹೊರಿಸಬೇಡಿ. ನಾವು ಇವಳ ಭರಣ-ಪೋಷಣೆ ಮಾಡೋಕ್ಕೆ ಸಿದ್ಧವಾಗಿದೀವಿ, ಮನೇಗೆ ಕರಕೊಳ್ಳೋಕ್ಕೆ ಸಿದ್ಧವಾಗಿದೀವಿ. ಆದರೆ ಸ್ವತಃ ಅವಳಿಗೇ ಬರೋಕ್ಕೆ ಇಷ್ಟವಿಲ್ಲ."

"ನಿಮ್ಮಿಂದ ಯಾವ ರೀತಿಯ ಜೀವನಾಂಶಾನೂ ಅಪೇಕ್ಷಿಸೋಲ್ಲ ಅಂತ ಹೇಳಿಬಿಟ್ಟಿದಾಳಲ್ಲ," ಜ್ವಾಲಾಪ್ರಸಾದ ಹೇಳಿದ.

ವಿಂದೇಶ್ವರೀಪ್ರಸಾದರು ಕೈಯಲ್ಲಿದ್ದ ಫೈಲಿನಿಂದ ಒಂದು ಕಾಗದ ತೆಗೆಯುತ್ತ ಹೇಳಿದರು, "ನಾವೂ ಹಾಗೇ ಅಂದುಕೊಂಡಿದ್ದೆವು. ಅದಕ್ಕೇ ಅಂತಲೇ ಈ ಕಾಗದ ಸಿದ್ಧ ಮಾಡಿಕೊಂಡು ಬಂದಿದ್ದೆ. ಇದರ ಮೇಲೆ ಇವಳು ರುಜು ಹಾಕಿಕೊಡಲಿ. ಈ ವಿಷಯ ಮುಂದೆ ಕೋರ್ಟಿಗೆ ಹೋಗೋದು ನನಗೆ ಇಷ್ಟವಿಲ್ಲ. ಅದರಿಂದ ನಮ್ಮಿಬ್ಬರ ಮನೆತನದ ಮರ್ಯಾದೇನೂ ಹೋಗುತ್ತೆ." ಹೀಗಂದು ವಿಂದೇಶ್ವರೀ ಆ ಕಾಗದವನ್ನು ಜ್ವಾಲಾಪ್ರಸಾದನ ಕೈಯಲ್ಲಿಟ್ಟರು.

ಜ್ವಾಲಾಪ್ರಸಾದ ಕಾಗದ ಓದಿದ. ಆಮೇಲೆ ಅದನ್ನು ವಿದ್ಯಳ ಕೈಗೆ ಕೊಡುತ್ತ "ಒಕ್ಕಣೆ ಸರಿಯಾಗಿದೆ. ಇದನ್ನ ಓದಿ ನೋಡು, ಮಗು."

ವಿದ್ಯಾ ಅದನ್ನೋದಿ ಹೇಳಿದಳು, "ಇದರಲ್ಲಿ ಕೊಂಚ ಬದಲಾವಣೆಯಾಗಬೇಕಾಗಿದೆ,

ತಾತ! 'ನನ್ನ ಸ್ವೇಚ್ಛೆಯಿಂದ ಇವರಿಂದ ಬೇರೆಯಾಗ್ತೀದೀನಿ' ಅಂತ ಇರೋ ಕಡೆ 'ಇವರ ಅಮಾನುಷ ವರ್ತನೆಯನ್ನು ಸಹಿಸಲಾರದೆ ಇವರಿಂದ ಬೇರೆಯಾಗ್ತಿದೀನಿ' ಅಂತ ಬರೀತೀನಿ."

"ಹಾಗೆ ಬರೆಯೋಕ್ಕಾಗೋಲ್ಲ. ನಿನ್ನ ಜಗಳಗಂಟಿತನ ಹಾಗೂ ಅಸಭ್ಯ ನಡತೆ ಯಿಂದಾಗಿ ನಿನ್ನನ್ನ ಮನೆ ಬಿಟ್ಟು ಕಳಿಸಿದ್ದು."

ವಿದ್ಯಾ ಬಿರುಸಾಗಿ ಹೇಳಿದಳು, "ಬರೆಯೋಳು ನಾನು. ನನಗೆ ಯಾವುದು ಸರಿ ಅಂತ ತೋರುತ್ತೋ ಅದನ್ನ ಬರೀತೀನಿ. ನನ್ನ ಕೈಲಿ ಬರಸಿಕೊಳ್ಳಬೇಕೂ ಅಂತ ಇದ್ದರೆ ನಾನು ಬರೆದುಕೊಟ್ಟಹಾಗೆ ಬರಸಿಕೋ. ಇಲ್ಲದೇ ಹೋದರೆ ಎದ್ದು ನಡೀ ಇಲ್ಲಿಂದ!"

ಜ್ವಾಲಾಪ್ರಸಾದ ಹೇಳಿದ, "ನೀವಾಗಿಯೇ ಯಾರಿಗಾದರೂ ತೋರಿಸೋ ತನಕ ಇಲ್ಲವೇ ಕೋರ್ಟಿನ ಮುಂದೆ ಇಡಬಯಸೋ ತನಕ ಈ ಕಾಗದದ ವಿಷಯ ನಿಮಗಷ್ಟೇ ಗೊತ್ತಿರುತ್ತೆ. ಅಂದಮೇಲೆ ಹೇಗೆ ಬರಕೊಡ್ತಾಳೋ ಹಾಗೆ ಬರಸಿಕೊಳ್ಳಿ."

ವಿಂದೇಶ್ವರೀಪ್ರಸಾದ ಸ್ವಲ್ಪ ಯೋಚಿಸಿದರು. ವಿಷಯ ಇಷ್ಟು ಸುಲಭವಾಗಿ ಬಗೆಹರಿಯುವುದೆಂದು ಅವರು ಊಹಿಸಿರಲಿಲ್ಲ. ಬೆಣ್ಣೆಯಂತೆ ನಯವಾದ ಧ್ವನಿ ತುಂಬಿಕೊಂಡು ಹೇಳಿದರು, "ಎರಡೂ ಮನೆತನದ ಮರ್ಯಾದೆ ಉಳಿಸೋಕ್ಕೆ ಇದನ್ನ ಮಾಡ್ತಿದೀನಿ. ಹೇಗೆ ಬೇಕೋ ಹಾಗೆ ಒಕ್ಕಣೇನ ಬದಲಾಯಿಸಲಿ."

ವಿದ್ಯಾ ಆ ಕಾಗದದಲ್ಲಿ ತನ್ನ ಮಾತನ್ನು ಸೇರಿಸಿ ರುಜು ಹಾಕಿ ಜ್ವಾಲಾಪ್ರಸಾದನ ಕೈಗಿತ್ತಳು. ಜ್ವಾಲಾಪ್ರಸಾದ ಅದನ್ನೋದಿ "ಸರಿಯಾಗಿದೆ! ತಗೊಳ್ಳಿ, ವಿಂದೇಶ್ವರೀ ಪ್ರಸಾದ್, ಯಾವ ರಗಳೆಯೂ ಇಲ್ಲದೆ ನಿಮ್ಮ ಕೆಲಸ ಸಲೀಸಾಗಿ ಆಯಿತು. ಇನ್ನಾದರೂ ಒಂದು ಕಪ್ಪು ಚಹ ಕುಡೀರಿ."

ವಿಂದೇಶ್ವರೀಪ್ರಸಾದ ಕಾಗದವನ್ನು ಫೈಲಿನಲ್ಲಿಡುತ್ತ ಹೇಳಿದರು, "ಇಲ್ಲ, ನನಗೂ ಈ ಮನೆಗೂ ಏನೂ ಸಂಬಂಧವಿಲ್ಲ." ಆಮೇಲೆ ವಿದ್ಯಳ ಕಡೆ ತಿರುಗಿ "ಜ್ಞಾಪಕದಲ್ಲಿ ಟ್ಟುಕೊ. ಹಿಂದೂ ಲಾ ಪ್ರಕಾರ ವಿವಾಹ ವಿಚ್ಛೇದನೆ ಸಾಧ್ಯವಿಲ್ಲ. ನೀನು ಸಾಯೋ ತನಕ ಸಿದ್ಧೇಶ್ವರಿಯ ಹೆಂಡತಿಯಾಗಿರ್ತಿ. ಯಾವಾಗಲಾದರೂ ನಮಗೆ ನಿನ್ನ ಕೆಟ್ಟ ನಡತೆಯ ಸುದ್ದಿ ಕಿವೀಗೆ ಬಿದ್ದರೆ ಸೀದಾ ಜೈಲಿಗೆ ಕಳಸ್ತೀವಿ." ಅಂದರು.

ವಿದ್ಯಳಿಗೆ ಸಹಿಸಲಾಗಲಿಲ್ಲ. "ಇವನೆಲ್ಲೋ ಸೈತಾನ!" ಎಂದವಳೇ ಕಾಲಿಂದ ಚಪ್ಪಲಿ ತೆಗೆದು ವಿಂದೇಶ್ವರಿಯ ಕಡೆ ಎಸೆದಳು. ವಿಂದೇಶ್ವರೀ ಕೋಣೆಯಾಚೆ ಓಡಿದರು. ಜ್ವಾಲಾಪ್ರಸಾದ ವಿದ್ಯಳ ಕೈ ಹಿಡಿದು ತಡೆದ. ವಿದ್ಯಾ ಕೊಡವಿ ಕೈ ಬಿಡಿಸಿಕೊಂಡು ಚಪ್ಪಲಿಯೊಡನೆ ವಿಂದೇಶ್ವರಿಯ ಬೆನ್ನಟ್ಟಿದಳು. ಜ್ವಾಲಾಪ್ರಸಾದ ಅವಳ ಹಿಂದೆ ಹಿಂದೆ ಓಡಿದ. ಇಷ್ಟರಲ್ಲಿ ವಿಂದೇಶ್ವರೀ ಟಾಂಗಾಹತ್ತಿ ಕುಳಿತು, ಗಾಡಿಯನ್ನು ಬೇಗ ಓಡಿಸು ವಂತೆ ಟಾಂಗಾದವನಿಗೆ ಹೇಳಿದರು.

ಟಾಂಗಾ ಹೊರಟಿತು. ವಿದ್ಯಾ "ಥೂ ಹೇಡಿ!" ಅನ್ನುತ್ತ ತಡೆಯಲಾರದೆ ಬಿಕ್ಕಿಬಿಕ್ಕಿ ಅಳತೊಡಗಿದಳು.

## ಏಳು

೧೯೩೦ ರ ಮಾರ್ಚಿ ಎರಡರಂದು ಮಹಾತ್ಮ ಗಾಂಧಿ ಲಾರ್ಡ್ ಇರ್ವಿನ್ನರ ಹೆಸರಿಗೆ ಒಂದು ಪತ್ರ ಬರೆದು ಪ್ರಕಟಿಸಿದರು. ಆ ಪತ್ರದಿಂದ ದೇಶದಲ್ಲಿ ಎಲ್ಲೆಲ್ಲೂ ಕೋಲಾಹಲವೆದ್ದಿತು. ಅದು ಸತ್ಯಾಗ್ರಹ-ಆಂದೋಳನದ ಘೋಷಣಾಪತ್ರ. ಉಳಿದೆಲ್ಲ ಪ್ರಯತ್ನಗಳೂ ವ್ಯರ್ಥವಾಗಿದ್ದವು. ಬ್ರಿಟಿಷ್ ಸರಕಾರ ಸ್ವರಾಜ್ಯ ಕೊಡಲು ಸ್ವಲ್ಪವೂ ತಯಾರಿರಲಿಲ್ಲ. ಗಾಂಧೀಜಿಯವರ ಬಳಿ ಸತ್ಯಾಗ್ರಹವನ್ನು ಬಿಟ್ಟು ಬೇರೆ ಮಾರ್ಗವೇ ಇರಲಿಲ್ಲ. ಗಾಂಧೀಜಿ ಯವರ ಆ ಪತ್ರದಲ್ಲಿ ಸದ್ಭಾವನೆಯಿತ್ತು, ಪ್ರಾಮಾಣಿಕತೆಯಿತ್ತು, ಜೊತೆಗೆ ಸ್ಥಿರವಾದ ಸಂಕಲ್ಪವಿತ್ತು.

ನವಲನ ಓದು ಜೋರಾಗಿ ಸಾಗಿತ್ತು. ಆದರೆ ಅವತ್ತೇಕೋ ಅವನಿಗೆ ಯೂನಿ ವರ್ಸಿಟಿಯ ಕಡೆ ಮನಸ್ಸು ಹೋಗಲಿಲ್ಲ. ಅವನು ಅಲ್ಲಿಂದ ನೇರವಾಗಿ ಕಾಂಗ್ರೆಸ್ ಕಮಿಟಿಯ ಕಚೇರಿಗೆ ನಡೆದ. ಜ್ಞಾನಪ್ರಕಾಶ ಅಲಹಾಬಾದಿನಲ್ಲಿ ನಡೆಯಲಿದ್ದ ಸತ್ಯಾಗ್ರಹದ ಯೋಜನೆ ಸಿದ್ಧಮಾಡುತ್ತಿದ್ದ. ಅವನೆಂದ, "ನವಲ್, ಕಾಲ ಬಂದಿದೆ. ಕಾದಾಟದ ಶ್ರೀ ಓನ್ನಾಮವಾಗಿದೆ."

"ಹೌದು, ಜ್ಞಾನ ಬಾಬಾ, ಕಾಣ್ತಿದೆ. ನಿಮಗೆ ಎಷ್ಟುಹೊತ್ತಿಗೆ ಬಿಡುವಾಗುತ್ತೆ?"

"ಇವತ್ತಂತೂ ಕೆಲಸವೋ ಕೆಲಸ, ಇಡೀ ದಿನವಾಗುತ್ತೆ. ಆರೇಳು ಗಂಟೆ ಹೊತ್ತಿಗೆ ಕೆಲಸದಿಂದ ಬಿಡುಗಡೆಯಾಗಬಹುದು. ಸಂಜೆ ಮನೇಲೇ ಚಹ ಕುಡೀತೀನಿ. ಅಂದ ಹಾಗೆ ಇವತ್ತು 'ನಾರೀ ಶಿಕ್ಷಣ ಸದನ'ದ ಮೀಟಿಂಗ್ ಇತ್ತು. ವಿದ್ಯಳಿಗೆ ಮಾರ್ಚಿ ಹದಿನೈದರಿಂದ ಕೆಲಸವಾಗಿದೆ. ಸಂಜೆ ಬಂದಾಗ ಅವಳಿಗೆ ಹೇಳ್ತೀನಿ."

"ಒಳ್ಳೇದು. ಯಾಕೋ ಯೂನಿವರ್ಸಿಟೀಲಿ ಮನಸ್ಸಾಗಲಿಲ್ಲ. ಮನೇಗೆ ಹೋಗ್ತಿದೀನಿ."

ನವಲ್ ಹೊರಟ. ಆಗ ಅವನ ಮನಸ್ಸು ಸಂತೋಷದಿಂದಿತ್ತು. ವಿದ್ಯಳಿಗೆ ಕೆಲಸವಾಗಿತ್ತು. ಅವಳಿನ್ನು ತನ್ನ ಕಾಲ ಮೇಲೆ ತಾನು ನಿಲ್ಲಬಹುದು. ಈ ದಾರಿ ತೆರೆದು ಒಂದು ದೊಡ್ಡ ಸಮಸ್ಯೆ ಬಗೆಹರಿದಂತಾಗಿತ್ತು. ವಿದ್ಯಳಿಗೆ ಸಂತೋಷದ ಸಮಾಚಾರ ತಿಳಿಸಲು ನವಲ್ ಬೇಗಬೇಗನೆ ಮನೆ ಸೇರಿದ. ವಿದ್ಯಾ ಡ್ರಾಯಿಂಗ್ ರೂಮಿನಲ್ಲಿ ಕುಳಿತುಕೊಂಡು ಜ್ವಾಲಾಪ್ರಸಾದನಿಗೆ ರಾಮಾಯಣ ಓದಿ ಹೇಳುತ್ತಿದ್ದಳು.

ಮನೆಗೆ ಬಂದೊಡನೆಯೇ ನವಲ್ ವಿದ್ಯಳಿಗೆ ಹೇಳಿದ, "ವಿದ್ಯಾ, ನಿನಗೊಂದು ಸಂತೋಷದ ಸುದ್ದಿ ತಂದಿದೀನಿ. ಮಿಠಾಯಿ ತಾ. ಜ್ಞಾನಬಾಬಾ ಹೇಳಿದರು, ಮಾರ್ಚಿ ಹದಿನೈದ ರಿಂದ 'ನಾರೀ ಶಿಕ್ಷಣ ಸದನ'ದಲ್ಲಿ ನಿನಗೆ ನೌಕರಿಯಾಗಿದೆಯಂತೆ."

"ಹೌದೇ ಅಣ್ಣ!" ಎನ್ನುತ್ತ ವಿದ್ಯಾ ಎದ್ದು ನಿಂತಳು. ಆಮೇಲೆ ತನ್ನ ಚಾಂಚಲ್ಯಕ್ಕೆ ತಾನೇ ನಾಚಿ "ಈ ಶ್ಲೋಕ ಮುಗಿಸಿ ಇವತ್ತು ರಾಮಾಯಣ ಪಠನ ನಿಲ್ಲಿಸ್ತೀನಿ, ತಾತ" ಅಂದಳು.

ಜ್ವಾಲಾಪ್ರಸಾದ ನಕ್ಕ. "ಹೌದು ಮಗು, ಇನ್ನು ಇದರ ಕಡೆ ಮನಸ್ಸು ಹೋಗೋಲ್ಲ! ದೇವರ ದಯದಿಂದ ನಿನಗೆ ಕೆಲಸ ಸಿಕ್ಕಿರೋವಾಗ ಮನಸ್ಸು ಕೊಟ್ಟು ಅವನ ಗುಣಗಾನ ಮಾಡಬೇಕು."

ವಿದ್ಯಾ ರಾಮಾಯಣ ಪಠನ ಮುಗಿಸಿ ನವಲನ ಕಡೆ ನೋಡಿದಳು, "ಹೌದು ಅಣ್ಣ, ನನ್ನ ಮೇಲೆ ಶ್ರೀ ರಾಮದೇವರ ಕೃಪೆಯಾಗಿದೆ. ಅಂದರೆ ನಾನು ಹದಿನೈದನೇ ತಾರೀಕಿ ನಿಂದ ಕೆಲಸಕ್ಕೆ ಹೋಗಬೇಕೆ?"

ನವಲ್ ವಿದ್ಯಳಿಗೆ ಉತ್ತರ ಕೊಡುವ ಮೊದಲೇ ಜ್ವಾಲಾಪ್ರಸಾದ ಒಂದು ನಿಟ್ಟುಸಿರು ಬಿಟ್ಟು ತನಗೆ ತಾನೇ ಹೇಳಿಕೊಳ್ಳುವವನಂತೆ, "ಇವತ್ತಿನ ದಿನಾನೂ ನೋಡೋದು ಹಣೇಲಿ ಬರೆದಿತ್ತು! ಹುಡುಗಿ ಮನೆ ಬಿಟ್ಟು ಹೊರಗೆ ಕೆಲಸಕ್ಕೆ ಹೋಗಿ, ಇನ್ನೊಬ್ಬರ ಗುಲಾಮಗಿರಿ ಮಾಡೋದನ್ನ!"

ನವಲ್ ಇದನ್ನು ಕೇಳಿ ಮೌನವಾಗಿದ್ದ. ಆದರೆ ವಿದ್ಯಳಿಗೆ ಸುಮ್ಮನಿರಲಾಗಲಿಲ್ಲ. ಅವಳಂದಳು, "ತಾತ, ಗುಲಾಮಗಿರಿಯಿಂದ ಮನುಷ್ಯನಿಗೆ ಬಿಡುಗಡೆ ಇದ್ದದ್ದು ಯಾವಾಗ? ಮನೇಲಿ ಉಸಿರು ಬಿಗಿಹಿಡಿದುಕೊಂಡಿರೋದು, ನಮ್ಮನ್ನ ನಾವು ಬಲವಂತವಾಗಿ ಮೆಟ್ಟಿಕೊಂಡು ಬಾಳೋದು—ಇದೇನು ಕಡಿಮೆ ಗುಲಾಮಗಿರಿಯೆ?"

ಜ್ವಾಲಾಪ್ರಸಾದ ತಲೆತಗ್ಗಿಸಿ ಹೇಳಿದ, "ನೀನು ಹೇಳೋದು ಪ್ರಾಯಶಃ ಸರಿ, ಮಗೂ. ಆದರೆ ಮನೇನಲ್ಲಿ ಮಮತೆಯಾದರೂ ಸಿಗುತ್ತಲ್ಲ!"

ವಿದ್ಯಳ ಧ್ವನಿ ಕಠೋರವಾಯಿತು. "ಮಮತೆ! ಎಲ್ಲಿಯ ಮಮತೆ, ಯಾರಿಗೆ ಮಮತೆ! ಘೋರವಾದ ಜುಗುಪ್ಸೆಯಿಂದ ನರಳ್ತಾ ನರಳ್ತಾ ಬದುಕಬೇಕಾಗಿ ಬಂದಿದೆ ನನಗೆ! ನಮ್ಮ ಅಪ್ಪಅಮ್ಮಂದಿರ ಮನೆಯ ರಕ್ತ ಹೀರಿದ ಆ ಅರ್ಥಪಿಶಾಚಿಗಳನ್ನ ಕಂಡು ನನ್ನಲ್ಲಿ ಮಮತೆ ಹುಟ್ಟೋದು ಸಾಧ್ಯವೇ?"

"ನಿನಗೆ ಅರ್ಥವಾಗೋಲ್ಲ, ಮಗು! ಬದುಕಿನಲ್ಲಿ ಒಬ್ಬಂಟಿತನ ಅನ್ನೋದು ಬಹಳ ಭೀಕರವಾಗಿರುತ್ತೆ. ಈ ಒಬ್ಬಂಟಿತನಾನ ದೂರ ಮಾಡೋಕ್ಕೆ ಅಂತಾನೇ ಸಂಸಾರದ ಸೃಷ್ಟಿಯಾಗಿರೋದು."

ವಿದ್ಯಾ ನಕ್ಕಳು, "ತಾತ, ನೀವಿದೀರಿ, ನಮ್ಮಣ್ಣ ಇದಾನೆ, ಅಮ್ಮ ಇದಾಳೆ. ಆಮೇಲೆ ಇಡೀ ಪ್ರಪಂಚ ಇದೆ. ಇಷ್ಟು ದೊಡ್ಡ ಸಂಸಾರದಲ್ಲಿದ್ದುಕೊಂಡೂ ನನಗೆ ಯಾತರ

ಚಿಂತೆ ಹೇಳಿ! ಏನು ನವಲಣ್ಣ, ನೀನು ನನ್ನನ್ನ ನಿನ್ನ ಜೊತೇಲೇ ಇಟ್ಟುಕೊಂಡಿರ್ತಿ ಅಲ್ಲವೆ? ನಾನು ನಿನ್ನನ್ನ ಪ್ರೀತಿಸುವಷ್ಟೇ ಅತ್ತಿಗೇನೂ ಪ್ರೀತಿಸ್ತೀನಿ. ನಿನ್ನ ಮಕ್ಕಳು ನನ್ನ ಕಣ್ಣಿನ ಗೊಂಬೆಗಳಾಗಿರ್ತಾರೆ."

ನವಲ್ ಕಣ್ಣೀರನ್ನು ತಡೆಹಿಡಿಯುತ್ತ ಹೇಳಿದ, "ವಿದ್ಯಾ, ಏನು ಇದೆಲ್ಲಾ ಹರಟ್ತಿದಿ? ನೀನು ವಯಸ್ಸಿನಲ್ಲಿ ನನಗೆ ತಂಗಿಯಾಗಿರಬಹುದು, ಆದರೆ ಬುದ್ಧೀಲಿ, ಸಾಹಸದಲ್ಲಿ ನೀನು ನನಗಿಂತ ಹಿರಿಯಳು."

ನವಲ್ ಗಡಿಯಾರ ನೋಡಿದ. ಇನ್ನೂ ಮೂರು ಗಂಟೆಯಾಗಿತ್ತು. ಮನೆಯಲ್ಲಿರಲು ಮನಸ್ಸು ಬರಲಿಲ್ಲ. ಅವನಿಗೆ ತನ್ನೊಳಗೇ ಒಂದು ಬಗೆಯ ವಿಚಿತ್ರವಾದ ತಳಮಳ ಅನುಭವವಾಗತೊಡಗಿತು. ಅವನಿಗೆ ಆ ತಳಮಳದ ಸ್ವರೂಪವನ್ನಾಗಲೀ, ಕಾರಣವನ್ನಾಗಲೀ ಗುರುತಿಸಲಾಗುತ್ತಿರಲಿಲ್ಲ. ವಿದ್ಯಾ ಕೇಳಿದಳು, "ಅಣ್ಣಾ, ಇವತ್ತು ತುಂಬಾ ಕಂಗೆಟ್ಟಹಾಗೆ ಕಾಣ್ತೀಯಲ್ಲಾ, ಏನು ಸಮಾಚಾರ?"

ನವಲ್ ನಕ್ಕ, "ನನಗೇ ಗೊತ್ತಾಗ್ತಿಲ್ಲ. ಯಾವುದಕ್ಕೂ ಮನಸ್ಸಾಗ್ತಿಲ್ಲ."

ವಿದ್ಯಾ ಎದ್ದುನಿಂತಳು. "ಉಷಳನ್ನ ನೋಡಿ ಬಹಳ ದಿನವಾಯಿತು. ನೋಡಿ ಬರೋಣಾಂತ ಮೂರು-ನಾಲ್ಕು ದಿನದಿಂದ ಅಂದುಕೊಳ್ತಿದೀನಿ. ನನ್ನ ಜೊತೆ ನಡಿ. ಅಲ್ಲಿ ಮನಸ್ಸು ಸ್ವಲ್ಪ ಉಲ್ಲಾಸವಾಗುತ್ತೆ."

ಉಷಳ ಹೆಸರು ಕೇಳಿದೊಡನೆಯೇ ನವಲನಿಗೆ ಬೆಚ್ಚಿಬೀಳುವಂತಾಯಿತು. ಈಚೆಗೆ ಮೂರು-ನಾಲ್ಕು ದಿನಗಳಿಂದ ಅವನು ಅವಳ ಯೋಚನೆಯನ್ನು ಸಹ ಮಾಡಿರಲಿಲ್ಲ. ವಿದ್ಯಳ ಸೂಚನೆ ಕೇಳಿದೊಡನೆಯೇ ನವಲನ ಮನಸ್ಸು ಏಕಾಏಕಿ ಉಷಳ ಕಡೆ ಹರಿಯಿತು. ಆದರೆ ಈ ಆಕರ್ಷಣೆಯ ಜೊತೆಗೇ ಒಂದು ಬಗೆಯ ಭಯವೂ ಇತ್ತು, ಶಂಕೆಯೂ ಇತ್ತು. ಪ್ರಾಯಶಃ ಈ ಭಯಶಂಕೆಗಳಿಂದ ರಕ್ಷಣೆ ಪಡೆಯಲೆಂದೋ ಏನೋ ಅವನ ಮನಸ್ಸು ಅವಳ ಬಗ್ಗೆ ಔದಾಸೀನ್ಯ ತಾಳಿತ್ತು. ಈಗ ಆಕರ್ಷಣೆಯ ಜೊತೆಜೊತೆಗೇ ಭಯಶಂಕೆಗಳೂ ಎದ್ದುಕೂತವು.

ಭಯ, ಶಂಕೆ—ಇವನ್ನು ದೂರಮಾಡಬೇಕು, ಇವುಗಳೊಂದಿಗೆ ಹೋರಾಡಬೇಕು, ಇವುಗಳಿಂದ ಓಡಿಹೋದರೆ ಕೆಲಸವಾಗದು. ನವಲ್ ಹೇಳಿದ, "ಸರಿ, ವಿದ್ಯಾ. ನಿನ್ನ ಜೊತೆ ಬರ್ತೀನಿ. ಆದರೆ ಬೇಗ ಏಳು. ಹತ್ತು ನಿಮಿಷದಲ್ಲಿ ತಯಾರಾಗಿಬಿಡು. ಆರೇಳು ಗಂಟೆ ಹೊತ್ತಿಗೆ ಅಲ್ಲಿಂದ ವಾಪಸು ಬರಬೇಕು. ಇಲ್ಲಿ ಮನೇಗೇ ಬಂದು ಚಹ ಕುಡಿಯೋದಾಗಿ ಜ್ಞಾನಬಾಬಾ ಹೇಳಿದಾರೆ. ಅವರ ಜೊತೆ ಮಾತಾಡೋದಿದೆ."

ನವಲ್ ವಿದ್ಯಳ ಜೊತೆ ರಾಯ್‌ಬಹದ್ದೂರ್ ಕಾಮತಾನಾಥರ ಮನೆ ತಲಪಿದಾಗ ನಾಲ್ಕು ಹೊಡೆದಿತ್ತು. ಉಷಾ ಕಾಲೇಜಿಂದ ಹಿಂದಿರುಗಿ ಬಂದು ಚಹ ಕುಡಿಯುತ್ತಿದ್ದಳು. ವಿದ್ಯಾ, ನವಲರ ಜೊತೆ ಅವಳು ಹೊರಗೆ ದಿವಾನಖಾನೆಯಲ್ಲಿ ಕುಳಿತು ಅಲ್ಲಿಗೇ ಚಹ ತರಿಸಿದಳು.

" ಏನು ಉಷಾರಾಣಿ, ಓದು ಹೇಗೆ ಸಾಗಿದೆ? " ವಿದ್ಯಾ ಕೇಳಿದಳು.

" ಚೆನ್ನಾಗಿಯೇ ನಡೀತಿದೆ. ಏನು ಹೇಳಲಿ, ಯೂರೋಪ್ ಪ್ರವಾಸದಿಂದಾಗಿ ಒಂದು ವರ್ಷ ನಷ್ಟವಾಯಿತು. ಜೊತೆಯ ಹುಡುಗೀರೆಲ್ಲಾ ಬಿ.ಎ. ಫೈನಲ್ಲಿಗೆ ಬಂದಿದಾರೆ. ನಾಚಿಕೆಯಾಗುತ್ತೆ ! "

" ಅದರಲ್ಲಿ ನಾಚಿಕೊಳ್ಳೋಕ್ಕೆ ಏನಿದೆ? " ನವಲ್ ಹೇಳಿದ, " ನೀನು ಫೇಲೇನೂ ಆಗಿಲ್ಲವಲ್ಲ. ಮುಂದಿನ ವರ್ಷ ಬಿ.ಎ. ಮಾಡಿದರಾಯಿತು.

" ಮುಂದಿನ ವರ್ಷ ಪಾಸ್ ಮಾಡೇ ಮಾಡ್ತೀನಿ. ಆದರೆ ಅದೇಕೋ ಗೊತ್ತಿಲ್ಲ. ಮನಸ್ಸಿನಲ್ಲಿ ಒಂದು ತರಹದ ಚಂಚಲತೆ ತುಂಬಿಕೊಂಡಿದೆ. ಯಾವದಕ್ಕೂ ಕಾಯೋಕ್ಕೆ ಮನಸ್ಸು ಬರೋದಿಲ್ಲ. ಒಂದೊಂದು ಸಲ ಅನ್ನಿಸುತ್ತೆ, ಈ ಓದುಬರೆಹದ ಗೋಳುಕರೇನ ವ್ಯರ್ಥವಾಗಿ ಹಚ್ಚಿಕೊಂಡಿದ್ದಾಯ್ತು ಅಂತ. ಕೊನೇಗೆ ನನಗೆ ಬಿ.ಎ. ಮಾಡೋ ಅಗತ್ಯವಾದರೂ ಏನಿದೆ! ನಾನು ಯಾವ ನೌಕರಿ ಮಾಡಬೇಕಾಗಿದೆ! "

" ಅದೇನೋ ಸರಿ, ನೌಕರಿ ಮಾಡಬೇಕಾಗಿಲ್ಲ. ಆದರೆ ಬಿ.ಎ. ಪಾಸು ಮಾಡಿಬಿಡು. ಓದು-ಬರೆಹ ಬರಿಯ ನೌಕರಿಗಷ್ಟೇ ಅಲ್ಲ. ಅಲ್ಲದೇ ಜಗತ್ತಿನಲ್ಲಿ ಮೌಲ್ಯಗಳು ಸಹ ಬಹಳ ಬೇಗ ಬದಲಾಗ್ತಿವೆ. ನಮ್ಮ ಭವಿಷ್ಯದ ಸ್ವರೂಪ ಹೀಗೇ ಇರುತ್ತೆ ಅಂತ ಹೇಳೋಕ್ಕಾಗೋಲ್ಲ," ನವಲ್ ಹೇಳಿದ.

ಉಷಾ ನಿಟ್ಟುಸಿರು ಬಿಟ್ಟಳು, " ಹೌದು, ನವಲ್‌ಬಾಬು. ಭವಿಷ್ಯದಲ್ಲಿ ಏನಾಗುತ್ತೆ ಅಂತ ಗೊತ್ತಾಗೋಲ್ಲ; ಏನೇ ಮಾಡಲಿ, ಗೊತ್ತಾಗೋಲ್ಲ." ಆಮೇಲೆ ವಿದ್ಯಳ ಕಡೆ ತಿರುಗಿ ಆ ಮಾತು ಮುಗಿಸುವವಳಂತೆ, " ಏನು ವಿದ್ಯಾರಾಣಿ, ದಿನ ಹೇಗೆ ಕಳೀತಿದೆ? "

" ತುಂಬ ಸಂತೋಷವಾಗಿ ಕಳೀತಿದೆ. ಉಣ್ತೀನಿ, ತಿಂತೀನಿ, ಓದ್ತೀನಿ, ಬರೀತೀನಿ, ನಿಶ್ಚಿಂತೆಯಾಗಿ ಮಲಕ್ಕೊತೀನಿ," ವಿದ್ಯಾ ನಗುತ್ತ ಹೇಳಿದಳು. " ಆದರೆ ಈ ಮೋಜಿನ ಜೀವನ ಬಹಳ ದಿನ ನಡೆಯೋಲ್ಲ. ಇದರಿಂದ ಮನಸ್ಸಿಗೆ ಬೇಜಾರಾಗಿಬಿಡುತ್ತೆ. ಜೀವನದಲ್ಲಿ ಏನಾದರೂ ಕೆಲಸಾನೂ ಮಾಡಬೇಕಲ್ಲ."

" ಮಾಡಬೇಕು ಅನ್ನೋದಾದರೆ ಕೆಲಸಕ್ಕೇನೂ ಕಡಿಮೆಯಿಲ್ಲ." ಉಷಾ ಹೇಳಿದಳು.

" ಜೀವನೋಪಾಯಕ್ಕೆ ಕೆಲಸವಾಗಿದೆ. ನಾರೀ ಶಿಕ್ಷಣ ಸದನದಲ್ಲಿ ಅಧ್ಯಾಪಕಿಯ ಕೆಲಸ ಸಿಕ್ಕಿದೆ. ಮಾರ್ಚಿ ೧೫ ರಿಂದ ಅಲ್ಲಿ ಕೆಲಸಕ್ಕೆ ಹೋಗ್ತೀನಿ."

ಉಷಾ ಬೆಚ್ಚಿದಳು, " ಏನು, ನೌಕರಿ ಮಾಡ್ತೀಯಾ? ಜನ ಏನನ್ನೋಲ್ಲ? ನಿನಗೇ ಹೇಗನ್ನಿಸಬೇಡ? "

" ನನಗೆ ತುಂಬ ಚೆನ್ನಾಗಿರುತ್ತೆ. ನಾನು ಪ್ರಯತ್ನಪಟ್ಟು ಇದನ್ನ ಪಡೆದಿದೀನಿ. ನನ್ನ ಕಾಲಮೇಲೆ ನಾನು ನಿಂತುಕೋತಿದೀನಿ ಅಂತ ನನಗೆ ಹೆಮ್ಮೆಯೇ. ಯಾರ ಮೇಲೂ ಅವಲಂಬನೆ ಮಾಡಬೇಕಾಗಿಲ್ಲ, ಯಾರನ್ನೂ ಆಶ್ರಯಿಸಬೇಕಾಗಿಲ್ಲ. ಇನ್ನು ಬೇರೆಯೋರು ಏನಂತಾರೆ ಅನ್ನೋ ಮಾತು. ಅದನ್ನು ಯೋಚಿಸೋದು ಸಹ ವ್ಯರ್ಥ.

ಅವರಿಗೂ ನನ್ನ ಬದುಕಿಗೂ ಏನು ಸಂಬಂಧ! ಅವರು ನನಗೇನನ್ನೂ ಕೊಡೋಲ್ಲ, ನನ್ನದೇನನ್ನೂ ಕಿತ್ತುಕೊಳ್ಳೋದಿಲ್ಲ."

ವಿದ್ಯಳ ಮಾತನ್ನು ಸಮರ್ಥಿಸುತ್ತ ನವಲ್ ಹೇಳಿದ, "ಜನ ಮೇಲೆ ಟೀಕೆ-ಟಿಪ್ಪಣಿ ಮಾಡಿಕೊಂಡು ಓಡಾಡೋಕ್ಕೆ ಜನಕ್ಕೆ ಪುರಸೊತ್ತಾದರೂ ಎಲ್ಲಿರುತ್ತೆ, ಉಷಾ! ವಿದ್ಯಳ ಕಡೆ ಬೊಟ್ಟುಮಾಡಿ ತೋರಿಸೋರು ಹಳೇ ಓಬೀರಾಯನ ಕಾಲದವರು—ಯಾವ ಒಂದು ಕಾಲ ಸತ್ತು ಮಣ್ಣಾಗ್ತಿದೆ ಅದಕ್ಕೆ ಸೇರಿದವರು! ಇನ್ನು ಹೊಸ ಕಾಲದ ಬಗ್ಗೆ ಹೇಳೋದಾದರೆ ಅವರು ಇದನ್ನ ಸರಿ ಅಂತಾನೇ ಅಂತಾರೆ. ಅವರು ವಿದ್ಯಳನ್ನ ಆದರದಿಂದ ಕಾಣ್ತಾರೆ. ಹೆಂಗಸರಿಗೆ ಅವರದ್ದೂ ಒಂದು ಅಸ್ತಿತ್ವವಿದೆ, ಉಷಾ."

ನವಲನ ಈ ಮಾತಿನಿಂದ ಉಷಳಿಗೆ ಎದೆಯಿರಿದಂತಾಯಿತು, "ನೀವು ಹೇಳೋದು ಸರಿ, ನವಲ್‌ಬಾಬು. ಹೆಂಗಸಿಗೆ ಅವಳದ್ದೇ ಒಂದು ಅಸ್ತಿತ್ವವಿದೆ, ನಿಮ್ಮ ಈ ಹೊಸ ಕಾಲದಲ್ಲಿ. ಅವಳು ಹೊರಗೆ ಹೋಗಿ ಗುಲಾಮಗಿರಿ ಮಾಡಬೇಕು, ಗಂಡಸರ ಜೊತೆ ಹೆಗಲಿಗೆ ಹೆಗಲು ಕೊಟ್ಟು ಕೆಲಸ ಮಾಡಬೇಕು, ಮನೆತನದ ಮರ್ಯಾದೆ ತೆಗೀಬೇಕು—ನಿಮ್ಮ ಈ ಹೊಸ ಕಾಲ ನಿಮಗೇ ಇರಲಿ, ಅದರಿಂದ ನಿಮಗೆ ಒಳ್ಳೇದಾಗಲಿ! ಆದರೆ ಹೇಳ್ತೀನಿ ಕೇಳಿ, ಈ ಹೊಸ ಕಾಲದ ರೀತಿ-ನೀತಿ ತಪ್ಪು, ಅದು ಬಹಳ ದಿನ ಉಳಿಯೋದಲ್ಲ. ಗಂಡಸರು–ಹೆಂಗಸರು, ಸಬಲರು-ದುರ್ಬಲರು, ಬಡವರು–ಭಾಗ್ಯವಂತರು ಅನ್ನೋ ಭೇದ-ಭಾವ ಅನಾದಿಕಾಲದಿಂದಲೂ ಇದೆ, ಅನಂತಕಾಲದವರೆಗೂ ಇರುತ್ತೆ. ನೀವು ಯಾವ ಮೌಲ್ಯಗಳನ್ನು ಡಂಗುರ ಹೊಡೀತಿದೀರೋ ಅವೆಲ್ಲಾ ಸುಳ್ಳು ಮೌಲ್ಯಗಳು. ನಿಮ್ಮದೆಲ್ಲಾ ಹುಚ್ಚುಕನಸು. ನನಗೆ ಅದರಲ್ಲಿ ಭರವಸೆ ಇಲ್ಲ."

ನವಲ್ ಆಶ್ಚರ್ಯದಿಂದ ಉಷಳನ್ನು ನೋಡಿದ. ತಾನು ಪ್ರೇಮಿಸುತ್ತಿದ್ದ ಉಷಾ ಇವಳೇಯೇ! ಯಾರನ್ನು ಬಾಳ ಸಂಗಾತಿಯನ್ನಾಗಿ ಮಾಡಿಕೊಂಡು ಧನ್ಯನಾಗಬಯಸಿದ್ದನೋ ಆ ಉಷಾ ಇವಳೇಯೇ! ಉಷಾ ಹೇಳುತ್ತಿರುವುದೆಲ್ಲಾ ಏನಿದು? ಅವಳ ಇಡೀ ವಿದ್ಯಾಭ್ಯಾಸ ವ್ಯರ್ಥವಾಯಿತೆ? ಈ ಉಷಾ ಯೂರೋಪಿಗೆ ಹೋಗಿ ಬಂದಿದ್ದಾಳೆ; ಸ್ವತಂತ್ರ ದೇಶಗಳಲ್ಲಿ ಸುತ್ತಾಡಿದ್ದಾಳೆ. ಏನು, ಅಲ್ಲಿಗೆ ಹೋಗಿ ಇವಳ ದೃಷ್ಟಿ-ಕೋನ ಇದ್ದಿದ್ದೂ ಸಂಕುಚಿತವಾಯಿತೆ?

ತನ್ನ ದೃಷ್ಟಿಕೋನವನ್ನು ಉಷಳಿಗೆ ತಿಳಿಸಿಕೊಡಬೇಕೆಂದು ನವಲ್ ಇನ್ನೂ ಒಂದು ಪ್ರಯತ್ನ ಮಾಡಿದ, "ಉಷಾ, ನೀನು ಯೂರೋಪಿಗೆ ಹೋಗಿ ಬಂದಿದಿ; ಅಲ್ಲಿ ಹೆಂಗಸರಿಗೆ ಎಷ್ಟು ಸ್ವಾತಂತ್ರ್ಯವಿದೆ ಅನ್ನೋದನ್ನ ನೋಡಿದಿ. ಆದರೂ ಇದೇನು ಹೀಗೆ ಹೇಳ್ತಿದಿ?"

ಉಷಾ ನಕ್ಕಳು. ಆ ನಗೆಯಲ್ಲಿ ವ್ಯಂಗ್ಯವಿತ್ತು. "ಹೌದು, ಯೂರೋಪಿಗೆ ಹೋಗಿ ಬಂದಿದೀನಿ. ಅಲ್ಲಿಯ ಹೆಂಗಸರನ್ನ ನೋಡಿದೀನಿ. ಅಲ್ಲಿ ಕೆಲವರು ಹೆಂಗಸ

ರೇನೋ ನೌಕರಿ ಮಾಡ್ತಾರೆ; ಯಾಕೆ ಅಂದರೆ ಹಾಗೆ ಮಾಡದೇ ವಿಧಿಯಿಲ್ಲ—ಇಲ್ಲಿಯ ಕೆಳಜಾತಿಯ ಹೆಂಗಸರು ನೌಕರಿ ಮಾಡೋ ಹಾಗೆ. ಆದರೆ ಯಾರು ನೌಕರಿ ಮಾಡ ಬೇಕಾಗಿಲ್ಲವೊ ಅವರು [illegible] ಮಾಡ್ತಾರೆ, ಕೈಬಿಚ್ಚಿ ಖರ್ಚು ಮಾಡ್ತಾರೆ. ಅವರಿಗೆ ಆಳುಕಾಳುಗಳು ಇರ್ತಾರೆ; ಅವರ ಹತ್ತಿರ ಭರ್ಜರೀ ಮೋಟಾರುಗಳಿರುತ್ತವೆ; ಭವ್ಯವಾದ ಬಂಗಲೆಗಳಿರುತ್ತವೆ; ಥಿಯೇಟರ್, ಸಿನೆಮಾ, ಕಾರ್ನಿವಾಲ್ ಅಲ್ಲೆಲ್ಲಾ ಹೋಗ್ತಾರೆ; ಮೈ ತುಂಬ ಮುತ್ತು ವಜ್ರ ಹಾಕಿಕೊಂಡಿರ್ತಾರೆ; ಬೆಲೆ ಬಾಳೋ ಬಟ್ಟೆ ತೊಟ್ಟುಕೊಂಡಿರ್ತಾರೆ, ಅವರು ಸ್ವತಂತ್ರ-ಪರತಂತ್ರ ಅಂತ ಡಂಗುರ ಹೊಡೆಯೋಲ್ಲ. ಇದೇನಿದ್ದರೂ ಐಶ್ವರ್ಯ-ಬಡತನಗಳ ನಡುವಿನ ಭೇದ," ಉಷಾ ವಿದ್ಯಳ ಕಡೆ ತಿರುಗಿದಳು, "ಏನು ವಿದ್ಯಾರಾಣಿ, ನೀನು ಗಂಡನ ಮನೆ ಬಿಟ್ಟು ಬರದೇ ಹೋಗಿದ್ದರೆ ನೌಕರಿ ಮಾಡ್ತಿದ್ದೆಯಾ ಹೇಳು? ಬೇರೇ ದಿಕ್ಕಿಲ್ಲ ಅಂತ ತಾನೇ ನೌಕರಿ ಮಾಡಬೇಕಾಗಿ ಬಂದಿರೋದು?"

ವಿದ್ಯಳ ಬಗ್ಗೆ ಉಷ ಹೇಳಿದ್ದೆಲ್ಲವೂ ಸರಿಯಾಗಿಯೇ ಇತ್ತು. ಆದರೂ ಅದು ವಿದ್ಯಳಿಗೆ ಸರಿಬೀಳಲಿಲ್ಲ. ಅವಳು ಎದುರು ಹೇಳುವ ಸ್ಥಿತಿಯಲ್ಲಿರಲಿಲ್ಲವಾದ್ದರಿಂದ ಸುಮ್ಮನಿದ್ದಳು.

ಸ್ವಲ್ಪ ಹೊತ್ತು ವಿದ್ಯಳ ಉತ್ತರ ನಿರೀಕ್ಷಿಸುತ್ತಿದ್ದು ಉಷಾ ಮುಂದುವರಿಸಿದಳು, "ಸ್ತ್ರೀ ಸ್ವಾತಂತ್ರ್ಯದ ಅರ್ಥ ಅವಳು ಗುಲಾಮಗಿರಿ ಮಾಡಿಕೊಂಡು ಹೊರಗೆ ಅಲೆದಾಡ ಬೇಕು ಅಂತಲ್ಲ; ಅದರ ಅರ್ಥ ಮನೆ ಬಿಟ್ಟು ಹೊರಗೆ ಬರಬೇಕು, ಮನೆಯ ಬಂಧನ ದಿಂದ ಬಿಡುಗಡೆ ಪಡೆಯಬೇಕು; ಹೊರಗಡೆ ಓಡಾಡಬೇಕು, ಪರದೆ ತೊರೆದು ಸಭೆ ಸಮಾಜಗಳಲ್ಲಿ ಬೆರೆಯಬೇಕು ಅಂತ. ಈ ಸ್ವಾತಂತ್ರ್ಯ ಪಡೆಯಬೇಕಾದರೆ ಐಶ್ವರ್ಯ ಇರಬೇಕು, ನವಲ್ ಬಾಬು."

ಈ ಹೊತ್ತಿಗೆ ಸೀತಾನಾಥ ಹೊರಬಂದ. ನವಲನನ್ನು ನೋಡಿದವನೇ ಅವನು ಹೇಳಿದ, "ಅರೆ ನವಲ್ ಬಾಬು, ನೀನು! ಬಹಳ ದಿನದ ಮೇಲೆ ಮುಖ ತೋರಿಸ್ತಾ ಇದಿ! ಓಹೋ ತಲೆಯಿಂದ ಕಾಲವರೆಗೆ ಖದ್ದರ್, ನೀನು ಪೂರ್ತಿ ಕಾಂಗ್ರೆಸ್ ಆಗಿ ಬಿಟ್ಟಿದಿ!"

"ಹೌದು, ಬಟ್ಟೆಯ ಬಗ್ಗೆ ಹೇಳೋದಾದರೆ ಕಾಂಗ್ರೆಸ್ಸಿನವನಾಗಿದೀನಿ. ಆದರೆ ಇನ್ನೂ ಸಕ್ರಿಯ ರಾಜಕೀಯಕ್ಕೆ ಇಳಿದಿಲ್ಲ. ಇಳಿಯೋ ಯೋಚನೆಯೂ ಇಲ್ಲ," ನವಲ್ ಉತ್ತರಿಸಿದ.

"ಅದೂ ಒಂದು ದಿನ ಆಗುತ್ತೆ. ನಾನು ಹೇಳ್ತೀನಿ ಕೇಳು, ಅದರಲ್ಲಿ ಅಂಥ ತಪ್ಪೇನಿಲ್ಲ" ಎಂದು ಸೀತಾನಾಥ ಉಷಳ ತಡೆ ತಿರುಗಿ, "ಉಷಾ, ಗೌರೀನಾಥಣ್ಣನಿಗೆ ಹೇಳಿಬಿಡು, ನಾನು ಕರ್ನಲ್ ಗ್ರಹಾಮ್‌ರನ್ನ ಹೋಗಿನೋಡಬೇಕಾಗಿತ್ತು, ಕಾರು ತೊಗೊಂಡು ಹೋದೆ ಅಂತ. ನಾನು ವಾಪಸು ಬರೋದು ಹೊತ್ತಾದರೆ ಅವನು ಟಾಂಗಾ ತರಿಸಿಕೊಳ್ಳಲಿ."

"ನೀನೇ ಯಾಕೆ ಟಾಂಗಾ ತಗೊಂಡು ಹೋಗೋಲ್ಲ," ಉಷಾ ಹೇಳಿದಳು.

"ನಾನು ಎಲ್ಲೆಲ್ಲೋ ಹೋಗಬೇಕು. ಟಾಂಗಾದಲ್ಲಿ ತುಂಬ ಹೊತ್ತಾಗುತ್ತೆ. ಒಳ್ಳೇದು. ಕರ್ನಲ್ ಗ್ರಹಾಮ್‌ರನ್ನು ನೋಡಿಯಾದಮೇಲೆ ಕಾರು ಕಳಿಸಿಕೊಡ್ತೀನಿ —ಆರೂವರೆ ಗಂಟೆ ಹೊತ್ತಿಗೆ. ಅಲ್ಲಿಂದ ಟಾಂಗಾ ತಗೊಂಡು ಹೋಗ್ತೀನಿ" ಅಂದು ನವಲನಿಗೆ "ಬರ್ತೀಯಾ ನವಲ್, ನಾನು ಬ್ಯಾಥವ್ ಲೈನ್ಸಿಗೆ ಹೋಗಬೇಕು. ದಾರೀಲಿ ನಿಮ್ಮಿಬ್ಬರನ್ನೂ ಮನೆ ತಲಪಿಸ್ತೀನಿ" ಅಂದ.

ವಿದ್ಯಳಿಗೆ ಇನ್ನೂ ಸ್ವಲ್ಪ ಹೊತ್ತು ಇರುವ ಆಸೆಯಿತ್ತು. ಆದರೆ ನವಲ್ ಎದ್ದು ನಿಂತ. "ಹಾಗಾದರೆ ಬಂದೆ, ಸೀತಾನಾಥ್ ! ನಡಿ ವಿದ್ಯಾ, ಇನ್ನು ಮನೆಗೆ ಹೋಗೋಣ. ಜ್ಞಾನಬಾಬಾ ಬರೋ ಹೊತ್ತಾಯ್ತು."

ಸೀತಾನಾಥ ನವಲನ ಮನೆಯ ಹತ್ತಿರ ವಿದ್ಯಳನ್ನು ಇಳಿಸಿ "ನಡಿ ನವಲ್, ನನ್ನ ಜೊತೆ ಒಂದಿಷ್ಟು ಸುತ್ತಾಡಿ ಬರೋವೆಯಂತೆ. ನಿನ್ನ ಹತ್ತಿರ ಸ್ವಲ್ಪ ಮಾತನಾಡೋದೂ ಇದೆ" ಅಂದ.

"ನಡೀರಿ, ಆದರೆ ನಾನು ಮನೆಗೆ ಬೇಗ ವಾಪಸ್ಸು ಬರಬೇಕು," ನವಲ್ ಹೇಳಿದ. ಬ್ಯಾಥವ್ ಲೈನ್ಸ್ ನಲ್ಲಿ ಸೀತಾನಾಥನಿಗೆ ಇದ್ದದ್ದು ಒಟ್ಟು ಹತ್ತೇ ನಿಮಿಷದ ಕೆಲಸ. ಅಲ್ಲಿಂದ ಅವರಿಬ್ಬರೂ ಸಿವಿಲ್ ಲೈನ್ಸ್ ತಲಪಿದರು. ಸೀತಾನಾಥ ಒಂದು ರೆಸ್ಟೊರ್‍ರ್ಯಾಂಟಿನ ಮುಂದೆ ಕಾರು ನಿಲ್ಲಿಸಿದ. ನವಲನ ಜೊತೆ ಕಾರಿನಿಂದಿಳಿದು ಡ್ರೈವರಿಗೆ "ಕಾರನ್ನು ಮನೇಗೆ ತೊಗೊಂಡು ಹೋಗು" ಎಂದ.

ರೆಸ್ಟೊರ್‍ರ್ಯಾಂಟಿನಲ್ಲಿ ಸೀತಾನಾಥ ಚಹಕ್ಕೆ ಆರ್ಡರ್ ಮಾಡಿ ಮಾತಿಗೆ ಆರಂಭಿಸಿದ, "ನವಲ್, ರಾಜೇಂದ್ರ ಕಿಶೋರ್ ನಿನಗೆ ಗೊತ್ತೆ? ಅವನ ಬಗ್ಗೆ ನಿನ್ನ ಅಭಿಪ್ರಾಯ ಏನು?"

ನವಲ್ ಕೊಂಚ ಯೋಚಿಸಿ, "ನನಗೆ ಅವರು ಚೆನ್ನಾಗಿ ಗೊತ್ತಿಲ್ಲ. ಎರಡು ಮೂರು ಸಲ ಅವರನ್ನ ನೋಡಿದೀನಿ, ಅದೂ ನಿಮ್ಮ ಮನೇನಲ್ಲೇ. ನೋಡಿದರೆ ಬಲು ತೊಡಕಿನ ಮನುಷ್ಯ ಅಂತ ಅನ್ನಿಸುತ್ತೆ. ಯಾಕೆ, ಏನು ಸಮಾಚಾರ?"

"ರಾಜೇಂದ್ರ ಕಿಶೋರ್‌ಗೆ ಮದುವೆಯಾಗಿರೋದು ನಿನಗೆ ಗೊತ್ತೆ?"

"ಅದರಲ್ಲಿ ಆಶ್ಚರ್ಯ ಪಡೋಕೆ ಏನಿದೆ? ಅವರಿಗೆ ಸಾಕಷ್ಟು ವಯಸ್ಸಾಗಿದೆ," ನವಲ್ ನಕ್ಕ.

"ಇಲ್ಲ, ಆಶ್ಚರ್ಯ ಪಡೋಕ್ಕೆ ಏನೂ ಇಲ್ಲ. ಅವನು ವಿಲಾಯಿತಿಗೆ ಹೋಗೋಕ್ಕೆ ಮುಂಚೆಯೇ ಮದುವೆಯಾಗಿತ್ತು. ವಿಷಯ ಏನೂ ಅಂದರೆ ಅವನಿಗೆ ಉಷನ್ನ ಕೊಟ್ಟು ಮದುವೆ ಮಾಡಬೇಕು ಅಂತ ಗೌರೀನಾಥಣ್ಣ ಬಯಸ್ತಿದಾನೆ. ನನಗೆ ಅನ್ನಿಸೋದು, ಅವನೇ ಗೌರೀನಾಥಣ್ಣನಿಗೆ ಹೇಳಿಕೊಂಡಿರಬೇಕು ಅಂತ."

ನವಲನಿಗೆ ಆಕಾಶದಿಂದ ಒಮ್ಮೆಲೇ ಕೆಳಬಿದ್ದಂತಾಯಿತು. "ರಾಜೇಂದ್ರ ಕಿಶೋರ್ ಎರಡನೇ ಮದುವೆ ಮಾಡಿಕೋತಾರೆಯೆ? ಅದು ಯಾಕೆ?"

"ಯಾಕೆ ಅಂದರೆ ಅವನ ಹೆಂಡತಿ ಕುರೂಪಿ, ಓದಿದವಳಲ್ಲ, ಪರದೆಯಲ್ಲಿರ್ತಾಳೆ, ಹಳ್ಳಿಗಾಡಿನ ಬಡ ಹುಡುಗಿ. ಒಬ್ಬ ಐ. ಸಿ. ಎಸ್. ಆಫೀಸರ್‌ನ ಹೆಂಡತಿ ಸುಂದರ ಳಾಗಿರಬೇಕು, ಸುಸಂಸ್ಕೃತಳಾಗಿರಬೇಕು."

ಇಬ್ಬರೂ ಮೌನವಾಗಿ ಚಹ ಕುಡಿಯುತ್ತ ಕುಳಿತುಕೊಂಡರು. ಸ್ವಲ್ಪ ಹೊತ್ತು ಬಿಟ್ಟು ನವಲ್ ಹೇಳಿದ, "ಈ ಪ್ರಸ್ತಾಪದಿಂದ ಗೌರೀನಾಥಣ್ಣನಿಗೆ ತುಂಬ ಸಂತೋಷ ವಾಗಿರಬೇಕು. ಅವರಿಗೆ ಪದವಿ, ಮರ್ಯಾದೆ ಅಂದರೆ ತುಂಬ ಮೋಹ." ನವಲನ ಮುಂದೆ ಈಗ ಉಷಳ ಆಂತರಿಕ ಪರಿವರ್ತನೆಯ ಸ್ವರೂಪ ಬಿಚ್ಚಿ ಕಾಣತೊಡಗಿತ್ತು. "ಸೀತಾನಾಥಣ್ಣ, ನೀವು ಉಷಳನ್ನ ರಾಜೇಂದ್ರ ಕಿಶೋರನಿಗೆ ಕೊಟ್ಟು ಮದುವೆ ಮಾಡೋದರಲ್ಲಿ ನನಗೆ ಒಂದಿಷ್ಟೂ ಅಭ್ಯಂತರವಿಲ್ಲ. ನಾನು ಇರೋ ಸ್ಥಿತೀಲಿ ಉಷಳ ಜೊತೆ ಮದುವೆಯಾಗೋ ಯೋಚನೆ ಮಾಡಲೂ ಕೂಡದು."

"ಆದರೆ ರಾಜೇಂದ್ರ ಕಿಶೋರನಿಗೆ ಅವಳನ್ನ ಕೊಟ್ಟು ಮದುವೆ ಮಾಡೋದರಲ್ಲಿ ನನ್ನ ಅಭ್ಯಂತರವಿದೆ," ಸೀತಾನಾಥ ಹೇಳಿದ, "ಮನೇನಲ್ಲಿ ಪಾಪಾ ಒಬ್ಬರೇ ಗೌರೀ ನಾಥಣ್ಣನ ಪರವಾಗಿದಾರೆ."

"ಈ ವಿಷಯದಲ್ಲಿ ಉಷಾ ಏನು ಹೇಳ್ತಾಳೆ?"

"ಅದೇ ಫಜೀತಿ, ನೋಡು. ಈ ವಿಷಯದಲ್ಲಿ ಅವಳು ಮೌನವಾಗಿದಾಳೆ. ಈ ಮೌನದ ಅರ್ಥಾನ ಒಪ್ಪಿಗೆ ಅಂತ ತೊಗೋಬಹುದು. ನಾನು ಯಾಕೆ ಈಗ ಕಾರು ಕಳಿಸಿದೆ ಅಂದರೆ ಇವತ್ತು ಸಂಜೆಯ ಗಾಡಿಗೆ ರಾಜೇಂದ್ರ ಕಿಶೋರ ಬರ್ತಿದಾನೆ. ಗೌರೀ ನಾಥಣ್ಣ ಅವನನ್ನ ಕರಕೊಂಡು ಬರೋಕ್ಕೆ ಹೋಗ್ತಿದಾನೆ. ಪ್ರಾಯಶಃ ಉಷಾನೂ ಅವನ ಜೊತೆ ಹೋಗಬಹುದು."

ನವಲನ ಕಣ್ಣಮುಂದೆ ಕತ್ತಲೆ ಕವಿದಂತಾಯಿತು. ಅವನು ಎದ್ದು ನಿಂತ, "ಸೀತಾ ನಾಥಣ್ಣ, ನೀವು ನನ್ನ ಸ್ಥಿತೀನ ನನಗೆ ಅರಿವು ಮಾಡಿಕೊಟ್ಟಿರಿ, ಧನ್ಯವಾದ."

ಸೀತಾನಾಥ ನವಲನ ಕೈ ಹಿಡಿದುಕೊಂಡ, "ನವಲ್, ನೀನು ನನ್ನನ್ನ ತಪ್ಪು ತಿಳೀತಿದಿ. ನಿನಗೆ ಉಷಳ ಮೇಲೆ ಅಧಿಕಾರವಿದೆ. ನೀನು ಆ ಅಧಿಕಾರಾನ ಬಿಟ್ಟುಕೊಡಬಾರದು. ನನಗೆ ರಾಜೇಂದ್ರ ಕುಮಾರ ಇಷ್ಟವಿಲ್ಲ. ಒಬ್ಬ ಹೆಂಡತಿ ಇದ್ದುಕೊಂಡು ಇನ್ನೊಂದು ಮದುವೆ ಮಾಡಿಕೊಳ್ಳೋಕೆ ಆಸೆ ಪಡೋ ಮನುಷ್ಯನನ್ನ ಅವನಿಗೆ ಎಷ್ಟು ದೊಡ್ಡ ಪದವಿಯಿರಲಿ, ಮರ್ಯಾದೆಯಿರಲಿ, ನಾನು ನೀಚ ಅಂತ ತಿಳೀತೀನಿ."

ನವಲ್ ಖಿನ್ನವಾದ ಧ್ವನಿಯಲ್ಲಿ ಉತ್ತರ ಕೊಟ್ಟ, "ಯಾರ ಮೇಲೆ ಯಾರಿಗೂ ಅಧಿಕಾರವಿಲ್ಲ, ಸೀತಾನಾಥಣ್ಣ. ಉಷಳ ಮೇಲೆ ನನಗೇನೂ ಅಧಿಕಾರವಿಲ್ಲ, ನನ್ನ ಮೇಲೆ ಅವಳಿಗೇನೂ ಅಧಿಕಾರವಿಲ್ಲ. ಮನುಷ್ಯನಿಗೆ ತನ್ನ ಮೇಲಷ್ಟೇ ಅಧಿಕಾರವಿರುತ್ತೆ."

ಸೀತಾನಾಥನ ಮುಖದ ಮೇಲೆ ನಿರಾಶೆಯ ಒಂದು ಛಾಯೆ ಕವಿಯಿತು. "ಇಲ್ಲ, ಸಾಧ್ಯವಾಗೋಲ್ಲ, ಎಲ್ಲಾ ಕೈಬಿಟ್ಟುಹೋದ ಹಾಗೆ ಕಾಣುತ್ತೆ. ಇದೆಲ್ಲಾ ಗೌರೀನಾಥಣ್ಣನ

ಕರಾಮತ್ತು ಅಂತ ನನಗೆ ಗೊತ್ತಿದೆ. ಅವನಿಗೆ ಪದವಿ-ಮರ್ಯಾದೆ, ಭೋಗ-ವಿಲಾಸ ಅಂದರೆ ಮೋಹ. ಇನ್ನೊಬ್ಬರು ದುಡೀಬೇಕು, ಹೋರಾಡಬೇಕು. ತಾನು ಅದರ ಮೇಲೆ ಮಜಾ ಮಾಡಬೇಕು—ಇದು ಅವನ ದೃಷ್ಟಿಕೋನ, ನಿನ್ನಿಂದ ಸಹಾಯ ಸಿಗ ಬಹುದು ಅಂತ ನಾನು ಅಂದುಕೊಂಡಿದ್ದೆ. ಆದರೆ ನೀನು ಆದರ್ಶವಾದಿ, ಯಥಾರ್ಥ ವಾದದ ಕುರೂಪತೆಯಿಂದ ದೂರ ಓಡ್ತಿ! ಪಾಪನ ಜೊತೆಯೇ ನಾನು ಈ ವಿಷಯ ವಾಗಿ ಮಾತಾಡ್ತೀನಿ."

ನವಲ್ ಸಿವಿಲ್‌ಲೈನ್ಸ್‌ನಿಂದ ಮನೆಗೆ ಬಂದ. ಜ್ಞಾನಪ್ರಕಾಶ ಕಾಂಗ್ರೆಸ್ ಕಮಿಟಿಯಿಂದ ಹಿಂದಿರುಗಿ ಬಂದು ಡ್ರಾಯಿಂಗ್ ರೂಮಿನಲ್ಲಿ ಸೋಫದ ಮೇಲೆ ಮಲಗಿದ್ದ. ರುಕ್ಮಿಣಿ ಬಾಗಿಲ ಹತ್ತಿರ ನಿಂತಿದ್ದಳು. ಜ್ವಾಲಾಪ್ರಸಾದ ಹೇಳುತ್ತಿದ್ದ, "ನಿಮಗೆಲ್ಲಾ ಹೇಗೆ ಸರಿ ಅನ್ನಿಸುತ್ತೋ ಹಾಗೆ ಮಾಡಿ! ಎಂಬತ್ತು ರೂಪಾಯಿಯೇನೂ ಕಡಿಮೆಯಲ್ಲ. ಹೌದು, ಒಂದು ಟಾಂಗಾ ಇಡಬೇಕಾಗುತ್ತೆ, ಇಲ್ಲದಿದ್ದರೆ ವಿದ್ಯಳಿಗೆ ಹೋಗಿಬರೋಕ್ಕೆ ಕಷ್ಟವಾಗುತ್ತೆ."

"ಟಾಂಗದ ಅಗತ್ಯ ಏನಿದೆ, ತಾತ! ನವಲಣ್ಣ ತಿಂಗಳಿಗೆ ಹತ್ತು ರೂಪಾಯಿನ ಹಾಗೆ ಯಾವನಾದರೂ ಟಾಂಗಾದವನನ್ನ ಗೊತ್ತು ಮಾಡ್ತಾನೆ. ಅವನು ಬೆಳಗ್ಗೆ ಕರ ಕೊಂಡು ಹೋಗಿ ತಲಪಿಸ್ತಾನೆ; ಸಂಜೆ ವಾಪಸು ಮನೇಗೆ ಕರಕೊಂಡು ಬಂದು ಬಿಡ್ತಾನೆ ಏನು ಜ್ಞಾನಬಾಬಾ!"

"ಹೌದು, ಅದೇಸರಿ! ನಾನು ಸ್ವಲ್ಪದಿನದಿಂದ ಒಂದು ಹೊಸ ಕಾರು ಕೊಂಡುಕೋ ಬೇಕು ಅಂತ ಇದೀನಿ. ಹಳೆಯ ಕಾರನ್ನ ಮಾರಿಯೂ ಆಯಿತು. ಆದರೆ ನನ್ನದೇನು ನೆಚ್ಚಿಗೆ? ಜೈಲಿಗೆ ಹೋಗೋರ ಪಟ್ಟೀಲಿ ನನ್ನ ಹೆಸರೇ ಮೊದಲು ಇರುತ್ತೇನೋ."

ಈ ಹೊತ್ತಿಗೆ ನವಲ್ ಬಂದ. ಅವನ ಮುಖ ಬಿಳುಪಾಗಿತ್ತು. ಅದನ್ನು ನೋಡಿ ದವಳೇ ವಿದ್ಯಾ ಕೇಳಿದಳು, "ಯಾಕಣ್ಣ, ಏನಾಯಿತು? ಹುಷಾರಾಗಿದಿ ಅಲ್ಲವೆ?"

ನವಲ್ ಕುರ್ಚಿಯ ಮೇಲೆ ಕುಳಿತುಕೊಂಡು ಕಣ್ಣುಮುಚ್ಚಿದ, "ಹ್ಞೂ, ಹುಷಾರಾಗಿ ದೀನಿ. ಒಂದು ಗ್ಲಾಸು ನೀರುಕೊಡು, ವಿದ್ಯಾ."

ನೀರು ಕುಡಿದಾದ ಮೇಲೆ ನವಲನಿಗೆ ಸರಿಹೋಯಿತು. ಜ್ಞಾನಪ್ರಕಾಶ ಕೇಳಿದ, "ಯಾಕೆ, ನವಲ್? ಏನಾಯಿತು?"

ಒಂದು ಒಣನಗೆ ನಗುತ್ತ ನವಲ್ ಹೇಳಿದ, "ಏನೂ ಇಲ್ಲ, ಜ್ಞಾನಬಾಬಾ! ಸ್ವಲ್ಪ ಹೊತ್ತಿಗೆ ಮುಂಚೆ ಒಂದು ದುಃಸ್ವಪ್ನ ನೋಡಿದೆ. ಅದರಿಂದ ಮನಸ್ಸಿಗೆ ಸ್ವಲ್ಪ ಆಘಾತ ವಾದ ಹಾಗಾಯಿತು. ಆದರೆ ಆ ದುಃಸ್ವಪ್ನ ಬಂತು, ಹೋಯಿತು. ಈಗ ನಾನು ಸರಿಯಾಗಿದೀನಿ."

"ಬೆಳಗಿನ ಹೊತ್ತು ಎದ್ದಿರೋವಾಗ ಅದೆಂಥ ಸ್ವಪ್ನ?" ಜ್ವಾಲಾಪ್ರಸಾದ ಕೇಳಿದ.

"ಹಾಗೇ ಸುಮ್ಮನೆ ಹಾಸ್ಯಕ್ಕೆ ಹೇಳಿದೆ," ನವಲ್ ಜಾರಿಕೊಳ್ಳಲು ಪ್ರಯತ್ನಿಸಿದ. ಆಮೇಲೆ ಜ್ಞಾನಪ್ರಕಾಶನ ಕಡೆ ತಿರುಗಿ, "ಗಾಂಧೀಜಿಯವರ ಪತ್ರ ಪ್ರಕಟವಾದ ಮೇಲೆ ಸ್ಥಿತಿ ಹೇಗಿದೆ?"

"ಸ್ಥಿತಿ ತಿಳಿಗೊಂಡಿಲ್ಲ. ಆದರೂ ಗಾಂಧೀಜಿಯವರ ಆ ಪತ್ರದಿಂದ ಏನೂ ಪರಿಣಾಮವಾಗೋಲ್ಲ ಅಂತ ಕಾಣಿಸುತ್ತೆ. ಸತ್ಯಾಗ್ರಹ ಮಾಡಲೇಬೇಕಾಗುತ್ತೆ. ಆಯ್ಕೆಯಾಗಿರೋ ಸತ್ಯಾಗ್ರಹಿಗಳೆಲ್ಲರೂ ಸಾಬರ್‌ಮತೀಲಿ ಒಟ್ಟಾಗಿ ಸೇರ್‍ತಿದಾರೆ. ಮಾರ್ಚಿ ಹನ್ನೆರಡಕ್ಕೆ ಅವರೆಲ್ಲರೂ ಮಹಾತ್ಮಗಾಂಧಿಯವರ ಜೊತೆ ದಾಂಡಿಯಲ್ಲಿ ಉಪ್ಪಿನ ಕಾಯಿದೆ ಮುರಿಯೋದಕ್ಕೆ ಹೊರಡ್ತಾರೆ. ದಾಂಡಿ ಸಾಬರಮತಿಯಿಂದ ಎರಡು ಮೈಲಿ ದೂರದಲ್ಲಿದೆ. ಸತ್ಯಾಗ್ರಹಿಗಳೆಲ್ಲರೂ ಅಲ್ಲಿಗೆ ನಡಕೊಂಡು ಹೋಗ್ತಿದಾರೆ."

ನವಲನ ಒಳಗೆ ಕೊರೆಯುತ್ತಿದ್ದ ದುಃಖವೆಲ್ಲವೂ ಈ ಹೊತ್ತಿಗೆ ಮಾಯವಾಗಿತ್ತು. "ನೀವೂ ಗಾಂಧೀಜಿಯ ಜೊತೆ ಸತ್ಯಾಗ್ರಹ ಮಾಡೋಕ್ಕೆ ಹೋಗಬೇಕಾಗಿತ್ತು."

"ಹೌದು, ನಾನು ಅವರಿಗೆ ಕಾಗದ ಬರೆದಿದ್ದೆ. ಆದರೆ ಅವರು ಒಪ್ಪಲಿಲ್ಲ. ಏಪ್ರಿಲ್ ಐದಕ್ಕೆ ಅವರು ಉಪ್ಪಿನ ಕಾಯಿದೆ ಮುರಿಯೋ ನಿರೀಕ್ಷೆಯಿದೆ. ಅವತ್ತು ಇಡೀ ಹಿಂದುಸ್ತಾನದಲ್ಲಿ ಎಲ್ಲೆಲ್ಲೂ ಉಪ್ಪಿನ ಕಾಯಿದೆ ಮುರೀತಾರೆ. ನಾವೆಲ್ಲರೂ ನಮ್ಮ ನಮ್ಮ ಜಾಗದಲ್ಲಿದ್ದುಕೊಂಡು ಸತ್ಯಾಗ್ರಹ ಮಾಡಬೇಕು ಅಂತ ಅಪ್ಪಣೆಯಾಗಿದೆ."

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು. ಆಮೇಲೆ ಜ್ವಾಲಾಪ್ರಸಾದ ಕೇಳಿದ, "ಹಾಗಾದರೆ ನೀನೂ ಸತ್ಯಾಗ್ರಹ ಮಾಡ್ತೀಯಾ, ಜ್ಞಾನೂ?"

"ಹೌದಣ್ಣ, ಅಲಹಾಬಾದಿನಲ್ಲಿ ಮೊದಲನೆಯ ದಿನ ಉಪ್ಪಿನ ಕಾಯಿದೆ ಮುರಿಯೋ ರಲ್ಲಿ ನನ್ನ ಹೆಸರೂ ಇದೆ. ಇದು ಕಾದಾಟದ ಶ್ರೀ ಓನ್ನಾಮ"

"ಆಮೇಲೆ?" ಜ್ವಾಲಾಪ್ರಸಾದ ಕೇಳಿದ.

ಜ್ಞಾನಪ್ರಕಾಶ ನಕ್ಕ, "ಆಮೇಲೆ ಇಡೀ ಜನಕೋಟಿ ಕಾಯಿದೆ ಮುರಿಯೋಕ್ಕೆ ಎದ್ದುನಿಲ್ಲುತ್ತೆ. ಯಾವುದು ತಪ್ಪೋ ಅದನ್ನ ವಿರೋಧಿಸೋದು ನಮ್ಮ ಧರ್ಮ. ಆದರೆ ಈ ವಿರೋಧ ಅಹಿಂಸಾತ್ಮಕವಾಗಿರುತ್ತೆ. ನಾವುಗಳು ಹೊಸ ತರಹದ ಕಾದಾಟ ನಡಸ್ತಿದೀವಿ."

ಊಟವಾದ ಮೇಲೆ ವಿದ್ಯಾ ನವಲನನ್ನು ಕೇಳಿದಳು, "ಅಣ್ಣ, ವಾಪಸು ಬಂದಾಗ ಅಷ್ಟೊಂದು ಉದ್ವೇಗದಲ್ಲಿದ್ದೆಯಲ್ಲ, ಸತ್ಯವಾಗಿ ಹೇಳು. ನಿನಗೂ ಸೀತಾನಾಥಣ್ಣನಿಗೂ ಏನೇನು ಮಾತುಕತೆಯಾಯಿತು ಅಂತ."

ನವಲ್ ದೈನ್ಯದಿಂದ ಹೇಳಿದ, "ಇನ್ನೂ ಒಂದು ನಿರಾಶೆ ಎದುರಾಯಿತು, ಇನ್ನೂ ಒಂದು ಹೊಡೆತ ಬಿತ್ತು. ಉಷಾ ನನ್ನಿಂದ ದೂರವಾದಳು."

"ಅಣ್ಣ, ನೀನು ತಪ್ಪು ಹೇಳ್ತಿದಿ! ಸತ್ಯ ಅಂದರೆ ನೀನು ಉಷಳಿಂದ ದೂರ

ವಾಗಿದಿ. ಇದು ನಿನ್ನ ಸೋಲಲ್ಲ, ಗೆಲವು."

ನವಲ್ ಹುಚ್ಚನಂತೆ ನಕ್ಕ, "ಸೋಲು-ಗೆಲವು—ಇವುಗಳ ಅರ್ಥ ಏನು ಅಂತ ಯಾರು ಬಲ್ಲರು, ವಿದ್ಯಾ! ನನಗೆ ಇಷ್ಟು ಗೊತ್ತು, ಒಂದೇ ಸಮನೆ ನನ್ನನ್ನು ನಾನು ಕಳಕೊತಿದೀನಿ, ಮುರಿದು ಬೀಳ್ತಿದೀನಿ."

ವಿದ್ಯಾ ನವಲನನ್ನು ಬಿರುಸಾಗಿ ನೋಡಿದಳು, "ಅಣ್ಣ, ನಿನ್ನನ್ನು ನೀನು ಮುರಿದು ಕೊಂಡು ಮತ್ತೆ ಕಟ್ಟಿಕೊಳ್ತಿದಿ; ಕಳಕೊಂಡು ಮತ್ತೆ ಪಡೀತಿದಿ. ಅಂದಮೇಲೆ ಈ ಅವಿಶ್ವಾಸ, ಈ ಹೇಡಿತನ ಏಕೆ? ಧೈರ್ಯ ತಂದುಕೋ, ಚೇತರಿಸಿಕೊ."

ನವಲ್ ತಂಗಿಯ ಕಡೆ ಆಶ್ಚರ್ಯದಿಂದ ನೋಡಿದ. ಆಮೇಲೆ ಅವಳ ಕೈ ಹಿಡಿದು ಕೊಂಡು ಇದ್ದಕ್ಕಿದ್ದಂತೆ ಬಿಕ್ಕತೊಡಗಿದ. "ನೀನು ಹೇಳೋದು ಸರಿ, ವಿದ್ಯಾ. ಯಾವುದು ಅಸತ್ಯವಾಗಿತ್ತೋ ಅದು ಕಳೆದುಹೋಯಿತು! ಆದರೆ ಈಗ ಸತ್ಯ ಯಾವುದು ಅಂತ ಹುಡುಕಬೇಕು."

## ಎಂಟು

"ಜಗತ್ತು ಎಲ್ಲೀಗೆ ಬಂತು! ಮುಂದೆ ಇನ್ನೂ ಏನೇನು ಆಗೋದಿದೆ?"—ಜ್ವಾಲಾ ಪ್ರಸಾದ ತನ್ನನ್ನು ತಾನೇ ಕೇಳಿಕೊಂಡ. ಅವನ ಕಣ್ಣು ಕೊಂಚ ತೇವವಾಗಿತ್ತು, ಧ್ವನಿ ನಡುಗುತ್ತಿತ್ತು. ರುಕ್ಮಿಣಿ ಎದುರಿಗೆ ತಲೆ ತಗ್ಗಿಸಿಕೊಂಡು ನಿಂತಿದ್ದಳು. ಜ್ವಾಲಾ ಪ್ರಸಾದ ಹೇಳಿದ, "ನನ್ನ ಮಾತು ಕೇಳೋಲ್ಲ! ಅವನು ನನ್ನನ್ನ ತಿಳಿವಳಿಕೆ ಸಾಲದವನು, ಅಜ್ಞಾನಿ ಅಂತ ತಿಳೀತಾನೆ. ನನಗೆ ಅವನನ್ನ ಅರ್ಥ ಮಾಡಿಕೊಳ್ಳೋಕ್ಕೆ ಆಗ್ತಿಲ್ಲ. ನನ್ನ ಬುದ್ಧಿಯೇ ಕಡಿಮೆಯಾಗಿದೆಯೋ ಅವನದ್ದು ಹೆಚ್ಚಾಗಿದೆಯೋ ಗೊತ್ತಿಲ್ಲ!"

"ಪರೀಕ್ಷೆನಾದರೂ ಮುಗಿಸಲಿ," ರುಕ್ಮಿಣಿ ಹೇಳಿದಳು. "ನೀವು ಸ್ವಲ್ಪ ಗದರಿಸಿ ಹೇಳಿ, ಮೇಲು-ಕೀಳು ತೋರಿಸಿಕೊಡಿ."

ಜ್ವಾಲಾಪ್ರಸಾದ ಹತಪ್ರಭನಾಗಿ ಹೇಳಿದ, "ಯಾರನ್ನ ಗದರಿಸಿಕೊಳ್ಳೋದು? ಯಾರಿಗೆ ಮೇಲು-ಕೀಳು ತೋರಿಸಿಕೊಡೋದು! ಕೆಟ್ಟ ಕೆಲಸ ಮಾಡಿದೋರನ್ನಾದರೆ ಗದರಿಸಿಕೋಬಹುದು. ಆದರೆ ಅವನು ಮಾಡ್ತಿರೋದು ಕೆಟ್ಟ ಕೆಲಸವಲ್ಲ. ಇವತ್ತು ಮೇಲು ಯಾವುದು, ಕೀಳು ಯಾವುದು ಅಂತ ತಿಳಿಯೋದೇ ಕಷ್ಟವಾಗಿದೆ. ನೀನೇ ಯೋಚಿಸು. ಮೊದಲು ಜನ ಜೈಲನ್ನು ಕಂಡು ಹೆದರ್ತಿದ್ದರು. ಇವತ್ತು ಶ್ರೀಕೃಷ್ಣ ಮಂದಿರ ಅಂದುಕೊಂಡು ದೊಡ್ಡದೊಡ್ಡೋರೆಲ್ಲಾ ಹೋಗ್ತಿದಾರೆ. ಇಲ್ಲಮ್ಮ, ಅವನಿಗೆ ಮೇಲು-ಕೀಳು ತೋರಿಸೋಕ್ಕೆ ಹೋಗಿ ನಾನು ಸೋತಿದೀನಿ."

ರುಕ್ಮಿಣಿ ಕಣ್ಣೀರೊರಸಿಕೊಳ್ಳುತ್ತ ಹೇಳಿದಳು, "ಅಪ್ಪಾ, ಈ ನಡೀತಿರೋದೆಲ್ಲಾ

ಏನು? ಯಾವದಾದರೂ ದಾರಿ ಹುಡುಕಿ."

ಜ್ವಾಲಾಪ್ರಸಾದ ರುಕ್ಮಿಣಿಗೆ ಏನೂ ಉತ್ತರ ಕೊಡಲಿಲ್ಲ. ಅವನು ಉತ್ತರ ಕೊಡುವ ಸ್ಥಿತಿಯಲ್ಲಿಯೂ ಇರಲಿಲ್ಲ. ನಡೀತಿರೋದು ಏನು?—ಇದು ಹೊಸ ಪ್ರಶ್ನೆ ಯೇನಲ್ಲ. ಅವನು ಜೀವನಪೂರ್ತಿ ಇದೇ ಪ್ರಶ್ನೆಯನ್ನು ಎದುರಿಸಿದ್ದ. ಅವನಿಗೆ ಈ ಪ್ರಶ್ನೆಗೆ ಯಾವಾಗಲೂ ಏನೂ ಉತ್ತರ ಸಿಕ್ಕಿರಲಿಲ್ಲ. ಯಾರಿಗೂ ಯಾವುದರ ಮೇಲೂ ಅಧಿಕಾರವಿಲ್ಲ; ಯಾರೂ ಏನನ್ನೂ ಮಾಡುವಂತಿಲ್ಲ, ಮಾಡುವುದು ಸಾಧ್ಯವೂ ಇಲ್ಲ. ಎಲ್ಲವೂ ತನಗೆ ತಾನೇ ನಡೆಯುತ್ತಿದೆ.

ರುಕ್ಮಿಣಿ ಮೌನವಾಗಿ ನಿಂತಿದ್ದಳು. ಅವಳು ಜ್ವಾಲಾಪ್ರಸಾದನ ಉತ್ತರದ ನಿರೀಕ್ಷೆ ಯಲ್ಲಿದ್ದಳು, ಒಂದೊಂದಾಗಿ ಎಲ್ಲವೂ ಕೊಳ್ಳೆಹೋದುದನ್ನು ನೋಡುತ್ತ, ಎಲ್ಲಿಂದಾದರೂ ಏನಾದರೂ ಸಹಾಯ ಬಂದೀತೆ ಎಂದು ಆಶಿಸುತ್ತಿದ್ದ ಆ ಅಸಹಾಯಳಾದ ಅಬಲೆ ಹೆಂಗಸು. ಆಮೇಲೆ ಅವಳು ಗೋಳಿನ ಧ್ವನಿಯಲ್ಲಿ ಹೇಳಿದಳು, "ಅಪ್ಪಾ, ಹೇಗಾದರೂ ಅವನನ್ನ ತಡೀರಿ. ಜೈಲಿನಲ್ಲಿ ಅವನು ಹೇಗಿರ್ತಾನೆ? ಅಲ್ಲಿ ಕಾಳು ಬೀಸಬೇಕಾಗುತ್ತೆ, ಹಗ್ಗ ಹೊಸೆಯಬೇಕಾಗುತ್ತೆ."

ಜ್ವಾಲಾಪ್ರಸಾದ ನಿಟ್ಟುಸಿರು ಬಿಟ್ಟ. "ಈ ಬೀಸೋದು, ಹೊಸೆಯೋದು ನನ್ನ ಚಿಂತೆಯಲ್ಲ. ಆದರೆ... ಆದರೆ...ಈ ಜೈಲಿಗೆ ಹೋಗೋದು ಅನ್ನೋದೇ ವಿಚಿತ್ರ ವಾಗಿ ಕಾಣುತ್ತೆ. ಇದೆಲ್ಲಾದಕ್ಕೂ ಜ್ಞಾನೂನೇ ಹೊಣೆ," ಜ್ವಾಲಾಪ್ರಸಾದನ ಧ್ವನಿ ಸ್ವಲ್ಪ ಖಾರವಾಯಿತು. "ಸ್ವತಃ ತಾನು ತಪ್ಪುದಾರಿ ಹಿಡಿದು, ತನ್ನ ಬಾಳನ್ನ ಹಾಳು ಮಾಡಿಕೊಂಡ. ಈಗ ಈ ಹುಡುಗನ ಬುದ್ಧಿ ಕೆಡಿಸ್ತಿದಾನೆ!"

"ಹಾಗನ್ನಬೇಡಿ, ಅಪ್ಪಾ. ಇದರಲ್ಲಿ ಮನುಷ್ಯರದ್ದೇನೂ ತಪ್ಪಿಲ್ಲ. ಇದೆಲ್ಲಾ ದೇವರ ಕೋಪ. ದೇವರು ನಮ್ಮನ್ನು ಹಾಳುಮಾಡೋಕ್ಕೆ ಸಂಕಲ್ಪ ಮಾಡಿದ ಹಾಗಿದೆ!" ರುಕ್ಮಿಣಿ ಕಣ್ಣೀರು ಒರಸಿಕೊಳ್ಳುತ್ತ ಅಲ್ಲಿಂದ ಹೊರಟುಹೋದಳು.

ನವಲ್ ಜ್ಞಾನಪ್ರಕಾಶನ ಜೊತೆ ಡ್ರಾಯಿಂಗ್ ರೂಮಿನಲ್ಲಿ ಕುಳಿತು ಮಾತಾಡುತ್ತಿದ್ದ. ವಿದ್ಯಳೂ ಅಲ್ಲೇ ಕುಳಿತಿದ್ದಳು. ಜ್ಞಾನಪ್ರಕಾಶ ಹೇಳಿದ, "ನಾನು ಮೊದಲನೆ ಗುಂಪಿ ನಲ್ಲಿ ಹೆಸರು ಬರಿಸಿದೀನಿ. ನಿನ್ನದು ಎರಡನೆ ಗುಂಪಿನಲ್ಲಿರುತ್ತೆ."

ನವಲ್ ನಕ್ಕ, "ಇಲ್ಲ ಜ್ಞಾನಬಾಬಾ, ಮೊದಲನೆ ಗುಂಪಿನಲ್ಲೇ ನಾನು ಹೋಗಬೇಕು. ನೀವು ಕನಿಷ್ಠ ಒಂದು ವಾರದವರೆಗಾದರೂ ಜೈಲಿನಿಂದ ಹೊರಗಿರಬೇಕು. ಈ ಆಂದೋಳನಾನ ಸಂಘಟನೆ ಮಾಡಬೇಕಲ್ಲವೆ? ಏನು ವಿದ್ಯಾ?"

ವಿದ್ಯಾ ನವಲ್ ಹೇಳಿದುದನ್ನು ಸಮರ್ಥಿಸಿದಳು, "ಹೌದು ಜ್ಞಾನಬಾಬಾ, ಅಣ್ಣ ಮೊದಲನೆ ಗುಂಪಿನಲ್ಲಿ ಹೋಗೋದೆ ವಾಸಿ."

ಜ್ಞಾನಪ್ರಕಾಶ ನಕ್ಕ, "ಏನು ವಿದ್ಯಾ, ನೀನು ಉಪ್ಪು ಮಾಡೋಕ್ಕೆ ಬರೋಲ್ಲವೆ?"

" ಇಲ್ಲ ಬಾಬಾ, ಇದೆಲ್ಲದರಿಂದ, ನನ್ನನ್ನ ದೂರವೇ ಇಡಿ. ಈ ಜೈಲಿಗೆ ಹೋಗೋದು, ಜಗಳ-ಕಾದಾಟಗಳೆಲ್ಲಾ ಗಂಡಸರಿಗೆ ಕಳೆ ಕೊಡುತ್ತವೆ." ಮತ್ತೆ ಕೊಂಚ ತಡೆದು ಹೇಳಿದಳು, " ಯಾರು ಬಲ್ಲರು ? ಅಗತ್ಯ ಬಿದ್ದರೆ ನಾನೂ ಬರಬೇಕಾಗುತ್ತೋ ಏನೋ ! "

" ಇಲ್ಲಾ ವಿದ್ಯಾ. ನಾನು ಸುಮ್ಮನೆ ಹಾಸ್ಯಕ್ಕೆ ಹೇಳ್ತಿದ್ದೆ. ನೀನು ಬರಬೇಕಾಗಿಲ್ಲ."

ಈ ಹೊತ್ತಿಗೆ ಜ್ವಾಲಾಪ್ರಸಾದ ಡ್ರಾಯಿಂಗ್ ರೂಮಿನೊಳಗೆ ಬಂದ. ಅವನು ಎಂದಿಗಿಂತ ಹೆಚ್ಚು ಗಂಭೀರನಾಗಿದ್ದ. ಅವನು ಬಂದೊಡನೆಯೇ ಇವರ ಮಾತುಕತೆ ನಿಂತಿತು. ಸ್ವಲ್ಪ ಹೊತ್ತು ಜ್ವಾಲಾಪ್ರಸಾದ ಮೂವರನ್ನೂ ಎಡೆಬಿಡದೆ ನೋಡುತ್ತಿದ್ದ. ಆಮೇಲೆ ನವಲನಿಗೆ ಹೇಳಿದ, " ನವಲ್, ನಾಡಿದ್ದು ಉಪ್ಪಿನ ಸತ್ಯಾಗ್ರಹ ಮಾಡೋದರಲ್ಲಿ ನಿನ್ನ ಹೆಸರೂ ಇದೆ ಅಂತ ಕೇಳಿದೆ. ಹಾಗಾದರೆ ನೀನು ಓದು-ಬರಹ ಬಿಟ್ಟು ಜೈಲಿಗೆ ಹೋಗೋದು ಅಂತ ನಿಶ್ಚಯಿಸಿದೀಯಾ ?"

" ಹೌದು, ತಾತ. ನಾನು ಬಹಳ ದಿನದಿಂದ ನನ್ನ ಬದುಕಿನ ದಾರಿ ಯಾವುದು ಅಂತ ಯೋಚಿಸ್ತಿದ್ದೆ. ಈ ವಕೀಲವೃತ್ತೀಲಿ ನನಗೆ ಯಶಸ್ಸು ಸಿಗೋಲ್ಲ ಅಂತ ಅನ್ನಿಸೋಕ್ಕೆ ಷುರುವಾಗಿದೆ. ಸುಳ್ಳು, ಪುಸಲಾವಣೆ, ಮೋಸ ಇವೆಲ್ಲಾ ವಕೀಲವೃತ್ತಿಗೆ ಅವಶ್ಯಕವಾಗಿರಬೇಕಾದ ಗುಣಗಳು. ಇವೊಂದೂ ನನ್ನಲ್ಲಿಲ್ಲ. ನಾನು ಅದರಿಂದ ದೂರ ಇದ್ದಷ್ಟೂ ಒಳ್ಳೇದು. ವಕೀಲವೃತ್ತಿ ಮಾಡೋಕ್ಕೆ ಮನಸ್ಸಿಲ್ಲದೆ ಇರೋವಾಗ ಪರೀಕ್ಷೆಗೆ ಕೂತುಕೊಳ್ಳೋದು ವ್ಯರ್ಥ."

" ಹಾಗಾದರೆ ನಿನ್ನ ಈ ಎರಡು ವರ್ಷ ವ್ಯರ್ಥವಾಯಿತಲ್ಲ."

" ಇಲ್ಲ, ತಾತ. ಈ ಎರಡು ವರ್ಷದಲ್ಲಿ ನಾನು ಬೇಕಾದಷ್ಟು ನೋಡಿದೆ, ಬೇಕಾದಷ್ಟು ಕಲಿತೆ, ಬೇಕಾದಷ್ಟು ತಿಳಕೊಂಡೆ. ಎಷ್ಟೊಂದು ಜನ ಹುಡುಗರು ವಿದ್ಯಾಭ್ಯಾಸ ಮಾಡಿ ಕೆಲಸವಿಲ್ಲದೆ ಅಲೀತಿದಾರೆ ಅಂತ ನೀವೇ ನೋಡ್ತಿದೀರಿ. ಅವರೆದೆಯಲ್ಲಿ ಕಹಿ ತುಂಬಿಕೊಂಡಿದೆ. ಸಾವಿರಾರು ಯುವಕರು ವಕೀಲರಾಗಿದ್ದಾರೆ, ಅವರಿಗೆ ತಿನ್ನೋಕ್ಕೆ ಸಹ ಗಿಟ್ಟಿಲ್ಲ. ಸಾವಿರಾರು ಯುವಕರು ಬಿ. ಎ., ಎಂ. ಎ. ಪಾಸು ಮಾಡಿ ಆಫೀಸಿಂದ ಆಫೀಸಿಗೆ ಅಲೀತಿದಾರೆ. ಅವರಿಗೆ ಕೆಲಸ ಸಿಕ್ತಿಲ್ಲ. ಬೇರೆ ಏನಿಲ್ಲದೆ ಹೋದರೂ ನಾನು ಈ ತರಹದ ಹತಾಶೆ, ನಿರಾಶೆ, ಕಹಿಗಳಿಂದ ಬಚಾವಾಗಿದೀನಿ. ಏನು ಜ್ಞಾನಬಾಬಾ, ನಾನು ಹೇಳಿದ್ದು ತಪ್ಪಿಲ್ಲ ತಾನೇ ? "

ಜ್ವಾಲಾಪ್ರಸಾದ ಕೊಂಚ ಕೋಪದಿಂದ ಹೇಳಿದ, " ನೀನು ಹ್ಞಾ ಅಂದದ್ದಕ್ಕೆ ಜ್ಞಾನೂ ಹ್ಞೂ ಅಂತಾನೆ. ಇವನು ಬದುಕಿನಲ್ಲಿ ಒಂದು ಮದುವೆ ಮಾಡಿಕೊಳ್ಳಲಿಲ್ಲ; ಒಂದು ಕಸುಬು ಅಂತ ಮಾಡಲಿಲ್ಲ. ನೀನು ಇವನ ಷಾಗಿರ್ದಾಗಿದಿ. "

ಜ್ಞಾನಪ್ರಕಾಶ ತಿರುಗಿ ಹೇಳಿದ, " ಅಣ್ಣಾ, ಈ ಮದುವೆ-ಲಗ್ನ ಅಂತ ಮಾಡಿ

ಕೊಂಡು ಯಾರು, ಏನು ಪಡೆದಿದಾರೆ? ಈ ಚಿಂತೆ, ಭಯ, ಶಂಕೆ—ಕನಿಷ್ಠ ಇವು ಗಳಿಂದಾದರೂ ನಾನು ಮುಕ್ತಿ ಪಡೆದಿದೀನಿ. ಇನ್ನು ಷಾಗಿರ್ದಿನ ಮಾತು. ಯಾರು ಯಾರಿಗೂ ಷಾಗಿರ್ದಲ್ಲ. ಎಲ್ಲರೂ ತಮ್ಮ ತಮ್ಮ ಆಂತರಿಕ ಪ್ರೇರಣೆಯಿಂದ ಕೆಲಸ ಮಾಡ್ತಾರೆ."

"ಹೌದು ತಾತ, ಜ್ಞಾನಬಾಬಾ ಹೇಳ್ತಿರೋದು ಸರಿ. ಗೀತೇಲೂ ಅದನ್ನೇ ಬರೆದಿದೆ," ವಿದ್ಯಾ ಹೇಳಿದಳು.

ಜ್ವಾಲಾಪ್ರಸಾದನಿಗೆ ಇಡೀ ಜಗತ್ತೇ ತನ್ನ ವಿರುದ್ಧ ಪಿತೂರಿ ನಡಸುತ್ತಿದೆಯೇನೋ ಎಂಬಂತೆ ಕಂಡಿತು. ಯಾರೂ ಅವನ ಮಾತನ್ನು ಕೇಳಲು, ಅರ್ಥಮಾಡಿಕೊಳ್ಳಲು ಸಿದ್ಧರಿರಲಿಲ್ಲ. ಅವನು ಕೋಣೆಯಿಂದ ಹೊರಗೆ ವರಾಂಡಕ್ಕೆ ಬಂದು ದಣಿದು ಸೋತವ ನಂತೆ ತೆಪ್ಪಗೆ ಕುಳಿತುಕೊಂಡ. ಇನ್ನೂ ಕೊಂಚ ಕೊಂಚ ಬಿಸಿಲಿತ್ತು. ಗಾಳಿಯಲ್ಲಿನ ಶಾಖ ಕಡಿಮೆಯಾಗಿರಲಿಲ್ಲ. ಈ ಹೊತ್ತಿಗೆ ಭೀಖು ಚಹದ ಟ್ರೇ ತಂದು ಡ್ರಾಯಿಂಗ್ ರೂಮಿನಲ್ಲಿಟ್ಟು ಹೇಳಿದ, "ಅಣ್ಣ, ಮೊದಲು ಚಹ ಕುಡಿದು ಆಮೇಲೆ ಗಾಳಿಸವಾರಿಗೆ ಹೋಗು. ನಾನು ಚಹ ಮಾಡಿಕೊಂಡು ಅಲ್ಲೇ ತರ್ತೀನಿ; ಅದಕ್ಕೋಸ್ಕರ ನೀನು ಎದ್ದು ಬರಬೇಕಾಗಿಲ್ಲ."

ಜ್ವಾಲಾಪ್ರಸಾದ ಏನೂ ಉತ್ತರ ಕೊಡಲಿಲ್ಲ. ಮೌನವಾಗಿ ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತು ಯೋಚಿಸುತ್ತಿದ್ದ. ಮುಂದೇನಾಗಲಿದೆ? ಅವನಿಗೆ ಒಂದೂ ಅರ್ಥವಾಗುತ್ತಿರಲಿಲ್ಲ. ಅವನಿಗೆ ಸುತ್ತಿನ ವಾತಾವರಣ ಸುತರಾಂ ಪರಿ ಚಯವಿಲ್ಲದಂತೆ ಕಾಣುತ್ತಿತ್ತು. ಭೂತಕಾಲದ ಚಿತ್ರಗಳು ಒಂದರ ಹಿಂದೊಂದರಂತೆ ಅವನ ಕಣ್ಣಮುಂದೆ ಹಾಯತೊಡಗಿದವು—ಮಂಜುಮಂಜಾಗಿ, ಅಸ್ಪಷ್ಟವಾಗಿ. ಶಿವ ಲಾಲ, ಗಂಗಾಪ್ರಸಾದ, ಯಮುನಾ ಇವರೆಲ್ಲರೂ ಹೋದರು. ಇವರಿಗೆ ಎಂದೂ ಅಸ್ತಿತ್ವವೇ ಇರಲಿಲ್ಲವೇನೋ ಎಂಬಂತೆ ಕರಗಿ ಹೋಗಿದ್ದರು. ಒಂದು ದಿನ ತಾನೂ ಹೋಗುತ್ತಾನೆ, ಹೀಗೆಯೇ ಅಸ್ತಿತ್ವಹೀನನಾಗಿ. ಹಾಗಾದರೆ ಈ ಅಸ್ತಿತ್ವ . . . ಇದೇನು ಒಂದು ಮಾಯೆಯೆ? ಭ್ರಮೆಯೆ?

ಜ್ವಾಲಾಪ್ರಸಾದನ ವಿಚಾರಧಾರೆ ಕಡಿದುಬಿತ್ತು. ಅವನ ಮುಂದೆ ಭೀಖು ಚಹದ ಬಟ್ಟಲಿಡುತ್ತ ಹೇಳಿದ, "ತೊಗೋಣ್ಣ, ಚಹ ಕುಡಿ. ಏನು ಯೋಚನೆ ಮಾಡ್ತಿದಿ?" ಭೀಖೂ ಜ್ವಾಲಾಪ್ರಸಾದನ ಕೈಯಲ್ಲಿ ಚಹದ ಬಟ್ಟಲಿಡುತ್ತ ಅಲ್ಲೇ ನೆಲದಮೇಲೆ ಕುಳಿತು ಕೊಂಡ.

ಜ್ವಾಲಾಪ್ರಸಾದ ಭೀಖುವನ್ನು ನೋಡಿದ. ಭೀಖು ಹೂವಿನ ಚಿತ್ರ ಬಿಡಿಸಿದ ಗ್ಲಾಸಿನಲ್ಲಿ ಚಹ ಹಾಕಿಕೊಂಡು ತಾನೂ ಕುಡಿಯುತ್ತ, ಮೌನವಾಗಿ ಮುಂದಿನ ಹುಲ್ಲ ಬಯಲ ಕಡೆ ನೋಡುತ್ತ ಯೋಚಿಸುತ್ತಿದ್ದ. ತನಗೆ ಆ ಕ್ಷಣ ಉಳಿದವರಿಗಿಂತ ಹೆಚ್ಚು ನಿಕಟ ಹಾಗೂ ಆತ್ಮೀಯನಾದವನೆಂದರೆ ಭೀಖು ಒಬ್ಬನೇ ಎಂದು ಜ್ವಾಲಾಪ್ರಸಾದನಿಗೆ

ಅನ್ನಿಸತೊಡಗಿತು. ಅವನು ಹೇಳಿದ, "ಕೇಳಿದೆಯಾ, ಭೀಖು. ನವಲ್ ನಾಡಿದ್ದು ಉಪ್ಪು ಮಾಡೋಕ್ಕೆ ಹೊರಟಿದಾನೆ."

"ಹೌದಣ್ಣ, ಕೇಳಿದೆ. ಆದರೆ ಇಷ್ಟೊಂದು ಓದಿರೋ ನಮ್ಮ ಮಗು ಉಪ್ಪು ಯಾಕೆ ತಯಾರಿಸಬೇಕು ಅಂತ ನನ್ನ ಬುದ್ಧೀಗೆ ಹೊಳೀತಿಲ್ಲ! ಉಪ್ಪನ್ನ ಉಪ್ಪುಗಾರರು ಮಾಡ್ತಾರೆ. ವಿಲಾಯಿತಿ ಉಪ್ಪು ಬರೋಕ್ಕೆ ಷುರುವಾದಾಗಿನಿಂದ ಈ ಕಸುಬು ಹಾಳಾಯಿತು. ಅವರೆಲ್ಲರೂ ಹೊಟ್ಟೆಗಿಲ್ಲದೆ ಸಾಯ್ತಿದಾರೆ. ನವಲ್ ಆಫೀಸರ್ ಗಿರಿ ಮಾಡೋದು ಬಿಟ್ಟು ಉಪ್ಪು ತಯಾರಿಸೋಕ್ಕೆ ಹೋಗ್ತಿದಾನಲ್ಲ, ನೀನು ಯಾಕೆ ತಡೆಯೋಲ್ಲ."

"ಅದು ನಿನಗೆ ಅರ್ಥವಾಗಿಲ್ಲ, ಭೀಖು. ಅವನು ಉಪ್ಪು ಮಾಡೋ ಕಸುಬು ಷುರು ಮಾಡ್ತಿಲ್ಲ. ಉಪ್ಪು ಮಾಡಿ ಕಾಯಿದೆ ಮುರಿಯೋಕ್ಕೆ ಹೊರಟಿದಾನೆ—ಜೈಲಿಗೆ ಹೋಗೋಕ್ಕೆ," ಜ್ವಾಲಾಪ್ರಸಾದ ಹೇಳಿದ.

"ಅಂದರೆ ನವಲ್ ಜೈಲಿಗೆ ಹೋಗ್ತಾನೆಯೆ? ಅಬ್ಬಬ್ಬಾ! ಅವನಿಗೆ ಈ ಜೈಲಿಗೆ ಹೋಗಬೇಕು ಅನ್ನೋ ಹುಚ್ಚು ಹೇಗೆ ಹಿಡೀತು? ನೀವು ಅವನನ್ನ ಯಾಕೆ ತಡೆಯೋಲ್ಲ?"

"ಏನು ಹೇಳಲಿ, ಭೀಖು? ಅವನು ನನ್ನ ಮಾತು ಕೇಳೋಲ್ಲ. ಜ್ಞಾನೂ ಸಹ ಜೈಲಿಗೆ ಹೋಗೋಕ್ಕೆ ತಯಾರಿ ನಡಸಿದಾನೆ."

ಭೀಖು ನಿಟ್ಟುಸಿರು ಬಿಟ್ಟ, "ಹಾಗಾದರೆ ಅವನ ಬುದ್ಧಿ ಕೆಟ್ಟಿದೆ! ಇನ್ನೇನು ಗತಿ? ದೇವರು ನಮ್ಮ ಮಗನ್ನ ಕಿತ್ತುಕೊಂಡು ಹೋದ. ಇಲ್ಲದೇ ಹೋದರೆ ಅವನು ನವಲನ್ನ ಜೈಲಿಗೆ ಹೋಗೋಕ್ಕೆ ಬಿಡ್ತಿದ್ದನೆ?" ಭೀಖುವಿನ ಕಣ್ಣಲ್ಲಿ ನೀರು ತುಂಬಿತು. ಭೀಖು ಗಂಗಾಪ್ರಸಾದನ ಬಗ್ಗೆ ಯಾವಾಗ ಮಾತಾಡಲಿ, ಅವನ ಕಣ್ಣಲ್ಲಿ ನೀರು ತುಂಬುತ್ತಿತ್ತು.

ಜ್ವಾಲಾಪ್ರಸಾದ ಹೇಳಿದ, "ಯಾರೂ ಏನೂ ಮಾಡೋಕ್ಕಾಗೋಲ್ಲ, ಭೀಖು. ಪ್ರಪಂಚದಲ್ಲಿ ಯಾರು ಯಾರನ್ನೂ ತಡೆಯೋಕ್ಕೆ ಆಗೋಲ್ಲ," ಜ್ವಾಲಾಪ್ರಸಾದ ತನ್ನೊಳಗಿನ ಹೋರಾಟಕ್ಕೆ ತಾನೇ ಬೇಸರಗೊಂಡವನಂತೆ ಎದ್ದುನಿಂತ.

ಭೀಖುವೂ ಎದ್ದುನಿಂತು ನಿಟ್ಟುಸಿರು ಬಿಡುತ್ತ ಹೇಳಿದ, "ಹೌದಣ್ಣ, ನೀನು ಹೇಳೋದು ಸರಿ. ನಮ್ಮ ಮಗನಿಗೆ ತನ್ನ ಸಾವನ್ನು ತಾನು ತಡೆಯೋಕ್ಕೆ ಆಗಲಿಲ್ಲ. ಇನ್ನು ಅವನು ಇನ್ನೊಬ್ಬರದನ್ನ ಹೇಗೆ ತಡೀತಿದ್ದ?" ಭೀಖು ಭಾರವಾದ ಮನಸ್ಸಿನಿಂದ ಮನೆಯೊಳಗೆ ಹೋದ.

ಜ್ವಾಲಾಪ್ರಸಾದ ಖಿನ್ನನಾಗಿ ಅಡ್ಡಾಡಿಬರಲು ಹೋದ. ಅವನ ಮನಸ್ಸು ಕೆರಳಿತ್ತು. ಮನಸ್ಸಿನ ದಣಿವು ಕಾಲಿಗೂ ಇಳಿದಿತ್ತು. ಎಂದಿನಂತೆ ತ್ರಿವೇಣೀ ದಂಡೆಯ ಕಡೆ ಹೋಗುವ ಬದಲು ಪೇಟೆಯ ಕಡೆ ಕಾಲುಹಾಕಿದ. ಆನಂದ ಭವನದ ಮುಂದೆ ಸಾವಿರಾರು ಜನ ಗುಂಪುಗೂಡಿದ್ದರು. 'ಭಾರತ ಮಾತಾಕೀ ಜೈ', 'ಮಹಾತ್ಮ ಗಾಂಧೀಕೀ ಜೈ', 'ಮೋತಿಲಾಲ ನೆಹರೂಕೀ ಜೈ', 'ಜವಾಹರಲಾಲ ನೆಹರೂಕೀ ಜೈ'

ಎಂದು ಜಯಕಾರ ಮಾಡುತ್ತಿದ್ದರು. ಗಾಂಧೀಜಿ ತಮ್ಮ ಸತ್ಯಾಗ್ರಹಿ ಸಂಗಾತಿಗಳ ಜೊತೆ ದಾಂಡಿಯನ್ನು ಸಮೀಪಿಸುತ್ತಿದ್ದ ಸುದ್ದಿ ಅವತ್ತಿನ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಇನ್ನೆರಡು ದಿನಗಳಲ್ಲಿ ಇಡೀ ದೇಶದಲ್ಲೆಲ್ಲಾ ಉಪ್ಪಿನ ಸತ್ಯಾಗ್ರಹದ ಶ್ರೀ ಓನ್ನಾಮವಾಗುವುದಿತ್ತು.

ಈ ಸತ್ಯಾಗ್ರಹ ಅಲಹಾಬಾದಿನಲ್ಲೂ ನಾಡಿದ್ದೇ ಷುರುವಾಗುವುದಿತ್ತು. ನವಲ್ ಮೊದಲ ದಿನದ ಸತ್ಯಾಗ್ರಹದಲ್ಲೇ ಭಾಗವಹಿಸುವವನಿದ್ದ. ಮೊದಲ ದಿನದ ಸತ್ಯಾಗ್ರಹಿಗಳ ದಸ್ತಗಿರಿಯಾಗುವುದಿತ್ತು, ಹಾಗೆಯೇ ಎರಡನೆಯ ದಿನ, ಮೂರನೆಯ ದಿನ ಸಹ. ದೀರ್ಘಕಾಲದವರೆಗೆ ಈ ಆಂದೋಳನ ನಡೆಯುತ್ತದೆ. ಇದೇನು ೧೯೨೦-೨೧ ರ ಆಂದೋಳನದಂತಿರುತ್ತದೆಯೆ? ಆಗಿನ ಆಂದೋಳನವನ್ನು ಎಷ್ಟು ಸುಲಭವಾಗಿ ತುಳಿಯಲಾಗಿತ್ತು. ಅಷ್ಟೇ ಸುಲಭವಾಗಿ ಈ ಆಂದೋಳನವನ್ನೂ ತುಳಿಯಲಾಗುತ್ತದೆ. ಬ್ರಿಟಿಷ್ ಸರಕಾರಕ್ಕೆ ಆ ಆಶ್ವಾಸನೆಯಿದೆ. ಅಧಿಕಾರಿಗಳಲ್ಲಿ ಯಾವ ತರಹದ ಉದ್ವೇಗವೂ ಇಲ್ಲ.

ಜ್ವಾಲಾಪ್ರಸಾದನ ದೃಷ್ಟಿ ಸತ್ಯಾಗ್ರಹವನ್ನು ನೋಡಲು ಹಳ್ಳಿಹಳ್ಳಿಗಳಿಂದ ಬಂದಿದ್ದ ಸಹಸ್ರಾರು ಮಂದಿ ಹಳ್ಳಿಗರ ಮೇಲೆ ಬಿದ್ದಿತು. ಈ ಜಯಜಯಕಾರವನ್ನು ಕೂಗುತ್ತಿದ್ದವರು ಆ ಹಳ್ಳಿಗರೇ. ಆ ಹಳ್ಳಿಗರಲ್ಲಿ ಬರಿಯ ಕುತೂಹಲವಷ್ಟೇ ಅಲ್ಲ, ಅದಕ್ಕೂ ಹೆಚ್ಚಿನದೇನೋ ಇತ್ತು. ಅವರು ಉತ್ಸಾಹ ಉಲ್ಲಾಸಗಳನ್ನು ಬಿಟ್ಟು ಮೇಲೇರಿ ಕರ್ಮನಿಷ್ಠರಾಗಬಲ್ಲರೆಂದು ತೋರಿಸಿಕೊಂಡಿದ್ದರು.

ಇದ್ದಕ್ಕಿದ್ದಂತೆ ಜ್ವಾಲಾಪ್ರಸಾದನ ವಿಚಾರಧಾರೆ ಬದಲಾಯಿತು. ಸ್ವಾತಂತ್ರ್ಯದ ಕೂಗು ಭಾರತದ ಲಕ್ಷಾಂತರ ಹಳ್ಳಿಗಳನ್ನು ಮುಟ್ಟಿಬಿಟ್ಟಿದೆಯೆಂದು ಅವನಿಗೆ ಅನ್ನಿಸಿತು. ಲಕ್ಷಾಂತರ, ಕೋಟ್ಯಂತರ ಹಳ್ಳಿಗರು ಪ್ರಾಯಶಃ ಈ ಆಂದೋಳನದಲ್ಲಿ ಸಹಕಾರ ನೀಡುವರು; ಆ ಸಹಕಾರ ಕೇವಲ ಭಾವನಾತ್ಮಕವೇ ಆಗಿರಲಾರದೇಕೆ? ಅಂದರೆ ಈ ಆಂದೋಳನವನ್ನು ತುಳಿಯುವುದು ಅಷ್ಟು ಸುಲಭದ ಕೆಲಸವಲ್ಲ. ಅದನ್ನು ತುಳಿಯುವುದರಲ್ಲಿ ಸೇನೆಯ ಸಹಾಯ ಬೇಕಾಗುವುದೇನೋ. ಸೈನಿಕರು, ಬಂದೂಕ, ಮೆಷಿನ್ ಗನ್—ಇವುಗಳ ಎದುರು ಆಂದೋಳನ ಉಳಿಯುವುದೆಂತು?

ಜ್ವಾಲಾಪ್ರಸಾದನಿಗೆ ಮುಂದೆ ಹೋಗಲಾಗಲಿಲ್ಲ. ಅವನು ಮನೆಯ ಕಡೆ ಕಾಲು ಹಾಕಿದ. ಮನೆ ತಲಪಿದಾಗ ಜ್ಞಾನಪ್ರಕಾಶ ತನ್ನ ಕೋಣೆಯಲ್ಲಿ ಕುಳಿತು ಏನೋ ಬರೆಯುತ್ತಿದ್ದ. ಆದರೆ ನವಲ್ ಎಲ್ಲೂ ಕಣ್ಣಿಗೆ ಬೀಳಲಿಲ್ಲ. "ನವಲ್ ಎಲ್ಲಿ?" ಜ್ವಾಲಾಪ್ರಸಾದ ವಿದ್ಯಳನ್ನು ಕೇಳಿದ.

"ಈಗ ತಾನೇ ಪೇಟೆಯ ಕಡೆ ಹೋದ. ಪ್ರಾಯಶಃ ರಾಯ್‌ಬಹದ್ದೂರರಲ್ಲಿಗೆ ಹೋಗಿರಬಹುದು. ಹಾಗಂತ ಹೇಳ್ತಿದ್ದ."

ಜ್ವಾಲಾಪ್ರಸಾದನ ಒಳಗಿನ ಅಂಧಕಾರದಲ್ಲಿ ಒಂದು ಆಶಾಕಿರಣ ಮಿಂಚಿತು. ನವಲ್

ಇಡಹೊರಟಿದ್ದ ಹೆಜ್ಜೆಯನ್ನು ಯಾವದಾದರೂ ತಡೆಯಬಲ್ಲದಾಗಿದ್ದರೆ ಅದು ಅವ ನೊಳಗಿನ ಮೋಹವೊಂದೇ—ಉಷಳ ಬಗ್ಗೆ ಅವನಿಗಿದ್ದ ಮೋಹ! ಅದು ನವಲನನ್ನು ತಡೆಯುವುದೇ?

ನವಲ್ ಇನ್ನೆರಡು ದಿನ ಮುಕ್ತ. ಆಮೇಲೆ ಅವನು ಹೋರಾಟದಲ್ಲಿ ಧುಮುಕು ತ್ತಾನೆ. ಅವನಿಗೆ ಈ ಹೋರಾಟದ ಭಾವೀ ರೂಪ ಸ್ವಲ್ಪಸ್ವಲ್ಪ ಕಾಣಿಸುತ್ತಿತ್ತು, ಆದರೆ ಬಹಳಷ್ಟು ಕಾಣುತ್ತಿರಲಿಲ್ಲ. ಈ ಹೋರಾಟದಲ್ಲಿ ತೊಡಗುವ ಮೊದಲು ಅವನು ಉಷಳನ್ನೊಮ್ಮೆ ಕಂಡು ಅವಳ ಜೊತೆ ಕೊಂಚ ಹೊತ್ತು ಇರಬಯಸಿದ್ದ. ಉಷಾ ತನ್ನಿಂದ ದೂರ ಸರಿದಿದ್ದಾಳೆಂದು ತಿಳಿದೂ ತಿಳಿದೂ ಅವಳಲ್ಲಿಗೆ ಹೋದ.

ಉಷಳ ಮನೆಯಲ್ಲಿ ಗೌರೀನಾಥ ಸೀತಾನಾಥರ ನಡುವೆ ಒಂದು ಬಗೆಯ ಘರ್ಷಣೆ ನಡೆಯುತ್ತಿತ್ತು. ಈ ಘರ್ಷಣೆಯಲ್ಲಿ ರಾಯ್‌ಬಹದ್ದೂರ್ ಕಾಮತಾನಾಥರ ಸ್ಥಿತಿ ವಿಚಿತ್ರವಾಗಿತ್ತು. ಅವರು ಒಮ್ಮೆ ಗೌರೀನಾಥನ ಪಕ್ಷ ವಹಿಸಿದರೆ ಇನ್ನೊಮ್ಮೆ ಸೀತಾ ನಾಥನ ಪಕ್ಷ ವಹಿಸುತ್ತಿದ್ದರು. ಆದರೆ ಉಷಾ ದೊಡ್ಡಣ್ಣನ ಪ್ರಭಾವಕ್ಕೆ ಒಳಗಾಗಿದ್ದಳು. ಈ ಕಾರಣದಿಂದಾಗಿ ರಾಯ್‌ಬಹದ್ದೂರ್ ಕಾಮತಾನಾಥರು ಹೆಚ್ಚಾಗಿ ಗೌರೀನಾಥನ ಪಕ್ಷವನ್ನೇ ವಹಿಸುತ್ತಿದ್ದರು.

ನವಲ್ ರಾಯ್‌ಬಹದ್ದೂರರ ಮನೆ ತಲಪಿದಾಗ ಕಾಮತಾನಾಥರು ತಮ್ಮ ದಿವಾನ ಖಾನೆಯಲ್ಲಿ ಮೌನವಾಗಿ ಚಿಂತೆಯಲ್ಲಿ ಮುಳುಗಿದ್ದರು. ಅವತ್ತು ಮಧ್ಯಾಹ್ನ ತಾನೇ ಮಕ್ಕಳಿಬ್ಬರ ನಡುವೆ ಬಿರುಸಾಗಿ ವಾದವಿವಾದವಾಗಿತ್ತು. ನವಲನನ್ನು ಕಂಡ ತಕ್ಷಣ ರಾಯ್‌ಬಹದ್ದೂರರು ಹೇಳಿದರು, "ಬಾ ನವಲ್, ಬಹಳ ದಿನದ ಮೇಲೆ ಮುಖ ತೋರಿಸ್ತಿದೀಯಲ್ಲ! ಓದು ಹೇಗೆ ನಡೀತಿದೆ?"

"ಚೆನ್ನಾಗಿ ನಡೀತಿದೆ."

"ಎಲ್‌ಎಲ್.ಬಿ. ಮುಗಿಸಿ ಮುನಸೀಫ್ ಪರೀಕ್ಷೆ ಮಾಡಿಬಿಡು," ರಾಯ್‌ಬಹ ದ್ದೂರರು ಹೇಳಿದರು. "ಹೈಕೋರ್ಟಿನಲ್ಲಿ ಚೀಫ್ ಜಸ್ಟೀಸರ ಹತ್ತಿರ ನನ್ನ ಮಾತು ನಡೆಯುತ್ತೆ. ನಿನ್ನನ್ನ ತೊಗೋತಾರೆ."

"ಹೌದು, ನೀವು ಏನು ಬೇಕಾದರೂ ಮಾಡಬಲ್ಲಿರಿ. ಆದರೆ ನನಗೆ ಮುನಸೀಫ್ ಪರೀಕ್ಷೆ ಮಾಡೋ ಇರಾದೆಯಿಲ್ಲ."

ರಾಯ್‌ಬಹದ್ದೂರ್ ಕಾಮತಾನಾಥರು ಕಿಡಿಕಿಡಿಯಾದರು, "ಗೌರೀ ಹೇಳೋದು ಸರಿ, ನೀನು ನಿಜವಾಗಿಯೂ ಬಹಳ ಹಟದ ಮನುಷ್ಯ. ಹಾಗಾದರೆ ನೀನು ವಕೀಲೀನ ಸಹ ಏನು ಮಾಡ್ತಿ? ಈ ವಕೀಲವೃತ್ತಿಯ ಸ್ಥಿತಿ ಬಹಳ ಕೆಟ್ಟಿದೆ. ಸ್ವತಃ ಗೌರಿ ಫಜೀತಿ ಪಡ್ತಿದಾನೆ."

ನವಲ್ ನಕ್ಕ, "ಪಾಪಾ, ನಾನೇನು ಮಾಡ್ತೀನಿ ಅಂತ ನನಗೇ ಗೊತ್ತಿಲ್ಲ. ಮನುಷ್ಯ

ಏನನ್ನೂ ಮಾಡೋಲ್ಲ; ಆಗೋದೆಲ್ಲಾ ತಾನೇತಾನಾಗಿ ಆಗುತ್ತೆ. ಯಾರು ಬಲ್ಲರು, ನಾನು ಇವೆಲ್ಲಕ್ಕಿಂತ ಒಳ್ಳೇ ಕೆಲಸಾನೇ ಮಾಡ್ತೀನೋ ಏನೋ!"

"ಓಹೋ, ನೀನು ಫಿಲಾಸಫರ್ ಆಗಿಬಿಟ್ಟೆದಿ!" ಕಾಮತಾನಾಥರು ಜೋರಾಗಿ ನಕ್ಕರು. ಆಮೇಲೆ ಎತ್ತರದ ಧ್ವನಿಯಲ್ಲಿ, "ಉಷಾ! ನವಲ್ ಬಂದಿದಾನೆ, ನೋಡು." ಅಂದರು.

ಉಷಾ ಡ್ರಾಯಿಂಗ್ ರೂಮಿನ ಕಡೆಗೇ ಬರುತ್ತಿದ್ದಳು. ಕೋಣೆಯೊಳಗೆ ಕಾಲಿಡುತ್ತ "ಅರೆ ನೀವು! ನವಲ್‌ಬಾಬಾ! ಇವತ್ತು ಬಹಳ ದಿನದ ಮೇಲೆ ಬಂದಿದೀರಿ. ಬನ್ನಿ, ಹೊರಗೆ ವರಾಂಡದಲ್ಲಿ ಕೂತುಕೊಳ್ಳೋಣ, ಇವತ್ತು ತುಂಬಾ ಸೆಕೆ ಇದೆ. ಅಲ್ಲವೇ ಪಾಪಾ!"

"ಹೌದು, ಹೌದು, ಅಲ್ಲೇ ಹೋಗಿ ಕೂತುಕೊಳ್ಳಿ! ನನ್ನನ್ನ ನೋಡೋಕ್ಕೆ ಒಂದಿಷ್ಟು ಜನ ಬರೋರಿದಾರೆ, ನಾನು ಇಲ್ಲೇ ಇರ್ತೀನಿ," ಕಾಮತಾನಾಥರು ಹೇಳಿದರು.

ಉಷಾ ನವಲನ ಜೊತೆ ವರಾಂಡಕ್ಕೆ ಬಂದಳು, "ಕೂತ್ಕೊಳ್ಳಿ, ಈಚೆಗೆ ಓದು ಬಲು ಜೋರಾಗಿ ನಡೀತಿರಬೇಕು."

"ನಡೀತಾನೂ ಇದೆ, ನಡೀತಾನೂ ಇಲ್ಲ," ನವಲ್ ಕೂತುಕೊಳ್ಳುತ್ತ ಹೇಳಿದ, "ಇವತ್ತು ಓದೋಕ್ಕೆ ಮನಸ್ಸಾಗಲಿಲ್ಲ. ಸರಿ, ನಿನ್ನನ್ನ ನೋಡಿಕೊಂಡು ಹೋಗೋಣ ಅಂತ ಬಂದೆ. ನಿನ್ನ ಓದು-ಬರೆಹ ಹೇಗೆ ಸಾಗಿದೆ?"

"ಅಂಥ ಚೆನ್ನಾಗೇನೂ ಸಾಗ್ತಿಲ್ಲ. ನಿಜ ಹೇಳಬೇಕು ಅಂದರೆ ಓದಿನಲ್ಲಿ ಮನಸ್ಸಾಗ್ತಿಲ್ಲ." ಮತ್ತೆ ಸ್ವಲ್ಪ ಮೌನವಾಗಿದ್ದು ಹೇಳಿದಳು, "ಈಚೆಗೆ ನೀವು ಹೆಚ್ಚಾಗಿ ಕಾಂಗ್ರೆಸ್ ಆಫೀಸಿನಲ್ಲೇ ಇರ್ತೀರಿ ಅಂತ ಕೇಳಿದೀನಿ!"

ಉಷಳ ಮಾತನ್ನು ಕೇಳಿ ನವಲನಿಗೆ ಆಶ್ಚರ್ಯವಾಯಿತು. ಅಂದರೆ ಅವಳಿಗೆ ತನ್ನ ಚಟುವಟಿಕೆಗಳೆಲ್ಲಾ ಚೆನ್ನಾಗಿ ತಿಳಿದಿದೆ. ರಾಯ್‌ಬಹದ್ದೂರ್ ಕಾಮತಾನಾಥರ ಮನೆಯಲ್ಲಿ ಇನ್ನೂ ತನ್ನ ಬಗ್ಗೆ ಆಸಕ್ತಿಯಿದೆಯೆಂದು ಇದರ ಅರ್ಥವಾಯಿತು. ಅವನಂದ, "ಹೌದು, ನೀನು ಕೇಳಿರೋದೆಲ್ಲಾ ನಿಜವೇ. ಆದರೆ ಅದನ್ನ ನಿನಗೆ ಯಾರು ಹೇಳಿದರು?"

"ಗೌರೀನಾಥಣ್ಣ ಹೇಳ್ತಿದ್ದ," ಉಷಾ ಉತ್ತರ ಕೊಟ್ಟಳು. "ನೀವು ಕಾಂಗ್ರೆಸ್ ಮುಖಂಡರಾಗ್ತೀರಿ ಅಂತ ಅವರ ಅಭಿಪ್ರಾಯ."

"ಯಾಕೆ, ಕಾಂಗ್ರೆಸ್ ಮುಖಂಡನಾದರೆ ತಪ್ಪೆ?" ನವಲ್ ಕುತೂಹಲದಿಂದ ಕೇಳಿದ.

"ನಾನೇನು ಬಲ್ಲೆ! ಕಾಂಗ್ರೆಸ್ ಮುಖಂಡರಾದವರು ಜೈಲಿಗೆ ಹೋಗಬೇಕಾಗುತ್ತೆ ಅಂತ ಕೇಳಿದೀನಿ."

ನವಲ್ ಉಷಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ಹೇಳಿದ, "ಉಷಾ, ನಾನೀಗ ಇಲ್ಲಿ ಯಾಕೆ ಬಂದಿದೀನಿ, ಗೊತ್ತೆ?"

"ಹ್ಞಾ, ನನ್ನನ್ನ ನೋಡೋಕ್ಕೆ ಬಂದಿದೀರಿ. ಪ್ರಾಯಶಃ ಒಂದಿಷ್ಟು ಮಾತ ನಾಡೋದೂ ಇದೆ ಅಂತ ಕಾಣುತ್ತೆ. ಹೌದಾ?"

"ಮಾತಾಡೋದೂ ಇತ್ತು. ನೋಡಲೂಬೇಕಾಗಿತ್ತು. ಉಷಾ, ನಾನು ನಿನಗೆ ಮುಕ್ತಿ ಕೊಡೋಕ್ಕೆ ಬಂದಿದೀನಿ."

ನವಲನ ಈ ಮಾತನ್ನು ಕೇಳಿ ಉಷಾ ತಳಮಳಿಸಿದಳು. "ಏನನ್ನೂ ಹೇಳದೆ ಕೇಳದೆ, ಎಂದೋ ನೀವು ನನಗೆ ಮುಕ್ತಿ ಕೊಟ್ಟುಬಿಟ್ಟಿದೀರಿ! ಈಗ ಆ ಮಾತನ್ನ ಎತ್ತೋ ಅವಶ್ಯಕತೆಯೇ ಇರಲಿಲ್ಲ. ನಿಜ ಹೇಳಬೇಕು ಅಂದರೆ ಸ್ವತಃ ನನಗೆ ನಾನೇ ಮುಕ್ತಿ ಕೊಟ್ಟುಕೊಂಡಿದೀನಿ."

ಉಷಾ ಹೇಳಿದುದು ಸತ್ಯವೇ ಆದರೂ ಆ ಸತ್ಯವನ್ನು ಉಷಳ ಬಾಯಿಂದಲೇ ಕೇಳಿದುದು ನವಲನಿಗೆ ಸರಿಬೀಳಲಿಲ್ಲ. "ನೀನು ಮುಕ್ತಳಾಗಿದಿ ಅಂತ ಗೊತ್ತಿದೆ, ಉಷಾ. ಆದರೆ ಹಾಗೆ ಮುಕ್ತಿ ಪಡೆದ ಮೇಲೆ ನಿನಗೆ ಬೇರೆಲ್ಲೋ ಬಂಧನವೂ ಇದೆ. ಆ ಬಂಧನ ಕರಾಳವಾಗಿರುತ್ತೆ, ಬೀಭತ್ಸವಾಗಿರುತ್ತೆ."

ಉಷಾ ಬಿರುಸಾಗಿ ಹೇಳಿದಳು, "ಆ ವಿಷಯದಲ್ಲಿ ನಿಮ್ಮ ಅಭಿಪ್ರಾಯಾನ ಯಾರು ಕೇಳಿದರು! ಅಭಿಪ್ರಾಯ ಕೊಡೋಕ್ಕೆ ನೀವು ಯಾರು?"

ನವಲ್ ನಕ್ಕ, "ಹೌದು, ನನ್ನ ಅಭಿಪ್ರಾಯಾನ ಕೇಳಲಿಲ್ಲ, ನಿಜ. ಆದರೆ ಅಭಿಪ್ರಾಯ ಕೊಡೋ ಸ್ವಾತಂತ್ರ್ಯ ನನಗಿದೆ, ಸದಾ ಇರುತ್ತೆ ಅಂತ ಅಂದುಕೊಂಡಿದೀನಿ. ಯಾಕೆ ಅಂದರೆ ನೀನು ನನ್ನವಳು ಅಂತ ತಿಳಕೊಂಡಿರೋದರಿಂದ. ನಮ್ಮವರು ಯಾರಾದರೂ ತಪ್ಪುದಾರಿ ಹಿಡಿದಾಗ ಒಂದಿಷ್ಟು ನೋವು ಆಗೇ ಆಗುತ್ತೆ. ರಾಜೇಂದ್ರ ಕಿಶೋರರಿಗೆ ಒಂದು ಸಲ ಮದುವೆಯಾಗಿದೆ ಅಂತ ನಿನಗೆ ಗೊತ್ತೆ?"

ಉಷಾ ಕಿರಚಿಕೊಳ್ಳುವವಳಂತೆ ಹೇಳಿದಳು, "ಈ ವಿಷಯದಲ್ಲಿ ನನಗೆ ಮಾತ ನಾಡೋಕ್ಕೆ ಇಷ್ಟವಿಲ್ಲ. ಇದು ನನ್ನ ಸ್ವಂತದ ವಿಷಯ."

ನವಲ್ ಎದ್ದು ನಿಂತ, "ಇದನ್ನೆಲ್ಲಾ ಮಾತನಾಡಿದೆನಲ್ಲ ಅಂತ ದುಃಖವಾಗುತ್ತೆ. ನಾವು ಎಂದೆಂದಿಗೂ ಪರಸ್ಪರ ಬೇರೆಯಾಗ್ತಿದೀವಿ. ನಾನು ನಿನ್ನ ಜೊತೆ ಏನೋ ಮಾತ ನಾಡೋಕ್ಕೆ ಬಂದಿದ್ದೆ, ಇನ್ನೇನನ್ನೋ ಆಡಿಬಿಟ್ಟೆ."

"ನೀವು ನನಗೆ ಮುಕ್ತಿ ಕೊಡೋಕ್ಕೆ ಬಂದಿದ್ದಿರಿ," ಉಷಾ ಖಾರವಾದ ಧ್ವನಿಯಲ್ಲಿ ವ್ಯಂಗ್ಯವಾಗಿ ಹೇಳಿದಳು. "ಆ ಮಾತನ್ನಾಗಲೇ ಹೇಳಿದೀರಿ. ಇನ್ನೂ ಏನಾದರೂ ಹೇಳೋದಿದೆಯೆ?"

"ಹೌದು, ಅದೇನು ಅಂದರೆ ನಾಡಿದ್ದು ಉಪ್ಪಿನ ಸತ್ಯಾಗ್ರಹ ಮಾಡ್ತೀನಿ. ನಾಡಿದ್ದು ಮಧ್ಯಾಹ್ನದ ಹೊತ್ತಿಗೆ ಜೈಲಿನಲ್ಲಿರ್ತೀನಿ. ಜೈಲಿಗೆ ಹೋಗೋಕ್ಕೆ ಮುಂಚೆ ನಿನ್ನನ್ನ ಒಂದು ಸಲ ನೋಡಿ, ನನ್ನ ಶುಭಾಶಯ ತಿಳಿಸಿ ಹೋಗೋಣ ಅಂತ ಬಂದಿದ್ದೆ! ಆದರೆ

ಇಲ್ಲಿ ಬಂದ ಮೇಲೆ ನನ್ನೊಳಗಿನ ಕಹಿಯಲ್ಲಿ ಸಿಕ್ಕಿಬಿದ್ದೆ—ಅದಕ್ಕೆ ಕ್ಷಮಿಸಿಬಿಡು." ನವಲ್ ವಾಪಸು ಹೊರಡಲು ತಿರುಗಿದ.

ಉಷಾ ಓಡಿಬಂದು ನವಲನ ಕೈ ಹಿಡಿದುಕೊಂಡಳು.

"ಏನಂದಿರಿ, ನಾಡಿದ್ದು ಜೈಲಿಗೆ ಹೋಗ್ತೀರಾ?" ಉಷಾ ನವಲನನ್ನು ಎಳೆದು ಕುರ್ಚಿಯ ಮೇಲೆ ಕೂರಿಸಿದಳು. "ಇಲ್ಲ, ಹಾಗೆ ಮಾಡಬೇಡಿ. ಜೈಲಿಗೆ ಹೋಗ ಬೇಡಿ. ನನ್ನ ಕೋರಿಕೇನ ಕೇಳಿ."

"ಇಲ್ಲ, ಉಷಾರಾಣಿ. ಹೆಜ್ಜೆ ಮುಂದಿಟ್ಟಾಗಿದೆ. ಈಗ ಅದನ್ನ ಹಿಂತೆಗೆದು ಕೊಳ್ಳೋದು ಸಾಧ್ಯವಿಲ್ಲ. ಎಲ್ಲಾ ಸಿದ್ಧತೆಯೂ ಆಗಿದೆ."

"ನೀವು ನನ್ನನ್ನ ತಪ್ಪು ತಿಳಕೊಂಡಿದೀರಿ. ರಾಜೇಂದ್ರ ಕಿಶೋರರ ಬಗ್ಗೆ ನನಗೇನೂ ಮೋಹವಿಲ್ಲ. ನಾನು ಅವರನ್ನೇನೂ ಪ್ರೀತಿಸ್ತಿಲ್ಲ. ನೀವು ಜೈಲಿಗೆ ಹೋಗಬೇಡಿ. ಎಲ್ಎಲ್.ಬಿ. ಪಾಸುಮಾಡಿಬಿಡಿ. ನಾನು ಅವರನ್ನ ಮದುವೆಯಾಗೋಲ್ಲ ಅಂತ ಇವತ್ತೇ ಪಾಪನಿಗೆ ಹೇಳಿಬಿಡ್ತೀನಿ. ಮಾತಾಡಿ, ಯಾಕೆ ಸುಮ್ಮನಿದೀರಿ?"

"ಉಷಾ, ಇದೆಲ್ಲಾ ವ್ಯರ್ಥ! ನಾನು ನಿರಾಶೆಯಿಂದ ಜೈಲಿಗೆ ಹೋಗ್ತಾ ಇಲ್ಲ. ನಾನು ಯಾವ ದಾರೀನ ನನ್ನದು ಅಂತ ಅಂದುಕೊಂಡು ಹಿಡಿದಿದೀನೋ ಇದು ಅದರ ಪ್ರತಿಫಲ. ಹೋರಾಟ, ಹೋರಾಟ, ಹೋರಾಟ! ಜೀವನವಿಡೀ ಹೋರಾಟ! ಈ ಹೋರಾಟ ನನ್ನೊಳಗಿನ ಕೂಗು, ಉಷಾ. ಈ ಹೋರಾಟದಲ್ಲಿ ನೀನು ನನಗೆ ಜೊತೆ ಕೊಡಲಾರೆ ಅಂತ ನನಗೆ ಗೊತ್ತಿದೆ. ಅದಕ್ಕೋಸ್ಕರವೇ ನಾನು ಬಂದ ತಕ್ಷಣ ನಿನಗೆ ಮುಕ್ತಿ ಕೊಟ್ಟುಬಿಟ್ಟದ್ದು."

ನವಲನ ಮಾತನ್ನು ಕೇಳಿ ಉಷಳಿಗೆ ಬಲವಾದ ಪೆಟ್ಟು ಬಿದ್ದಂತಾಯಿತು. "ಅಂದರೆ ನೀವು ನನ್ನ ಕಾರಣದಿಂದಾಗಿ ಜೈಲಿಗೆ ಹೋಗ್ತಿಲ್ಲವೆ?"

"ಖಂಡಿತವಾಗಿಯೂ ಇಲ್ಲ," ನವಲ್ ಹೇಳಿದ. "ನಾನು ಕೇವಲ ನನ್ನ ಕಾರಣಕ್ಕಾಗಿ, ನನ್ನೊಳಗಿನ ಪ್ರೇರಣೆಯಿಂದಾಗಿ ಜೈಲಿಗೆ ಹೋಗ್ತಿದೀನಿ."

ಉಷಳಿಗೆ ತನ್ನ ಮೇಲೆಯೇ ಕೋಪ ಬಂದಿತು. ಅವಳ ಮನಸ್ಸಿನಲ್ಲಿ ಹುಟ್ಟಿದ್ದ ತನ್ನ ಗೆಲವು, ಹಿರಿಮೆಗಳ ಭಾವನೆ ಒಡೆದು ಚೂರುಚೂರಾಯಿತು. "ಅರ್ಥವಾಯಿತು! ಅಂದರೆ ನೀವು ನನ್ನನ್ನ ಗೇಲಿ ಮಾಡೋಕ್ಕೆ ಬಂದಿದ್ದೀರಿ. ನನ್ನ ಮುಂದೆ ನಿಮ್ಮ ದೊಡ್ಡಸ್ತಿ ಕೇನ ತೋರಿಸಿ ನನ್ನನ್ನ ಅಪಮಾನ ಮಾಡೋಕ್ಕೆ ಬಂದಿದ್ದೀರಿ."

"ಇಲ್ಲ, ಉಷಾ. ನಾನು ನಿನ್ನಿಂದ ಎಂದೆಂದಿಗೂ ವಿದಾಯ ಪಡೆಯೋಕ್ಕೆ, ನನ್ನ ಶುಭಾಶಯಗಳನ್ನ ಅರ್ಪಿಸೋಕ್ಕೆ ಬಂದಿದ್ದೆ. ಪ್ರಾಯಶಃ ನಾವು ಮತ್ತೆ ಎಂದೆಂದಿಗೂ ಒಬ್ಬರನ್ನೊಬ್ಬರು ನೋಡೋಲ್ಲ ಅಂತ ಕಾಣುತ್ತೆ."

ಉಷಾ ಸಿಡಿದೆದ್ದಳು, "ನಿಮ್ಮ ಶುಭಾಶಯಾನ ನೀವೇ ಇಟ್ಟುಕೊಳ್ಳಿ. ನನಗೆ ಅದರ ಅಗತ್ಯವಿಲ್ಲ. ಜೈಲಿಗೆ ಹೋಗಿ, ಅನುಭವಿಸಿ. ನನ್ನ ಬಗ್ಗೆ ನೀವೇನೂ ಚಿಂತಿಸ

ಬೇಕಾಗಿಲ್ಲ. ನನಗೆ ಬೇಕಾದದ್ದೆಲ್ಲಾ ಸಿಕ್ಕಿದೆ; ಮುಂದೆಯೂ ಸಿಗುತ್ತೆ. ನೀವು ಮಾಡ್ತಿರೋದು ನಿಮಗೆ ಸರಿ ಅಂತ ಕಂಡರೆ ನಾನು ಮಾಡೋದು ನನಗೂ ಸರಿ ಅಂತ ತೋರುತ್ತೆ. ಹೋಗಿ, ಹೋಗಿ, ನಿಮ್ಮನ್ನ ಕಂಡರೆ ಜುಗುಪ್ಸೆ ಹುಟ್ಟುತ್ತೆ, ಹೋಗಿ." ಉಷಾ ಅಳುತ್ತ ಎದ್ದು ಒಳಗೆ ಓಡಿಹೋದಳು. ನವಲ್ ಸ್ವಲ್ಪ ಹೊತ್ತು ಮೌನವಾಗಿ ನಿಂತಿದ್ದ. ಅವನ ಅಂತರಂಗದಲ್ಲಿ ಭಾವನೆಗಳ ಒಂದು ದೊಡ್ಡ ಬಿರುಗಾಳಿಯೇ ಎದ್ದಿತ್ತು.

ನಿಧಾನವಾಗಿ ನವಲನ ಚೇತನ ಹಿಂದಿರುಗಿತು. ಎಚ್ಚರಗೊಂಡು ನೋಡಿದಾಗ ರಾಯ್‌ಬಹದ್ದೂರ್ ಕಾಮತಾನಾಥರು ಕೇಳುತ್ತಿದ್ದರು, "ಏನು ನವಲ್? ಏನಾಯಿತು? ಏನು, ನೀನು ನಾಡಿದ್ದು ಜೈಲಿಗೆ ಹೋಗ್ತಿದೀಯಾ?"

"ಹೌದು, ನಾಡಿದ್ದು ಜೈಲಿಗೆ ಹೋಗ್ತಿದೀನಿ" ಎನ್ನುತ್ತ ನವಲ್ ಅಲ್ಲಿಂದ ಕಾಲು ತೆಗೆದ.

ನವಲ್ ನಡೆದುಕೊಂಡೇ ಮನೆಗೆ ಬಂದ. ರಾತ್ರಿ ಹಿತವಾಗಿತ್ತು. ಎಲ್ಲೆಲ್ಲೂ ಮನೋಹರವಾದ ಬೆಳದಿಂಗಳು ಚೆಲ್ಲಿತ್ತು. ಇಡೀ ವಾತಾವರಣ ಸುಖಕರವಾಗಿತ್ತು. ನವಲನ ಅಂತರಂಗದ ಆವೇಶ ಇಳಿಯುತ್ತಿತ್ತು. ಅವನು ತನ್ನೊಳಗೆ ಒಂದು ಅಸೀಮ ಶಾಂತಿಯಿಂದ ಕೂಡಿದ ಹಗುರತೆಯನ್ನು ಅನುಭವಿಸತೊಡಗಿದ. ಮನೆಯಲ್ಲಿ ವಿದ್ಯಾ ಅವನ ದಾರಿ ನೋಡುತ್ತಿದ್ದಳು. ವಿದ್ಯಾ ಕೇಳಿದಳು, "ಅಲ್ಲಿಗೆ ಹೋಗಿದ್ದೆಯಾ, ಅಣ್ಣ?"

"ಹೌದು, ಹೋಗಿಬಂದೆ. ಎಲ್ಲವನ್ನೂ ಒಡೆದು ಚೂರುಚೂರುಮಾಡಿ ಬಂದೆ, ವಿದ್ಯಾ. ನಾನು ಈ ಹೊಸದೇನನ್ನು ನಿರ್ಮಾಣ ಮಾಡಹೊರಟಿದ್ದೇನೋ ಅದು ಬಲು ತುಟ್ಟಿಯಾಗತೊಡಗಿದೆ. ಹಳೆಯದೆಲ್ಲವನ್ನೂ ನಿರ್ದಯವಾಗಿ ಒಡೆಯಬೇಕಾಗಿದೆ."

ವಿದ್ಯಾ ನಕ್ಕಳು. "ಇಲ್ಲಣ್ಣ, ಹಳೇದು ತಾನೇತಾನಾಗಿ ಒಡೆದುಹೋಗ್ತಿದೆ. ಅದನ್ನ ಉಳಿಸಬೇಕಾದರೆ ನಿನ್ನನ್ನು ನೀನು ಒಡೆದುಕೊಳ್ಳಬೇಕಾಗುತ್ತೆ. ಆದ್ದರಿಂದ ಅದರ ಬಗ್ಗೆ ದುಃಖಪಡೋದು ವ್ಯರ್ಥ. ಒಳ್ಳೇದು, ಈಗ ಎದ್ದು ಊಟಮಾಡು."

ಆ ರಾತ್ರಿ ನವಲನಿಗೆ ಸ್ವಪ್ನಗಳ ರಾತ್ರಿ. ಒಳ್ಳೆಯದು-ಕೆಟ್ಟದು, ಅದರಲ್ಲಿ ಎಲ್ಲ ತರಹದ ಸ್ವಪ್ನಗಳೂ ಇದ್ದವು.

ಮರುದಿನ ನವಲ್ ಹೊತ್ತಾಗಿ ಎದ್ದ. ಒಂಬತ್ತು ಗಂಟೆಗೆ ಕಾಂಗ್ರೆಸ್ಸಿನ ಒಂದು ಸಾರ್ವಜನಿಕ ಸಭೆಯಿತ್ತು. ಅದರಲ್ಲಿ ಸತ್ಯಾಗ್ರಹದ ಉದ್ದೇಶ ಹಾಗೂ ಸ್ವರೂಪಗಳನ್ನು ತಿಳಿಸುವುದೆಂದಾಗಿತ್ತು. ಜ್ಞಾನಪ್ರಕಾಶ ಆ ಸಭೆಗೆ ಹೋಗಲು ಸಿದ್ಧತೆ ಮಾಡಿಕೊಂಡಿದ್ದ. ನವಲನೂ ಬೇಗಬೇಗ ತಯಾರಾಗಿ ಜ್ಞಾನಪ್ರಕಾಶನ ಜೊತೆ ಆ ಸಭೆಗೆ ಹೊರಟ.

ಇಬ್ಬರೂ ಸಭೆ ನಡೆಯಲಿದ್ದ ಸ್ಥಳಕ್ಕೆ ಬಂದಾಗ ಸೇರಿದ್ದ ಜನ ಜಯಜಯಕಾರದೊಡನೆ ಅವರನ್ನು ಸ್ವಾಗತಿಸಿದರು. ವೇದಿಕೆಯ ಮೇಲೆ ಸತ್ಯಾಗ್ರಹ ಮಾಡುವವರ ತಂಡ

ಕೂತಿತ್ತು. ನವಲನೂ ಅಲ್ಲಿ ಹೋಗಿ ಕುಳಿತ. ದೇಶಕ್ಕಾಗಿ ಬಲಿಯಾಗಹೊರಟಿದ್ದ ಅವರನ್ನು ಸಹಸ್ರಾರು ಕಣ್ಣುಗಳು ನೋಡುತ್ತಿದ್ದವು.

ನವಲನಿಗೆ ತನ್ನೊಳಗೆ ಒಂದು ಹೊಸ ಹುರುಪು ಮೆಲ್ಲಮೆಲ್ಲನೆ ಜನ್ಮ ತಾಳುತ್ತಿರುವುದರ ಅನುಭವವಾಯಿತು. ವೇದಿಕೆಯ ಮೇಲೆ ಬಂದಾಗ ಅವನ ಎದೆ ಬಡಿಯುತ್ತಿತ್ತು. ಈಗ ಆ ಬಡಿತ ದೂರವಾಯಿತು. ಅದರ ಸ್ಥಳದಲ್ಲಿ ಒಂದು ಹೊಸ ದೃಢತೆ ಕಾಣಿಸಿಕೊಂಡಿತು. ಕೊಂಚ ಹೊತ್ತಿನ ಮೇಲೆ ನವಲನಿಗೆ ತಾನು ಏಕಾಏಕಿ ಬದಲಾದೆನೆಂದು ಅನ್ನಿಸಿತು. ಯಾವದೋ ಎಲ್ಲೆಯಿಲ್ಲದ ಉತ್ಸಾಹ, ಅಚಲವಾದ ಸಂಕಲ್ಪ ಅವನಲ್ಲಿ ಮನೆಮಾಡಿದವು.

ಆ ಕ್ಷಣ ಅವನ ಪ್ರಪಂಚವೇ ಬದಲಾಗಿತ್ತು. ಅವನು ಜ್ವಾಲಾಪ್ರಸಾದನನ್ನು, ರುಕ್ಮಿಣಿಯನ್ನು, ತಮ್ಮ ತಂಗಿಯರನ್ನು—ಎಲ್ಲರನ್ನೂ ಮರೆತಿದ್ದ! ಕಾಮತಾನಾಥರನ್ನು, ಉಷಳನ್ನು ಮರೆತಿದ್ದ! ಅಷ್ಟೇಕೆ, ಅವನು ಜ್ಞಾನಪ್ರಕಾಶನನ್ನೇ ಮರೆತಿದ್ದ! ಅವನ ಮುಂದೆ ಒಂದು ವಿಶಾಲ ಜನಸಮೂಹವಿತ್ತು. ಅವನಿಗೆ ಅವರ ಬೆಂಬಲ ದೊರೆತಿತ್ತು, ಸದ್ಭಾವನೆ ದೊರೆತಿತ್ತು, ಅವರ ವಿಶ್ವಾಸವನ್ನು ಅವನು ಹೊತ್ತಿದ್ದ.

ನವಲ್, ಜ್ಞಾನಪ್ರಕಾಶರು ಮೀಟಿಂಗ್‌ನಿಂದ ನೇರವಾಗಿ ಮನೆಗೆ ವಾಪಸು ಬಂದರು. ಮನೆಯಲ್ಲಿ ಒಂದು ಬಗೆಯ ಶೋಕ ಆವರಿಸಿದ್ದುದು ನವಲನಿಗೆ ಅನುಭವವಾಯಿತು. ಅಲ್ಲಿ ಪ್ರತಿಯೊಬ್ಬರ ಮುಖವೂ ಖಿನ್ನವಾಗಿತ್ತು; ಪ್ರತಿಯೊಬ್ಬರೂ ದುಃಖಿಸುತ್ತಿದ್ದರು. ಇವರು ಬಂದ ಮೇಲೆ ಎಲ್ಲರೂ ಊಟಕ್ಕೆ ಕುಳಿತರು. ಆದರೆ ಜ್ವಾಲಾಪ್ರಸಾದ ಮೌನವಾಗಿದ್ದ. ಅವನಿಗೆ ಊಟ ಮಾಡಲೂ ಆಗುತ್ತಿರಲಿಲ್ಲ. “ತಾತ, ನೀವೇಕೆ ಇಷ್ಟು ದುಃಖದಲ್ಲಿದ್ದೀರಿ?” ನವಲ್ ಕೇಳಿದ.

“ನವಲ್, ನನಗೇನೋ ಒಂದು ತರಹ ಆಗ್ತಿದೆ. ಏನಿದು ಪ್ರಪಂಚ! ನೀನು ನಾಳೆ ಜೈಲಿಗೆ ಹೋಗೋ ಸಿದ್ಧತೆ ಮಾಡಿಕೊಂಡಿದಿ, ಮೂರು ನಾಲ್ಕು ದಿನ ಬಿಟ್ಟು ಜ್ಞಾನೂ ಜೈಲಿಗೆ ಹೋಗ್ತಿದಾನೆ. ನಾನೊಬ್ಬನೇ ಒಂಟಿಯಾಗಿ ಉಳೀತೀನಿ.”

ಊಟ ಬಡಿಸುತ್ತಿದ್ದ ವಿದ್ಯಾ ನಕ್ಕಳು, “ನೀವು ಎಲ್ಲಿ ಒಂಟಿ, ತಾತ? ನಾನು ನಿಮ್ಮ ಜೊತೆ ಇಲ್ಲವೆ? ನವಲ್ ಯಾವಾಗ ತಾನೇ ಮನೇಲಿ ಇರ್‍ತಿದ್ದ. ನಾನು ನಿಮಗೆ ಶ್ರೀಮದ್ಭಾಗವತ ಓದಿ ಹೇಳ್ತಿದೀನಿ.”

ವಿದ್ಯಳ ಮಾತು ಕೇಳಿ ಜ್ಞಾನಪ್ರಕಾಶ ನಕ್ಕ, “ಶಾಭಾಷ್, ಮಗು. ಸರಿಯಾಗಿ ಹೇಳಿದೆ! ಅಣ್ಣ, ಈ ಮೋಹಾನ ಬಿಡು. ನಗುನಗುತ್ತ ನಮ್ಮನ್ನ ನಮ್ಮ ಕರ್ತವ್ಯ ನೆರವೇರಿಸೋಕ್ಕೆ ಕಳಿಸಿಕೊಡು. ನಮ್ಮ ಕಾವಲಿಗೆ ಧರ್ಮವಿದೆ, ದೇವರಿದಾನೆ ಅಂತ ತಿಳಕೊಳ್ಳಿ.”

“ಹೌದು, ಜ್ಞಾನೂ. ನಿಮ್ಮ ಜೊತೆ ಧರ್ಮವಿದೆ, ದೇವರಿದಾನೆ ಅಂತ ಚೆನ್ನಾಗಿ ಗೊತ್ತಿದೆ. ಅದಕ್ಕೋಸ್ಕರವೇ ನಾನು ನಿಮ್ಮನ್ನ ತಡೀತಿಲ್ಲ. ಆದರೆ ಏನು ಮಾಡ್ತಿ, ಮನಸ್ಸು ಕೇಳೋಲ್ಲವಲ್ಲ!”

"ಮನಸ್ಸನ್ನ ಗಟ್ಟಿಮಾಡಿಕೊಳ್ಳಿ, ತಾತ. ಹೆಚ್ಚು ಅಂದರೆ ಆರು ತಿಂಗಳು ಸಜಾ ಆಗುತ್ತೆ ನಮಗೆ. ನಾವು ಹೂಡಿರೋದು ಅಹಿಂಸೆಯ ಕಾಳಗ. ವಿಶೇಷವಾಗಿ ಏನೂ ಕೆಟ್ಟದಾಗುವ ಸಂಭವ ಇಲ್ಲ."

ಜ್ವಾಲಾಪ್ರಸಾದ ನಿಟ್ಟುಸಿರುಬಿಟ್ಟ, "ಆ ಸಂಭವವೇನೋ ಇಲ್ಲ, ಆದರೆ... ಆದರೆ..."

"ಆದರೆ ಏನು?" ಜ್ಞಾನಪ್ರಕಾಶ ಕೇಳಿದ.

"ಏನೂ ಇಲ್ಲ. ಹೋಗು ನವಲ್, ಹೋಗು ಜ್ಞಾನೂ. ಹೋಗಿ ಬನ್ನಿ. ಮನುಷ್ಯನ ಕೈಯಲ್ಲಿ ಏನೂ ಇಲ್ಲ, ಖಂಡಿತವಾಗಿ ಏನೂ ಇಲ್ಲ. ಅಂದಮೇಲೆ ಯಾಕೆ ಚಿಂತಿಸಬೇಕು? ಏನು ಆಗಬೇಕಾಗಿದೆಯೋ ಅದು ಆಗಿಹೋಗಿದೆ. ಅದನ್ನ ಯಾರೂ ತಡೆಯೋ ಹಾಗಿಲ್ಲ."

ಜ್ವಾಲಾಪ್ರಸಾದ ಊಟ ಮುಗಿಸಿ ಎದ್ದಾಗ ಅವನ ಮನಸ್ಸು ಹಗುರಾಗಿತ್ತು. ಮನೆಯನ್ನೆಲ್ಲಾ ಆವರಿಸಿದ್ದ ಖಿನ್ನತೆ ಮಾಯವಾಗಿತ್ತು.

ಏಪ್ರಿಲ್ ಐದರ ಬೆಳಗ್ಗೆ ನವಲ್ ಕಣ್ಣುತೆರೆದಾಗ ಸುಮಾರು ನಾಲ್ಕೂವರೆ ಗಂಟೆ. ಸುತ್ತಲೂ ಕತ್ತಲು ಕವಿದುಕೊಂಡಿತ್ತು. ಆದರೆ ಪೂರ್ವದಿಕ್ಕಿನಲ್ಲಿ ನಸುಬೆಳಕು ಮೂಡ ತೊಡಗಿತ್ತು. ನವಲ್ ಎದ್ದುಕುಳಿತ. ಅವನ ಜೊತೆಗೇ ಮನೆಯವರೆಲ್ಲರೂ ಎದ್ದರು. ಅವತ್ತು ಬೆಳಗ್ಗೆ ದಾಂಡಿಯಲ್ಲಿ ಮಹಾತ್ಮಗಾಂಧಿ ಉಪ್ಪಿನ ಕಾಯಿದೆ ಮುರಿಯುವವರಿದ್ದರು. ಇಡೀ ದೇಶದಲ್ಲಿ ಎಲ್ಲೆಲ್ಲೂ ಅದೇ ಉಪ್ಪಿನ ಕಾಯಿದೆ-ಭಂಗ ನಡೆಯುವುದಿತ್ತು. ಒಂಬತ್ತು ಗಂಟೆಗೇ ಕಾಂಗ್ರೆಸ್ ಆಫೀಸ್‌ನಿಂದ ಮೆರವಣಿಗೆ ಹೊರಟು ಪ್ರತಿಯೊಬ್ಬ ಸತ್ಯಾಗ್ರಹಿಯ ಮನೆಯ ಮುಂದೆಯೂ ಹೋಗಿ ಅವನನ್ನು ಸ್ವಾಗತಿಸಿ ಕರೆದುಕೊಳ್ಳುವುದೆಂದು ನಿಶ್ಚಯ ವಾಗಿತ್ತು. ಮೆರವಣಿಗೆ ಇಡೀ ಊರನ್ನು ಸುತ್ತುಹಾಕಿದ ಮೇಲೆ ಸತ್ಯಾಗ್ರಹಿಗಳು ಉಪ್ಪಿನ ಕಾಯಿದೆ ಮುರಿಯುವುದೆಂದು ಗೊತ್ತಾಗಿತ್ತು.

ನವಲನ ಮನೆಯ ಮುಂದೆ ಸುಮಾರು ಹತ್ತೂವರೆ ಗಂಟೆಗೆ ಮೆರವಣಿಗೆ ಬಂತು. ಆ ಹೊತ್ತಿಗೆ ಮೆರವಣಿಗೆಯಲ್ಲಿ ಸುಮಾರು ಇಪ್ಪತ್ತು ಸಾವಿರದಷ್ಟು ಜನ ಗುಂಪುಗೂಡಿದ್ದರು. ಮೆರವಣಿಗೆ ನವಲನ ಮನೆಯ ಮುಂದೆ ನಿಂತಿತು. ಬಗೆಬಗೆಯ ಜಯಕಾರಗಳಾದವು.

ವಿದ್ಯಾ ಬೆಳಗಿನಿಂದಲೇ ಆರತಿಯ ತಟ್ಟೆಯನ್ನು ಸಜ್ಜುಮಾಡಿಟ್ಟಿದ್ದಳು. ಮೆರ ವಣಿಗೆ ಬಂದೊಡನೆಯೇ ವಿದ್ಯಾ ನವಲನಿಗೆ ಆರತಿ ಎತ್ತಿ ಹಾರ ಹಾಕಿದಳು. ರುಕ್ಮಿಣಿ ಅಲ್ಲೇ ಹತ್ತಿರದಲ್ಲಿ ನಿಂತಿದ್ದಳು. ವಿದ್ಯಾ ತಾಯಿಯ ಕೈಹಿಡಿದು ನವಲನ ಹತ್ತಿರ ಎಳೆದು ಕೊಂಡು ಹೋದಳು. "ಅಮ್ಮಾ, ಅಣ್ಣನಿಗೆ ತಿಲಕ ಇಡು, ಬಾ. ಅವನು ಕೃಷ್ಣ ಮಂದಿರಕ್ಕೆ ಹೋಗ್ತಿದಾನೆ. ಅವನಿಗೆ ಬೀಳ್ಕೊಡು."

ರುಕ್ಮಿಣಿಯ ಇಡೀ ಶರೀರ ನಡುಗುತ್ತಿತ್ತು. ಅವಳ ಕಣ್ಣಲ್ಲಿ ನೀರು ತುಂಬಿತ್ತು.

ವಿದ್ಯಾ ಬಲವಂತವಾಗಿ ತಾಯಿಯ ಮುಖದ ಮೇಲಿನ ಪರದೆಯನ್ನು ತೆಗೆದಳು, "ಇದು ನಾಚಿಕೆ, ನಿರ್ಬಲತೆಗಳಿಗೆ ಹೊತ್ತಲ್ಲ, ಅಮ್ಮ !"

ಆ ಇಪ್ಪತ್ತು ಸಾವಿರ ಜನರ ಇಡೀ ಗುಂಪು ಒಂದು ಧ್ವನಿಯಾಗಿ ಕೂಗಿತು, "ನವಲ್ ಕಿಶೋರ್ ಜಿಂದಾಬಾದ್ ! ನವಲ್ ಕಿಶೋರ್ ಕಿ ಜೈ !"

ರುಕ್ಮಿಣಿ ಮಗನ ಜಯಜಯಕಾರವನ್ನು ಕೇಳಿದಳು, ಅಪಾರ ಜನಸಮುದಾಯ ಅವನನ್ನು ಬೀಳ್ಕೊಡಲು ಮುನ್ನುಗ್ಗುತ್ತಿರುವುದನ್ನು ನೋಡಿದಳು. ಅವಳಿಗೆ ತನ್ನೊಳಗೇ ಒಂದು ಪುಳಕದ ಅನುಭವವಾಯಿತು. ಅವಳ ದುಃಖವಿಷಾದಗಳೆಲ್ಲವೂ ಚದುರಿ ಹೋದವು. ಸೀರೆಯಂಚಿನಿಂದ ಕಣ್ಣೊರಸಿಕೊಂಡು ಮಗನನ್ನೊಮ್ಮೆ ಅಪ್ಪಿಕೊಂಡಳು. ಆಮೇಲೆ ನಡುಗುವ ಕೈಗಳಿಂದ ನವಲನಿಗೆ ತಿಲಕವಿಟ್ಟು ಆರತಿಯೆತ್ತಿದಳು.

ಜ್ವಾಲಾಪ್ರಸಾದ ವರಾಂಡದಲ್ಲಿ ಮೌನವಾಗಿ ಕುಳಿತು ಇದನ್ನು ನೋಡುತ್ತಿದ್ದ. ಭೀಖು ಅವನ ಹತ್ತಿರ ನಿಂತಿದ್ದ. ನವಲ್ ತಾತನ ಹತ್ತಿರ ಹೋಗಿ ಕಾಲು ಮುಟ್ಟಿ ನಮಸ್ಕಾರ ಮಾಡಿದ. ಜ್ವಾಲಾಪ್ರಸಾದನ ಬಾಯಿಂದ "ದೇವರು ಕಾಪಾಡಲಿ" ಎಂದಷ್ಟೇ ಹೊರಟಿತು.

ಆಮೇಲೆ ನವಲ್ ಭೀಖುವಿನ ಕಡೆ ತಿರುಗಿದ, "ಭೀಖುಬಾಬಾ, ಹೋಗಿಬರ್ತೀನಿ. ತಾತನನ್ನ ಸರಿಯಾಗಿ ನೋಡಿಕೊ."

"ಹೋಗಿ ಬಾ, ಮಗು. ಚೆನ್ನಾಗಿರು. ಬೇಗ ವಾಪಸು ಬಾ."

ನವಲ್ ಈಗ ಮೆರವಣಿಗೆಯ ಕಡೆ ನಡೆದ. ವಿದ್ಯಳೂ ನವಲನ ಜೊತೆ ಹೊರಟಳು. "ನಡಿಯಣ್ಣ, ನಿನ್ನ ಜೊತೆ ನಾನೂ ಸ್ವಲ್ಪ ದೂರ ಬರ್ತೀನಿ. ಅಲ್ಲಿಂದ ಹಾಗಿಂದ ಹಾಗೇ ಸ್ಕೂಲಿಗೆ ಹೋಗ್ತೀನಿ" ಎಂದು ವಿದ್ಯಳೂ ಮೆರವಣಿಗೆಯಲ್ಲಿ ಒಂದಾದಳು.

ಮೆರವಣಿಗೆ ಮುಂದೆ ಹೋಯಿತು. ಮನೆಯವರೆಲ್ಲರೂ ನಿಂತು ಮೆರವಣಿಗೆ ನೋಡುತ್ತಿದ್ದರು. ಮೆರವಣಿಗೆ ಕೊನೆಮುಟ್ಟಲು ಸುಮಾರು ಅರ್ಧಗಂಟೆ ಹಿಡಿಯಿತು. ಅದು ಮುಂದೆ ಹೋದ ಮೇಲೆ ರುಕ್ಮಿಣಿಗೆ ತಡೆಯಲಾಗಲಿಲ್ಲ, ಜೋರಾಗಿ ಅಳುತ್ತ ತನ್ನ ಚಿಕ್ಕಮಕ್ಕಳಿಬ್ಬರ ಕೈ ಹಿಡಿದುಕೊಂಡು ಮನೆಯೊಳಕ್ಕೆ ಹೋದಳು.

ಜ್ವಾಲಾಪ್ರಸಾದ, ಭೀಖು ಮನೆಯ ಹೊರಬಾಗಿಲ ತನಕ ಬಂದರು. ಮುನ್ನಡೆಯುತ್ತಿದ್ದ ಮೆರವಣಿಗೆಯನ್ನು ಎವೆಯಿಕ್ಕದೆ ನೋಡುತ್ತಿದ್ದರು. ಮೆರವಣಿಗೆ ಈಗ ಕಣ್ಮರೆಯಾಗಿತ್ತು. ಸುತ್ತಲೂ ಭಯಾನಕವಾದ ನಿಶ್ಶಬ್ದ ಕವಿದಿತ್ತು. ಜ್ವಾಲಾಪ್ರಸಾದ ಭೀಖುವಿನ ಕಡೆ ನೋಡಿದ. "ಭೀಖು, ಇದು ನಡೀತಿರೋದೆಲ್ಲಾ ಏನು ?"

"ಒಂದೂ ಗೊತ್ತಾಗೋಲ್ಲ, ಅಣ್ಣ. ಈ ನವಲ್ ಸಂತೋಷದಿಂದ ಜೈಲಿಗೆ ಹೋಗ್ತಿದಾನೆ; ಈ ವಿದ್ಯಾ ನೌಕರಿ ಮಾಡೋಕ್ಕೆ ಷುರುಮಾಡಿದಾಳೆ. ಇದೆಲ್ಲಾ ಏನು ಅಂತಾನೇ ಗೊತ್ತಾಗೋಲ್ಲ."

ಜ್ವಾಲಾಪ್ರಸಾದ ನಿಟ್ಟುಸಿರೆಳೆದ, "ಹೌದು ಭೀಖು, ಒಂದೂ ಗೊತ್ತಾಗೋಲ್ಲ.

ಈ ಐವತ್ತು ವರ್ಷದಲ್ಲಿ ಏನಿದ್ದದ್ದು ಏನಾಗಿ ಹೋಯಿತು. ಎಲ್ಲಾ ಬದಲಾಯಿತು, ಒಮ್ಮೆಲೇ ಬದಲಾಯಿತು. ನೀನು ಬದಲಾಗಿದಿ, ಭೀಖು. ನಾನು ಬದಲಾಗಿದೀನಿ. ಎಷ್ಟು ಜನ ಹೊಸಬರು ಬಂದಿದಾರೋ ಗೊತ್ತಿಲ್ಲ; ಎಷ್ಟು ಜನ ಹಳಬರು ಹೋಗಿ ಬಿಟ್ಟರೋ ಗೊತ್ತಿಲ್ಲ." ಜ್ವಾಲಾಪ್ರಸಾದನ ಧ್ವನಿ ನಡುಗುತ್ತಿತ್ತು.

ಭೀಖೂ ಜ್ವಾಲಾಪ್ರಸಾದನ ಕೈ ಹಿಡಿದುಕೊಂಡ. "ನಡಿಯಣ್ಣ, ಹೋಗಿ ವಿಶ್ರಮಿಸಿಕೊ. ಇದೆಲ್ಲಾ ಭಗವಂತನ ಲೀಲೆ. ಇದರ ಮೇಲೆ ನಮ್ಮ ಆಟವೇನೂ ನಡೆಯೋಲ್ಲ; ಇದು ನಮ್ಮ ಬುದ್ಧೀಗೆ ಎಟುಕೋದೂ ಇಲ್ಲ."

"ಒಂದೂ ತಿಳಿಯೋಲ್ಲ, ಭೀಖು, ಇದೆಲ್ಲಾ ಏನು ನಡೀತಿದೆ, ಯಾಕೆ ನಡೀತಿದೆ ಅಂತ. ತರಹಾವಾರಿ ಚಿತ್ರಗಳು, ತಮಗೆ ತಾವೇ ಸೃಷ್ಟಿಯಾಗುತ್ತವೆ, ತಮಗೆ ತಾವೇ ಅಳಿಸಿಹೋಗುತ್ತವೆ, ಯಾಕೆ ಹೀಗೆ?"

ಇಬ್ಬರು ಮುದುಕರು—ಯುಗವನ್ನು ನೋಡಿದ್ದವರು, ಏರಿಳಿತಗಳನ್ನು ಕಂಡಿದ್ದ ವರು, ಅನುಭವದ ಭಂಡಾರವನ್ನು ಹೊತ್ತಿದ್ದವರು—ಆ ಇಬ್ಬರು ಮುದುಕರು ಉತ್ತರ ಕಾಣದೆ ಅಸಹಾಯರಾಗಿ ನಿಂತಿದ್ದರು; ದೂರದಲ್ಲಿ ಸಹಸ್ರ, ಲಕ್ಷ, ಕೋಟಿ ಜನ ಜೀವನ ಹಾಗೂ ಕಾಲಗತಿಗಳಿಂದ ಪ್ರೇರಿತರಾಗಿ ಹೊಸ ಉಲ್ಲಾಸ ಉತ್ಸಾಹಗಳನ್ನು ಮೈದಾಳಿ ಒಂದು ಹೊಸಪ್ರಪಂಚದ ನಿರ್ಮಾಣಕ್ಕೆ ಹೊರಟಿದ್ದರು.

# ಶಬ್ದಕೋಶ

ಈ ಕಾದಂಬರಿಯಲ್ಲಿ ಬಹುವಾಗಿ ವೃತ್ತಿಸೂಚಕ ಇಲ್ಲವೇ ಸಂಬಂಧಸೂಚಕಗಳಾದಂತಹ ಕೆಲವು ಮೂಲ ಹಿಂದೀ ಅಥವಾ ಉರ್ದೂ ಪದಗಳನ್ನು ಅವು ಇದ್ದಂತೆಯೇ ಉಳಿಸಿಕೊಳ್ಳಲಾಗಿದೆ. ಅವುಗಳಲ್ಲಿ ಅನೇಕವು ಸುಲಭವಾಗಿ ಕನ್ನಡಕ್ಕೆ ಭಾಷಾಂತರವಾಗುವಂತಹವಲ್ಲ. ಅಲ್ಲದೇ ಆ ಪದಗಳನ್ನು ಇದ್ದಂತೆಯೇ ಬಳಸುವುದರಿಂದ ಕಾದಂಬರಿಯ ವಾತಾವರಣಕ್ಕೆ ಹೆಚ್ಚಿನ ಪುಷ್ಟಿ ದೊರೆಯುತ್ತದೆಂದು ಅನಿಸಿದೆ. ಅಕಾರಾದಿಯಾಗಿ ಆ ಪದಗಳ ವಿವರಣೆಯನ್ನು ಈ ಕೆಳಗೆ ಕೊಡಲಾಗಿದೆ :

**ಅಖರೋಟ್ :** ಬಾದಾಮಿಯ ಜಾತಿಗೆ ಸೇರಿದ ಒಂದು ಒಣಹಣ್ಣು (Walnut).

**ಅಮನ್ ಸಭೆ:** ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಬ್ರಿಟಿಷರ ಕೈಗೊಂಬೆಗಳಾಗಿದ್ದ ಉತ್ತರ ಭಾರತದ ಹಲವು ಜನ ಶಾಂತಿಪಾಲನೆಯ ಹೆಸರಿನಲ್ಲಿ ಕಾಂಗ್ರೆಸ್ಸಿನ ವಿರುದ್ಧ ಕಟ್ಟಿಕೊಂಡಿದ್ದ ಒಂದು ಪಕ್ಷ ; **ಅಮನ್ :** ಶಾಂತಿ, ಸಂರಕ್ಷಣೆ.

**ಅಮ್ಮಾಜಿ :** ಸೊಸೆಯರು ತಮ್ಮ ಅತ್ತೆಯರನ್ನು ಗೌರವಪೂರ್ವಕವಾಗಿ ಸಂಬೋಧಿಸಲು ಬಳಸುವ ಶಬ್ದ.

**ಅರೆ ಬಾಪ್‌ರೇ :** ವಿಸ್ಮಯಸೂಚಕ ಶಬ್ದ ; 'ಅಬ್ಬಬ್ಬಾ' ಎಂದಂತೆ.

**ಅಹಲಮದ್ :** ನ್ಯಾಯಾಲಯದ ಒಂದು ಹುದ್ದೆ.

**ಇಲಾಕೆ :** ಒಬ್ಬನ ಸ್ವಾಮ್ಯದಲ್ಲಿರುವ ಒಟ್ಟು ಜಮೀನು. **ಇಲಾಕೆದಾರಿಕೆ :** ಜಮೀನುದಾರಿ, ಜಹಗೀರು.

**ಕಲ್ಪವಾಸ :** ಒಂದು ವ್ರತ.

**ಕಹಾರ :** ಒಂದು ಜಾತಿ. ನೀರು ತುಂಬುವುದೂ ಪಲ್ಲಕ್ಕಿ ಹೊರುವುದೂ ಇವರ ಕಸುಬು.

**ಕಾಕಾ :** ಚಿಕ್ಕಪ್ಪ.

**ಕಾನುಂಗೊ :** ಕಂದಾಯ ಇಲಾಖೆಯ ಕಾನೂನುಗಳನ್ನು ಪಾಲಿಸುವ ಅಧಿಕಾರಿ.

**ಕೋಸು :** ದೂರದ ಅಳತೆ ; ಸುಮಾರು ಎರಡು ಮೈಲಿಯಷ್ಟು.

**ಖಿಚಡಿ :** ಅಕ್ಕಿ ಬೇಳೆಗಳನ್ನು ಒಟ್ಟಾಗಿ ಬೇಯಿಸಿ ಮಾಡಿದ, ಹುಗ್ಗಿ ಅಥವಾ ಪೊಂಗಲಿನಂತಹ ಒಂದು ಅಡಿಗೆ.

**ಗಂಡಾ :** ಶಿಷ್ಯತ್ವವನ್ನು ಒಪ್ಪಿದ ಕುರುಹಾಗಿ ಗುರುವಿಗೆ ಶಿಷ್ಯರು ಕಟ್ಟುವ ಕಂಕಣದಂತಹ ಗಂಟಿನ ದಾರ.

**ಗುಲಾಲ್ :** ಹೋಳೀ ಹಬ್ಬದ ದಿನ ಮುಖಕ್ಕೆ ಹಚ್ಚುವ ಬಣ್ಣದ ಪುಡಿ.

**ಚಾಚಾಜೀ :** ಚಿಕ್ಕಪ್ಪ ; ಗಂಡಸರಲ್ಲಿ ಹಿರಿಯರಿಗೆ ಸಲ್ಲುವ ಪ್ರೀತಿಸೂಚಕ ಸಂಬೋಧನೆ.

**ಚಾಚಿ :** ಚಿಕ್ಕಮ್ಮ ; ಹೆಂಗಸರಲ್ಲಿ ಹಿರಿಯರಾದವರ ಹೆಸರಿನ ಕೊನೆಗೆ ಪ್ರೀತಿಸೂಚಕವಾಗಿ ಸೇರಿಸುವ ಅಂತ್ಯಪ್ರತ್ಯಯ.

**ಠಾಣೇದಾರ :** 'ಥಾನೇದಾರ' ಶಬ್ದದ ಕನ್ನಡೀಕರಣ ; ಪೋಲಿಸ್ ಮುಖ್ಯಾಧಿಕಾರಿ.

**ತಹಸೀಲು :** ಕಂದಾಯ ವಸೂಲಿಯ ಅನುಕೂಲಕ್ಕಾಗಿ ಮಾಡಿದ ರಾಜ್ಯವಿಭಾಗ.

**ತಾಲ್ಲೂಕ್‌ದಾರ :** ಜಹಗೀರುದಾರ.

**ತಿಲಕ :** ಹೆಣ್ಣು ಕೊಡಲು ಒಪ್ಪಿರುವ ಸಂಕೇತವಾಗಿ ಹೆಣ್ಣಿನ ತಂದೆತಾಯಿಗಳು ಗಂಡಿನ ತಂದೆ ತಾಯಿಗಳಿಗೆ ಸಾಂಪ್ರದಾಯಿಕವಾಗಿ ಕಳಿಸಿಕೊಡುವ ಕಾಣಿಕೆ.

**ದಾದಾಜೀ :** ಅಣ್ಣ ; ಗಂಡಸರಲ್ಲಿ ಹಿರಿಯರಿಗೆ ಸಲ್ಲುವ ಗೌರವಸೂಚಕ ಸಂಬೋಧನೆ.

**ದೇವರ್‌ಜೀ :** ಅರ್ಥಶಃ ಭಾವಮೈದ. ಹೆಂಗಸರು ತಮಗಿಂತ ವಯಸ್ಸಿನಲ್ಲಿ ಕಿರಿಯರಾದ ಗಂಡಸರನ್ನು ಸಂಬೋಧಿಸಲು ಬಳಸುವ ಗೌರವಸೂಚಕ ಶಬ್ದ.

**ನಮಕ್ ಹರಾಮ್ :** ಕೃತಘ್ನ. ಉಪ್ಪುಂಡ ಮನೆಗೆ ಎರಡು ಬಗೆಯುವವನು.

**ನಂಬರ್‌ದಾರ :** ಹಳ್ಳಿಯ ಪ್ರಮುಖ.

**ನಾಜಿರ್ :** ನ್ಯಾಯಾಲಯದ ಗುಮಾಸ್ತೆ.

**ನಾಯಬ್-ತಹಸೀಲದಾರ :** ತಹಸೀಲದಾರನ ಕೆಳಗಿನ ಹುದ್ದೆ ; **ನಾಯಬ್ :** ಉಪ—.

**ಪಟವಾರಿ :** ಕುಲಕರ್ಣಿ, ಶಾನುಭೋಗ.

**ಪಟ್ಟೂ :** ಒಂದು ತರಹದ ಒರಟಾದ ಉಣ್ಣೆಯ ಬಟ್ಟೆ.

**ಪಿಸ್ತಾ :** ಬಾದಾಮಿಯಂತಹ ಒಂದು ಒಣಹಣ್ಣು.

**ಬಜರಂಗಬಲಿ :** ಹನುಮಂತ ; ಬಲಶಾಲಿಗಳ ಕುಲದೇವತೆ.

**ಬನಿಯಾ :** ನಿರ್ದಯನಾಗಿ ಕಾಸಿಗೆ ಕಾಸು ಗಂಟುಹಾಕುವ ವ್ಯಾಪಾರಿ ಅಥವಾ ಆ ಮನೋಭಾವದವನು. ಕನ್ನಡದಲ್ಲಿ 'ಕೋಮಟಿ', 'ಬಣಜಿಗ' ಎಂಬಂತೆ ತಿರಸ್ಕಾರಸೂಚಕ.

**ಮುಜರೆ :** ಶ್ರೀಮಂತರು ಸಂತೋಷ ಸಮಾರಂಭಗಳಲ್ಲಿ ವೇಶ್ಯೆಯರನ್ನು ಕರೆಸಿ, ಮನೆಯಲ್ಲಿ ಏರ್ಪಡಿಸುವ ಕುಣಿತ.

**ಮುನಿಷಿ :** ಗುಮಾಸ್ತೆ.

**ಮುಬಾರಕ್ :** ಅಭಿನಂದನೆಯ ಕೋರಿಕೆ.

**ಮಿಯಾ :** ಮಾವ ; ಮುಸಲಮಾನರಲ್ಲಿ ಹಿರಿಯರನ್ನು ಸಲಿಗೆಯಿಂದ ಸಂಬೋಧಿಸಲು ಬಳಸುವ ಪದ

**ರಜಾಯಿ :** ಬಟ್ಟೆಯ ಎರಡು ಪದರಗಳ ನಡುವೆ ತೆಳ್ಳಗೆ ಹತ್ತಿಯನ್ನು ಹರಡಿ ಹೊಲಿದು ಮಾಡಿದ ಹೊದಿಕೆ.

**ರಾಣಿ :** ಮನೆಯಲ್ಲಿ ಹಿರಿಯರು ಸೊಸೆಯರನ್ನು ಗೌರವಪೂರ್ವಕವಾಗಿ ಸಂಬೋಧಿಸಲು ಅವರ ಹೆಸರಿನ ಕೊನೆಗೆ ಸೇರಿಸುವ ಪದ. ವ್ಯಂಗ್ಯಾರ್ಥದಲ್ಲಿ ಇಟ್ಟುಕೊಂಡ ಹೆಣ್ಣಿಗೂ ಸಲ್ಲುತ್ತದೆ.

**ಲಾಲಾ :** ಸಾಧಾರಣವಾಗಿ ಶ್ರೀಮಂತರ ಹೆಸರಿನ ಹಿಂದೆ ಅಂತಸ್ತನ್ನು ಸೂಚಿಸಲು ಸೇರಿಸುವ ಪದ. ಶ್ರೀಮಂತರಲ್ಲದವರಿಗೂ ಕೇವಲ ಗೌರವಸೂಚಕವಾಗಿ ಹೆಸರಿನ ಮುಂದೆ ಸೇರಿಸಿ ಬಳಸುವ ವಾಡಿಕೆಯೂ ಇದೆ.

## ನಮ್ಮ ಪ್ರಕಟಣೆಗಳು

ನೇಷನಲ್ ಬುಕ್ ಟ್ರಸ್ಟ್, ಇಂಡಿಯಾ, ಪ್ರಕಟಿಸುವ ಪುಸ್ತಕಗಳು ಜನ ಸಾಮಾನ್ಯರಿಗೆ ಅವಶ್ಯಕವಾದ ವಿಷಯಗಳನ್ನು ಒಳಗೊಂಡಿರುತ್ತವೆ. ಈ ಪುಸ್ತಕಗಳನ್ನು ನಾನಾ ಮಾಲೆಗಳಲ್ಲಿ ಪ್ರಕಟಿಸಲಾಗುತ್ತದೆ. ಮತ್ತು ಅವುಗಳು ಭಾರತದ ಎಲ್ಲಾ ಪ್ರಮುಖ ಭಾಷೆಗಳಲ್ಲಿ ದೊರೆಯುತ್ತವೆ. ಕನ್ನಡ ಭಾಷೆಯಲ್ಲಿ ಪ್ರಕಟವಾಗಿರುವ ಕೆಲವು ಪುಸ್ತಕಗಳ ಪಟ್ಟಿಯನ್ನು ಇಲ್ಲಿ ಸೂಚಿಸಲಾಗಿದೆ.

**(ಅ) ತರುಣ ಭಾರತಿ**

| | | |
|---|---|---|
| **ವನರಾಜ ಆನೆ :** | ರಮೇಶ್ ಬೇಡಿ | ರೂ. 3-25 |

**(ಆ) ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ**

| | | |
|---|---|---|
| **ಕಬೀರ್ :** | ಪಾರಸ್‌ನಾಥ್ ತಿವಾರೀ | 2-00 |
| **ಗುರು ನಾನಕ್ :** | ಗೋಪಾಲ ಸಿಂಗ್ | 2-75 |
| **ಪಂಡಿತ ಭಾತಖಂಡೆ :** | ಎಸ್. ಎನ್. ರತನ್‌ಜಂಕಾರ್ | 1-50 |
| **ಸುಬ್ರಹ್ಮಣ್ಯ ಭಾರತಿ :** | ಪ್ರೇಮ ನಂದಕುಮಾರ್ | 3-00 |
| **ತ್ಯಾಗರಾಜ :** | ಪಿ. ಸಾಂಬಮೂರ್ತಿ | 1-50 |

**(ಇ) ಅಂತರ ಭಾರತೀಯ ಪುಸ್ತಕ ಮಾಲೆ**

| | | |
|---|---|---|
| **ಹೊಸ ನೀರು :** | ಭಗವತೀಚರಣ ವರ್ಮಾ | 6-00 |
| **ಬನಗರವಾಡಿ :** | ವೆಂಕಟೇಶ ಮಢಗೂಳಕರ | 3-00 |

**(ಈ) ಭಾರತ—ದೇಶ ಮತ್ತು ಜನ**

| | | |
|---|---|---|
| **ಜನಸಂಖ್ಯೆ :** | ಎಸ್. ಎನ್. ಅಗರವಾಲ | 3-75 |

ಅಧೀಕೃತ ಮಾರಾಟಗಾರರು

**ಇಂಡಿಯಾ ಬುಕ್ ಹೌಸ್,**

ಗಾಂಧೀನಗರ, ಬೆಂಗಳೂರು-9

ಭಾರತದ ಪ್ರತಿಯೊಂದು ಭಾಷೆಯಿಂದಲೂ ಕೆಲವು ಉತ್ಕೃಷ್ಟ ಹಾಗೂ ಜನಪ್ರಿಯ ಪುಸ್ತಕಗಳನ್ನು ಆಯ್ದು ಅವುಗಳನ್ನು ಇತರ ಭಾಷೆಗಳಿಗೆ ಅನುವಾದ ಮಾಡಿಸಿ, ಆ ಮೂಲಕ ಆ ಪ್ರದೇಶ ಹಾಗೂ ಸಮಾಜಗಳ ಸಂಸ್ಕೃತಿ, ರೀತಿ-ಪದ್ಧತಿ, ನೀತಿ-ನಡವಳಿಕೆ, ಸುಖದುಃಖಗಳ ಪರಿಚಯವನ್ನು ಇತರ ಪ್ರದೇಶಗಳ ಓದುಗರಿಗೆ ಮಾಡಿಕೊಡುವುದು ಈ ಪುಸ್ತಕಮಾಲೆಯ ಉದ್ದೇಶ. ಈ ಉದ್ದೇಶವನ್ನು ಗಮನದಲ್ಲಿಟ್ಟೇ ಪುಸ್ತಕಗಳ ಆಯ್ಕೆ ಮಾಡಲಾಗುವುದು; ಹಾಗೂ ಸಾಧಾರಣವಾಗಿ ವರ್ತಮಾನ ಇಲ್ಲವೇ ಸಮಕಾಲೀನ ಸಾಹಿತ್ಯದಿಂದಲೇ ಅವನ್ನು ಎತ್ತಿಕೊಳ್ಳಲಾಗುವುದು.

ನಮ್ಮದು ಬಹುಭಾಷೀ ರಾಷ್ಟ್ರ. ಆದರೆ ವಿಷಾದದ ಸಂಗತಿಯೆಂದರೆ ನೆರೆಯ ಭಾಷೆಗಳ ವಿಚಾರ-ಪ್ರವಾಹ ಇಲ್ಲವೇ ಸಾಂಸ್ಕೃತಿಕ, ಸಾಮಾಜಿಕ ಆಗುಹೋಗುಗಳ ಬಗೆಗೆ ನಮಗಿರುವ ಜ್ಞಾನ ತೀರಾ ಕಡಿಮೆ; ಆ ಕಡೆ ನಮ್ಮ ಗಮನ ಹರಿಯುವುದೂ ಅಷ್ಟಕ್ಕಷ್ಟೇ. ಬೇರೆ ಬೇರೆ ರಾಷ್ಟ್ರಗಳಿಂದ ಕೂಡಿ, ಭಿನ್ನ ಭಿನ್ನ ಭಾಷೆಗಳನ್ನಾಡುವ ಯುರೋಪಿನಂತಹ ಭೂಖಂಡದ ಜನ ಪರಸ್ಪರ ಸಂಪರ್ಕವಿಟ್ಟುಕೊಂಡಿದ್ದಾರೆ; ಅವರ ನಡುವೆ ಸಾಹಿತ್ಯಿಕ; ಸಾಂಸ್ಕೃತಿಕ ಆದಾನ-ಪ್ರದಾನ ಅಥವಾ ಕೊಡಕೊಳ್ಳುವಿಕೆ ನಡೆಯುತ್ತದೆ.

ಈ ಬಗೆಯ ಕೊಡಕೊಳ್ಳುವಿಕೆಯಿಂದ ನಮ್ಮ ವಿಭಿನ್ನ ಭಾಷೆಗಳ ಜನ ಪರಸ್ಪರ ಹತ್ತಿರ ಬರಲು, ಒಬ್ಬರು ಇನ್ನೊಬ್ಬರನ್ನು ಹೆಚ್ಚು ಹೆಚ್ಚು ಅರಿಯಲು, ಆ ಮೂಲಕ ರಾಷ್ಟ್ರ ಏಕಜೀವವಾಗಲು ಸಹಾಯವಾಗುತ್ತದೆ ಎಂದು ಆಶಿಸಲಾಗಿದೆ.

5